ಶ್ರೀ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

॥ ಶ್ರೀ ವ್ಯಾಸಮಹರ್ಷಿಪ್ರಣೀತಂ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ.

( ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ )

**ಪ್ರಥಮಖಂಡ— ಎರಡನೆಯಭಾಗ.**



ಅನುವಾದಕ

**ಚಾಮರಾಜನಗರದ ವೆಂಕಟರಮಣಶಾಸ್ತ್ರೀ.**



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಪ್ರಸ್ತಾವನೆ.

---

ಈ ಪುರಾಣದ ಪ್ರಥಮ ಸಂಪುಟದ ಎಪ್ಪತ್ತ್ಮೂರು ಅಧ್ಯಾಯಗಳಲ್ಲಿ ವಿಸ್ತೃತವಾಗಿರುವ ವಿಷಯಗಳನ್ನು ವಾಚಕರು ಈಗಾಗಲೇ ಓದಿರುವರಷ್ಟೆ? ಎಪ್ಪತ್ತನಾಲ್ಕನೆಯ ಅಧ್ಯಾಯದಿಂದ ಈ ಸಂಪುಟವು ಆರಂಭವಾಗಿ ಪುರೂರವಚಕ್ರವರ್ತಿಯು ಸಶರೀರನಾಗಿ ಊರ್ವಶಿಯೊಡನೆ ಸ್ವರ್ಗಕ್ಕೆ ಹೋಗುವ ಕಥೆಯೊಡನೆ ಪರಿಸಮಾಪ್ತನಾಗಿರುವುದು

ಈ ಸಂಪುಟದ ಪ್ರಸ್ತಾವನೆಯನ್ನು ಸ್ವಲ್ಪ ವಿಮರ್ಶಾತ್ಮಕದೃಷ್ಟಿಯಿಂದ ಈಗ ವಿಚಾರ ಮಾಡಲಾಗುವುದು ಶ್ರುತಿ, ಸ್ಮೃತೀತಿಹಾಸ ಪುರಾಣಗಳಲ್ಲಿ ಪುರಾಣಗಳು ನಾಲ್ಕನೆಯ ಸ್ಥಾನವನ್ನು ಪಡೆದಿರುವುವು ಪೂರ್ವಪೂರ್ವಶಾಸ್ತ್ರಗಳ ಸಾರಸಂಗ್ರಹವೆಲ್ಲವೂ ನಾನಾಪುರಾಣರಾಶಿಯಲ್ಲಿ ಕಾವ್ಯರೂಪದಿಂದ ಸುಲಭ ಶೈಲಿಯಲ್ಲಿ ಬರೆಯಲ್ಪಟ್ಟಿರುವುದರಿಂದ ವೇದ, ಧರ್ಮಶಾಸ್ತ್ರ ಇತಿಹಾಸಗಳ ಸಂಪೂರ್ಣ ಪರಿಚಯವು ಈ ಪುರಾಣಪಠಣದಿಂದ ದೊರೆಯುವುದೆಂದು ಧಾರಾಳವಾಗಿ ಹೇಳಬಹುದು

ರಾಮಾಯಣವು ಆದಿಕಾವ್ಯವೆಂದು ಹೆಸರಾಗಿದೆ ಇದನ್ನು ತ್ರೇತಾಯುಗದಲ್ಲಿ ವಾಲ್ಮೀಕಿ ಋಷಿಗಳು ರಚಿಸಿದರು ಪುರಾಣಗಳನ್ನು ವ್ಯಾಸರು ಕಲಿಯುಗದ ಆದಿಭಾಗದಲ್ಲಿ ಬರೆದಿರುವರೆಂಬ ವಿಚಾರವನ್ನೂ ಈ ಪುರಾಣಲೇಖನ ಕಾಲವನ್ನೂ ಈ ವಿಷ್ಣುಪುರಾಣದಲ್ಲಿ ಉಲ್ಲೇಖಿಸಿರುತ್ತಾರೆ ಈ ಮಹಾಪುರಾಣಗಳಲ್ಲಿ ಯಾವುದು ಹೆಚ್ಚು ಯಾವುದು ಕಮ್ಮಿಯೆಂದು ವಿಮರ್ಶಿಸುವುದಾದರೆ ಎಲ್ಲವೂ ಸರಿಸಮನಾಗಿ ತೂಗುವುವೆಂದು ಹೇಳಬಹುದು ರಾಮಾಯಣದಲ್ಲಿ ನವರಸಗಳನ್ನೂ ವಾಲ್ಮೀಕಿಋಷಿಗಳು ಚಿತ್ರಿಸಿರುವರಾದರೆ ಈ ವಿಷ್ಣುಧರ್ಮೋತ್ತರಪುರಾಣದಲ್ಲಿ ವ್ಯಾಸರು ನವರಸಗಳನ್ನಲ್ಲದ ಸಕಲ ವೇದಶಾಸ್ತ್ರಸಾರವನ್ನೂ ಬಹು ಸೊಗಸಾಗಿ ಸುಲಭ ಶೈಲಿಯಿಂದ ಚಿತ್ರಿಸಿರುವರು ರಾಮಾಯಣವು ಗಾಯತ್ರೀ ಬೀಜಾಕ್ಷರಗಳಿಂದ ಪರಿಪೂರ್ಣವಾಗಿ ವೇದೋಪಬೃಂಹಿತವೆನಿಸಿಕೊಂಡಿದೆ ಈ ಪುರಾಣವು ವೇದಶಾಸ್ತ್ರೇತಿಹಾಸಗಳ ಸಾರವನ್ನೇ ನಿರೂಪಿಸಿದೆ ವೇದದ ಕಥೆಗಳೆಲ್ಲವೂ ಇದರಲ್ಲಿ ಬಂದಿವೆ ಜ್ಯೋತಿಶ್ಶಾಸ್ತ್ರದ ರಹಸ್ಯಗಳೂ, ಭೂಗೋಳ ಖಗೋಳಗಳ ವಿಚಿತ್ರಗತಿಗಳೂ, ಗ್ರಹನಕ್ಷತ್ರಸಂಚಾರಕ್ರಮವೂ, ಗ್ರಹಶಾಂತಿಕರ್ಮಗಳೂ ಇದರಲ್ಲಿ ವಿಸ್ತಾರವಾಗಿ ಬರೆಯಲ್ಪಟ್ಟಿವೆ ಜಗದುತ್ಪತ್ತಿ ಪ್ರಳಯಕಾಲಗಳಲ್ಲಾಗುವ ಪ್ರಪಂಚ ಪರಿಸ್ಥಿತಿಯೂ ಕರ್ಮಗಳ ಸೂಕ್ಷ್ಮ

ಗತಿಯೂ, ಜೀವರಾಶಿಗಳು ಆ ಕಾಲದಲ್ಲಿ ಹೇಗಿರುವುವೆಂಬ ಸಂಗತಿಯೂ ಇದರಲ್ಲಿ ಪ್ರಸಂಗವಶವಾಗಿ ವರ್ಣಿಸಲ್ಪಟ್ಟಿರುವುವು ವೇನರಾಜ ಪೃಥುರಾಜರ ಅತ್ಯಾಶ್ಚರ್ಯಕರವಾದ ಚರಿತ್ರಗಳೂ ಇದರಲ್ಲಿ ಬಂದಿರುವುವು ಮನುಷ್ಯನು ಪಾಪಕೂಪದಿಂದ ಉದ್ಧೃತನಾಗಬೇಕಾದ ಸನ್ನಿವೇಶಗಳು ಈ ದ್ವಿತೀಯ ಭಾಗದಲ್ಲಿ ಚೆನ್ನಾಗಿ ವಿಸ್ತೃತವಾಗಿವೆ ಅಲ್ಲಲ್ಲಿ ಬರುವ ವರ್ಣನಾ ಭಾಗಗಳನ್ನೋದಿದರೆ ಮನಸ್ಸು ಕರಗಿ ನೀರಾಗಿ ಹರಿದುಹೋಗುವುದು (ಅಂದರೆ ಆನಂದಾಶ್ರುಗಳು ಉದುರುವುವೆಂದು ಭಾವ) ಈ ಆನಂದವನ್ನು ನಾನು ಗ್ರಂಥಾನುವಾದನ ಕಾಲದಲ್ಲಿ ಚೆನ್ನಾಗಿ ಅನುಭವಿಸಿದ್ದೇನೆ

ಪುರೂರವನ ಕಥಾಪ್ರಸ್ತಾಪದಲ್ಲಿ ಬರುವ ಮೋಹದ ಪರಾಕಾಷ್ಠದಶೆಯನ್ನೂ, ಮೋಹದ (ಅಜ್ಞಾನದ) ಬಲೆಯಲ್ಲಿ ಬಿದ್ದಿರುವ ಮನುಷ್ಯನ ಅವಸ್ಥೆಯನ್ನೂ ಇದರಲ್ಲಿ ಚೆನ್ನಾಗಿ ನೋಡಬಹುದು ಇದರಲ್ಲಿ ಬರುವ ಋಷಿಗಳ ಹೆಸರುಗಳೂ, ಋಷಿಗಳ ಗೋತ್ರ ಪ್ರವರಗಳೂ ನಮ್ಮ ದೇಶದ ಜನರಿಗೆ ಅಪರಿಚಿತವಾದುವುಗಳಾದಾಗ್ಯೂ ಕೊಂಕಣ, ಗುರ್ಜರ ಮಹಾರಾಷ್ಟ್ರ ಮುಂತಾದ ದೇಶಗಳಲ್ಲಿರುವ ಔತ್ರೇಯ ಬ್ರಾಹ್ಮಣ ಸಂತತಿಗಳಲ್ಲಿ ನೆಲೆಗೊಂಡಿರುವುವೆಂದು ಭಾವಿಸಲಾಗಿದೆ ಅಲ್ಲದೆ ಈ ವಿಷ್ಣುಧರ್ಮೋತ್ತರಮಹಾಪುರಾಣವನ್ನು ಧರ್ಮಶಾಸ್ತ್ರಕಾರರೂ, ವೈದ್ಯಶಾಸ್ತ್ರಕಾರರೂ, ಇತರ ಮಹಾಕವಿಗಳೂ, ಪ್ರಮಾಣಗ್ರಂಥವನ್ನಾಗಿ ತಮ್ಮ ತಮ್ಮ ಗ್ರಂಥಗಳಲ್ಲಿ ಉದಹರಿಸಿದ್ದಾರೆ ಒಟ್ಟಿನ ಮೇಲೆ ವಿಮರ್ಶಿಸುವುದಾದರೆ ಈ ಪುರಾಣವನ್ನು ಸಕಲ ಶಾಸ್ತ್ರಗಳ ಕೈಗನ್ನಡಿ ಮತ್ತು ವಿಶ್ವಕೋಶವೆಂದು ಎಲ್ಲರೂ ಒಪ್ಪಿಕೊಳ್ಳಲು ಸಂಶಯವಿಲ್ಲ ಇಂತಹ ಮಹಾಪುರಾಣಗಳನ್ನು ಕನ್ನಡಭಾಷೆಗೆ ಪರಿವರ್ತಿಸಿ ಕನ್ನಡ ಲೋಕಕ್ಕೆ ಉಪಕಾರಮಾಡಬೇಕೆಂದು ಉದ್ದೇಶವಿಟ್ಟಿರುವ ನಮ್ಮ ಶ್ರೀಮನ್ಮಹಾರಾಜರವರ ಸದುದ್ದೇಶವು ಸಾರ್ಥಕವಾಗಲೆಂದೂ, ಇಂತಹ ಗ್ರಂಥರತ್ನಗಳು ಅನೇಕವಾಗಿ ಪ್ರಕಟವಾಗಿ ಕನ್ನಡದ ಜ್ಞಾನಜ್ಯೋತಿಯು ದಶದಿಕ್ಕುಗಳಲ್ಲೂ ಬೆಳಗಲೆಂದೂ, ಭಗವಂತನನ್ನು ಪ್ರಾರ್ಥಿಸುತ್ತೇನೆ

ಅಧ್ಯಾತ್ಮರಾಮಾಶ್ರಮ,
ಮೈಸೂರು,
ತಾರಣ ಸಂ॥ ಪೌಷಾಸಿತ ಪಂಚಮೀ

**ಚಾ. ವೆಂಕಟರಮಣಶಾಸ್ತ್ರಿ,**
ಅನುವಾದಕ



# ವಿಷಯಾನುಕ್ರಮಣಿಕೆ.

ಶ್ಲೋ. ಸಂಖ್ಯೆ

**ಎಪ್ಪತ್ತನಾಲ್ಕನೆಯ ಅಧ್ಯಾಯ.**

ಪೂರ್ವದಲ್ಲಿ ಕೃತಯುಗಾದಿ ಯುಗಾಂತ್ಯ ಕಾಲಗಳಲ್ಲಿ ಕ್ಷತ್ರಿಯ ಬ್ರಾಹ್ಮಣಾದಿಗಳಿಂದ ಉಳಿದ ಮೂರು ವರ್ಣಾಶ್ರಮದ ಜನರ ಮೇಲೆ ಧಾಳಿ ನಡೆದು, ತಮ್ಮ ಹೊರ್ತು ಉಳಿದ ಮೂರು ಜಾತಿಯನ್ನು ನಾಶಪಡಿಸುವ ಪ್ರಯತ್ನ ನಡೆದಾಗ, ಪರಾಶರ ಪುತ್ರರಾದ ವೇದವ್ಯಾಸರಿಂದ ಪಂಚಮವೇದವೆನಿಸಿದ ಮಹಾ ಭಾರತವು ಪ್ರಕಟವಾದ ವೃತ್ತಾಂತ, ವಾಲ್ಮೀಕಿಯಿಂದ ಪ್ರಕಟ ವಾದ ರಾಮಾಯಣ ವೃತ್ತಾಂತ, ವಿಷ್ಣುವಿನ ನಾನಾ ಅವತಾರ ಗಳ ಯಶೋವರ್ಣನೆ, ಮತ್ತು ಕಲ್ಕ್ಯವತಾರವಾಗಿ ಅವರಿಂದ ನಡೆಸಲ್ಪಡುವ ಕಾರ್ಯವಿವರಣೆ 1-11

**ಎಪ್ಪತ್ತೈದನೆಯ ಅಧ್ಯಾಯ.**

ಮನ್ವಂತರಗಳು ಕಳೆದುಹೋಗುತ್ತಾ ಬಂದಕಾಲದಲ್ಲಿ ಆ ಮನ್ವಂತ ರದ ಧೊರೆಗಳು ಮಹರ್ಲೋಕಕ್ಕೆ ಹೋಗಿ ಸೇರಿಕೊಳ್ಳುವರು, ಇಂದ್ರನೂ, ದೇವತೆಗಳೂ, ಸಪ್ತರ್ಷಿಗಳೂ ಬ್ರಹ್ಮಲೋಕಕ್ಕೆ ಹೋಗಿ ವಾಸಮಾಡುವರು, ಆ ಕಾಲದಲ್ಲಿ (ಪ್ರಳಯದಲ್ಲಿ) ಕುಲ ಪರ್ವತಗಳ ವಿನಹ ಉಳಿದ ಸಕಲ ಭೂಲೋಕವೂ ಪ್ರಳಯ ಜಲದಲ್ಲಿ ಮುಳುಗಿ ಹೋಗುವುದು, ಆಗ ಭೂಮಾತೆಯು ಗರ್ಭ ದಲ್ಲಿ ಜೀವಿಸುತ್ತಿದ್ದ ಸಕಲ ಜಂತು (ಪ್ರಾಣಿ) ಬೀಜ (ಪ್ರಾಣ) ಗಳನ್ನೂ ಜಗನ್ಮಾತೆಯು ಒಂದು ಹಡಗಿನ ರೂಪವನ್ನಾಂತು ಅದರಲ್ಲಿ ತುಂಬಿಕೊಂಡು ಆ ಪ್ರಾಣಬೀಜ ವರ್ಗದೊಡನೆ ಮುಂದಿನ ಮನ್ವಂತರಾಧಿಪತಿಯನ್ನೂ ಸಪ್ತರ್ಷಿಗಳನ್ನೂ ತುಂಬಿ ಕೊಂಡು ಜಲದಲ್ಲಿ ತೇಲುತ್ತಿರುವಳು, ಆ ಹಡಗನ್ನು ಭಗವಾನ್ ಮಹಾವಿಷ್ಣುವು ಎರಡು ಕೊಂಬುಳ್ಳ ದೊಡ್ಡ ಮೀನಿನ ಶರೀರ ವನ್ನು ಹೊಂದಿ ತನ್ನೆರಡು ಕೊಂಬುಗಳ ತುದಿಯಲ್ಲಿ ಆ ಹಡಗ

ಪುಟಸಂಖ್ಯೆ

ನ್ನೆತ್ತಿ ಆಟವಾಡುತ್ತಾ ಹಿಮವತ್ಪರ್ವತದ ಬುಡಕ್ಕೆ ಹೋಗು
ನನು. ಆಗ ಆ ಪರಮಾತ್ಮನನ್ನು ಹೊಗಳುವರು, ಆ ಹಡಗನ್ನು
ಹಿಮಗಿರಿಯಲ್ಲಿಟ್ಟು ಭಗವಂತನು ಅಂತರ್ಧಾನನಾಗುವನು 11-16

## ಎಪ್ಪತ್ತಾರನೆಯ ಅಧ್ಯಾಯ.

ಭೂಲೋಕವೆಲ್ಲಾ ಇಂತು ಪ್ರಳಯಜಲದಲ್ಲಿ ಮುಳುಗಿಹೋಗಿರುವಲ್ಲಿ
ಸಪ್ತಸೂರ್ಯರಿಂದ ದಗ್ಧವಾದ ಸಕಲ ಜೀವಜೀಜಗಳೂ ಜನ
ಲೋಕಕ್ಕೆ ಹೊರಟು ಹೋಗುವುವು, ಆಗ ರುದ್ರತೇಜಸ್ಸಿನಿಂದ
ದ್ವಾದಶಾದಿತ್ಯರೂ ನಾಶಹೊಂದುವರು, ಆಗ ಪ್ರಪಂಚವೆಲ್ಲಾ
ಜಲಮಯವಾದಾಗ ಪರಮಾತ್ಮನು ವಾಯುವನ್ನು ತನ್ನ ದೇಹ
ದೊಳಗೆ ಸೇರಿಸಿಕೊಂಡು ಒಂದು ಸಾವಿರ ಯುಗಗಳವರಿವಿಗೂ
ಸಮುದ್ರದಲ್ಲೀ ಮಲಗಿಬಿಡುವನು, ಆ ಕಾಲದಲ್ಲಿ ಬ್ರಹ್ಮನು ಸಹ
ಆ ಒಂದು ಸಾವಿರ ಯುಗ ಕಳಯುವವರೆಗೆ ತಾನೂ ಸಹ
ಪ್ರಳಯಜಲದಲ್ಲಿ ಮಲಗಿದ್ದು, ಆ ಕಾಲವು ಮುಗಿದೊಡನೆ ಮೇಲ
ಕ್ಕೆದ್ದು, ಪುನಃ ಪ್ರಪಂಚವನ್ನು ಸೃಷ್ಟಿಸುವನು, ಪ್ರತಿಯೊಂದು
ಕಲ್ಪ (ಪ್ರಳಯ) ದ ಕೊನೆಯಲ್ಲಿಯೂ ಇದೇ ರೀತಿ ನಡೆಯು
ತ್ತಿರುವುದು 16-20

## ಎಪ್ಪತ್ತೇಳನೆಯ ಅಧ್ಯಾಯವು.

ಆ ಕಲ್ಪಾಂತ್ಯದಲ್ಲಿ ಜಗತ್ತಿನ ಅವಸ್ಥೆಯೆಂತಿರುವುದೆಂಬ ವಿಚಾರ 20-24

## ಎಪ್ಪತ್ತೆಂಟನೆಯ ಅಧ್ಯಾಯ.

ಭೂಮಿಯೆಲ್ಲವೂ ಆರೀತಿ ಪ್ರಳಯಕಾಲದಲ್ಲಿ ನೀರಿನಲ್ಲಿ ಮುಳುಗಿದ್ದ
ಸಮಯದಲ್ಲಿ ಮಹಾವಿಷ್ಣುವು ಒಂದೇ ಎಳೇಮಗುವಿನಂತೆ ಆಲ
ದೆಲೆಯ ಮೇಲೆ, ಒಂದು ಪುಟ್ಟ ಮಂಚದ ಮೇಲೆ ಮಲಗಿ
ಕೊಂಡು ಆಟವನ್ನಾಡುತ್ತಿರುವನು, ಆಗ ಬ್ರಹ್ಮನು ಆ ಮಗು
ವಿನ ಬಳಿಗೆ ಬಂದು ಅದರ ಬಾಯಿಯೊಳಗೆ ಹೊಕ್ಕು, ಮೂರು
ಲೋಕವನ್ನೂ ಅದರ ಹೊಟ್ಟೆಯೊಳಗೆ ನೋಡಿಕೊಂಡು ಈಚೆಗೆ
ಬಂದು, ಯುಗಸಹಸ್ರ ಪರ್ಯಂತವಾಗಿ ಜಲದಲ್ಲಿ ವಾಸಮಾಡುವ
ನೆಂಬ ವೃತ್ತಾಂತ. 24-30

ಪುಟಸಂಖ್ಯೆ

**ಎಪ್ಪತ್ತೊಂಭತ್ತನೆಯ ಅಧ್ಯಾಯ.**

ಹೀಗೆ ಕಲ್ಪಾಂತರವು ಕಳೆದು ಹೋದಮೇಲೆ, ಬಾಲರೂಪಿಯಾಗಿದ್ದ ಮಹಾವಿಷ್ಣುವು ಅನಿರುದ್ಧರೂಪನಾಗಿ ಪ್ರತ್ಯಕ್ಷನಾಗುವನು, ಆ ಅನಿರುದ್ಧನ ನಾಭಿಕಮಲದಿಂದ ಹಿರಣ್ಯಗರ್ಭ (ಬ್ರಹ್ಮ)ನ ಉತ್ಪತ್ತಿ ... 30-37

**ಎಂಭತ್ತನೆಯ ಅಧ್ಯಾಯ.**

ಬ್ರಹ್ಮನು ಪುನಃ ಉತ್ಪತ್ತಿಯಾಗುವ ವಿಚಾರವನ್ನು ಆರಂಭಿಸಿ, ಕಾಲಗತಿಯ ವಿಚಾರವನ್ನು ಮಾರ್ಕಂಡೇಯರು ವಜ್ರನಿಗೆ ಹೇಳುವರು, ಮತ್ತು ವಜ್ರಮಹಾರಾಜನ ಆಸ್ಥಾನವಾಗಿರುವ ಮಯ (ಸುಧರ್ಮ) ಸಭೆಯು ಅರ್ಜುನನು ಭೂಲೋಕವನ್ನು ಬಿಟ್ಟು ಹೋದ ಮೇಲೆ ರಾಕ್ಷಸರಿಂದ ಒಯ್ಯಲ್ಪಟ್ಟು ಹಿಮಾಲಯಪರ್ವತಕ್ಕೆ ಹೊರಟುಹೋಗುವ ವೃತ್ತಾಂತ ... 37-42

**ಎಂಭತ್ತೊಂದನೆಯ ಅಧ್ಯಾಯ.**

ಹಗಲು ರಾತ್ರಿಯಿಂದಾರಂಭವಾಗಿ ಕಲ್ಪಾಂತ್ಯದವರೆಗಿನ ಕಾಲಸ್ವರೂಪವರ್ಣನೆ, ಆ ಕಾಲದೇವತಾದಿಗಳ ಕವನ ಪೂರ್ವಕವಾಗಿ ಮನ್ವಂತರ ಸಾದೃಶ್ಯವರ್ಣನೆ ... 42-49

**ಎಂಭತ್ತೆರಡನೆಯ ಅಧ್ಯಾಯ.**

ಕೃತಾದಿಯುಗಗಳ ಅಭಿಮಾನದೇವತೆಗಳು, ಪ್ರಭವಾದಿ ಷಷ್ಟಿ ಸಂವತ್ಸರಗಳು, ಆಯಾಯ ವರ್ಷದ ಗುರುಚಾರದಿಂದುಂಟಾದ ಹನ್ನೆರಡು ರಾಶ್ಯಾಧಿಪತಿಗಳು ಕೊಡುವ ಫಲಗಳು, ನಕ್ಷತ್ರಫಲ, ವರ್ಷಫಲ, ಸಂವತ್ಸರಾಧಿಪತಿಗಳ ಫಲ, ಗ್ರಹಾದಿಗಳ ವರ್ಣನೆಯೂ, ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ ... 49-61

**ಎಂಭತ್ತಮೂರನೆಯ ಅಧ್ಯಾಯ.**

ಅಯನಗಳೂ, ರೂಪಗಳೂ, ಗ್ರಹನಕ್ಷತ್ರ ತಿಥಿಕರಣಗಳೂ, ಅವುಗಳ ದೇವತೆಗಳೂ, ಕರಣಾನಯನ ಪ್ರಕಾರ ಹೋರೆ, ಗುಳಿಕೆ ಮೊದಲಾದ ವೇಳೆ (ರಾಹು, ಗುಳಿಕ ಕಾಲಗಳು) ಗಳೂ, ಮುಹೂರ್ತಗಳೂ, ಅವುಗಳ ಅಧಿಪತಿಗಳೂ , ಈ ಅಧ್ಯಾಯದಲ್ಲಿ ವಿವರಿ

ಪುಟಸಂಖ್ಯೆ

ಸಲ್ಪಟ್ಟು, ಇವುಗಳನ್ನು ಪೂಜೆಮಾಡುವ ಸಮಯಗಳೂ, ಅದರಿಂದಾಗುವ ಫಲಗಳೂ ಸಹ ಇದರಲ್ಲಿ ವರ್ಣಿತವಾಗಿವೆ 61-75

**ಎಂಭತ್ತನಾಲ್ಕನೆಯ ಅಧ್ಯಾಯ.**

ಲಗ್ನಗಳೂ, ಅವುಗಳ ದೇವತೆಗಳೂ, ಹೋರೆ, ದ್ರೇಕ್ಕಾಣ, ನವಾಂಶ, ತ್ರಿಂಶಾಂಶ ರಾಶೀಶ್ವರರುಗಳ ವಿವರಣೆ 75-79

**ಎಂಭತ್ತೈದನೆ ಅಧ್ಯಾಯ.**

ಗ್ರಹನಕ್ಷತ್ರ, ದಿವಸಗಳ ಶುಭಾಶುಭ ಪರಿಜ್ಞಾನ ನಿರ್ವಚನ 79-91

**ಎಂಭತ್ತಾರನೆಯ ಅಧ್ಯಾಯ.**

ಗ್ರಹನಕ್ಷತ್ರ-ಪೀಡಿತ ದಿಕ್ಕುಗಳ ವಿವರಣೆ ಗ್ರಹಯುದ್ಧ, ಗ್ರಹಸಮಾಗಮ, ಉಚ್ಚನೀಚ, ಪಿತೃ-ಗೃಹಸ್ಥ, ಪರಾಜಿತ ಗ್ರಹಗಳ ಸ್ವಸ್ವ ದಿಕ್ಕ್ರೀಡನ ವಿವರ 91-95

**ಎಂಭತ್ತೇಳನೆಯ ಅಧ್ಯಾಯ-**

ಜನ್ಮಾಶ್ರಿತ ಚಂದ್ರಾದಿ-ನಕ್ಷತ್ರ, ನವ-ಷಟ್-ತ್ರಿನಕ್ಷತ್ರಗಳ ಶುಭಾಶುಭ ಪರಿಜ್ಞಾನ ವಿಚಾರ 95-99

**ಎಂಭತ್ತೆಂಟನೆಯ ಅಧ್ಯಾಯ.**

ಅಶ್ವಿನಿಯೇ ಮುಂತಾದ ನಕ್ಷತ್ರ, ತಾರಾಸಂಖ್ಯಾಗ್ರಹನಕ್ಷತ್ರ, ಮತ್ತು ನಕ್ಷತ್ರ ಮಂಡಲಾದಿಗಳ ವರ್ಣನ 99-10[illegible]

**ಎಂಭತ್ತೊಂಭತ್ತನೆಯ ಅಧ್ಯಾಯ.**

ಜನ್ಮಕರ್ಮ ಸಾಂಘಾತಿಕ ಸಾಮುದಾಯಿಕ ವೈನಾಶಿಕಾಭಿಷೇಕ ನಕ್ಷತ್ರಗಳೂ ಪೀಡಿತವಾಗಿರಲಾಗಿ ಆಯಾಯ ಗ್ರಹಗಳಿಗೆ ಗೋಮೂತ್ರಾದಿಗಳಿಂದ ಅಭಿಷೇಕಮಾಡಿ ಆಯಾಯ ಗ್ರಹಗಳನ್ನು ಪೂಜೆಮಾಡುವ ಕ್ರಮ. 103-106

**ತೊಂಭತ್ತನೆಯ ಅಧ್ಯಾಯ**

ಗ್ರಹನಕ್ಷತ್ರಗಳನ್ನು ಪೂಜೆಮಾಡುವ ವಿಧಿಗಳು 106-110

ಪುಟಸಂಖ್ಯೆ

**ತೊಂಭತ್ತೊಂದನೆಯ ಅಧ್ಯಾಯ.**

ಆಯಾಯ ದ್ರವ್ಯಗಳಿಂದ ಗ್ರಹನಕ್ಷತ್ರಗಳನ್ನು ಸ್ನಾನಮಾಡಿಸುವ ವಿಧಿಗಳು 110-115

**ತೊಂಭತ್ತೆರಡನೆಯ ಅಧ್ಯಾಯ.**

ಪೂಜೆಮಾಡುವ ಸ್ಥಳದಲ್ಲಿ ರಚಿಸಬೇಕಾದ ವೇದಿಕೆಯ ಕ್ರಮ, ಅದರ ಸಂಸ್ಕಾರ ಅಗ್ನಿಪೂಜಾಕ್ರಮಗಳು, ವೇದಮಂತ್ರಗಳಿಂದ ಮಾಡುವ ಹೋಮಗಳು, ಪೂರ್ವತಂತ್ರ ಉತ್ತರತಂತ್ರಗಳ ವಿಧಿಗಳು 115-131

**ತೊಂಭತ್ತಮೂರನೆಯ ಅಧ್ಯಾಯ.**

ಪಂಚಗವ್ಯದಿಂದ ಮಂಡಲಶ್ರಾದ್ಧಮಾಡುವ ಕ್ರಮ, ಜೀವಾವಾಹನ ಗ್ರಹಪೂಜಾದಿಗಳ ಕಥನ 131-138

**ತೊಂಭತ್ತನಾಲನೆಯ ಅಧ್ಯಾಯ.**

ಸಮಸ್ತ ಗ್ರಹಯಜ್ಞಗಳಲ್ಲೂ ಮಾಡಬೇಕಾದ ಮಂಡಲವಿಧಿ ಮಧ್ಯ ಭಾಗದಲ್ಲಿ ಬರೆಯಬೇಕಾದ ಧ್ರುವಮಂಡಲದ ವಿವರಣೆ, ಗ್ರಹ ನಕ್ಷತ್ರ ಮಂಡಲಗಳನ್ನು ರಚಿಸಬೇಕಾದ ಕ್ರಮಗಳು 138-147

**ತೊಂಭತ್ತೈದನೆಯ ಅಧ್ಯಾಯ.**

ಧ್ರುವ, ಆಕಾಶ, ಅನಂತ, ಗ್ರಹ, ನಕ್ಷತ್ರಾದಿಗಳ ಆವಾಹನ ಮಂತ್ರ ಗಳು 147-165

**ತೊಂಭತ್ತಾರನೆಯ ಅಧ್ಯಾಯ.**

ಆಯಾಯ ದೇವತೆಗಳಿಗೆ ಸಮರ್ಪಿಸಬೇಕಾದ ಸುಗಂಧ ದ್ರವ್ಯಗಳು 165-170

**ತೊಂಭತ್ತೇಳನೆಯ ಅಧ್ಯಾಯ.**

ಗ್ರಹನಕ್ಷತ್ರಗಳಿಗೂ, ದಿಗ್ದೇವತೆಗಳಿಗೂ ಸಮರ್ಪಿಸಬೇಕಾದ ಬೇರೆ ಬೇರೆ ಬಣ್ಣದ ವಸ್ತ್ರಗಳ ವಿವರಣೆ, ಧ್ವಜ, ಆಭರಣ, ಪುಷ್ಪ ಪೂಜಾದಿಗಳ ಕ್ರಮಗಳು 170-174

ಪುಟಸಂಖ್ಯೆ

**ತೊಂಭತ್ತೆಂಟನೆಯ ಅಧ್ಯಾಯ.**

ಆಯಾಯ ದೇವತೆಗಳಿಗೆ ಸಮರ್ಪಿಸಬೇಕಾದ ಧೂಪದ್ರವ್ಯ, ದೀಪಾರಾಧನೆಗಳು 174-178

**ತೊಂಭತ್ತೊಂಭತ್ತನೆಯ ಅಧ್ಯಾಯ.**

ಧ್ರುವಸ್ಥಾನದಲ್ಲಿರುವ ದೇವತೆಗಳಿಗೆ ಯಾವ ಯಾವ ಪದಾರ್ಥಗಳನ್ನು ನೈವೇದ್ಯಮಾಡಬೇಕೆಂಬ ಸಂಗತಿ. 178-184

**ನೂರನೆಯ ಅಧ್ಯಾಯ.**

ಧ್ರುವಸ್ಥಾನ ನಿವಿಷ್ಟದೇವತೆಗಳಿಗೆ ಸಮರ್ಪಿಸಬೇಕಾದ ಪಾನೀಯ ದ್ರವ್ಯಗಳು 184-187

**ನೂರೊಂದನೆಯ ಅಧ್ಯಾಯ.**

ತತ್ತದ್ದೇವತೆಗಳಿಗೆ ಹೋಮಮಾಡಬೇಕಾದ ಹೋಮ ದ್ರವ್ಯಗಳು 187-191

**ನೂರೆರಡನೆಯ ಅಧ್ಯಾಯ.**

ಆಯಾಯ ದೇವತೆಗಳಿಗೆ ಹೋಮದ್ರವ್ಯವನ್ನು ಹೋಮಮಾಡುವಾಗ ಹೇಳಬೇಕಾದ ಮಂತ್ರಗಳು 191-196

**ನೂರಮೂರನೆಯ ಅಧ್ಯಾಯ.**

ತತ್ತದ್ದೇವತೆಗಳಿಗೆ ಪ್ರೀತಿಯಾಗಲು ದಕ್ಷಿಣೆಯನ್ನೆಷ್ಟು ಕೊಡಬೇಕೆಂಬ ವಿವರಣ 196-201

**ನೂರನಾಲ್ಕನೆಯ ಅಧ್ಯಾಯ.**

ಗ್ರಹಶಾಂತಿ-ಸಂಬಂಧವಾದ ಹೋಮಗಳಲ್ಲಾದಮೇಲೆ ಪುರೋಹಿತನು ಯಜಮಾನನ ಕೈಗೆ ಪ್ರತಿಸರ (ಕಂಕಣ) ವನ್ನು ಕಟ್ಟಿ ಆಶೀರ್ವಾದಮಾಡುವ ಆಶೀರ್ವಾದ ಕ್ರಮ 201-204

**ನೂರೈದನೆಯ ಅಧ್ಯಾಯ.**

ಗ್ರಹಶಾಂತಿಗಳನ್ನು ಮಾಡಿದರೆ ಆಗುವ ಫಲಗಳು 204-209

ಪುಟಸಂಖ್ಯೆ

**ನೂರಾರನೆಯ ಅಧ್ಯಾಯ.**

ಖಗೋಳಶಾಸ್ತ್ರ, ಧ್ರುವಚರಿತ್ರೆ, ಧ್ರುವನಕ್ಷತ್ರವು, ಮಹಾವಿಷ್ಣುವಿನ ಅವತಾರ, ಆಕಾಶದಲ್ಲಿ ಧ್ರುವನಕ್ಷತ್ರವನ್ನು ಕಂಡುಹಿಡಿದು ಅದರ ಸುತ್ತಲೂ ತಿರುಗುವ ನಕ್ಷತ್ರಗಳ ವಿವರಣೆ ಆ ಧ್ರುವಮಂಡಲದ ಕೆಳಗಡೆ ಕಾಣುವ ಸಪ್ತರ್ಷಿನಕ್ಷತ್ರ, ಅದರ ಕೆಳಗೆ ನಕ್ಷತ್ರಚಕ್ರ, ಅದರ ಕೆಳಗೆ ಕ್ರಮವಾಗಿ ಕಾಣುವ ಶನಿ-ಕುಜ-ಸೂರ್ಯ-ಶುಕ್ರ-ಬುಧ-ಚಂದ್ರರುಗಳ ಸ್ಥಿತಿ, ಪೂರ್ವ ದಕ್ಷಿಣ ಗತಿಯುಳ್ಳ ಜ್ಯೋತಿಶ್ಚಕ್ರದ ವಿವರಣೆ, ನವಗ್ರಹಗಳ ಅತ್ಯಾಶ್ಚರ್ಯಕರವಾದ ಚರಿತ್ರಗಳು, ಅದರಲ್ಲೂ ಸೂರ್ಯನ ತೇಜಸ್ಸನ್ನು ಸಹಿಸಲಾರದ ಅವನ ಹಂಡತಿ ಸಂಜ್ಞೆಯು ಅವನನ್ನು ಬಿಟ್ಟು ಹೋದುದು, ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳುಗಳ ವೃತ್ತಾಂತ, ಛಾಯಾದೇವೀ ವೃತ್ತಾಂತ, ಅಶ್ವಿನೀದೇವತೆಗಳು ಕುದುರೆಯ ಮುಖದಲ್ಲಿ ಹುಟ್ಟಿದುದು, ರೇವಂತಾಶ್ವ ವೃತ್ತಾಂತ, ರೇವಂತ ಪೂಜೆಯಿಂದುಂಟಾದ ಮಹಿಮೆಗಳು 209-231

**ನೂರೇಳನೆಯ ಅಧ್ಯಾಯ.**

ಅಸುರರು, ಸುರರು, ಪಿತೃಗಳು, ಬ್ರಾಹ್ಮಣಾದಿಗಳ ಶಬ್ದಗಳ ಅರ್ಥವಿವರಣೆ, ಸಂಧ್ಯೋಪಾಸನ ಕಾರಣವನ್ನು ಪ್ರಸ್ತಾಪಿಸುತ್ತಾ ಮನುಷ್ಯರಾಕ್ಷಸ ಗಂಧರ್ವಾದಿ ವಿವಿಧ ಸೃಷ್ಟಿ-ಕಥನ, ಪೂರ್ವಕವಾಗಿ ಸ್ವಧರ್ಮಾನುಷ್ಠಾನ ತತ್ಪರನಾದ ಬ್ರಾಹ್ಮಣರಿಗೆ ಸ್ವರ್ಗಾದ್ಯುತ್ತಮ ಲೋಕಗಳಲ್ಲಿನ ವಾಸವು ಸಿದ್ಧವಾಗಿದೆಯೆಂಬ ವೃತ್ತಾಂತ, ಬ್ರಹ್ಮನ ಹೆಬ್ಬೆರಳಿನಿಂದ ಹುಟ್ಟಿದ ದಕ್ಷನ ಮತ್ತು ಅವನ ಹಂಡತಿಯರ ಕಥೆ, ಅವರ ಪ್ರಜಾಸಂಪದ್ವಿಸ್ತಾರ ವಿವರಣೆ, ದಕ್ಷನ ಯಜ್ಞಕ್ಕೆ ಅವನ ಮಗಳಾದ ಸತಿ (ಪಾರ್ವತಿ) ಯು ಕರೆಯದ ಇದ್ದರೂ ಹೋಗಿ ಅಲ್ಲಿ ತಿರಸ್ಕಾರ ಹೊಂದಿ ಪ್ರಾಣತ್ಯಾಗ ಮಾಡುವ ವೃತ್ತಾಂತ, ಈಶ್ವರನು ಅಲ್ಲಿಗೆ ಬಂದು ಸತ್ತುಹೋಗಿದ್ದ ತನ್ನ ಹೆಂಡತಿಯನ್ನು ನೋಡಿ ಮಹಾವ್ಯಥೆಯಿಂದ ದಕ್ಷನಮೇಲ ಕೋಪಗೊಂಡು ನೀನು ದೇವಲೋಕದಲ್ಲಿರಲನರ್ಹನಾದ್ದರಿಂದ ಮನುಷ್ಯನಾಗಿ ಹುಟ್ಟೆಂದು ಶಾಪಕೊಡುವ ವೃತ್ತಾಂತಗಳು 231-255

ಪುಟಸಂಖ್ಯೆ

**ಸೂರಂಟನೆಯ ಅಧ್ಯಾಯ.**

ಧ್ರುವನ ವಂಶದಲ್ಲಿ ಹುಟ್ಟಿದ ರಾಜರುಗಳ ಕಥೆ, ಅವನ ವಂಶದಲ್ಲಿ ಹುಟ್ಟಿದ ನಾಸ್ತಿಕನಾದ ವೇನರಾಜನು ಮರ್ಯಾದೆಯನ್ನು ಮೀರಿ ಅಧರ್ಮದಲ್ಲೇ ನಿರತನಾಗಿ ಬ್ರಹ್ಮದ್ವೇಷ, ಧರ್ಮದ್ವೇಷವನ್ನೇ ಸಾಧಿಸುತ್ತ ಬರುತ್ತಿರಲು, ಸಕಲ ಬ್ರಾಹ್ಮಣರೂ ಬಂದು ಅವನ ಅಧರ್ಮಬುದ್ಧಿಯನ್ನು ಹೋಗಲಾಡಿಸಬೇಕೆಂದು ಅನೇಕ ವಿಧವಾಗಿ ಹಿತೋಪದೇಶಮಾಡುವರು, ಇಷ್ಟಾದಾಗ್ಯೂ ಛಲಗಾರನು ವೇನನು ಎಲ್ಲರ ಮಾತನ್ನೂ ತಳ್ಳಿಹಾಕಲು, ಸಕಲ ಬ್ರಾಹ್ಮಣರೂ ಸೇರಿ ದೇವದತ್ತ ಪ್ರಜ್ಞೆಯಿಂದ ಕೂಡಿದವರಾಗಿ ಮಂತ್ರಪೂತ ಜಲವನ್ನವನಮೇಲೆ ಪ್ರೋಕ್ಷಿಸಿ ಆ ವೇನನ ಪ್ರಾಣಗಳನ್ನು ಕಳೆದು, ಅವನ ತೊಡೆಯನ್ನು ಮಂತ್ರಪೂತೋದಕ ಮಿಶ್ರವಾದ ದರ್ಭೆಗಳಿಂದ ಮಥನ (ಕಡೆದು) ಮಾಡುವರು, ಆಗ ಆ ಕಡೆದ ತೊಡೆಗಳಿಂದ ನಿಷಾದರಾಜನೂ ಪೃಥುರಾಜನೂ ಹುಟ್ಟುವ ಅದ್ಭುತ ಚರಿತ್ರೆ 255-271

**ಸೂರೊಂಭತ್ತನೆಯ ಅಧ್ಯಾಯ**

ಪೃಥುಮಹಾರಾಜನು ಉತ್ಪನ್ನನಾದುದನ್ನು ಕೇಳಿ, ಬ್ರಹ್ಮಾದಿ ಸಕಲ ದೇವತೆಗಳೂ ಬಂದು ಪೃಥುವಿಗೆ ರಾಜ್ಯಪಟ್ಟಾಭಿಷೇಕ ಮಾಡುವರು, ಪಟ್ಟಾಭಿಷೇಕ ಕಾಲದಲ್ಲಿ ದೇವರಾಜನಾದ ಇಂದ್ರನೂ, ಇತರ ದೇವತೆಗಳೂ ಪೃಥುವಿಗೆ ಆನೆ, ಕುದುರೆ, ಛತ್ರಚಾಮರಾದಿಗಳನ್ನು ಕೊಟ್ಟು ಪೃಥುವಿನ ಮಹಿಮೆಯನ್ನು ಕೊಂಡಾಡುವರು, ಸೂತಮಾಗಧರಿಂದ ಸ್ತುತನಾದ ಪೃಥುವು ಪರಮ ಸಂತೋಷಭರಿತನಾಗಿ ಆ ಸೂತಮಾಗಧರಿಬ್ಬರಿಗೂ ಅನೂಪ ಮತ್ತು ಮಾಗಧವೆಂಬ ಗ್ರಾಮಗಳನ್ನು ದಾನಮಾಡುವ ವೃತ್ತಾಂತ, ತಮಗೆ ವೃತ್ತಿಗಳನ್ನು ಕಲ್ಪಿಸಿಕೊಡಬೇಕೆಂದು ಕೇಳಿಕೊಂಡ ಬ್ರಾಹ್ಮಣರ ಕೋರಿಕೆಯಂತೆ ಪೃಥ್ವಿ (ಭೂಮಿ) ಯಿಂದ ಸಸ್ಯಾದಿಸಂಪತ್ತನ್ನುಂಟುಮಾಡಿಕೊಡುವ ವಿಚಾರ, ಭೂಸಂಪತ್ತನ್ನೂ, ಬೇರೆಬೇರೆಯಾದ ಹಸುಕರುಗಳ ರೂಪವಂ ಧರಿಸಿದ ದೇವಾದಿದೇವತೆಗಳಿಂದ ದೋಹನ ಮಾಡಿಸು (ಕರೆಸು) ವ ವೃತ್ತಾಂತಗಳು, ಪಿತೃವಿರಕ್ತ ಪ್ರಜೆಗಳಿಗೆ ಇದರಿಂದಾನಂದವಾಗುವ ವಿಚಾರ 271-284

ಪುಟಸಂಖ್ಯೆ

**ಸೂಹತ್ತನೆಯ ಅಧ್ಯಾಯ.**

ಭೂಲೋಕದಲ್ಲಿ ಸೃಷ್ಟಿಯೂ ಜಾಗವಿಲ್ಲದೆ ಬರೀಮರಗಳೇ ಬೆಳೆದು ನರಪ್ರಾಣಿಗಳ ಹೆಸರೇ ಇಲ್ಲದ ಅವರೆಲ್ಲರೂ ನಾಶವಾಗಿ ಹೋಗುವರು, ಆಗ ಸೋಮರಾಜನಿಂದ ಪ್ರಾರ್ಥಿತರಾದ ವೃಕ್ಷರಾಜ ಕನ್ಯೆಯಾದ ಮಾರಿಷಯೆಂಬ ಕನ್ಯೆಯನ್ನು ವೃಕ್ಷಗಳು ಮದುವೆಮಾಡಿಕೊಳ್ಳಲು, ಅವಳ ಹೊಟ್ಟೆಯಲ್ಲಿ ದಕ್ಷಬ್ರಹ್ಮನ ಉತ್ಪತ್ತಿ, ಈಶ್ವರ ಶಾಪದಿಂದ ಈರೀತಿ ದಕ್ಷಬ್ರಹ್ಮನು ಮನುಷ್ಯನಾಗಿ ಹುಟ್ಟಿದ ಬಳಿಕ ಮಾನಸ ಸೃಷ್ಟಿಗೆ ಆರಂಭಿಸುವನು, ಅದು ಸಿದ್ಧಿಯಾಗದೆ ಹೋಗಲು ವೀರಣಬ್ರಹ್ಮನ ಮಗಳಾದ ವೀರಿಣಿಯೆಂಬ ಕನ್ಯೆಯನ್ನು ಲಗ್ನವಾಗಿ ಅವಳ ಬಸಿರಿನಿಂದ ಸಾವಿರ ಮಕ್ಕಳನ್ನುತ್ಪತ್ತಿ ಮಾಡುವನು, ನಾರದನ ಮಾತನ್ನು ನಂಬಿ ಅವರೆಲ್ಲರೂ ಮೃತರಾಗುವ ವೃತ್ತಾಂತ, ಆಗ ದಕ್ಷನು ನಾರದನಿಗೆ ಶಾಪಕೊಡಲು, ಆ ನಾರದನು ಬ್ರಹ್ಮಂದ ಕಶ್ಯಪನ ಮಗನಾಗಿ ಹುಟ್ಟುವನು ದಕ್ಷನು ಪುನಃ ಅಶ್ವಮೇಧಯಾಗವನ್ನು ಮಾಡುವನು, ಆಗಲೂ ಶಿವನಿಗೆ ಜನ್ಮಾಂತರ ದ್ವೇಷದಿಂದ ಹವಿರ್ಭಾಗವನ್ನು ಕೊಡದಿರಲು ಪುನಃ ಶಿವಶಾಪಕ್ಕೆ ಗುರಿಯಾಗುವನು ದಕ್ಷನ ವಂಶ ವೃತ್ತಾಂತ 284-292

**ನೂರಹನ್ನೊಂದನೆಯ ಅಧ್ಯಾಯ.**

ಸ್ವಾಯಂಭುವ ಮನ್ವಂತರದಲ್ಲಿ ದಕ್ಷನ ಯಜ್ಞದಲ್ಲಿ ಸೇರಿ ಶಿವನಿಗೆ ಅವಮಾನಮಾಡಿದ್ದ ಸಕಲ ಋಷಿಗಳೂ ಶಿವನಿಂದ ಶಾಪಗ್ರಸ್ತರಾಗಿ ಈ ವೈವಸ್ವತಮನ್ವಂತರದಲ್ಲಿ ಹುಟ್ಟುವರು ಆ ಭೃಗ್ವಂಗಿರಾದಿ ಮಹರ್ಷಿಗಳನೇಕರ ಉತ್ಪತ್ತಿಯನ್ನೂ, ಅವರ ಪ್ರವರವನ್ನೂ, ಪರಸ್ಪರ ವಿವಾಹಸಂಬಂಧ ಬೆಳಸಕೂಡದಾದ ಆ ಸಗೋತ್ರಪ್ರವರರಾದ ಋಷಿಗಳ ವಿವರವನ್ನೂ ಈ ಅಧ್ಯಾಯದಲ್ಲಿ ಕಾಣಬಹುದು 292-300

**ನೂರಹನ್ನೆರಡನೆಯ ಅಧ್ಯಾಯ.**

ಅಂಗಿರಋಷಿಗಳ ವಂಶಸ್ಥರ ಹಸರುಗಳು, ಆ ಅಂಗಿರಗೋತ್ರದಲ್ಲಿ ಪರಸ್ಪರ ವಿವಾಹ (ಭಾರದ್ವಾಜ ಗೋತ್ರ) ಮಾಡಕೂಡದು 300-310

**ನೂರಹದಿಮೂರನೆಯ ಅಧ್ಯಾಯ.**

ಆತ್ರೇಯನ ಗೋತ್ರಜರಾದ ಋಷಿಗಳ ಶಾಖಾಪ್ರವರಭೇದಗಳ ಅನ್ವಯ ಪುತ್ರಿಕಾಪುತ್ರರ ವಂಶ ಪರಸ್ಪರ ಅವೈವಾಹ್ಯತ್ವ ಪ್ರವರಗಳು 310-313

**ನೂರಹದಿನಾಲ್ಕಯ ಅಧ್ಯಾಯ.**

ಅತ್ರಿಗಳ ಮತ್ತೊಂದು ವಂಶದ ವರ್ಣನೆ, ವಿಶ್ವಾಮಿತ್ರರು ತಪಸ್ಸಿನಿಂದ ಬ್ರಾಹ್ಮಣ್ಯವನ್ನು ಸಂಪಾದಿಸುವುದು, ವಿಶ್ವಾಮಿತ್ರ ಗೋತ್ರದಲ್ಲಿ ಪರಸ್ಪರ ವಿವಾಹಮಾಡಕೂಡದಾದ ಋಷಿಗೋತ್ರ ಪ್ರವರಗಳು 313-317

**ನೂರಹದಿನೈದನೆಯ ಅಧ್ಯಾಯ.**

ಮಾರೀಚ ಕಶ್ಯಪವಂಶದಲ್ಲಿ ಗೋತ್ರಕಾರರಾದ ಋಷಿಗಳ ಹೆಸರಗಳೂ, ಅವರ ಪ್ರವರಸಂಖ್ಯೆ, ದ್ವ್ಯಾಮುಷ್ಯಾಯಣ ಗೋತ್ರಲಕ್ಷಣ ಆ ಗೋತ್ರದ ಋಷಿಗಳು 317-322

**ನೂರ ಹದಿನಾರನೆಯ ಅಧ್ಯಾಯ**

ವಸಿಷ್ಠಗೋತ್ರದ ವಂಶಗಳು, ಏಕಾರ್ಷೇಯ-ಪ್ರವರ ವರ್ಣನೆ 322-326

**ನೂರ ಹದಿನೇಳನೆಯ ಅಧ್ಯಾಯ :—**

ವಸಿಷ್ಠರು ನಿಮಿರಾಜನ ಪುರೋಹಿತರು ನಿಮಿಯು ಒಂದರಗಳಿಗೆಯೂ ಎಡಬಿಡದೆ ಯಜ್ಞಮಾಡುತ್ತಲೇ ಇದ್ದನು ಒಂದು ಬಾರಿ ಸ್ವಲ್ಪ ವಿಶ್ರಾಂತಿ ಸಿಕ್ಕಿದಾಗ ವಸಿಷ್ಠರು ವಿಶ್ರಮಿಸಿಕೊಳ್ಳುತ್ತಿದ್ದರು ಆಗ ನಿಮಿಯು ಪುನಃ ಬಂದು ಈಕ್ಷಣ ಇನ್ನೊಂದು ಯಜ್ಞಮಾಡಬೇಕಾಗಿದೆ ಪೌರೋಹಿತ್ಯಕ್ಕೆ ಬನ್ನಿ ಎಂದು ಕರೆದನು ಸ್ವಲ್ಪ ತಾಳಯ್ಯ ವಿಶ್ರಮಿಸಿಕೊಂಡು ಬರುತ್ತೇನೆಂದು ವಸಿಷ್ಠರು ಹೇಳಿದರು ಆಗ ನಿಮಿಯು ಸ್ವಾಮಿ, ಇದು ಧರ್ಮದ ಕೆಲಸ. ನಿಮ್ಮ ಕೈಲಾಗದಿದ್ದರೆ ಬೇರೆ ಪುರೋಹಿತರ ಕೈಯಲ್ಲಿ ಮಾಡಿಸಿಕೊಳ್ಳಲೆ ? ಎಂದು ಕೇಳಿದನು ವಸಿಷ್ಠರಿಗೆ ಆ ಮಾತು ಕೇಳಿ ಬಹು ಕೋಪಬಂದು, ಕುಲಪುರೋಹಿತನಾದ ನನ್ನನ್ನು ಬಿಟ್ಟು ಬೇರೆ ಪುರೋಹಿತನನ್ನು ಕರೆಯುತ್ತೀಯಾ ? ನೀನು

ಪುಟಸಂಖ್ಯೆ

ನಾಯಿ ಎಂದು ಶಾಪಕೊಟ್ಟರು ನಿಮಿಯೂ, ನಿರಪರಾಧಿಯಾದ ನನಗೆ ಶಾಪಕೊಟ್ಟ ನೀನೂ ನಾಯಿ, ಎಂದು ಪ್ರತಿಶಾಪವನ್ನು ವಸಿಷ್ಠನಿಗೆ ಕೊಟ್ಟುಬಿಟ್ಟನು. ಇಬ್ಬರ ದೇಹವೂ ಭೂಮಿಯಲ್ಲಿ ಬಿತ್ತು ಆ ಜೀವಗಳು ಬ್ರಹ್ಮನೊಡನೆ ದೂರು ಹೇಳಿಕೊಂಡವು ಆಗ ಬ್ರಹ್ಮನು ನಿಮಿಗೆ ನೀನು ಮನುಷ್ಯರ ಹುಬ್ಬಿನ ರೆಪ್ಪೆಗಳಲ್ಲಿರೆಂದೂ, ವಸಿಷ್ಠನಿಗೆ ಮಿತ್ರಾವರುಣ ಋಷಿಯ ಮಗನಾಗಿ ವಸಿಷ್ಠನೆಂಬ ಹೆಸರಿನಿಂದಲೇ ಹುಟ್ಟೆಂದೂ ವರ ಕೊಡಲು, ವಸಿಷ್ಠನು ಮಿತ್ರಾವರುಣಪುತ್ರನಾಗಿ ಹುಟ್ಟಿ ನಾರದರ ತಂಗಿ ಅರುಂಧತಿಯನ್ನು ಲಗ್ನವಾಡಿಕೊಂಡು ಶಕ್ತಿಋಷಿಯನ್ನು ಮಗನನ್ನಾಗಿ ಪಡೆಯುವನು ವಸಿಷ್ಠನ ಹಿರೀಮಗನೇ ಶಕ್ತಿ ಶಕ್ತಿಯ ಮಗನೇ ಪರಾಶರ ಪರಾಶರರ ಮಗನೇ ವ್ಯಾಸ ಮಹರ್ಷಿ ಆ ವ್ಯಾಸರಲ್ಲಿ ಕೃಷ್ಣ, ನೀಲ, ರಕ್ತ, ಶ್ವೇತ, ಗೌರ, ಧೂಮ್ರ, ಪರಾಶರರೆಂದೂ ಬಹು ವಿಧವುಂಟು ಇವರೆಲ್ಲಾ ತ್ರ್ಯಾರ್ಷೇಯರು ಪರಸ್ಪರ ವಿವಾಹವಿಲ್ಲ 326-334

**ನೂರ ಹದಿನೆಂಟನೆಯ ಅಧ್ಯಾಯ.**

ಅಗಸ್ತ್ಯರವಂಶ ಪ್ರವರಗಳು---ಪುಲಸ್ತ್ಯ, ಪುಲಹ, ಕ್ರತು, ಅಗಸ್ತ್ಯರಲ್ಲಾ ಒಂದೇ ವಂಶದವರು 334-337

**ನೂರ ಹತ್ತೊಂಭತ್ತನೆಯ ಅಧ್ಯಾಯ.**

ಅರುಂಧತಿಯ ಪ್ರಸವ ವೃತ್ತಾಂತ ವರ್ಣನ 337-341

**ನೂರ ಇಪ್ಪತ್ತನೆಯ ಅಧ್ಯಾಯ.**

ಕಶ್ಯಪವಂಶವರ್ಣನೆ, ಆದಿತ್ಯನ ಉತ್ಪತ್ತಿ 341-343

**ನೂರ ಇಪ್ಪತ್ತೊಂದನೆಯ ಅಧ್ಯಾಯ.**

ಕೃಷ್ಣನು ನೃವರಾಹರೂಪವನ್ನು ಧರಿಸಿ ಹಿರಣ್ಯಾಕ್ಷನನ್ನು ವಧೆಮಾಡುವುದು, ಬಲಿಯ ದಾನದಲ್ಲಿ ಮೂರುಹೆಜ್ಜೆ ದಾನ ಬೇಡುವುದು, ಬಾಣಾಸುರ ಯುದ್ಧದಲ್ಲಿ ಕಾರ್ತಿಕೇಯಸಹಿತನಾದ ರುದ್ರನನ್ನು ಜಯಿಸುವುದು 343-346

ಪುಟಸಂಖ್ಯೆ

**ನೂರ ಇಪ್ಪತ್ತೆರಡನೆಯ ಅಧ್ಯಾಯ.**

ಸುಯಾತಾರರೆಂಬ ದೈತ್ಯರಿಂದ ಜಿತರಾದ ದೇವತೆಗಳು ತಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗುವುದು, ಅವರ ಅಪ್ಪಣೆಯಂತೆ ಅಗ್ನಿಯನ್ನು ಸ್ತೋತ್ರಮಾಡಲು ಆ ಅಗ್ನಿಯು ಸಂತುಷ್ಟನಾಗಿ ಯುದ್ಧರಂಗಕ್ಕೆ ಬಂದು ಶತ್ರುಗಳನ್ನು ಸುಡುವುದಾಗಿ ವಾಗ್ದಾನಮಾಡುವನು 346-350

**ನೂರ ಇಪ್ಪತ್ತಮೂರನೆಯ ಅಧ್ಯಾಯ.**

ಅಗ್ನಿಗೆ ಸಹಾಯಮಾಡಬೇಕೆಂದು ದೇವಗುರುವು ವಾಯುಸ್ತುತಿ ಮಾಡುವನು 350-353

**ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ.**

ಅಗ್ನಿವಾಯುಗಳಿಂದ ಪರಾಜಿತರಾದ ಸಕಲ ರಾಕ್ಷಸರೂ ಪಾತಾಳಕ್ಕೆ ಓಡಿಹೋಗಿ ಅವಿತುಕೊಳ್ಳುವರು. ಅಲ್ಲದ್ದ ಕಾಲನೇಮಿಯು ಇವರ ಬನ್ನುತಟ್ಟಿ ಪುನಃ ದೇವತಗಳಮೇಲಿಗೆ ಕರತಂದು ಅವರನ್ನು ಸೋಲಿಸಿ ತಾನು ತ್ರಿಲೋಕೇಶ್ವರನಾದುದಲ್ಲದೆ, ಮಹಾವಿಷ್ಣುವಿನ ಸ್ಥಾನವನ್ನೂ ಸಹ ಆಕ್ರಮಿಸಿಬಿಡಬೇಕೆಂಬ ಆಲೋಚನೆಯಿಂದ ವಿಷ್ಣುವಿನ ಹತ್ತಿರಕ್ಕೆ ಬರುವನು 353-356

**ನೂರ ಇಪ್ಪತ್ತೈದನೆಯ ಅಧ್ಯಾಯ.**

ತನ್ನ ಬಳಿಗೆ ಬಂದ ಕಾಲನೇಮಿಯನ್ನು ವಿಷ್ಣುವು ನಿಪಾತಮಾಡಿ ಬ್ರಹ್ಮನಿಂದ ಸ್ತುತನಾಗಿ ಆಯಾಯ ದೇವತೆಗಳನ್ನು ಅವರವರ ಸ್ಥಾನದಲ್ಲಿ ನಿಲ್ಲಿಸಿ, ಅವರಿಗೆ ತಪ್ಪಿಹೋಗಿದ್ದ ಹವಿರ್ಭಾಗಾದಿಗಳು ಬ್ರಾಹ್ಮಣರಿಂದ ಪುನಃ ದೊರಕುವಂತೆ ಆಸ್ತಿಕಮತವನ್ನು ಸ್ಥಾಪಿಸುವನು 356-363

**ನೂರ ಇಪ್ಪತ್ತಾರನೆಯ ಅಧ್ಯಾಯ.**

ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದು ವಿಷ್ಣುವು ಬಂಧಿಸಿರುವುದರಿಂದ ದೈತ್ಯರು ಕುಪಿತರಾಗಿ, ಭೂಲೋಕದಲ್ಲೆಲ್ಲೆಡೆಯಲ್ಲಿಯೂ ಬ್ರಾಹ್ಮಣರು ಮಾಡುತ್ತಿದ್ದ ಯಜ್ಞವನ್ನು ಧ್ವಂಸಮಾಡುತ್ತ ಬರಲು, ದೇವತೆಗಳು ಆಹಾರವಿಲ್ಲದಂತಾಗಲು, ಅವ

ಪು. ಸಂ.

ರೆಲ್ಲರೂ ಹೋಗಿ ಬ್ರಹ್ಮನನ್ನು ಪ್ರಾರ್ಥಿಸುವರು. ಆಗ ಬ್ರಹ್ಮನು ವಿಷ್ಣುವನ್ನು ಬೇಡಿಕೊಳ್ಳುವನು. ಆಗ ಭಗವಾನ್ ಮಹಾವಿಷ್ಣುವು ವರಾಹರೂಪಧಾರಣಮಾಡಿ ಪಾತಾಳಕ್ಕೆ ನುಗ್ಗಿ ದೈತ್ಯರೆಲ್ಲರನ್ನೂ ಧ್ವಂಸಮಾಡಿ, ತನ್ನ ಪರಮಭಕ್ತನಾದ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ಅವನಿಗೆ ಚಿರಜೀವಿತ್ವವನ್ನು ಅನುಗ್ರಹಿಸಿದನಲ್ಲದೆ, ಅವನ ಮಗ ವಿರೋಚನನಿಗೂ ಸಹ ಕಲ್ಪಾಂತ್ಯದವರೆಗೂ ಬದುಕಿರುವಂತೆ ವರವನ್ನು ಕೊಟ್ಟು, ಪರಮಭಕ್ತನಾದ ಬಲಿಚಕ್ರವರ್ತಿಗೆ ಸಾವರ್ಣಿಕಮನ್ವಂತರವು ಸಂಪ್ರಾಪ್ತವಾದಾಗ ಇಂದ್ರಪದವಿಯನ್ನನುಭವಿಸುವಂತೆ ವರಪ್ರದಾನಮಾಡಿ, ಅವನ ಮಗ ಬಾಣಾಸುರನು ತನಗೆ ಪ್ರತೀಪನಾದ ಕೆಡುಕನ್ನುಂಟುಮಾಡಿದ್ದಾಗ್ಯೂ ಅವನನ್ನು ಮನಸ್ಸಿಗೆ ತಂದುಕೊಳ್ಳದೆ ಆ ಪರಮಭಕ್ತನನ್ನು ಸಂಹರಿಸದೆ ನೀನೂ ಸಹ ಚಿರಂಜೀವಿಯಾಗಿರೆಂದನುಗ್ರಹಿಸುವನು 303-309

## ನೂರ ಇಪ್ಪತ್ತೇಳನೆಯ ಅಧ್ಯಾಯ.

ದಿತಿದೇವಿಯು ತನ್ನ ಮಕ್ಕಳೆಲ್ಲಾ (ದೈತ್ಯರು) ಹತರಾದುದನ್ನು ನೋಡಿ ವ್ಯಸನಾಕ್ರಾಂತಳಾಗಿ, ತನ್ನ ಗಂಡನನ್ನೊಲಿಸಿಕೊಂಡು ಆತನನ್ನು ಕುರಿತು, ಇಂದ್ರನನ್ನು ಕೊಲ್ಲುವ ಒಬ್ಬ ಮಗನನ್ನನುಗ್ರಹಿಸುವಂತೆ ಬೇಡಿಕೊಂಡಳು. ಅದರಂತೆ ಕಶ್ಯಪಮುನಿಯು ಒಂದು ರಾತ್ರಿ ಅವಳೊಡನೆ ಮಲಗಿಕೊಂಡಿದ್ದನು. ಮತ್ತು ಮಾರನೆಯದಿನ ಅವಳನ್ನು ಕುರಿತು ಒಂದುಸಾವಿರವರ್ಷ ಬಹು ನಿಯಮದಿಂದ ಶುಚಿಯಾಗಿದ್ದರೆ, ನಿನ್ನ ಹೊಟ್ಟೆಯಲ್ಲಿರುವ ಗರ್ಭವು ಇಂದ್ರನನ್ನು ಜಯಿಸುವ ಮಗನು ಹುಟ್ಟುವನೆಂದು ಹೇಳಿ, ತಾನು ಹಿಮಾಲಯಪ್ರಾಂತ್ಯಕ್ಕೆ ತಪಸ್ಸಿಗೆ ಹೊರಟುಹೋಗುವನು

ಇಂದ್ರನು ಮುಂದೆ ತನ್ನನ್ನು ಜಯಿಸುವ ಶತ್ರುವು ದಿತಿಯ ಹೊಟ್ಟೆಯಲ್ಲಿ ಹುಟ್ಟುವನೆಂಬ ವೃತ್ತಾಂತವನ್ನರಿತು, ನಿಯಮದಿಂದ ದಿತಿಯ ಬಳಿಗೆ ಬಂದು ಅವಳನ್ನು ಸೇವಿಸಿಕೊಂಡಿರುವುದಕ್ಕೆ ಅವಳ ಅಪ್ಪಣೆಯನ್ನು ಪಡೆದು, ಅವಳ ಬಳಿಯಲ್ಲಿಯೇ ಶುಶ್ರೂಷೆ ಮಾಡಿಕೊಂಡಿದ್ದು, ಅವಳು ಹಗಲುಹೊತ್ತು ಮಲಗಿ ನಿದ್ದೆಮಾ

ಪುಟಸಂಖ್ಯೆ

ಮುತ್ತಿದ್ದುದನ್ನು ನೋಡಿ ಅಶುಚಿಯೋಪವು ತಪ್ಪಿತೆಂದು ನಿರ್ಧರಿಸಿ ಅವಳ ಹೊಟ್ಟೆಗೆ ಹೊಕ್ಕು ತನ್ನ ಕೈಯಲ್ಲಿದ್ದ ವಜ್ರಾಯುಧದಿಂದ ಆ ಹೊಟ್ಟೆಯಲ್ಲಿದ್ದ ಗರ್ಭವನ್ನು ಏಳುತುಂಡಾಗಿ ಕತ್ತರಿಸಿ, ಆ ಏಳು ತುಂಡನ್ನೂ ಪುನಃ ಏಳೇಳು ತುಂಡುಮಾಡಿ ಈ ಪ್ರಕಾರವಾಗಿ ಆ ಗರ್ಭವನ್ನು ನಲವತ್ತೊಂಭತ್ತು ತುಂಡುಮಾಡಿಬಿಟ್ಟನು ಆ ಎಲ್ಲಾ ತುಂಡುಗಳೂ ನೋವಿನಿಂದ ಅಳಲಾರಂಭಿಸಲು "ಮಾರುದಃ" (ಅಳಬೇಡಿ) ಎಂದು ಅವುಗಳಿಗೆ ಹೇಳಿ ಆ ಎಲ್ಲ (೪೯) ಕ್ಕೂ ಮರುದ್ದೇವತೆಗಳೆಂದು ಹೆಸರಿಟ್ಟನು ಆ ಬಳಿಕ ದಿತಿಯು ಇಂದ್ರನನ್ನು ಪ್ರಾರ್ಥಿಸಲು ಆ ಮರುದ್ಗಣಗಳಿಗೆ ಬೇರೆ ಬೇರೆ ನಾಮಗಳನ್ನು ಕಲ್ಪಿಸಿ ಅವುಗಳಿಗೆ ವಾಸಸ್ಥಾನವನ್ನೂ ಸಹ ಮಾಡಿಕೊಟ್ಟನು 369-376

## ನೂರ ಇಪ್ಪತ್ತೆಂಟನೆಯ ಅಧ್ಯಾಯ.

ಮನು ಮತ್ತು ಎಂಟಿಕೆಯರ ಹೊಟ್ಟೆಯಲ್ಲಿ ಹುಟ್ಟಿದ ಸಂತತಿಗಳ ಪ್ರಸಂಗಾವಸರದಲ್ಲಿ ಗಂಧರ್ವರ ಮತ್ತು ಅಪ್ಸರಸ್ಸುಗಳ ಹೆಸರುಗಳು, ಅವರು ಹುಟ್ಟಿದಬಗೆ, ಕದ್ರುವಿನ ಸಂತತಿ ಕಥನ, ಅಹಲ್ಯಾಸಿಸೂರ್ಗಣ, ಅವಳನ್ನು ಕಾಮಿಸಿದ ಇಂದ್ರನು ತನ್ನ ವೃಷಣ (ಮರ್ಮೇಂದ್ರಿಯ) ಗಳನ್ನು ಕಳೆದುಕೊಂಡ ವೃತ್ತಾಂತ 376-385

## ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ.

ಬದರಿಕಾಶ್ರಮದಲ್ಲಿ ನರನಾರಾಯಣರು ತಪಸ್ಸುಮಾಡುತ್ತಿರುವರು ಅವರ ಮನಸ್ಸನ್ನು ಕೆಡಿಸಿ ಕಾಮುಕರನ್ನಾಗಿ ಮಾಡಬೇಕೆಂದಾಲೋಚಿಸಿ ಸುಪ್ರಸಿದ್ಧರಾದ ಹತ್ತುಮಂದಿ ಅಪ್ಸರಸ್ತ್ರೀಯರು ಅಲ್ಲಿಗೆ ಬರುವರು ನಾರಾಯಣನು ಅವರ ಮನೋಭಾವವನ್ನರಿತು ಅವರನ್ನು ನಾಚಿಸಬೇಕೆಂದು ಆಲೋಚಿಸಿ ತನ್ನ ತೊಡೆಯಮೇಲೊಂದು ಚಿತ್ರವನ್ನು ಬರೆದು ಆ ಚಿತ್ರಕ್ಕೆ ಪ್ರಾಣಪ್ರತಿಷ್ಠೆ ಮಾಡಿ ಈಚೆಗೆ ಎಬ್ಬಿಸಿದನು ಅವಳೇ ಊರ್ವಶಿ (ತೊಡೆಯಲ್ಲಿ ಹುಟ್ಟಿದ ಹುಡುಗಿ) ಅವಳ ಲಾವಣ್ಯವನ್ನು ನೋಡಿ ಲಜ್ಜಿತರಾಗಿ ಆ ಹತ್ತುಮಂದಿ ಅಪ್ಸರಾಂಗನೆಯರೂ ಅಲ್ಲಿ ನಿಲ್ಲದೆ ಸ್ವರ್ಗಕ್ಕೆ ಓಟಮಾಡುವರು 385-391

ಪುಟಸಂಖ್ಯೆ

**ನೂರ ಮೂವತ್ತನೆಯ ಅಧ್ಯಾಯ :—**

ಇದೇ ವೈವಸ್ವತಮನ್ವಂತರದ ದ್ವಾಪರಯುಗದಲ್ಲಿ ದೇವಾಸುರರಿಗೆ ಯುದ್ಧಪ್ರಸಕ್ತವಾಗಲು, ಆಗ ಪುರೂರವಚಕ್ರವರ್ತಿಯು ಇಂದ್ರನಿಗೆ ಆ ಕಾಳಗದಲ್ಲಿ ಬಹಳ ಉಪಕಾರಮಾಡಿ ಅವನನ್ನು ಜಯಶೀಲನನ್ನಾಗಿ ಮಾಡಲು, ಆ ಪುರೂರವನನ್ನು ಇಂದ್ರನು ಕರೆಯಿಸಿಕೊಂಡು ಆದರಿಸಿದನು ಆ ಕಾಲದಲ್ಲಿ ಊರ್ವಶಿಯ ಮೇಳವು ನಡೆಯಿತು ಊರ್ವಶಿಗೆ ಪುರೂರವನಲ್ಲುಂಟಾದ ಮೋಹ ಶಾಪಾದಿಕಥನ 391-398

**ನೂರ ಮೂವತ್ತೊಂದನೆಯ ಅಧ್ಯಾಯ :—**

ಪುರೂರವನ್ನ ನರಸಿಕೊಂಡು ಊರ್ವಶಿ-ರಂಭೆಯರು ಆಕಾಶಮಾರ್ಗದಲ್ಲಿ ಹೊರಟು ಪ್ರತಿಷ್ಠಾನಪುರಕ್ಕೆ ಬರುತ್ತಿರುವ ಮಾರ್ಗದಲ್ಲಿ ನಾರದರು ಸಂಧಿಸಿ ಅವರವರಿಗೆ ಮಾತುಕಥೆಗಳು ನಡೆಯುವುವು ಆಗ ನಾರದನು ಊರ್ವಶಿಗೆ ಪುರೂರವನೊಡನೆ ಕೆಲವು ನಿಯಮದೊಡನೆ ವಾಸವಾಗಿರುವಂತೆ ಹೇಳಿಕೊಡುವನು ಅದರಂತೆ ಒಪ್ಪಿಕೊಂಡು ರಂಭೆಯ ಸಹಾಯದಿಂದ ಪುರೂರವನೊಡನೆ ಸೇರಿದ ಊರ್ವಶಿಯ ಚರಿತ್ರೆ ಪ್ರತಿಷ್ಠಾನಗರದ ವರ್ಣನೆ 398-405

**ನೂರ ಮೂವತ್ತೆರಡನೆಯ ಅಧ್ಯಾಯ :—**

ಉಪವನದಲ್ಲಿ ರಂಭೋರ್ವಶಿಯರ ವಿನೋದ ಸಲ್ಲಾಪ ಉಪವನ ವರ್ಣನೆ 405-412

**ನೂರ ಮೂವತ್ತಮೂರನೆಯ ಅಧ್ಯಾಯ :—**

ಊರ್ವಶಿಯಲ್ಲಿ ಮೋಹಗೊಂಡಿದ್ದ ಪುರೂರವನು ಸ್ವರ್ಗದಿಂದ ಬಂದ ಮೇಲೆ ಚಂದ್ರೋದಯ ಸಮಯದಲ್ಲಿ ಚಂದ್ರಕಾಂತಶಿಲಾಗೃಹದಲ್ಲಿ ಸಖನೊಡನೆ ಸಲ್ಲಾಪಮಾಡುತ್ತಿದ್ದ ಸಮಯದಲ್ಲಿ ರಂಭೆಯು ಊರ್ವಶಿಯನ್ನು ಪುರೂರವನಿಗೆ ಪರಿಚಯಮಾಡಿಸಿ, ಅವನಿಗೆ ನಾರದರು ಹೇಳಿರುವ ನಿಬಂಧನೆಗಳೊಡನೆ ಸುಖಪಡುತ್ತಿರಬಹುದೆನಲು ಧೊರೆಯು ಒಪ್ಪಿಕೊಳ್ಳುವನು ಆ ಬಳಿಕ ರಂಭೆಗೆ ಅನೇಕ ರತ್ನಗಳನ್ನು ಬಹುಮಾನವಾಗಿ ಕೊಟ್ಟು ಆಕೆಯನ್ನು ಬೀಳ್ಕೊಳ್ಳುವನು. ಈ ರಂಭೆ ಕುಬೇರನ ಸೊಸೆ, ನಲಕೂಬರನ

ಪುಟಸಂಖ್ಯೆ

ಪ್ರೇಮದ ಹೆಂಡತಿ ಆದುದರಿಂದ ಪುರೂರವನಿಂದ ಬಹುಮಾನಿತ ಳಾಗಿ ತನ್ನ ಪ್ರೇಮದ ಗಂಡನ ಬಳಿಗೆ ಹೊರಟುಹೋಗುವಳು ಆ ಬಳಿಕ ಪುರೂರವೋರ್ವಶಿಯರು ರತಿಕೇಳಿಯಾಡುವ ವೈಖರೀ ವರ್ಣನೆ 412-424

**ನೂರ ಮೂವತ್ತನಾಲ್ಕನೆಯ ಅಧ್ಯಾಯ :- -**

ಊರ್ವಶೀ ಪುರೂರವರು ಮನಸ್ಸುಬಂದ ಕಡೆಗಳಲ್ಲಿ ಮನಸ್ಸು ಬಂದಬಂದಹಾಗೆ ಸಂಭೋಗಮಾಡುವ ವೃತ್ತಾಂತ ಈ ಸುಖಸಂಭೋಗ ಫಲವಾಗಿ ಆಯುರ್ವೇ ಮುಂತಾದ ಐದು ಮಂದಿ ಮಕ್ಕಳು ಜನಿಸುವರು ಗಂಧರ್ವಲೋಕದಲ್ಲಿ ಗಂಧರ್ವರು ಸಭೆನೇರಿ ಊರ್ವಶಿಯನ್ನು ಭೂಲೋಕದಿಂದ ತಮ್ಮ ಲೋಕಕ್ಕೆ ಬರಮಾಡಿಕೊಳ್ಳಲು ಮಂತ್ರಾಲೋಚನೆ ಮಾಡುವರು 424-428

**ನೂರ ಮೂವತ್ತೈದನೆಯ ಅಧ್ಯಾಯ.**

ಉಗ್ರಸೇನನೆಂಬ ಗಂಧರ್ವನು ಪುರೂರವನ ಪ್ರತಿಜ್ಞಾಭಂಗಮಾಡು ವನು ಆ ಕೂಡಲೆ ಊರ್ವಶಿಯು ಪ್ರತಿಜ್ಞೆಗೆ ತಪ್ಪಿದ ಪುರೂರ ವನನ್ನು ಬಿಟ್ಟು ಹೊರಟುಹೋಗುವಳು ಊರ್ವಶೀವಿರಹ ದಿಂದ ಪುರೂರವನು ಪ್ರಲಾಪಮಾಡುವ ಹೃದಯಭೇದಕವಾದ ವರ್ಣನೆ (ಇದರ ಪೂರ್ಣಕಥಾಭಾಗವನ್ನು ತಿಳಿಯಬೇಕಾದರೆ ಈ ಅಧ್ಯಾಯವನ್ನು ಪೂರ್ತಾ ಓದಿನೋಡಿರಿ ) 428-442

**ನೂರ ಮೂವತ್ತಾರನೆಯ ಅಧ್ಯಾಯ**

ಪುರೂರವನನ್ನು ಬಿಟ್ಟುಬಂದುದಕ್ಕಾಗಿ ಊರ್ವಶಿ ವಿರಹವೇದನೆ ಯಿಂದ ಸಂಕಟಪಡುತ್ತಿದ್ದುದನ್ನು ನೋಡಿ ನಾರದರು ಬಹು ಕನಿಕರಗೊಂಡವರಾಗಿ ಅವಳನ್ನು ಒಂದು ರಾತ್ರಿ ಪುರೂರವನ ಜತೆಯಲ್ಲಿ ಇದ್ದುಬರುವಂತೆ ಹೇಳಿಕಳುಹಿಸಿಕೊಡುವನು ಆಗ ಆ ಊರ್ವಶಿಯು ಒಂದು ರಾತ್ರಿ ಭೂಲೋಕಕ್ಕೆ ಬಂದು ಪುರೂ ರವನ ಸಂಗಡ ಮಲಗಿದ್ದುಹೋಗುವಾಗ, ನೀನು ಗಂಧರ್ವರನ್ನಾ ರಾಧಿಸಿದರೆ ಅವರು ತೃಪ್ತರಾಗಿ ನಿನಗೆ ನನ್ನನ್ನು ಒಪ್ಪಿಸುವರೆಂದು ಉಪಾಯವನ್ನು ಹೇಳಿ ಹೊರಟುಹೋಗುವಳು ಊರ್ವಶಿಯ ಸಲಹೆಯಂತೆ ಪುರೂರವನು ಒಂದುವರ್ಷ ಗಂಧರ್ವರನ್ನು ಕುರಿತು

ಪುಟಸಂಖ್ಯೆ

ಘೋರವಾದ ತಪಸ್ಸನ್ನು (ಧ್ಯಾನ) ಮಾಡಿದನು. ಆಗ ಗಂಧರ್ವರು ಪ್ರಸನ್ನರಾಗಿ ನಾರದರನ್ನು ಮುಂದೆ ಬಿಟ್ಟುಕೊಂಡು ಪುರೂರವನಿದ್ದಲ್ಲಿಗೆ ಬಂದು ವರವನ್ನು ಕೊಡುವರು (ಈ ಕಥಾಭಾಗವು ವಿಷಯಸೂಚಿಕಾಪ್ರಕರಣದಲ್ಲಿ ಬಹು ವಿಸ್ತಾರವಾಗಿ ಬರೆಯಲ್ಪಟ್ಟಿರುವುದರಿಂದ ಕನ್ನಡದಲ್ಲಿ ಅಷ್ಟನ್ನೂ ಬರದರೆ, ಈ ವಿಷಯಾನುಕ್ರಮಣಿಕೆಯೇ ಉದ್ದವಾಗಿ ಬೆಳೆದು ಅದೇ ಒಂದು ದೊಡ್ಡ ಗ್ರಂಥವಾಗುವುದೆಂಬ ಭೀತಿಯಿಂದ ಇದನ್ನು ಸೂಕ್ಷ್ಮವಾಗಿಯೇ ಬರೆದಿರುವೆನು ವಾಚಕರು ಈ ಭಾಗವನ್ನು ಈ ಅಧ್ಯಾಯದಲ್ಲಿಯೇ ಸಂಪೂರ್ಣವಾಗಿ ಓದಿ ತೃಪ್ತಿಪಡೆಯಲಿ ) 442-451

**ನೂರ ಮೂವತ್ತೇಳನೆಯ ಅಧ್ಯಾಯ.**

ಪುರೂರವನು ಗಂಧರ್ವರಿಂದ ವರವಂ ಪಡೆದು ತಾನೂ ಸಹ ಗಂಧರ್ವನಾಗಬೇಕಾದರೆ ಏನುಮಾಡಬೇಕೆಂಬ ಸಲಹೆಯನ್ನು ಅವರಿಂದ ಪಡೆದು ಅವರು ಹೇಳಿದ ಕ್ರಮದಂತೆ ಅಶ್ವಮೇಧ, ವಾಜಪೇಯ, ಅಗ್ನಿಷ್ಟೋಮ, ಅತಿರಾತ್ರವೇ ಮುಂತಾದ ಮಹಾಮಹಾಕ್ರತುಕ್ರತುಗಳನ್ನು ಮಾಡಿ, ಭೂಲೋಕಕ್ಕೆಲ್ಲಾ ಇವನೇ ಏಕಸಾಮ್ರಾಟನೆನಿಸಿಕೊಂಡು ಬಹುಕಾಲ ಸುಖವನ್ನು ಪಟ್ಟು, ರಾಜ್ಯದಲ್ಲಿ ಧರ್ಮವನ್ನು ನೆಲೆಗೊಳಿಸಿ, ಬದರಿಕಾಶ್ರಮಕ್ಕೆ ಪ್ರಯಾಣಮಾಡಿ ಅಲ್ಲಿ ಗಂಧರ್ವಲೋಕದಿಂದ ಬಂದ ವಿಮಾನವನ್ನೇರಿ, ಊರ್ವಶೀ ಸಹಿತನಾಗಿ ಸದೇಹನಾಗಿಯೇ ಸ್ವರ್ಗವನ್ನಡರುವನು 451-459

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ದ್ವಿತೀಯಭಾಗದ ವಿಷಯಾನುಕ್ರಮಣಿಕೆ ಸಂಪೂರ್ಣವಾಯಿತು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುಃಸಪ್ತತಿತಮೋಽಧ್ಯಾಯಃ ॥



॥ ವಜ್ರ ಉವಾಚ ॥

ಯದೇತದುಕ್ತಂ ರಾಮಸ್ಯ ವರುಣೇನ ಮಹಾತ್ಮನಾ ।
ಏತಚ್ಛ್ರುತ್ವಾ ತು ಮೇ ಜಾತಸ್ಸಂಶಯೋ ಭೃಗುನಂದನ ॥ ೧ ॥

ಅಸ್ಮಿಂಸ್ತು ಭಾರತೇ ವರ್ಷೇ ಪರಿಕ್ಷೀಣೇ ಯುಗೇ ತಥಾ ।
ಅವಸ್ಥಾ ಯಾ ಭವೇದ್ಬ್ರಹ್ಮಂಸ್ತನ್ಮೇ ವ್ಯಾಖ್ಯಾತುಮರ್ಹಸಿ ॥ ೨ ॥

॥ ಮಾರ್ಕಂಡೇಯ ಉವಾಚ ॥

ಯುಗೇಯುಗೇ ಪರಿಕ್ಷೀಣೆ ವರ್ಷೇಽಯಾದವ ಭಾರತೇ ।
ಸಂಗ್ರಾಮೇಣ ವಿನಶ್ಯಂತಿ ಪ್ರಾಯೋ ವರ್ಣೋತ್ತಮಾ ಜನಾಃ ॥ ೩ ॥

---

### ಎಪ್ಪತ್ತನಾಲ್ಕನೆಯ ಅಧ್ಯಾಯವು.

೧-೨ ವಜ್ರಭೂಪಾಲಕನು ಕೇಳುತ್ತಾನೆ ಮಹಾತ್ಮನಾದ ವರುಣನಿಂದ ಯಾವ ಈ ಕಾಲಗತಿ ಪರಿಮಾಣವು ಪರಶುರಾಮನಿಗೆ ಹೇಳಲ್ಪಟ್ಟಿತೋ ಈ ಮಾತನ್ನು ಕೇಳಿ ನನಗೆ ಒಂದು ಸಂಶಯವುಂಟಾಗಿದೆ ಈ ಭಾರತ ವರ್ಷದಲ್ಲಿ ಯುಗವು ಯಾವಾಗ ಕ್ಷೀಣತೆಯನ್ನೈದುವುದೋ ಆಗ ಎಂತಹ ಅವಸ್ಥೆಯು ಸಂಭವಿಸುವುದೆಂಬುದನ್ನು ನನಗೆ ದಯಮಾಡಿ ತಿಳಿಸಬೇಕು

೩. ಅದಕ್ಕೆ ಮಾರ್ಕಂಡೇಯನು ಹೇಳುತ್ತಾನೆ — ಈ ಭಾರತ ವರ್ಷದಲ್ಲಿ ಯುಗಯುಗದಲ್ಲೂ ಕ್ಷೀಣತೆಯೊದಗಿದಾಗ ಪ್ರಾಯಶಃ ಉತ್ತಮ ವರ್ಣಾಶ್ರಮದ ಜನರು ಯುದ್ಧದಿಂದ ಮಡಿದುಹೋಗುತ್ತಾರೆ

॥ ವಜ್ರ ಉವಾಚ ॥
**ಅಸ್ಮಾಚ್ಚತುರ್ಯುಗಾದ್ಬ್ರಹ್ಮನ್ಯದತೀತಂ ಯುಗತ್ರಯಂ ।**
**ತೇಷ್ವಹಂ ಶ್ರೋತುಮಿಚ್ಛಾಮಿ ಸಂಗ್ರಾಮಂ ಭೃಗುನಂದನ ॥ ೪ ॥**

॥ ಮಾರ್ಕಂಡೇಯ ಉವಾಚ ॥
**ಆಸೀತ್ಕೃತಯುಗಸ್ಯಾಂತೇ ವಿಪ್ರಾಣಾಂ ಕ್ಷತ್ರಿಯೈಸ್ಸಹ ।**
**ವೈಶ್ಯಾನಾಂ ಚ ಸಶೂದ್ರಾಣಾಂ ಯುದ್ಧಂ ಪರಮದಾರುಣಂ ॥ ೫ ॥**

**ವರ್ಣತ್ರಯಂ ತತ್ರ ರಣೇ ಕ್ಷತ್ರಿಯೈರ್ವಿನಿಪಾತಿತಂ ।**
**(ತತಶ್ಚ ಬ್ರಾಹ್ಮಣಾಃ ಕೇಚಿತ್ ಕ್ಷತ್ರಿಯಾನೇವಮಬ್ರುವನ್ ॥ ೬ ॥**

**ಅಲ್ಪೈರ್ಭವದ್ಭಿಃ ಕಾರ್ಯೇಣ ವಯಂ ಕೇನ ವಿನಿರ್ಜಿತಾಃ ।)**
**ತಾನಬ್ರುವನ್ಮಹಾಭಾಗಾಃ ಕ್ಷತ್ರಿಯಾಸ್ಸತ್ಯಸಂಗರಾಃ ॥ ೭ ॥**

**ಏಕೋಽಸ್ಮಾಕಂ ದ್ವಿಜಶ್ರೇಷ್ಠ ಸ್ಸೇನಾನೀರಿತಿ ವಿಶ್ರುತಃ ।**
**ಸರ್ವಶಸ್ತ್ರಾಸ್ತ್ರಕುಶಲೋ ವಯಂ ತಸ್ಯ ಮತೇ ಸ್ಥಿತಾಃ ॥ ೮ ॥**

---

೪. ವಜ್ರಭೂಪಾಲಕನು ಪುನಃ ಪ್ರಶ್ನೆ ಮಾಡುತ್ತಾನೆ :-- ಎಲೈ ಮಾರ್ಕಂಡೇಯನೇ ! ಈ ನಾಲ್ಕನೇ ಯುಗವಾದ ಕಲಿಯುಗಕ್ಕಿಂತ ಮುಂಚೆ ಯಾವ ಮೂರು ಯುಗಗಳು ಕಳೆದುಹೋದುವೋ ಆ ಯುಗಗಳಲ್ಲಿ ನಡೆದ ಯುದ್ಧದ ವೃತ್ತಾಂತವನ್ನು ಕೇಳಲಪೇಕ್ಷಿಸುತ್ತೇನೆ

೫ ಮಾರ್ಕಂಡೇಯನು ಹೇಳುತ್ತಾನೆ —ಕೃತಯುಗದ ಕೊನೆಯ ಭಾಗದಲ್ಲಿ ಬ್ರಾಹ್ಮಣರಿಗೆ ಕ್ಷತ್ರಿಯರೊಡನೆಯೂ, ಕ್ಷತ್ರಿಯರಿಗೆ ವೈಶ್ಯ ಮತ್ತು ಶೂದ್ರರೊಡನೆಯೂ ಬಹಳ ಭಯಂಕರವಾದ ಯುದ್ಧವೊದಗಿತು

೬-೮ ಆ ಯುದ್ಧದಲ್ಲಿ ಕ್ಷತ್ರಿಯರಿಂದ ಉಳಿದ ಮೂರು ವರ್ಣದ ಜನರೂ ನಾಶಹೊಂದಿದರು. ಆಗ ಕೆಲವು ಮಂದಿ ಬ್ರಾಹ್ಮಣರು ಕ್ಷತ್ರಿಯರನ್ನು ಕುರಿತು, ಹೀಗೆ ಹೇಳಿದರು "ಎಲೈ ಕ್ಷತ್ರಿಯರಿರಾ ! ನೀವು ಸ್ವಲ್ಪಮಂದಿ ಇರುತ್ತೀರಿ ಇಂಥಾ ನಿಮ್ಮಿಂದ ಬಹು ಸಂಖ್ಯಾಕರಾದ ನಾವು ಏತರಿಂದ ವಿಜಿತರಾದೆವು ? ಇದರ ಕಾರಣವೇನು ? '' ಎಂದು ಪ್ರಶ್ನೆ ಮಾಡಲು, ಕ್ಷತ್ರಿಯರು ಈ ರೀತಿ ಪ್ರತ್ಯುತ್ತರ ಹೇಳಿ

**ಭವತಾಂ ಬಹುಚಿತ್ತತ್ವಾದ್ವಯಂ ತಸ್ಮಾತ್ಪದೇಪದೇ ।**
**ಜಯಾಮೋ ವಿಪುಲಂ ಸೈನ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೯ ॥**

**ಕ್ಷತ್ರಿಯೈರೇವಮುಕ್ತಾಸ್ತೇ ಬ್ರಾಹ್ಮಣಾಸ್ಸಂಶಿತವ್ರತಾಃ ।**
**ಶಶಾಂಕಂ ಶರಣಂ ಜಗ್ಮುರ್ದ್ವಿಜೇಶಂ ಸೋಮಮುಂಜಸಾ ॥ ೧೦ ॥**

**ಸ ತಾನುವಾಚ ಧರ್ಮಾತ್ಮಾ ಸೋಮೋ ರಾಜಾ ದ್ವಿಜೋತ್ತಮಾನ್ ।**
**ಪ್ರಯಾಗೇ ಭಾರ್ಗವೋ ವಿದ್ವಾನ್ಬ್ರಾಹ್ಮಣಸ್ಸಂಶಿತವ್ರತಃ ॥ ೧೧ ॥**

**ಶೂರ ಇತ್ಯೇವ ವಿಖ್ಯಾತೋ ನಿತ್ಯಂ ವಸತಿ ಧಾರ್ಮಿಕಃ ।**
**ಪ್ರಮತಿರ್ನಾಮ ತಸ್ಯಾಸ್ತಿ ಪುತ್ರೋ ಧರ್ಮಭೃತಾಂ ವರಃ ॥ ೧೨ ॥**

**ಸರ್ವಶಾಸ್ತ್ರಾಸ್ತ್ರಕುಶಲೋ ಧನುರ್ವೇದಪರಾಯಣಃ ।**
**ವಿಷ್ಣುರ್ಮಾನುಷ್ಯಮಾಪನ್ನೋ ಯುಷ್ಮತ್ಕಾರ್ಯಾರ್ಥಸಿದ್ಧಯೇ ॥ ೧೩ ॥**

---

ದರು "ಸ್ವಾಮಿ! ದ್ವಿಜರೇ! ನಮಗೆ ಒಬ್ಬ ಸೇನಾಧಿಪತಿಯಿದ್ದಾನೆ ಅವನು ಬ್ರಾಹ್ಮಣ ಅವನ ಹೆಸರು ಸೇನಾನಿಯೆಂದು ಆತನು ಸರ್ವ ಶಾಸ್ತ್ರಗಳಲ್ಲೂ ನುರಿತವನು ನಾವೆಲ್ಲರೂ ಅವನ ಅಧೀನದಲ್ಲಿದ್ದುಕೊಂಡು, ಅವನ ಆಜ್ಞೆಯನ್ನು ಮೀರದೆ ಯುದ್ಧಮಾಡಿದೆವು

೯-೧೦ ನೀವೆಲ್ಲರೂಬಹುಚಂಚಲಚಿತ್ತರಾದುದರಿಂದಲೂ,ನಾವುಒಬ್ಬನಅಧೀನದಲ್ಲಿದ್ದುದರಿಂದಲೂ ನಿಮ್ಮ ಪ್ರಜಲ ಸೈನ್ಯವನ್ನು ಜಯಿಸಿದೆವು ಈ ವಿಷಯದಲ್ಲಿ ಸಂಶಯವಿಲ್ಲವೆನಲು ಆ ಕೂಡಲ ನಿಯಮಶಾಲಿಗಳಾದ ಬ್ರಾಹ್ಮಣರು ದ್ವಿಜರಾಜನಾದ ಚಂದ್ರನನ್ನು ಮರೆಹೊಕ್ಕು ತಮ್ಮ ದುಃಖವನ್ನು ಹೇಳಿಕೊಂಡರು

೧೧-೧೪ ಆಗ ಚಂದ್ರನು ಬ್ರಾಹ್ಮಣೋತ್ತಮರನ್ನು ಕುರಿತು ಈ ಮಾತನ್ನು ಹೇಳಿದನು ಅದೇನಂದರ --ನೀವೆಲ್ಲರೂ ಪ್ರಯಾಗ ಕ್ಷೇತ್ರಕ್ಕೆ ಪ್ರಯಾಣಮಾಡಿರಿ, ಅಲ್ಲಿ ಭೃಗುಗೋತ್ರೋತ್ತಮನಾದ, ಸಂಯತ ಚಿತ್ತನಾದ ಶೂರನೆಂಬ, ಧಾರ್ಮಿಕನೂ ವಿದ್ವಾಂಸನೂ ಆದ ಬ್ರಾಹ್ಮಣನಿರುವನು. ಪ್ರಯಾಗ ಕ್ಷೇತ್ರವಾಸಿಯಾದ ಆ ಧರ್ಮಾತ್ಮನಿಗೆ ಸರ್ವಶಾಸ್ತ್ರಾರ್ಥ ಕುಶಲನೂ, ಧನುರ್ವೇದ ಪರಾಯಣನೂ ಆದ ಪ್ರಮತಿಯೆಂಬ ಮಗನಿರುವನು ಅವನು ನಿಮ್ಮ ಕಾರ್ಯಸಿದ್ಧಿಗೋಸ್ಕರವಾಗಿಯೇ ಬ್ರಾಹ್ಮಣ ರೂಪದಿಂದ ಅವತರಿಸಿರುವ ಮಹಾ ವಿಷ್ಣುವೆಂದು ತಿಳಿದುಕೊಳ್ಳಿರಿ ಕೃಷ್ಣಾಜಿನ

ಕೃತ್ವಾ ಸೇನಾಪ್ರಣೇತಾರಂ ತಂ ತು ಕೃಷ್ಣಾಜಿನಧ್ವಜಂ ।
ನಿರ್ಮರ್ಯಾದಾನ್ರಣೇ ಸರ್ವಾನ್ ಕ್ಷತ್ರಿಯಾಂಸ್ತಾನ್ವಿಜೇಷ್ಯಥ ॥ ೧೪ ॥

ಸೋಮಸ್ಯ ವಚನಂ ಸರ್ವೈರೇವಮುಕ್ತೈರ್ದ್ವಿಜೈಃ ಕೃತಂ ।
ಪ್ರಾಯಃ ಕ್ಷತ್ರಿಯಹೀನೇಯಂ ಲಕ್ಷ್ಮೀ ವಸುಮತೀ ಕೃತಾ ॥ ೧೫ ॥

ಆದೌ ಕೃತಾ ಕ್ಷತ್ರಬಲೈರ್ವಿಟ್ಶೂದ್ರದ್ವಿಜವರ್ಜಿತಾ ।
ಏವಂ ಕೃತಯುಗಸ್ಯಾಂತೇ ಯುದ್ಧಮಾಸೀತ್ಸುದಾರುಣಂ ॥ ೧೬ ॥

ತಥಾ ತ್ರೇತಾಯುಗಸ್ಯಾಂತೇ ರಾಕ್ಷಸೈರ್ಯುದ್ಧಕರ್ಕಶೈಃ ।
ರಾಷ್ಟ್ರಂರಾಷ್ಟ್ರಮಥಾಸಾದ್ಯ ಪಾರ್ಥಿವಾಸ್ಸಗಣಾ ಹತಾಃ ॥ ೧೭ ॥

ರಾಜಾ ಭೀಮರಥೋ ನಾಮ ವಿಷ್ಣುರ್ಮಾನುಷ್ಯರೂಪಧೃಕ್ ।
ದಿವೋದಾಸಾನ್ವಯೇ ಜಾತೋ ನಿಜಘಾನಾಥ ರಾಕ್ಷಸಾನ್ ॥ ೧೮ ॥

---

ವನ್ನೇ ಧ್ವಜಚಿಹ್ನೆಯಾಗಿ ಧರಿಸಿರುವ ಆ ಬ್ರಾಹ್ಮಣನನ್ನು ನೀವು ಸೇನಾನಾಯಕನನ್ನಾಗಿ ಮಾಡಿಕೊಂಡು ಮರ್ಯಾದೆ ಮೀರಿ ನಿಮ್ಮನ್ನು ಜಯಿಸಿರುವ ಸಕಲ ಕ್ಷತ್ರಿಯರನ್ನೂ ಗೆಲ್ಲಿರಿ

೧೫ ಚಂದ್ರನಿಂಮಸ್ತನಾದೀನೂತನ್ನು ಆ ಸಕಲ ಬ್ರಾಹ್ಮಣರೂ ನಡೆಸಿದರು ಆ ರೀತಿ ಮಾಡಿದ ಬಳಿಕ ಈ ಭೂಮಿಯು ಕ್ಷತ್ರಿಯ ವಿರಹಿತವಾಗಿ ಸಗುರವಾಗಿ ಮಾಡಲ್ಪಟ್ಟಿತು

೧೬ ಮೊದಲು ಕ್ಷತ್ರಿಯ ಸೈನ್ಯದಿಂದ ವೈಶ್ಯರೂ ಶೂದ್ರರೂ ಬ್ರಾಹ್ಮಣರೂ ನೋತುಹೋದರು ಈ ರೀತಿಯಾಗಿ ಕೃತಯುಗದ ಕೊನೆಯ ಭಾಗದಲ್ಲಿ ಭಯಂಕರವಾದ ಯುದ್ಧವು ನಡೆಯಿತು

೧೭ ಅದೇ ರೀತಿಯಾಗಿ ತ್ರೇತಾಯುಗದ ಕೊನೆಯಲ್ಲೂ ಸಹ ರಾಕ್ಷಸರಿಗೂ ಕ್ಷತ್ರಿಯರಿಗೂ ಯುದ್ಧ ನಡೆದು ರಣಕರ್ಕಶರಾದ ರಕ್ಕಸರು ರಾಷ್ಟ್ರ ರಾಷ್ಟ್ರಗಳನ್ನೇ ಜಯಿಸಿ ಕ್ಷತ್ರಿಯರನ್ನೆಲ್ಲಾ ಸಂಹರಿಸಿಬಿಟ್ಟರು

೧೮ ಆಗ ವಿಷ್ಣುವು ಭೀಮರಥನೆಂಬ ದೊರೆಯಾಗಿ ಮನುಷ್ಯ ರೂಪದಿಂದ ಅವತರಿಸಿ ದಿವೋದಾಸಾನ್ವಯದಲ್ಲಿ ಸಂಜನಿಸಿ ಸಕಲ ರಾಕ್ಷಸರನ್ನೂ ಸಂಹರಿಸಿದನು.

ಏವಂ ತ್ರೇತಾಯುಗಸ್ಯಾಂತೇ ಮಹಾವಿಜಯಕಾಂಕ್ಷಿಭಿಃ ।
ರಾಕ್ಷಸೈಃ ಕ್ಷತ್ರಿಯಾ ಯುದ್ಧೇ ಕೇಶವೇನ ಚ ತೇ ಹತಾಃ　　॥ ೧೯ ॥

ತಥೈವ ದ್ವಾಪರಸ್ಯಾಂತೇ ವಾಸುದೇವಾರ್ಜುನೌ ರಣೇ ।
ಚಕ್ರತುರ್ವಸುಧಾಂ ಲಘ್ವೀಂ ನರನಾರಾಯಣೌ ನೃಪ　　॥ ೨೦ ॥

ದ್ವಾಪರೇದ್ವಾಪರೇ ರಾಜಂಸ್ತಥೈವ ಮಧುಸೂದನಃ ।
ಏಕಮೇವ ಯಜುರ್ವೇದಂ ಚತುರ್ಧಾ ವ್ಯಭಜತ್ಪ್ರಭುಃ　　॥ ೨೧ ॥

ದ್ವಾಪರೇಽಸ್ಮಿನ್ನೃಪಾತೀತೇ ವಸಿಷ್ಠಕುಲವರ್ಧನಃ ।
ಪರಾಶರಸುತಶ್ಶ್ರೀಮಾನ್ವಿಷ್ಣುರ್ದ್ವೈಪಾಯನಃ ಸ್ಮೃತಃ　　॥ ೨೨ ॥

ಪ್ರಕಾಶೋ ಜನಿತೋ ಯೇನ ಲೋಕೇ ಭಾರತಚಂದ್ರಮಾಃ ।
ಪರೀಕ್ಷಿತ್ಪುತ್ರಂ ರಾಜ್ಯಸ್ಥಂ ರಾಜಾನಂ ಜನಮೇಜಯಂ　　॥ ೨೩ ॥

---

೧೯-೨೦　ಈ ರೀತಿ ತ್ರೇತಾಯುಗದ ಕಡೆಯಲ್ಲಿ ವಿಜಯಶಾಲಿಗಳಾದ ರಾಕ್ಷಸರಿಂದ ಕ್ಷತ್ರಿಯರೂ, ವಿಷ್ಣುರೂಪಧರನಾದ ಕೇಶವನಿಂದ ರಾಕ್ಷಸರೂ ಸಂಹೃತರಾದಂತೆ, ದ್ವಾಪರಯುಗದ ಕಡೇ ಭಾಗದಲ್ಲಿಯೂ ಸಹ ಕೃಷ್ಣಾರ್ಜುನರು ನರನಾರಾಯಣ ರೂಪದಿಂದ ಯುದ್ಧದಲ್ಲಿ ಶತ್ರುನಿಗ್ರಹಮಾಡಿ ಭೂಲೋಕದ ಭಾರವನ್ನಿಳುಹಿದರು

೨೧-೨೪　ಇದೇ ರೀತಿಯಾಗಿ ಭಗವಾನ್ ಮಧುಸೂದನನು ಪ್ರತಿಯೊಂದು ದ್ವಾಪರಯುಗದಲ್ಲಿಯೂ ಒಂದೇ ಒಂದಾಗಿದ್ದ ಯಜುರ್ವೇದವನ್ನು ನಾಲ್ಕು ಭಾಗವಾಗಿ ವಿಭಾಗ ಮಾಡಿದನು　ಈಗ ದ್ವಾಪರಯುಗ ಕಳೆದು ಕಲಿಯುಗದಾರಂಭ ಕಾಲದಲ್ಲಿ ಪರಾಶರ ಋಷಿಗಳ ಮಗನಾದಶ್ರೀಮಾನ್ ವೈಶಂಪಾಯನ(ವ್ಯಾಸ) ರೂಪನಾಗಿ ಮಹಾವಿಷ್ಣುವು ಅವತಾರ ಮಾಡಿದನು　ಯಾವ ಈ ಮಹಾ ವಿಷ್ಣುರೂಪೀ ವ್ಯಾಸರಿಂದ ಲೋಕದಲ್ಲಿ ಭಾರತನೆಂಬ ಚಂದ್ರನು ಉದಯವಾದನೋ ಅಂತಹ ಮಹಾಭಾರತದ ಚರಿತ್ರೆಯನ್ನು ವ್ಯಾಸರ ಶಿಷ್ಯನಾದ ವೈಶಂಪಾಯನ ಮಹರ್ಷಿಯು ಪರೀಕ್ಷಿತ್ಪುತ್ರನಾದ ಜನಮೇಜಯರಾಯನನ್ನು ಕುರಿತು ವಿಸ್ತಾರವಾಗಿ ಹೇಳಿರುತ್ತಾನೆ　ಈ ಭಾರತವು

**ವೈಶಂಪಾಯನ ಇತ್ಯೇವ ಶಿಷ್ಯೋ ವ್ಯಾಸಸ್ಯ ವಿಶ್ರುತಃ ।**
**ಆಖ್ಯಾಸ್ಯತಿ ಮಹಾಽಽಖ್ಯಾನಂ ಸರ್ವಪಾಪಭಯಾಪಹಂ ॥ ೨೪ ॥**

**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಯದುನಂದನ ।**
**ಪ್ರದೀಪಭೂತಂ ಸರ್ವತ್ರ ಬುಧಬುದ್ಧಿವಿವರ್ಧನಂ ॥ ೨೫ ॥**

**ಯತ್ರ ವಿಷ್ಣುಕಥಾ ದೇವ್ಯಾಃ ಶ್ರುತಯಶ್ಚ ಸನಾತನಾಃ ।**
**ತಚ್ಛ್ರೋತವ್ಯಂ ಮನುಷ್ಯೇಣ ಪರಂ ಪದಮಭೀಪ್ಸತಾ ॥ ೨೬ ॥**

**ಭಾರತಾತ್ಪಾರಣಂ ಪ್ರಾಪ್ಯ ನರಕಂ ತು ನ ಗಚ್ಛತಿ ।**
**ನ ಚೇತ್ಸ್ಯಾದ್ಯದಿ ಭೂಪಾಲ ಮಹಾಪಾತಕಸಂಯುತಃ ॥ ೨೭ ॥**

**ದಶಭಿಃ ಪಾರಣೈಃ ಸ್ಥಾನಂ ಪ್ರಾಪ್ನೋತಿ ಜಗತಃ ಪತೇಃ ।**
**ಕೇಶವಸ್ಯ ಮಹಾಭಾಗ ನಿರ್ಮಿತಂ ಯೇನ ಭಾರತಂ ॥ ೨೮ ॥**

---

ಮಹಾಶ್ರೇಷ್ಠ ವ್ಯಾಖ್ಯಾನವೆನಿಸಿಕೊಂಡು ಸಕಲ ಪಾಪ ಭಯವನ್ನೂ ಪರಿಹಾರ ಮಾಡ ತಕ್ಕ ಶಕ್ತಿಯನ್ನು ಹೊಂದಿರುವುದು

೨೫-೨೬ ಮಹಾ ವಿಷ್ಣುವಿನ ಶ್ರೇಷ್ಠವಾದ ಪದವಿಯನ್ನು ಹೊಂದಲಾಶಿಸುವ ಮನುಷ್ಯನಿಂದ ಅವಶ್ಯಕವಾಗಿ ಮಹಾಭಾರತದ ಕಥೆಯು ಕೇಳಲ್ಪಡತಕ್ಕದ್ದು ಈ ಭಾರತದ ಕಥೆಯು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೂ ಪ್ರಕಾಶಮಾನವಾದ ದೀಪದಂತಿದೆ ವಿದ್ವಾಂಸರ ಬುದ್ಧಿಯನ್ನೂ ಸಹ ಇದು ಹೆಚ್ಚಿಸತಕ್ಕ ಶಕ್ತಿಯುಳ್ಳದ್ದು, ಈ ಭಾರತ ಕಥೆಯಲ್ಲಿ ವಿಷ್ಣುಕಥೆಗಳೂ, ದೇವೀ ಸಂಬಂಧವಾದ ಚರಿತ್ರೆಗಳೂ, ಸನಾತನವಾದ ವೇದದ ಉಪಾಖ್ಯಾನಗಳೂ ತುಂಬಿವೆ

೨೭-೨೮. ಎಲೈ ವಜ್ರನರಪತಿಯೇ ! ಕೇಳು, ಮಹಾ ಪಾಪದಿಂದ ಬಿಡುಗಡೆ ಹೊಂದಿ ಬಿಡುವಾದ ಪುಣ್ಯಾತ್ಮನು ಭಾರತವನ್ನೊಂದುಬಾರಿ ಕೇಳಿದರೆ ನರಕವನ್ನು ಹೊಂದುವುದಿಲ್ಲ ಹತ್ತು ಆವೃತ್ತಿ ಭಾರತಪಠನ ಅಥವಾ ಶ್ರವಣ ಮಾಡಿದವನು ಪರಮಾತ್ಮನ ಪರಮಪದವನ್ನು ಪಡೆಯುವನು ಯಾವ ವ್ಯಾಸರೂಪೀ ವಿಷ್ಣುವಿನಿಂದ ನಿರ್ಮಿತವಾದ ಭಾರತವಾವುದೆಂದರೆ — ನಾಲ್ಕು ಭಾಗವಾಗಿ ಭಾಗಿಸಿದ ವೇದಗಳೇ ಎಂದು ತಿಳಿದುಕೋ. (ಭಾರತಃ ಪಂಚಮೋವೇದಃ) ಈ ರೀತಿ ದ್ವೈಪಾಯನ

**ವ್ಯಸ್ಯ ವೇದಂ ಚತುರ್ಧಾ ತು ವಿಷ್ಣುರ್ದ್ವೈಪಾಯನೋ ಮುನಿಃ ।**
**ಶಿಷ್ಯಾನಧ್ಯಾಪಯಾಮಾಸ ನಾಮತಸ್ತಾನ್ನಿಬೋಧ ಮೇ ॥ ೨೯ ॥**

**ಋಗ್ವೇದಮಥ ಪೈಲಂ ತು ಸಾಮವೇದಂ ತು ಜೈಮಿನಿಂ ।**
**ಆಥರ್ವಣಂ ಸುಮಂತುಂ ತು ಯಜುರ್ವೇದಂ ಮಹಾಮುನಿಂ ॥ ೩೦ ॥**

**ಅಧ್ಯಾಪಯಾಮಾಸ ತದಾ ವೈಶಂಪಾಯನಸಂಜ್ಞಕಂ ।**
**ವಾಕೋವಾಕ್ಯಂ ಪುರಾಣಂ ಚ ಸೂತಂ ಭಾರತಮೇವ ಚ ॥ ೩೧ ॥**

**ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।**
**ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾಸ್ತ್ವೇತಾಶ್ಚತುರ್ದಶ ॥ ೩೨ ॥**

**ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಜ್ಯೋತಿಷಾಂ ಗತಿಂ ।**
**ಛಂದೋವಿಶೇಷಃ ಷಷ್ಠಶ್ಚ ಷಡಂಗೋ ವೇದ ಉಚ್ಯತೇ ॥ ೩೩ ॥**

**ಸಾಂಖ್ಯಂ ಯೋಗಂ ಪಂಚರಾತ್ರಂ ಶೈವಂ ಪಾಶುಪತಂ ತಥಾ ।**

---

(ವ್ಯಾಸ) ಮುನಿಗಳಿಂದ ಭಾರತರೂಪವಾಗಿ ರಚಿಸಿದ ವೇದವು (ನಾಲ್ಕು ಭಾಗವಾಗಿ) ಅವರ ಶಿಷ್ಯರಿಗೆ ಬೋಧಿಸಲ್ಪಟ್ಟಿತು ಅದರ ವಿವರವನ್ನು ತಿಳಿಸುವೆನು, ಕೇಳು

೩೦-೩೩. ಪೈಲಋಷಿಗೆ ಋಗ್ವೇದವನ್ನೂ ಜೈಮಿನಿ ಮಹರ್ಷಿಗೆ ಸಾಮವೇದವನ್ನೂ, ಸುಮಂತುಮುನಿಗೆ ಅಥರ್ವಣ ವೇದವನ್ನೂ, ವೈಶಂಪಾಯನ ಮಹಾಮುನಿಗೆ ಯಜುರ್ವೇದವನ್ನೂ, ಶ್ಲೋಕರೂಪವಾಗಿ ರಚಿಸಿದ ಐದನೆಯ ವೇದವೆನಿಸಿದ ಭಾರತವನ್ನು ಸೂತರಿಗೂ ಉಪದೇಶಿಸಿದರು ಇದಲ್ಲದೆ ಈ ವೇದಗಳ ಜತೆಗೆ ಸರ್ವರಿಗೂ ವೇದಾಂಗಗಳಾದ ಮೀಮಾಂಸ, ನ್ಯಾಯ, ಧರ್ಮಶಾಸ್ತ್ರ, ಪುರಾಣಗಳನ್ನು ಉಪದೇಶಿಸಿದರು ಇದಲ್ಲದೆ ಹದಿನಾಲ್ಕು ವಿದ್ಯೆಗಳನ್ನೂ ಸಹ ಹೇಳಿದರು. ಅದಕ್ಕೆ ಮೊದಲು ವೇದದ ಷಡಂಗಗಳು ಹೇಳಲ್ಪಡುತ್ತವೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ, ಇವೇ ಆರು ವೇದಾಂಗಗಳು ಇವುಗಳನ್ನು ಸಹ ಸಕಲಶಿಷ್ಯರಿಗೂ ಉಪದೇಶಿಸಿದರು

ಕೃತಾಂತಪಂಚಕಂ ವಿದ್ಧಿ ಬ್ರಹ್ಮಣಃ ಪರಿಮಾರ್ಗಣೇ ॥ ೩೪ ॥

ಸಂಸಾರಕ್ಷಯಹೇತ್ವರ್ಥೇ ಭಾವೋಪಕರಣೇಷು ಚ ।
ಸೋತ್ತರಾ ವೈಷ್ಣವಾ ಧರ್ಮಾಸ್ಸಾರಮೇತತ್ಪ್ರಕೀರ್ತಿತಂ ॥ ೩೫ ॥

ಏತಾವಾನೇವ ಸಕಲೋ ವಿದ್ಯಾಗ್ರಾಮಸ್ತವೇರಿತಃ ।
ವಿದ್ಯಾಃ ಪ್ರಶಸ್ತಾಶ್ಚೈತಾಭ್ಯಃ ಶತಶೋಥ ಸಹಸ್ರಶಃ ॥ ೩೬ ॥

ಯೋಽಸೌ ವ್ಯಾಸಸ್ಯ ಶಿಷ್ಯೋಽಭೂದಾರಣೇಯಃ ಸುತಃ ಶುಕಃ ।
ತೇನೈವ ದೇವದೇವೇನ ವಿಷ್ಣುನಾ ಪ್ರಭವಿಷ್ಣುನಾ ॥ ೩೭ ॥

ತ್ರೇತಾಯುಗೆ ಚತುರ್ವಿಂಶೇ ಭೃಗುವಂಶೋದ್ಭವೇನ ತು ।
ವಾಲ್ಮೀಕಿನಾ ತು ರಚಿತಂ ಸ್ವಮೇವ ಚರಿತಂ ಶುಭಂ ॥ ೩೮ ॥

ರಾಮಾಖ್ಯಾನಂ ಮಹಾಪುಣ್ಯಂ ಶ್ರೋತೄಣಾಂ ವಿಷ್ಣುಲೋಕದಂ ।
ವರ್ತಮಾನೇ ಕಲಿಯುಗೇ ಕ್ಷೀಣೇ ನೃಪತಿಸತ್ತಮ ॥ ೩೯ ॥

---

೩೪ ಬ್ರಹ್ಮವಿದ್ಯಾನ್ವೇಷಣೆಗೆ ಮುಖ್ಯವಾದ ಸಾಂಖ್ಯ, ಯೋಗ, ಪಾಂಚರಾತ್ರ, ವೇದ, ಪಾಶುಪತಾಗಮಗಳು ಕೃತಾಂತ ಪಂಚಕಗಳೆಂದು ತಿಳಿದುಕೋ

೩೫ ಎಲೈ ವಜ್ರಮಹಾರಾಜನೇ ! ಸಂಸಾರದಿಂದ ಮುಕ್ತಿ ಹೊಂದುವುದಕ್ಕೂ, ಅದಕ್ಕೆ ತಕ್ಕ ಭಾವೋಪಕರಣ(ತಕ್ಕ ವ್ಯವಸಾಯ) ಗಳಿಗೂ ಈಗ ನಾನು ನಿನಗೆ ಹೇಳುತ್ತಿರುವ ವಿಷ್ಣುಧರ್ಮೋತ್ತರ ಪುರಾಣವು ಸಾರತರವಾದುದೆಂದು ತಿಳಿದುಕೋ

೩೬ ಇದುವರೆಗೆ ನಿನಗೆ ಇಷ್ಟು ವಿದ್ಯಾಸಮುದಾಯವನ್ನು ಹೇಳಿರುತ್ತೇನೆ ನಿನಗೆ ಹೇಳಿರುವ ವಿದ್ಯೆಗಳಿಗಿಂತಲೂ ಇನ್ನೂ ನೂರಾರು, ಸಾವಿರಾರು ವಿದ್ಯೆಗಳು ಹೆಚ್ಚಾಗಿವೆ

೩೭-೪೧ ಈ ರೀತಿ ಸಹಸ್ರಾರು ವಿದ್ಯಾಪುರಾಣಗಳನ್ನು ಸಹ ಕೃತಯುಗದಲ್ಲಿ ಆರಣಿಯ ಪುತ್ರನಾದ ಶುಕನನ್ನು ಸ್ವಯಂ ಮಹಾವಿಷ್ಣುವಿನ ಅವತಾರವಾದ ವ್ಯಾಸರು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಅವರಿಗೆ ಉಪದೇಶಿಸುವುದರ ಮೂಲಕ

**ಕಲ್ಕೀ ವಿಷ್ಣುಯಶೋ ನಾಮ ಭವಿಷ್ಯತಿ ಜಗತ್ಪತಿಃ ।**
**ಘಾತಯಿಷ್ಯತಿ ಸರ್ವಾನ್ಸ ಮ್ಲೇಚ್ಛಾನ್ಸುರಬಲಾರ್ದನಃ ॥ ೪೦ ॥**

**ಮ್ಲೇಚ್ಛಾಕ್ರಾಂತಾಂ ವಸುಮತೀಂ ಕೃತ್ವಾ ಮ್ಲೇಚ್ಛವಿವರ್ಜಿತಾಂ ।**
**ಧರ್ಮಸಂಸ್ಥಾಪನಂ ಕೃತ್ವಾ ಸ್ವಸ್ಥಾನಮುಪಯಾಸ್ಯತಿ ॥ ೪೧ ॥**

**ಪ್ರಜಾಸು ಧರ್ಮಯುಕ್ತಾಸು ತತಸ್ಸಂಪತ್ಸ್ಯತೇ ಕೃತಂ ।**
**ಇತ್ಯೇವಂ ಭಗವಾನ್ವಿಷ್ಣುರ್ಯುಗೇ ಕ್ಷೀಣೇಽಭಿಜಾಯತೇ ॥ ೪೨ ॥**

**ಧರ್ಮಸಂಸ್ಥಾಪನಾರ್ಥಾಯ ನಿತ್ಯಮೇವ ಯದೂದ್ವಹ ।**
**ಪ್ರಾದುರ್ಭಾವಸಹಸ್ರಾಣಿ ಸಮತೀತಾನ್ಯನೇಕಶಃ ॥ ೪೩ ॥**

**ಭವಿಷ್ಯತಿ ತಥಾ ತಸ್ಯ ಯೇಷಾಂ ಸಂಖ್ಯಾ ನ ವಿದ್ಯತೇ ॥ ೪೪ ॥**

---

ಲೋಕದಲ್ಲಿ ಪ್ರಸಿದ್ಧನೆನಿಸುತ್ತಾನೆ  ಜ೬ಕ ಇಪ್ಪತ್ತನಾಲ್ಕನೇ ತ್ರೇತಾಯುಗದಲ್ಲಿ ಭೃಗುವಂಶೋದ್ಭವನಾದ ವಾಲ್ಮೀಕಿ ಋಷಿಯಿಂದ ರಾಮಾಯಣವೆಂಬ ಹೆಸರಿನಿಂದ ರಾಮಾವತಾರ ಮಾಡಿದ ತನ್ನ ಚರಿತ್ರೆಯನ್ನೇ ಮಹಾ ವಿಷ್ಣುವು ಬರಯಿಸಿ ಲೋಕ ಪ್ರಸಿದ್ಧಮಾಡುತ್ತಾನೆ ಆ ರಾಮಾಯಣ ಕಥೆಯಾದರೋ ಮಹಾ ಪುಣ್ಯಪ್ರದವಾದು ದಾಗಿ ಶ್ರವಣ ಮಾಡಿದವರಿಗೆ ವಿಷ್ಣುಲೋಕ ವಾಸವನ್ನು ಕೊಡತಕ್ಕುದಾಗಿದೆ ಇಪ್ಪ್ಯ ದಮೇಲೆ ಈಗ ನಡೆಯುತ್ತಿರುವ ಕಲಿಯುಗದಲ್ಲಿ ಕಲ್ಕಿಯೆಂಬ ಹೆಸರಿನಿಂದ ಮಹಾ ವಿಷ್ಣುವು ಅವತರಿಸಿ ಮ್ಲೇಂಛರಿಂದ ಆಕ್ರಮಿಸಲ್ಪಟ್ಟು ಅಧರ್ಮಮಯವಾದ ಈ ಪ್ರಪಂಚವನ್ನು ಗೆದ್ದು ಮ್ಲೇಂಛರೆಲ್ಲರನ್ನೂ ನಾಶಮಾಡಿ ಈ ಭೂಲೋಕವನ್ನು ಹೀನ ರಹಿತವನ್ನಾಗಿ ಮಾಡಿ ಧರ್ಮ ಸಂಸ್ಥಾಪನಾನಂತರ ವಿಷ್ಣುಲೋಕಕ್ಕೆ ಹೋಗುತ್ತಾನೆ

೪೨-೪೪ ಯಾವಾಗ ಪ್ರಜೆಗಳು ಧರ್ಮದಲ್ಲಾಸಕ್ತರಾಗುತ್ತಾರೋ ಆಗ ಕೃತಯುಗವು ಪ್ರಾಪ್ತವಾಗುತ್ತದೆ ತಿಳಿಯಬೇಕು ಯುಗ ಯುಗದಲ್ಲೂ ಧರ್ಮ ಕ್ಷೀಣ ವಾಗುತ್ತ ಬಂದ ಕಾಲದಲ್ಲೆಲ್ಲಾ ಇದೇ ರೀತಿಯಾಗಿ, ಭಗವಂತನು ಧರ್ಮಸಂಸ್ಥಾಪನೆ ಗೋಸ್ಕರ ಪ್ರತಿ ದಿನವೂ ಹೊಸ ಹೊಸ ರೂಪದಿಂದ ಅವತರಿಸುತ್ತಲೇ ಇರುತ್ತಾನೆ, ಇಂಥ ಅವತಾರಗಳು ಇದುವರಿಗೆ ಸಾವಿರಾರು ಕಳೆದುಹೋಗಿವೆ ಈಗಲೂ ಆಗುತ್ತಲೇ ಇವೆ  ಇವರ ಲೆಕ್ಕವು ಸಿಗುವಹಾಗೇ ಇಲ್ಲ

**ಏತತ್ತ್ವಪ್ರೋಕ್ತಂ ಹಿ ನರೇಂದ್ರಚಂದ್ರ
ಕ್ಷೀಣೇ ಯುಗೇ ಯದ್ಭವತೀಹ ಲೋಕೇ ।
ಅತಃ ಪರಂ ಧರ್ಮಭೃತಾಂ ವರಿಷ್ಠ
ಪ್ರಬ್ರೂಹಿ ಕಿಂ ತೇ ಕಥಯಾಮಿ ರಾಜನ್ ॥ ೪೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಯುಗಾಂತವರ್ಣನೋ ನಾಮ
ಚತುಸ್ಸಪ್ತತಿತಮೋಽಧ್ಯಾಯಃ**

---

೪೫ ಎಲೈ ವಜ್ರರಾಜನೆ! ಯುಗಗಳು ಕ್ಷೀಣವಾದಾಗಲೆಲ್ಲಾ ಲೋಕದಲ್ಲಿ ಏನೇನು ನಡೆಯುವುದೆಂಬುದನ್ನು ನಿನಗೆ ಹೇಳಿಯಾಯಿತು ಇನ್ನು ಮುಂದೆ ಇನ್ನೇನು ಕೇಳಬೇಕೆಂದಿರುವೆಯೋ ಅದನ್ನು ಕೇಳೆಂದು ಮಾರ್ಕಂಡೇಯರು ವಜ್ರನರಪತಿಗೆ ಹೇಳಿದರೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದದ ಯುಗಾಂತವರ್ಣನೆಯೆಂಬ ಹೆಸರಿನ
ಎಪ್ಪತ್ತನಾಲ್ಕನೇ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಸಪ್ತತಿತಮೋಽಧ್ಯಾಯಃ ॥



॥ ವಜ್ರ ಉವಾಚ ॥

ಮನ್ವಂತರೇ ಪರಿಕ್ಷೀಣೇ ಯಾದೃಶೀ ದ್ವಿಜಜಾಯತೇ ।
ಸಮವಸ್ಥಾ ಮಹಾಭಾಗ ತಾದೃಶೀಂ ವಕ್ತುಮರ್ಹಸಿ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮನುಶ್ಚ ಸಹ ಶಕ್ರೇಣ ದೇವಾಶ್ಚ ಯದುನಂದನ ।
ಬ್ರಹ್ಮಲೋಕಂ ಪ್ರಪದ್ಯನ್ತೇ ಪುನರಾವೃತ್ತಿದುರ್ಲಭಂ ॥ ೨ ॥

ಋಷಯಶ್ಚ ತಥಾ ಸಪ್ತ ತತ್ರ ತಿಷ್ಠಂತಿ ತೇ ಸದಾ ।
ಅಧಿಕಾರಂ ವಿನಾ ಸರ್ವೇ ಸದೃಶಾಃ ಪರಮೇಷ್ಠಿನಃ ॥ ೩ ॥

---

### ಎಪ್ಪತ್ತೈದನೆಯ ಅಧ್ಯಾಯವು.

೧ ವಜ್ರರಾಜನು ಪುನಃ ಪ್ರಶ್ನೆಮಾಡುತ್ತಾನೆ - ಎಲೈ ಮಾರ್ಕಂಡೇಯ ಮಹಾಮುನಿಯೆ ! ಯುಗಗಳ ಕಡೆಯಲ್ಲಿ ನಡೆಯುವ ಕಥೆಯನ್ನು ಹೇಳಿದಂತೆ ಒಂದೊಂದು ಮನ್ವಂತರವೂ ಕಳೆಯುತ್ತ ಬಂದಾಗಲೆಲ್ಲಾ ಪ್ರಪಂಚದ ಅವಸ್ಥೆ ಹೇಗಾಗುವುದೋ ಅದನ್ನು ಕೇಳಬೇಕೆಂದು ಆಶಪಡುತ್ತೇನೆ, ಅದನ್ನು ದಯಮಾಡಿ ಹೇಳು.

೨. ಮಾರ್ಕಂಡೇಯರು ಹೇಳುತ್ತಾರೆ — ಮನ್ವಂತರವು ಕಳೆದಾಗ ಆ ಮನ್ವಂತರದ ಅಧಿಪತಿಗಳಾದ ದೇವತೆಗಳು ಪರಿಶುದ್ಧಾತ್ಮರಾಗಿ ಮಹರ್ಲೋಕಕ್ಕೆ ಹೋಗಿ ವಾಸಮಾಡುತ್ತಾರೆ

೩ ಎಲೈ ವಜ್ರಭೂಪಾಲಕನೇ ಕೇಳು ಮನುವೂ, ದೇವತೆಗಳೂ ಇಂದ್ರನೊಡನೆ ಕೂಡಿಕೊಂಡು ಪುನರಾವೃತ್ತಿರಹಿತವಾದ ಶಾಶ್ವತ ಬ್ರಹ್ಮಲೋಕಕ್ಕೆ ಹೊರಟು ಹೋಗುತ್ತಾರೆ

ಮನ್ವಂತರೇ ಪರಿಕ್ಷೀಣೇ ದೇವಾ ಮನ್ವಂತರೇಶ್ವರಾಃ ।
ಮಹರ್ಲೋಕಮಥಾಸಾದ್ಯ ತಿಷ್ಠಂತಿ ಗತಕಲ್ಮಷಾಃ ॥ ೪ ॥

ಭೂತಲಂ ಸಕಲಂ ವಜ್ರ ತೋಯರೂಪೀ ಮಹೇಶ್ವರಃ ।
ಊರ್ಮಿಮಾಲೀ ಮಹಾವೇಗಃ ಸರ್ವಮಾವೃತ್ಯ ತಿಷ್ಠತಿ ॥ ೫ ॥

ಭೂಲೋಕಮಾಶ್ರಿತಂ ಸರ್ವಂ ತಥಾ ನಶ್ಯತಿ ಯಾದವ ।
ನ ವಿನಶ್ಯಂತಿ ರಾಜೇಂದ್ರ ವಿಶ್ರುತಾಃ ಕುಲಪರ್ವತಾಃ ॥ ೬ ॥

ಮಹೇಂದ್ರೋ ಮಲಯಸ್ಸಹ್ಯಃ ಶುಕ್ತಿಮಾನೃಕ್ಷವಾನಪಿ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಮಾಲ್ಯವಾನ್ಗಂಧಮಾದನಃ ॥ ೭ ॥

ಹಿಮವಾನ್ಹೇಮಕೂಟಶ್ಚ ನಿಷಧೋ ನೀಲ ಏವ ಚ ।
ಶ್ವೇತಶ್ಚ ಶೃಂಗವಾನ್ಮೇರುರ್ನ ವಿನಶ್ಯಂತಿ ಪರ್ವತಾಃ ॥ ೮ ॥

---

೪ ಸಪ್ತಋಷಿಗಳೂ ಸಹ ಯಾವಾಗಲೂ ಅಲ್ಲಿಯೇ ವಾಸಮಾಡುತ್ತಿರುವ ರಾದರೂ ಅವರೆಲ್ಲರೂ ಯಾವ ವಿಧವಾದ ಅಧಿಕಾರವೂ ಇಲ್ಲದೆ ಬ್ರಹ್ಮನಿಗೆ ಸಮಾನ ರಾಗಿರುತ್ತಾರೆ

೫-೬ ಆಗ ಭೂಲೋಕವೆಲ್ಲ ನೀರಿನಿಂದ ತುಂಬಿಹೋಗಿ ಪ್ರಳಯಕಾಲದ ರುದ್ರನಿಂದ ಆವರಿಸಲ್ಪಟ್ಟು ಮಹಾ ವೇಗವುಳ್ಳ ಪ್ರಬಲವಾದ ಅಲೆಗಳಿಂದ ತುಂಬಿ ಹೋಗುವುದು ಭೂಮಿಯನ್ನು ಆಶ್ರಯಿಸಿಕೊಂಡಿದ್ದ ಸಕಲ ಚರಾಚರ ವಸ್ತುಗಳೂ ಆಗ ಪ್ರಳಯ ಜಲದಲ್ಲಿ ಮುಳುಗಿ ನಾಶವಾಗಿ ಹೋಗುತ್ತವೆ ಆದರ ಆಗ ಸುಪ್ರಸಿದ್ಧವಾದ ಕುಲಪರ್ವತಗಳು ಮಾತ್ರ ನಾಶವಾಗುವುದಿಲ್ಲ,

## ದೇವೀ ಮಹಾತ್ಮೆ

೭-೧೫. ನಾಶವಾಗದೆ ನಿಲ್ಲುವ ಆ ಪರ್ವತಗಳಾವುವೆಂದರೆ — ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷಮನ್ತ, ವಿಂಧ್ಯ, ಪಾರಿಯಾತ್ರ, ಮಾಲ್ಯವಂತ, ಗಂಧಮಾದನ, ಹಿಮವಂತ, ಹೇಮಕೂಟ, ನಿಷಧ, ನೀಲ, ಶ್ವೇತ, ಶೃಂಗವಂತ, ಮೇರು, ಇವುಗಳು ನಾಶವಾಗುವುದಿಲ್ಲ ಉಳಿದ ಸ್ಥಾವರ ಜಂಗಮಾತ್ಮಕವಾದ

**ಶೇಷಂ ವಿನಶ್ಯತಿ ಜಗತ್ಸ್ಥಾವರಂ ಜಂಗಮಂ ಚ ಯತ್ ।**
**ನೌರ್ಭೂತ್ವಾ ತು ಸತೀ ದೇವೀ ತದಾ ಯದುಕುಲೋದ್ವಹ ॥ ೯ ॥**

**ಧಾರಯುತ್ಯಥ ಬೀಜಾನಿ ಸರ್ವಾಣ್ಯೇವಾ ವಿಶೇಷತಃ ।**
**ಭವಿಷ್ಯಶ್ಚ ಮನುಸ್ತಸ್ಯಾಂ ಭವಿಷ್ಯಾ ಋಷಯಸ್ತಥಾ ॥ ೧೦ ॥**

**ತಿಷ್ಠಂತಿ ರಾಜಶಾರ್ದೂಲ ಸಪ್ತ ಯೇ ಪ್ರಥಿತಾ ಭುವಿ ।**
**ಮತ್ಸ್ಯರೂಪಧರೋ ವಿಷ್ಣುಃ ಶೃಂಗೀ ಭೂತ್ವಾ ಜಗತ್ಪತಿಃ ॥ ೧೧ ॥**

**ಆಕರ್ಷತಿ ತು ತಾಂ ನಾವಂ ಸ್ಥಾನಾತ್ಸ್ಥಾನಂ ಸ ಲೀಲಯಾ ।**
**ಕರ್ಷಮಾಣಂ ತು ತಾಂ ನಾವಂ ದೇವದೇವಂ ಜಗತ್ಪತಿಂ ॥ ೧೨ ॥**

**ಸ್ತುವಂತಿ ಋಷಯಃ ಸರ್ವೇ ದಿವ್ಯೈಃ ಕರ್ಮಭಿರಚ್ಯುತಂ ।**
**ಘೂರ್ಣಮಾನಸ್ತದಾ ಮತ್ಸ್ಯೋ ಜಲವೇಗೋರ್ಮಿಸಂಕುಲೇ ॥ ೧೩ ॥**

---

ಪ್ರಪಂಚವೆಲ್ಲವೂ ನಾಶವಾಗಿ ಹೋಗುತ್ತದೆ. ಅಂತಹ ಪ್ರಳಯ ಕಾಲದಲ್ಲಿ ಜಗಜ್ಜನನಿಯಾದ ಮಹಾದೇವಿಯು ಒಂದು ಹಡಗಿನಂತೆ ಆಕಾರ ತಾಳಿಕೊಂಡು ಸೂಕ್ಷ್ಮರೂಪದಿಂದಿರುವ ಆ ಸಕಲ (ಕರ್ಮ) ಬೀಜಗಳನ್ನೂ ಆ ಹಡಗಿನಲ್ಲಿ ತುಂಬಿಕೊಳ್ಳುತ್ತಾಳೆ. ಎಷ್ಟು ಜೀವರಾಶಿಗಳಿವೆಯೋ, ಇನ್ನೆಷ್ಟು ಗಿಡ ಮರ ಹಕ್ಕಿಗಳೇ ಮುಂತಾದ ಸಕಲ ಬ್ರಹ್ಮಾಂಡದ ಚರಾಚರ ಬೀಜಗಳಿವೆಯೋ, ಒಂದನ್ನೂ ಬಿಡದೆ ಆ ಮಹಾತಾಯಿಯು ತನ್ನ ಹೊಟ್ಟೆಯಲ್ಲಿ ಆಗ ಬಚ್ಚಿಟ್ಟುಕೊಂಡಿರುತ್ತಾಳೆ. ಆ ಹಡಗಿನಲ್ಲೇ ಮುಂದಿನ ಮನ್ವಂತರದ ರಾಜನೂ, ಮುಂದೆ ಹುಟ್ಟುವ ಸಪ್ತರ್ಷಿಗಳೂ ಅಡಗಿಕೊಂಡಿರುತ್ತಾರೆ.

ಆ ವೇಳೆಯಲ್ಲಿ ಚತುರ್ದಶ ಭುವನಾಧೀಶ್ವರನೂ, ಸೃಷ್ಟಿ ಸ್ಥಿತಿ ಲಯ ಕಾರಣನೂ ಆದ ಭಗವಾನ್ ಮಧುಸೂದನನು, ಮಹಾಮತ್ಸ್ಯದಂತೆ ಆಕಾರ ತಾಳಿ ಎರಡು ಕೊಂಬುಗಳನ್ನು ತಳೆದು ಆ ಕೊಂಬಿನ ಮೇಲೆ ಆ ದೇವೀ ನಾವೆಯನ್ನು ಎಳೆದುಕೊಂಡು ಕೂರಿಸಿಕೊಳ್ಳುತ್ತಾನೆ. ಹಾಗೆ ಕೂರಿಸಿಕೊಂಡು ಆ ಹಡಗನ್ನು ಇತ್ತಿಂದತ್ತ ತಿರುಗಿಸುತ್ತಾ ಜಾಗದಿಂದ ಜಾಗಕ್ಕೆ ಬದಲಾಯಿಸುತ್ತಾ ಪ್ರಳಯ ಜಲದಲ್ಲೆಳೆದುಕೊಂಡು ಸುತ್ತಾಡುತ್ತಾ ಜಲಕ್ರೀಡೆಯನ್ನಾಡುತ್ತಿರುತ್ತಾನೆ. ಆ ಕಾಲದಲ್ಲಿ ಮಹಾಜ್ಞಾನಿ

**ಘೂರ್ಣಮಾನಾಂ ತು ತಾಂ ನಾವಂ ನಯತ್ಯಮಿತವಿಕ್ರಮಃ ।**
**ಹಿಮಾದ್ರಿಶಿಖರಂ ನಾವಂ ದೇವದೇವೋ ಜಗತ್ಪತಿಃ ॥ ೧೪ ॥**

**ಮತ್ಸ್ಯಸ್ತ್ವದೃಶ್ಯೋ ಭವತಿ ತೇ ಚ ತಿಷ್ಠಂತಿ ತತ್ರಗಾಃ ॥ ೧೫ ॥**

**ಕೃತತುಲ್ಯಂ ತದಾ ಕಾಲಂ ತಾವತ್ಪ್ರಕ್ಷಾಲನಂ ಸ್ಮೃತಂ ।**
**ಆಪಸ್ಸಾಮ್ಯಮಧೋ ಯಾಂತಿ ಯಥಾಪೂರ್ವಂ ನರಾಧಿಪ ।**
**ಋಷಯಶ್ಚ ಮನುಶ್ಚೈವ ಸರ್ವಂ ಕುರ್ವಂತಿ ತೇ ತದಾ ॥ ೧೬ ॥**

---

ಗಳಾದ ಋಷಿಗಳು ಆ ಅನಾದಿ-ಮಧ್ಯಾಂತನಾದ ಅಚ್ಯುತನನ್ನು ನಾನಾವಿಧವಾಗಿ ಸ್ತೋತ್ರಮಾಡುತ್ತಾರ (ಸೂಕ್ಷ್ಮರೂಪದಿಂದಲೇ ಸ್ತೋತ್ರ ನಡೆಯುವುದೆಂದು ತಿಳಿಯಬೇಕು ಏಕೆಂದರೆ ಯಾವ ಪ್ರಾಣಿಗೂ ಆಗ ಸ್ಥೂಲದೇಹವಿರುವುದಿಲ್ಲ). ಹೀಗೆ ಸ್ತುತಿಸಲ್ಪಡುತ್ತಾ ಮತ್ಸ್ಯರೂಪೀ ಭಗವಂತನು ಆ ಹಡಗನ್ನು ಬಹು ಕಾಲ ತಿರುಗಿಸಿ, ತೂರಾಡಿಸಿ, ಅಲ್ಲಾಡಿಸಿ, ಹಾರಾಡಿಸಿ, ಕಡೆಗೆ ಅದನ್ನು ಹಿಮವತ್ಪರ್ವತದ ಶಿಖರದ ಮೇಲೆ ಇಟ್ಟುಬಿಡುತ್ತಾನೆ ಆ ಕೂಡಲೆ ಮತ್ಸ್ಯವು ಮಾಯವಾಗುತ್ತದ ಹಡಗು ಮಾತ್ರ ಅಲ್ಲಿಯೇ ಉಳಿದುಕೊಳ್ಳುತ್ತದ—ಈ ಸಮಯದಲ್ಲಿ ವಾಚಕರು ಹಿಮವಂತನು ಪಾರ್ವತಿಯ ತಂದೆಯೆಂದೂ, ತಂದೆಯ ಮನೆಗೆ ಮಗಳು ಮಕ್ಕಳ (ಲೋಕಪರಿವಾರ) ಸಮೇತ ಹೋಗಿದ್ದಾಳೆಂದೂ ಒಮ್ಮೆ ಮನನ ಮಾಡುವುದಾದರ ಅವರನ್ನು ಜ್ಞಾನಿಗಳೆಂದು ಭಾವಿಸುತ್ತೇವೆ ಈ ಸಮಯದಲ್ಲಿ ಆ ಜಗನ್ಮಾತಾಪಿತೃಗಳನ್ನು ನಾವೂ ಒಮ್ಮೆ ಸ್ತುತಿಸಿ ಪಾವನರಾಗೋಣ —

ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ ।
ಜಗತಃಪಿತರೌವಂದೇ ಪಾರ್ವತೀ ಪರಮೇಶ್ವರೌ ॥

ಇನ್ನು ಮುಂದಿನ ಸಂಗತಿಯ ಕಡೆಗೆ ಗಮನವಿಡೋಣ

೧೬ ಆಗ ನೀರಿನಿಂದ ಎಲ್ಲವೂ ಮುಳುಗಿರುತ್ತವೆ ಆ ಕಾಲವು ಕೃತಯುಗಕ್ಕೆ ಸಮನಾದುದು. ಆಗ ಲೋಕವೆಲ್ಲವೂ ಜಲಮಯವಾಗಿರುತ್ತದೆ ಅಂತಹ ಸನ್ನಿವೇಶವನ್ನು ಪೂರ್ವದಂತೆ ಹಡಕ್ಕೆ ತರಬೇಕಾದರೆ ಮುಂದಿನ ಮನುವೂ ಸಪ್ತರ್ಷಿಗಳೂ ಬಹಳ ಕೆಲಸ ಮಾಡಬೇಕು ಅವರು ಆಗ ಭಾರವಹಿಸಿ ಕೆಲಸಮಾಡಿ ಪ್ರಪಂಚವನ್ನು ಪುನಃ ನಿರ್ಮಾಣ ಮಾಡುತ್ತಾರೆ.

ಮನ್ವಂತರಾಂತೇ ಜಗತಾಮವಸ್ಥಾ
ಮಯೇರಿತಾ ತೇ ಯದುವೃಂದನಾಥ ।
ಅತಃ ಪರಂಯತ್ತವ ಕೀರ್ತನೀಯಂ
ಸಮಾಸತಸ್ತದ್ವದ ಭೂಮಿಪಾಲ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಮನ್ವಂತರವರ್ಣನೋ ನಾಮ
ಪಂಚಸಪ್ತತಿತಮೋಽಧ್ಯಾಯಃ

---

೧೭ ಎಲೈ ವಜ್ರನರನಾಥನೇ! ನೀನು ಕೇಳಿದ ಪ್ರಕಾರ ಮನ್ವಂತರಗಳ ಕೊನೆಯ ಭಾಗದಲ್ಲಿ ಪ್ರಪಂಚದ ಅವಸ್ಥೆ ಹೇಗಿರುವುದೋ ಎಂಬ ವಿಷಯವನ್ನು ನಿನ್ನೊಡನೆ ಹೇಳಿಯಾಯಿತಷ್ಟೆ? ಇನ್ನು ಮುಂದೆ ಇನ್ನೇನನ್ನು ಕೇಳಬೇಕೆಂದು ಆಸಿ ಪಡುತ್ತೀಯೋ ಅದನ್ನೆಲ್ಲಾ ಕೇಳು, ಸಂಶಯ ಪಡಬೇಡ ಹೀಗೆಂದು ಮಾರ್ಕಂಡೇಯ ಋಷಿಗಳು ವಜ್ರರಾಜನಿಗೆ ಹೇಳಿದರೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಮನ್ವಂತರವರ್ಣನಯೆಂಬ ಎಪ್ಪತ್ತೈದನಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಟ್ಸಪ್ತತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಬ್ರಾಹ್ಮಸ್ಯ ದಿವಸಸ್ಯಾಂತೇ ಯಾದೃಶೀ ದ್ವಿಜ ಜಾಯತೇ ।
ಜಗತೋಽಸ್ಯ ಸಮಾವಸ್ಥಾ ತಾದೃಶೀಂ ವಕ್ತುಮರ್ಹಸಿ ॥ ೧ ॥

॥ ಮಾರ್ಕಂಡೇಯ ಉವಾಚ ॥

ವೃತ್ತೇ ಪ್ರಕ್ಷಾಲನೇ ರಾಜನ್ಕಲ್ಪಸ್ಯಾಂತೇ ಚತುರ್ದಿಶಂ ।
ಉತ್ತಿಷ್ಠಂತಿ ತದಾ ಘೋರಾ ದಿವಿ ಸಪ್ತ ದಿವಾಕರಾಃ ॥ ೨ ॥

ತೇ ತು ಪೀತ್ವಾ ಜಲಂ ಸರ್ವಂ ಶೋಷಯಂತಿ ಜಗತ್ತ್ರಯಂ ।
ವಿನಾಶೇ ಸರ್ವಭೂತಾನಾಮಯೋಗುಡಸಮಾ ತದಾ ॥ ೩ ॥

---

### ಎಪ್ಪತ್ತಾರನೆಯ ಅಧ್ಯಾಯವು

೧ ವಜ್ರರಾಜನು ಪುನಃ ಪ್ರಶ್ನೆಮಾಡುತ್ತಾನೆ —ಎಲೈ ಮಾರ್ಕಂಡೇಯನೇ! ಬ್ರಹ್ಮನಿಗೆ ಒಂದು ದಿವಸ ಕಳೆದ ಕಾಲದಲ್ಲಿ ಈ ಜಗತ್ತಿನ ಅವಸ್ಥೆ ಅದೆಂತಿರುವುದೋ ಆ ಸಂಗತಿಯನ್ನು ದಯವಿಟ್ಟು ತಿಳಿಸಯ್ಯ! ಬ್ರಾಹ್ಮಣೋತ್ತಮನೇ!

೨ ಮಾರ್ಕಂಡೇಯನು ಹೇಳುತ್ತಾನೆ —ಕಲ್ಪದ (ಬ್ರಹ್ಮನ ಹಗಲಿನ) ಕಡೇ ಭಾಗದಲ್ಲಿ ಪ್ರಪಂಚವೆಲ್ಲವೂ ನೀರಿನಿಂದ ಮುಳುಗಿಹೋಗಿ ನಾಲ್ಕು ದಿಕ್ಕುಗಳಲ್ಲಿಯೂ ನೀರು ತಾನೇ ತಾನಾಗಿ ಕಾಣುತ್ತಿರುತ್ತದೆ ಆ ಸಮಯದಲ್ಲಿ ಆಕಾಶದಲ್ಲಿ ಏಳು ಮಂದಿ ಭಯಂಕರ ಜ್ವಾಲೆಯುಳ್ಳ ಸೂರ್ಯರು ಕಾಣಿಸಿಕೊಳ್ಳುತ್ತಾರೆ

೩-೪ ಆ ಸಪ್ತಸೂರ್ಯರೂ ಸಕಲ ಜಲವನ್ನೂ ಪಾನಮಾಡಿ ಮೂರು ಲೋಕವನ್ನೂ ಬತ್ತಿಸಿಬಿಡುತ್ತಾರೆ ಸಕಲ ಭೂತಗಳೂ ಆಗ ನಿಶ್ಶೇಷವಾಗಿ ನಷ್ಟವಾಗಿ ಹೋಗಿ ಭೂಮಿಯು ಕಬ್ಬಿಣದ ಚಂಡಿನಂತೆ ಆಗುತ್ತದೆ. ಸಕಲ ಜಂತುಗಳ

ಭೂಮಿರ್ಭವತಿ ಭೂಪಾಲ ದಗ್ಧಾಸ್ಸರ್ವೇ ಚ ಜಂತವಃ ।
ವಿನಷ್ಟಕಿಲ್ಬಿಷಾಸ್ಸರ್ವೇ ಜೀವಮಾತ್ರಾವಶೇಷಕಾಃ ॥ ೪ ॥

ಜನಲೋಕಮಥಾಸಾದ್ಯ ತತ್ರ ತಿಷ್ಠಂತಿ ನಿರ್ಭಯಾಃ ।
ಭೂರ್ಭುವಸ್ಸ್ವರ್ಮಹಶ್ಚೈವ ತದಾ ನಶ್ಯಂತಿ ಪಾರ್ಥಿವ ॥ ೫ ॥

ಜನಲೋಕಾದಯೋ ಲೋಕಾ ನ ತು ನಶ್ಯಂತಿ ಪಾರ್ಥಿವ ।
ತತೋಽರ್ಕಾಸ್ತೇ ತು ನಶ್ಯಂತಿ ಸಂಹಿತಾ ರುದ್ರತೇಜಸಾ ॥ ೬ ॥

ಉತ್ತಿಷ್ಠಂತಿ ಮಹಾರೌದ್ರಾಸ್ತತೋ ದಿವಿಚರಾ ಘನಾಃ ।
ಕೇಚಿದಂಜನಪುಂಜಾಭಾಃ ಕೇಚಿದ್ಗಜಕುಲೋಪಮಾಃ ॥ ೭ ॥

ಕೇಚಿತ್ಪುರವರಾಕಾರಾಃ ಕೇಚಿದ್ಧಾರಿದ್ರಸನ್ನಿಭಾಃ ।
ಹರಿತಾಲಾಂಜನಪ್ರಖ್ಯಾಸ್ತಥಾ ಹಿಂಗುಲಿಕಪ್ರಭಾಃ ॥ ೮ ॥

---

(ಜಲಚರ ಭೂಚರ ಖೇಚರಗಳೆಲ್ಲವುಗಳ) ಗುಂಪೂ ಬೆಂದುಹೋಗುತ್ತದೆ. ಎಲ್ಲರೂ ದೇಹರಹಿತರಾಗಿ ಜೀವ (ಸೂಕ್ಷ್ಮ) ಮಾತ್ರದಿಂದ ಕೂಡಿರುತ್ತಾರೆ

೫ ಆಗ ಜೀವರೆಲ್ಲರೂ ಜನಲೋಕವನ್ನು ಪ್ರವೇಶಿಸಿ ಅಲ್ಲಿ ನಿರ್ಭಯರಾಗಿರುತ್ತಾರೆ ಆಗ ಭೂಲೋಕ, ಭುವರ್ಲೋಕ, ಮಹರ್ಲೋಕಗಳು ಮೂರೂ ಪೂರ್ಣವಾಗಿ ನಾಶಹೊಂದುತ್ತವೆ

೬. ಜನಲೋಕ, ತಪೋಲೋಕ, ಸತ್ಯಲೋಕಗಳು ಆಗ್ಯೆ ನಾಶಹೊಂದಲಾರವು ಮತ್ತೇನೆಂದರ ಪ್ರಳಯಕಾಲ ರುದ್ರತೇಜಸ್ಸಿನಿಂದ ಸಪ್ತ ಸೂರ್ಯರೂ ನಾಶಹೊಂದುತ್ತಾರೆ

೭ ಆಗ್ಯೆ ಆಕಾಶದಲ್ಲಿ ಪ್ರಳಯ ರುದ್ರರನೇಕರು ಎದ್ದು ನಿಲ್ಲುತ್ತಾರೆ ಕೆಲವರು ಕಾಡಿಗೆಯ ಬೆಟ್ಟದಂತೆ ಕಾಣುತ್ತಾರೆ ಕೆಲವರು ಮದ್ದಾನೆಗಳ ಗುಂಪಿನಂತೆ ತೋರುತ್ತಾರೆ

೮ ಕೆಲವರು ಉತ್ತಮ ನಗರಗಳಂತೆಯೂ, ಕೆಲವರು ಹಳದೀ ಬಣ್ಣದಂತೆಯೂ ಮತ್ತನೇಕರು ನೀಲೀಬಣ್ಣದಿಂದಲೂ ತೋರುತ್ತಿರುತ್ತಾರೆ

**ಶುಕಪತ್ರನಿಭಾಃ ಕೇಚಿತ್ಕೇಚಿನ್ನೀಲೋತ್ಪಲಪ್ರಭಾಃ ।**
**ವಿದ್ಯುನ್ಮಾಲಾ ವಿನದ್ಧಾಂಗಾ ಗರ್ಜಂತೋಽಥ ಬಲಾಹಕಾಃ ॥ ೯ ॥**

**ಆಕ್ರಮ್ಯ ಗಗನಂ ರಾಜನ್ಪೂರಯಂತಿ ಮಹೀತಲಂ ।**
**ಗಂಗಾಪ್ರವಾಹಪ್ರತಿಮೈರ್ಧಾರಾಪಾತೈಃ ಪುನಃ ಪುನಃ ॥ ೧೦ ॥**

**ತತಸ್ಸಮುದ್ರಾ ಭೂಪಾಲ ವೇಲೋದ್ಭೇದತರಂಗಿಣಃ ।**
**ಪ್ಲಾವಯಂತಿ ಮಹೀಂ ಸರ್ವಾಂ ದಗ್ಧಾಂ ಸೂರ್ಯಗಭಸ್ತಿಭಿಃ ॥ ೧೧ ॥**

**ತತಸ್ಸಂವರ್ತಕೋ ವಾಯುರ್ಘನಾನಾರುಜತಿ ಕ್ಷಣಾತ್ ।**
**ತತೋ ವಾಯುಂ ಸಮಾದಾಯ ಸ್ವಶರೀರೇ ಪಿತಾಮಹಃ ॥ ೧೨ ॥**

**ಸ್ವಪಿತ್ಯೇಕಾರ್ಣವೇ ಲೋಕೇ ನಷ್ಟಸ್ಥಾವರಜಂಗಮೇ ।**
**ನಷ್ಟಚಂದ್ರಾರ್ಕಪವನೇ ಗ್ರಹನಕ್ಷತ್ರತಾರಕೇ ॥ ೧೩ ॥**

---

೯-೧೦ ಕೆಲವರು ಗಿಣಿ ಹಸುರಿನಂತೆ, ಕೆಲವರು ಕನ್ನೈದಿಲೆ ಹೂವಿನ ಕಾಂತಿಯಂತೆ, ಹಲವರು ಮಿಂಚಿನ ಮಾಲೆಯಂತೆಯೂ ತೋರುತ್ತಾರ ಆಗ ಮೋಡಗಳು ಬಹು ಬಲವಾಗಿ ಗರ್ಜಿಸುತ್ತಾ ಭೂಲೋಕವನ್ನೆಲ್ಲಾ ತುಂಬಿಬಿಡುತ್ತವೆ ಆಗ ಬೀಳುವ ಮಳೆಯು ಗಂಗಾನದಿಯ ಪ್ರವಾಹದಂತೆ ಆಕಾರದಿಂದ ಬೀಳುತ್ತಿರುತ್ತದ

೧೧ ಕೇಳ್ಳ ! ವಜ್ರಮಹಾರಾಜನೆ! ಯಾವಾಗಲೂ ಮೇರೆ ಮೀರದೆ ಇದ್ದ ಸಮುದ್ರಗಳು ಆ ಕಾಲ ಬಂದಾಗ ಮೇರೆಗಳನ್ನು ಮೀರಿದ ಭಾರಿ ಭಾರಿ ಅಲೆಗಳಿಂದ ಕೂಡಿದುವುಗಳಾಗಿ ಜಗತ್ತನ್ನಾಕ್ರಮಿಸಿಕೊಂಡು, ಸೂರ್ಯ ಕಿರಣಗಳಿಂದ ಸುಟ್ಟು ಹೋಗಿದ್ದ ಸಕಲ ಭೂಭಾಗಗಳನ್ನೂ ಮರೆಮಾಡಿ ಬಿಡುತ್ತವ

೧೨. ಅದೇ ಕಾಲದಲ್ಲಿ ಸಂವರ್ತಕನೆಂಬ ಸುಂಟರಗಾಳಿಯು ಮೇಘಗಳನ್ನು ಭೇದಿಸಿಕೊಂಡು ಬೀಸುತ್ತಾ ತಾನೇತಾನಾಗಿ ವ್ಯಾಪಿಸಿಕೊಂಡು ನಿಲ್ಲುತ್ತದೆ ಆಗ ಆ ಪ್ರಚಂಡವಾಯುವಿನ ಆಟೋಪವನ್ನಡಗಿಸಿ ಬ್ರಹ್ಮನು ಅದನ್ನು ತನ್ನ ದೇಹದಲ್ಲಿ ಆಕರ್ಷಿಸಿಕೊಳ್ಳುತ್ತಾನೆ

೧೩-೧೪ ಹೀಗೆ ಅಡಗಿಸಿಕೊಂಡು ಏಕಾರ್ಣವರೂಪವಾದ ಪ್ರಳಯಪಯೋಧಿ ಜಲದಲ್ಲಿ ಮಹಾಪ್ರಭುವು ಮಲಗಿ ನಿದ್ದೆಮಾಡುತ್ತಾನೆ ಆ ಕಾಲದಲ್ಲಿ ಸೂರ್ಯ ಚಂದ್ರರಾಗಲೀ ಗ್ರಹ ನಕ್ಷತ್ರ ತಾರೆಗಳಾಗಲೀ ಒಂದೂ ಇರುವುದಿಲ್ಲ ಹೀಗೆ ಜಗತ್ಪತಿಯಾದ ದೇವದೇವೋತ್ತಮನು ಮಲಗಿಕೊಂಡು ಒಂದುಸಾವಿರ ಯುಗಗಳು ನಿದ್ದ

ಸುಪ್ತ್ವಾ ಯುಗಸಹಸ್ರಂ ತು ದೇವದೇವೋ ಜಗತ್ಪತಿಃ ।
ಪುನರ್ವಿಬುದ್ಧಃ ಕುರುತೇ ಸೃಷ್ಟಿಂ ಪ್ರಾಗ್ವತ್ಪಿತಾಮಹಃ　　॥ ೧೪ ॥

ಸೃಷ್ಟಿಂ ಕರೋತಿ ಧರ್ಮಜ್ಞ ಕಲ್ಪೇಕಲ್ಪೇ ಪುನಃ ಪುನಃ ।
ಪಿತಾಮಹಸ್ಯ ರಾತ್ರ್ಯಂತೇ ತಸ್ಮಾದ್ಧಿ ಸೃಜತಿ ಪ್ರಜಾಃ　　॥ ೧೫ ॥

ಜಂತೂನಾಂ ಜನನಾದ್ರಾಜರ್ಜನ ಇತ್ಯಭಿಧೀಯತೇ　　॥ ೧೬ ॥

ಏತಾವದುಕ್ತಂ ತವ ಭೂಮಿಪಾಲ ।
ಕಲ್ಪೇ ಗತೇ ಯದ್ಭವತೀಹ ಲೋಕೇ ।
ಅತಃ ಪರಂ ಸರ್ವಯದುಪ್ರಧಾನ
ವದಸ್ವ ಕಿಂ ತೇ ಕಥಯಾಮಿ ರಾಜನ್　　॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಕಲ್ಪಾಂತರವರ್ಣನೋ ನಾಮ
ಷಟ್ಸಪ್ತತಿತಮೋಽಧ್ಯಾಯಃ

---

ಮಾಡಿದ ಬಳಿಕ ಎಚ್ಚರ ಹೊಂದುತ್ತಾನೆ ಆಗ ಬ್ರಹ್ಮನು ಪೂರ್ವದಲ್ಲಿದ್ದಂತೆ ಜಗತ್ತನ್ನು ಸೃಷ್ಟಿಮಾಡುತ್ತಾನೆ

೧೫-೧೬ ಎಲೈ ಧರ್ಮಜ್ಞನಾದ ವಜ್ರಭೂಪತಿಯೇ! ಇದೇ ರೀತಿಯಾಗಿ ಕಲ್ಪಕಲ್ಪ (ಪ್ರಳಯಕಾಲ) ದಲ್ಲೂ ಪುನಃ ಪುನಃ ಸೃಷ್ಟಿಕಾರ್ಯವು ನಡೆಯುತ್ತಲೇ ಇರುವುದು ಪಿತಾಮಹನ (ಬ್ರಹ್ಮನ) ರಾತ್ರಿಯು ಕಳದು ಬೆಳಗಾಗುವ ಸಮಯದಲ್ಲಿ ಪ್ರಜಗಳನ್ನು ಮಹಾಪ್ರಭುವು ಬ್ರಹ್ಮನಿಂದಲೇ ಸೃಷ್ಟಿಮಾಡಿಸುತ್ತಾನೆ ಎಲೈ ರಾಜರಾಜೋತ್ತಮನೇ! ಕೇಳು ಜಂತುಗಳ ಜನನ ಕಾರಣದಿಂದ "ಜನ" ಎಂಬ ಪದವು ನಿಷ್ಪತ್ತಿಯಾಗಿ ಜನರೆಂದು ಹೆಸರಾಗಿದ

೧೭ ಎಲೈ ವಜ್ರರಾಜೇಂದ್ರನೇ! ಲೋಕದಲ್ಲಿ ಕಲ್ಪ ಸಮಯವುಂಟಾದಾಗ ಏನಾಗುವುದೆಂಬುದನ್ನು ನಿನ್ನೊಡನೆ ವಿಸ್ತಾರವಾಗಿ ಹೇಳಿದ್ದೇನೆ ಇನ್ನು ಮುಂದ ಏನು ಕೇಳಬೇಕೆಂದಿದ್ದೀಯೋ, ಕೇಳು, ಹೇಳುತ್ತೇನೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಕಲ್ಪಾಂತ್ರವರ್ಣನೆಯೆಂಬ ಹೆಸರಿನ
ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು

ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತಸಪ್ತತಿತಮೋಽಧ್ಯಾಯಃ ॥



॥ ವಜ್ರ ಉವಾಚ ॥

ಮಹಾಕಲ್ಪಕ್ಷಯೇ ಬ್ರಹ್ಮನ್ಸಮವಸ್ಥಾಂ ವದಸ್ವ ಮೇ ।
ಭವಾಂಜ್ಞಾನನಿಧಿಃ ಖ್ಯಾತೋ ಯಥಾ ಬ್ರಹ್ಮಾ ಪಿತಾಮಹಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪೂರ್ಣೇ ಸಂವತ್ಸರಶತೇ ಸಂಹೃತ್ಯ ಸಕಲಂ ಜಗತ್ ।
ಶೇತೇ ಬ್ರಹ್ಮಾ ಮಹಾರಾಜ ಪ್ರಾಗ್ವದೇಕಾರ್ಣವೇ ತದಾ ॥ ೨ ॥

---

### ಎಪ್ಪತ್ತೇಳನೆಯ ಅಧ್ಯಾಯವು

೧ ವಜ್ರನರಪತಿಯು ಪುನಃ ಪ್ರಶ್ನಿಸುತ್ತಾನೆ — ಎಲೈ ಬ್ರಾಹ್ಮಣ ಶ್ರೇಷ್ಠನೇ! ಕಲ್ಪಾಂತ ವೃತ್ತಾಂತವಂ ತಿಳಿದೆನು ಇನ್ನು ಮಹಾ ಕಲ್ಪವೆಂಬುದು ಕಳೆದಾಗ ಪ್ರಪಂಚ ಸ್ಥಿತಿಯು ಏನಾಗುವುದೆಂಬುದನ್ನೂ ಪ್ರೀತಿಯಿಟ್ಟು ತಿಳಿಸು ನೀನು ಜ್ಞಾನಗಳ ನಿಧಿಯಾಗಿದ್ದೀಯೆ, ಪಿತಾಮಹನೆನಿಸಿದ ಬ್ರಹ್ಮನು ಹೇಗೋ ನೀನೂ ಹಾಗೆಯೇ ಮಹಾತ್ಮನು.

೨ ಮಾರ್ಕಂಡೇಯನು ಹೇಳುವನು :— ಬ್ರಹ್ಮನಿಗೆ ಒಂದುನೂರು ವರ್ಷ ಆಯುಸ್ಸು ಕಳೆದೊಡನೆ ಸಕಲ ಜಗತ್ತನ್ನೂ ನಾಶಗೊಳಿಸಿ ಪೂರ್ವದಂತೆ ಏಕಾರ್ಣವ ರೂಪವಾಗಿ ಕಂಗೊಳಿಸುವ ಪ್ರಳಯಜಲದ ಮಧ್ಯದಲ್ಲಿ ಮಲಗಿಬಿಡುತ್ತಾನೆ

**ಸನ್ಯಸ್ಯ ದೇಹಂ ಯೋಗೇನ ಪುರುಷಂ ಪ್ರತಿಪದ್ಯತೇ ।**
**ಮೋಕ್ಷಸ್ಥಾನಮನುಪ್ರಾಪ್ತೇ ದೇವದೇವೇ ಪಿತಾಮಹೇ ॥ ೩ ॥**

**ಯೇ ಗತಾ ಬ್ರಹ್ಮಣಃ ಸ್ಥಾನಂ ಮುಚ್ಯಂತೇ ಸರ್ವ ಏವ ತೇ ।**
**ಅಂಡಸ್ಯಾಭ್ಯಂತರಂ ಸರ್ವಂ ತದಾಂಽಭೋಭಿಃ ಪ್ರಪೂರ್ಯತೇ ॥ ೪ ॥**

**ಶರೀರಧಾರಿಣಸ್ಸರ್ವೇ ತದಾ ನಶ್ಯಂತಿ ಪಾರ್ಥಿವ ।**
**ಅಂತರ್ಗತೇನ ತೋಯೇನ ಭಿನ್ನಮಂಡಂ ಜಗತ್ಪತೇ ॥ ೫ ॥**

**ಪೂರ್ಣೇ ಬ್ರಹ್ಮಾಯುಷಿ ತದಾ ಬಾಹ್ಯಸ್ಥೇಽಂಭಸಿ ಲೀಯತೇ ।**
**ಏವಂ ಸಾ ಜಗದಾಧಾರಾ ಧರಾ ತೋಯೇ ಪ್ರಲೀಯತೇ ॥ ೬ ॥**

**ಜ್ಯೋತಿಷ್ಯಾಪಃ ಪ್ರಲೀಯಂತೇ ಜ್ಯೋತಿರ್ವಾಯೌ ಪ್ರಲೀಯತೇ ।**
**ಖೇ ವಾಯುಃ ಪ್ರಲಯಂ ಯಾತಿ ಮನಸ್ಯಾಕಾಶಮೇವ ಚ ॥ ೭ ॥**

---

೩-೪ ಆ ರೀತಿ ಮುಗಿಯುವಾಗ ಬ್ರಹ್ಮನು ತನ್ನ ದೇಹವನ್ನು ಯೋಗದಿಂದ ತ್ಯಾಗಮಾಡಿ ಪರಮಪುರುಷನಾದ ಭಗವಂತನಲ್ಲಿ ಐಕ್ಯವಾಗಿ ಮೋಕ್ಷವನ್ನು ಹೊಂದುತ್ತಾನೆ. ಈ ರೀತಿ ಬ್ರಹ್ಮನು ಯಾವಾಗ ಮೋಕ್ಷವನ್ನು ಹೊಂದುವನೋ, ಆಗ ಬ್ರಹ್ಮಲೋಕದಲ್ಲಿರುವ ಸಕಲರೂ ಮುಕ್ತರಾಗುತ್ತಾರೆ. ಆ ಸಮಯದಲ್ಲಿ ಆ ಬ್ರಹ್ಮನ ಅಂಡದ ಒಳಭಾಗವೆಲ್ಲವೂ ನೀರಿನಿಂದ ಮುಳುಗಿಹೋಗುತ್ತದೆ.

೫-೬ ಶರೀರವನ್ನು ಧರಿಸಿದ್ದ ಸಕಲರೂ ಆಗ ಮಡಿದುಹೋಗುತ್ತಾರೆ. ಅವರೆಲ್ಲರೂ ನೀರಿನಲ್ಲಿ ಮುಳುಗಿದ ಬಳಿಕ ಆ ಅಂತರ್ಗತ ಜಲರಾಶಿಯಿಂದ ಬ್ರಹ್ಮಾಂಡವು ಒಡೆದು ಚೂರುಚೂರಾಗಿ ಹೋಗುತ್ತದೆ. ಬ್ರಹ್ಮನಿಗೆ ನೂರು ವರ್ಷ ತುಂಬಿದ ಆ ಸಮಯದಲ್ಲಿ ಹೊರಗಿನ ಪ್ರಪಂಚವೆಲ್ಲವೂ ನೀರಿನಲ್ಲಿ ಅಡಗಿಹೋಗುತ್ತದೆ. ಹೀಗೆ, ಜಗದಾಧಾರಳಾದ ಭೂದೇವಿಯೂ ಸಹ ನೀರಿನಲ್ಲಿ ಮುಳುಗಿಹೋಗುತ್ತಾಳೆ.

೭-೧೧ ಆಗ ನೀರು, ಬೆಂಕಿಯಲ್ಲಿ ಅಡಗಿಕೊಳ್ಳುತ್ತದೆ. ಅಗ್ನಿಯು, ಗಾಳಿಯಲ್ಲಿ ಸೇರಿಹೋಗುತ್ತದೆ. ಗಾಳಿಯು ಆಕಾಶದಲ್ಲಿ ಪ್ರಳಯವಾಗುತ್ತದೆ. ಆಕಾಶವು ಮನಸ್ಸಿನಲ್ಲಿಯೂ, ಮನಸ್ಸು ಬುದ್ಧಿಯಲ್ಲಿಯೂ, ಬುದ್ಧಿಯು ಆತ್ಮನಲ್ಲಿಯೂ, ಆತ್ಮನು ಅವ್ಯಕ್ತದಲ್ಲಿಯೂ, ಅವ್ಯಕ್ತವು ಪರಮಪುರುಷನಲ್ಲಿಯೂ ಸೇರಿಹೋಗುತ್ತವೆ. ನಾನು

**ಮನಃ ಪ್ರಲೀಯತೇ ಬುದ್ಧೌ ಬುದ್ಧಿಶ್ಚಾತ್ಮನಿ ಲೀಯತೇ ।**
**ಅವ್ಯಕ್ತೇ ಲೀಯತೇ ಚಾತ್ಮಾ ಅವ್ಯಕ್ತಃ ಪುರುಷೇ ಪರೇ ॥ ೮ ॥**

**ಅನಂತಾನಿ ತಥೋಕ್ತಾನಿ ಯಾನ್ಯಂಡಾನಿ ಮಯಾ ಪುರಾ ।**
**ಸರ್ವಾಣಿ ತಾನಿ ಸಂಹೃತ್ಯ ಸಮಕಾಲಂ ಜಗತ್ಪತಿಃ ॥ ೯ ॥**

**ಪ್ರಕೃತೌ ತಿಷ್ಠತಿ ತದಾ ಸಾ ರಾತ್ರಿಸ್ತಸ್ಯ ಕೀರ್ತಿತಾ ।**
**ಬ್ರಾಹ್ಮೇ ಸಮಾಶತೇ ಪೂರ್ಣೇ ಪುನರೇವ ಜಗತ್ಪತಿಃ ॥ ೧೦ ॥**

**(ಸರ್ವಂ ವಿಧತ್ತೇ ಧರ್ಮಜ್ಞ ಯಥಾಪೂರ್ವಮುದಾಹೃತಂ ।**
**ಅವ್ಯಕ್ತಾದಿಕ್ರಮೇಣಾಥ ವಿಧಾಯಾಂಡಂ ಮಹೇಶ್ವರಃ ॥ ೧೧ ॥**

---

ಈ ಗ್ರಂಥದ ಮೊದಲಿನಲ್ಲಿ ಅನಂತನಾದ ಅಂಡಗಳಿವೆಯೆಂದು ಹೇಳಿರುವೆನಷ್ಟೆ ? ಆ ಸಕಲಾಂಡಗಳನ್ನೂ ಜಗತ್ಪತಿಯಾದ ದೇವದೇವನು ಸಮಕಾಲದಲ್ಲಿ ನಾಶಮಾಡಿ ಪ್ರಕೃತಿಯಲ್ಲಿ ತಾನು ಲೀನ (ಅಡಕ) ನಾಗಿ ಹೋಗುತ್ತಾನೆ ಇದನ್ನು ವೇದದಲ್ಲಿ ಕೆಳಗ ಒರದ ಮಂತ್ರದಿಂದ ವರ್ಣಿಸಿದ್ದಾರೆ

ಯೋವೇದಾದೌ ಸ್ವರಃಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ ।
ತಸ್ಯಪ್ರಕೃತಿಲೀನಸ್ಯ ಯಃಪರಸ್ಸ ಮಹೇಶ್ವರಃ ॥

ಪರಮಾತ್ಮನು ಪ್ರಣವ (ಓಂ) ರೂಪನಾಗಿದ್ದಾನೆ ಈ ಪ್ರಣವವು ವೇದಾದಿಯಲ್ಲಿ ಅಕಾರ-ಉಕಾರ-ಮಕಾರ ರೂಪವಾಗಿ ಹೇಳಲ್ಪಟ್ಟು ವೇದಾಂತದಲ್ಲಿ ಉಪಾಸ್ಯತವಾಗಿದೆ ಇದನ್ನೇ ಪ್ರಕೃತಿಯೆಂದು ತಿಳಿಯಬೇಕು ಈ ಪ್ರಕೃತಿಯಲ್ಲಿ ಪರಮೇಶ್ವರ (ಪರಮಾತ್ಮ) ನು ಸರ್ವದಾ ಅಡಗಿರುತ್ತಾನೆ ಲಿಂಗ, ಪಾಣಬಟ್ಟಲುಗಳು ಶಿವ ದೇವಾಲಯದಲ್ಲಿರುವ ರಹಸ್ಯವೇ ಇದು

ಆಗ ಪರಮಪುರುಷನಿಗೆ ರಾತ್ರಿಕಾಲವೆಂದು ತಿಳಿಯಿರಿ ಬ್ರಹ್ಮನಿಗೆ ನೂರು ವರ್ಷ ತುಂಬಿದ ಬಳಿಕ ಜಗತ್ಪತಿಯಾದ ಪರಮೇಶ್ವರನು ಪೂರ್ವದಲ್ಲಿದ್ದಹಾಗೆಸಿರುವಂತೆ ಯಥಾಪೂರ್ವಕವಾಗಿ ಅವ್ಯಕ್ತಾದಿಯಾಗಿ ಉತ್ತರೋತ್ತರ ವೃದ್ಧಿಕ್ರಮದಿಂದ ಅಂಡಗಳನ್ನು ನಿರ್ಮಾಣ ಮಾಡುತ್ತಾನೆ

**ಅಂಡೇ ಶರೀರೇ ಭವತಿ ಸ್ವಯಂಭೂರಮೃತದ್ಯುತಿಃ ।)**
**ಸ್ವಯಂ ಸ ಏವ ಧರ್ಮಜ್ಞ ಬ್ರಹ್ಮಾ ಶುಭಚತುರ್ಮುಖಃ　　॥ ೧೨ ॥**

**ಸರ್ವೇಷ್ವಂಡೇಷು ಧರ್ಮಜ್ಞ ಸ್ಸಮಕಾಲಂ ಜಗತ್ಪತಿಃ ।**
**ಸ್ವಯಂ ಶರೀರೇ ಭವತಿ ಪ್ರಾಕಾಮ್ಯಾನ್ಮನುಜೇಶ್ವರ　　॥ ೧೩ ॥**

**ಬ್ರಹ್ಮಾಯುಷೋಂತೇ ಜಗತಾಮವಸ್ಥಾ**
**ಮಯೇರಿತಾ ತೇ ಯದುವೃಂದನಾಥ ।**
**ಅತಃ ಪರಂ ಕಿಂ ಕಥಯಾಮಿ ತುಭ್ಯಂ**
**ತನ್ಮೇ ವದಸ್ವಾಯತಲೋಹಿತಾಕ್ಷ　　॥ ೧೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಮಹಾಕಲ್ಪವರ್ಣನೋ ನಾಮ ಸಪ್ತಸಪ್ತತಿತಮೋಽಧ್ಯಾಯಃ**

---

೧೨-೧೩　ಆ ಅಂಡದಲ್ಲಿ ಬ್ರಹ್ಮನ ಶರೀರವು ತಾನಾಗಿ ಉತ್ಪತ್ತಿಯಾಗುತ್ತದೆ ಅಮೃತಮಯ ಕಾಂತಿಯಿಂದ ವಿರಾಜಮಾನನಾದ ನಾಲ್ಕು ಮುಖಗಳುಳ್ಳ ಬ್ರಹ್ಮನು ತಾನೇ ಆ ಅಂಡದಲ್ಲಿ ಉದ್ಭವವಾಗುತ್ತಾನ　ಆ ಜಗತ್ಪತಿಯು ಸಮಕಾಲದಲ್ಲಿ ಸಕಲ ಅಂಡಗಳನ್ನೂ ತನ್ನ ಶರೀರದಲ್ಲೇ ಇಚ್ಛಾಮಾತ್ರದಿಂದಲೇ ನಿರ್ಮಿಸುತ್ತಾನೆ ಕೇಳಯ್ಯ, ಮನುಜೇಶ್ವರ

೧೪　ಎಲೈ ವಜ್ರರಾಜನೇ! ಬ್ರಹ್ಮನ ಆಯುಸ್ಸು ಮುಗಿದಾಗ ಲೋಕದ ಅವಸ್ಥೆ ಎಂತಿರುವುದೆಂದು ಹೇಳಿಯಾಯಿತು　ಇನ್ನು ಮುಂದೆ ಇನ್ನೇನು ಕೇಳ ಬೇಕೋ ಕೇಳಯ್ಯಾ, ಮಹಾನುಭಾವ! ಹೀಗೆಂದು ಮಾರ್ಕಂಡೇಯರೆಂದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಮಹಾ ಕಲ್ಪವರ್ಣನೆಯೆಂಬ ಹೆಸರಿನ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು

---

ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಸಪ್ತತಿತಮೋಽಧ್ಯಾಯಃ ॥



॥ ವಜ್ರ ಉವಾಚ ॥

**ಸಪ್ತಮಸ್ತೇ ಮಹಾಭಾಗ ಜಾತಸ್ಯ ದಿವಸಸ್ತ್ವಯಂ ।**
**ವರ್ತತೇ ಬ್ರಹ್ಮಣೋ ಬ್ರಹ್ಮಂಸ್ತತ್ರ ಮನ್ವಂತರಕ್ಷಯೇ ॥ ೧ ॥**

**ಕಥಂ ಕಾಲಸ್ತ್ವಯಾ ನೀತಃ ಪುರಾ ಕಲ್ಪಕ್ಷಯೇ ತದಾ ।**
**ಏತನ್ಮೇ ಸಂಶಯಂ ಛಿಂಧಿ ತ್ವಂ ಸಮಃ ಪರಮೇಷ್ಠಿನಃ ॥ ೨ ॥**

॥ ಮಾರ್ಕಂಡೇಯ ಉವಾಚ ॥

**ನೌಗತೇನ ಮಯಾ ನೀತಃ ಕಾಲೋ ಮನ್ವಂತರಕ್ಷಯೇ ।**
**ಭೂಯೋಭೂಯೋ ಮಹಾಭಾಗ ದೇವದೇವಪ್ರಸಾದತಃ ॥ ೩ ॥**

---

### ಎಪ್ಪತ್ತೆಂಟನೆಯ ಅಧ್ಯಾಯವು.

೧ ವಜ್ರರಾಜನು ಪುನಃ ಪ್ರಶ್ನೆಮಾಡುತ್ತಾನೆ — ಎಲೈ ಮಾರ್ಕಂಡೇಯ ಮಹಾಮುನಿಯೇ ! ಈಗ ಮನ್ವಂತರವು ಕಳೆದುಹೋದ ಮೇಲೆ ಈಗ ನಡೆಯುತ್ತಿರುವುದು, ನೀನು (ಬ್ರಹ್ಮನು) ಹುಟ್ಟಿದ ಏಳುದಿನಗಳಾಗಿದಯಷ್ಟೆ ?

೨ ಭಗವನ್, ಮಾರ್ಕಂಡೇಯ ! ನೀನೂ ಬ್ರಹ್ಮನೂ ಸಮಾನರು ಪೂರ್ವದಲ್ಲಿ ಕಲ್ಪಕ್ಷಯವಾದಾಗ ನೀನು (ಬ್ರಹ್ಮನು) ಹೇಗೆ ಕಾಲವನ್ನು ಕಳೆದೆಯೆಂದು ನನಗೆ ಸಂಶಯ ಬಂದಿದೆ ಆ ಸಂಶಯವನ್ನು ಪರಿಹರಿಸ್ಸು ! ಚಿರಂಜೀವಿ ಮಹರ್ಷಿಯೆ !!!

೩. ಮಾರ್ಕಂಡೇಯನು ಹೇಳುತ್ತಾನೆ --ಮನ್ವಂತರ ಕಳೆದುಹೋದ ಕಾಲದಲ್ಲಿ ದೇವದೇವೋತ್ತಮನಾದ ಮಹಾ ವಿಷ್ಣುವಿನ ಪ್ರಸಾದದಿಂದ ನಾನು (ಹಿಂದಿನ ಅಧ್ಯಾಯದಲ್ಲಿ ವಿವರಿಸಿರುವ ಮೇರೆ) ಹಡಗಿನ ಮೇಲೆ ಕುಳಿತು ಕಾಲಕಳೆದೆನು

ಕಲ್ಪಕ್ಷಯಮನುಪ್ರಾಪ್ಯ ದಾಹಕಾಲ ಉಪಸ್ಥಿತೇ ।
ಜನಲೋಕಗತೇನಾಥ ಕಾಲೋ ನೀತಸ್ಸ ವೈ ಮಯಾ ॥ ೪ ॥

ದಾಹಕಾಲೇ ತದಾ ವೃತ್ತೇ ಪ್ರಲಯಾಂಭೋಧಿಸಂಪ್ಲವೇ ।
ಜನಲೋಕಾದಹಂ ಭ್ರಷ್ಟಃ ಪತಿತೋ ಧರಣೀತಲೇ ॥ ೫ ॥

ನೂನಂ ತಸ್ಯೈವ ದೇವಸ್ಯ ಸಾ ಮಾಯಾ ಭೀಮವಿಕ್ರಮಾ ।
ಏಕಾರ್ಣವೇ ಭೂಮಿತಲೇ ಪತಿತಸ್ಯಾಪಿ ಮೇ ನೃಪ ॥ ೬ ॥

ಜೀವಿತಂ ನ ಪರಿಭ್ರಷ್ಟಂ ನೂನಂ ತಸ್ಯ ಪ್ರಸಾದತಃ ।
ತದಾಹಂ ನಷ್ಟವಿಜ್ಞಾನಃ ಪತಿತೋಽಂಭಸಿ ದಾರುಣೇ ॥ ೭ ॥

ಊಹ್ಯಮಾನೋಂಬುಕಲ್ಲೋಲೈರಿತಶ್ಚೇತಶ್ಚ ಯಾದವ ।
ಅಪಶ್ಯಮಾನೋ ಜಗತೀಂ ಸಶೈಲವನಕಾನನಾಂ ॥ ೮ ॥

ನಿರ್ವೇದಂ ಜೀವಿತೇ ದೀರ್ಘೇ ತದಾ ಪ್ರಾಪ್ತೋಽಸ್ಮಿ ಶತ್ರುಹನ್ ।
ಸೋಽಹಮಾರ್ತೋಽಥ ನಿರ್ವಿಣ್ಣಸ್ತಸ್ಮಿಂಸ್ತೂದಕಸಂಪ್ಲವೇ ॥ ೯ ॥

---

೪ ಕಲ್ಪಕ್ಷಯವನ್ನು ಹೊಂದಿ ಪ್ರಪಂಚವು ಸುಟ್ಟುಹೋದ ಕಾಲವಲ್ಲಿ ನಾನು ಜನಲೋಕಕ್ಕೆ ಹೋಗಿ ಅಲ್ಲಿ ಕಾಲವನ್ನು ಕಳೆದನು

೫ ಪ್ರಳಯ ಸಮುದ್ರವು ಸುಟ್ಟುಹೋದ ಆ ಕಾಲದಲ್ಲಿ ನಾನು ಜನಲೋಕದಿಂದ ಭೂಲೋಕಕ್ಕೆ ಜಾರಿಬಿದ್ದನು

೬-೧೧ ಭಯಂಕರವಾದ ಪರಾಕ್ರಮವುಳ್ಳ ಆ ಮಾಯೆಯು ನಾನು ಭೂಮಿಯ ಮೇಲೆ ಬಿದ್ದಾಗ್ಯೂ ನನ್ನ ಪ್ರಾಣಗಳನ್ನು ಕಳೆಯಲಿಲ್ಲ ಹೀಗಾದುದು ಭಗವದನುಗ್ರಹವೆಂದೇ ತಿಳಿದುಕೊಂಡೆನು ಆಗ ನಾನು ಜ್ಞಾನವಿಲ್ಲದವನಾಗಿ ನೀರಿನೊಳಗ ಬಿದ್ದು ನೀರಿನ ಅಲೆಗಳಿಂದ ನೂಕಲ್ಪಡುತ್ತಾ, ಬೆಟ್ಟ ಕಾಡುಗಳಿಂದ ಕೂಡಿದ ಭೂಮಿಯನ್ನು ಎಲ್ಲೆಲ್ಲೂ ಕಾಣದೆ, ಜೀವಿತದಲ್ಲಿ ವಿರಕ್ತಿಯನ್ನು ಹೊಂದಿದವನಾಗಿ ಬಹುಕಾಲ ಅಲ್ಲಿಯೇ ಬಿದ್ದಿದ್ದೆನು ಆಗ ನಾನು, ಆರ್ತನಾಗಿ ವಿರಕ್ತನಾಗಿ ಆ ಉದಕ ಪ್ಲವದಲ್ಲಿ ತೇಲುತ್ತಿದ್ದಾಗ ನೀರಿನ ಮಧ್ಯದಲ್ಲಿ ಒಂದು ಆಲದ ಮರವನ್ನು ಕಂಡೆನು ಅದು

**ಪಶ್ಯಾಮಿ ಜಲಮಧ್ಯಸ್ಥಂ ವಿಪುಲೇ ವಟಪಾದಪಂ ।**
**ಮಹಾಶಾಖಂ ಘನಚ್ಛಾಯಂ ಸ್ನಿಗ್ಧಪಲ್ಲವಶೋಭಿತಂ ॥ ೧೦ ॥**

**ತಮಹಂ ಬಾಹುಭಿರ್ಗತ್ವಾ ತಸ್ಮಿನ್ನ್ಯಗ್ರೋಧಪಾದಪೇ ।**
**(ಶಾಖಾಸಕ್ತಂ ತು ಪಶ್ಯಾಮಿ ಸವಿತಾರಂ ತಥೋಜ್ಜ್ವಲಂ ॥ ೧೧ ॥**

**ದಿವ್ಯಂ ಪಶ್ಯಾಮಿ ಪರ್ಯಂಕಂ ಸರ್ವರತ್ನೋಪಶೋಭಿತಂ ।)**
**ಪರ್ಯಂಕೇ ತತ್ರ ಪಶ್ಯಾಮಿ ಬಾಲಂ ಕಮಲಲೋಚನಂ ॥ ೧೨ ॥**

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಂ ।**
**ಪದ್ಮಪತ್ರಾಭಚರಣಂ ತದಾಕಾರಕರಂ ತಥಾ ॥ ೧೩ ॥**

**ಅಲಂಕೃತಂ ಚಾಭರಣೈಃ ಶಿಖಂಡೈಕವಿಭೂಷಿತಂ ।**
**ಏಕಂ ಸಹಸ್ರಮಧ್ಯಸ್ಥಂ ಭ್ರಾಜಮಾನಮಿವ ಶ್ರಿಯಾ ॥ ೧೪ ॥**

---

ದೊಡ್ಡದೊಡ್ಡ ಕೊಂಬೆಗಳಿಂದ ತುಂಬಿತ್ತು ಅದರ ನೆರಳು ಲೋಕದಲ್ಲೆಲ್ಲಾ ಹಬ್ಬಿತ್ತು ಮನೋಹರವಾದ ಚಿಗುರುಗಳಿಂದ ಆ ಮರವು ರಮ್ಯವಾಗಿತ್ತು ನಾನು ತೋಳುಗಳಿಂದೀಜುತ್ತಾ ಆ ಆಲದ ಮರದ ಬಳಿಗೆ ಹೋದೆನು ಅಲ್ಲಿ ಸೂರ್ಯನು ಒಂದು ಕೊಂಬೆಯ ಮೇಲೆ ಕಾಣಿಸಿದನು

೧೨ ಅಲ್ಲೊಂದು ದೊಡ್ಡ ಕೊಂಬೆಯ ಮೇಲೆ ಒಂದು ಮಂಚವಿತ್ತು. ಅದು ಸಕಲ ರತ್ನಗಳಿಂದ ಕೆತ್ತಲ್ಪಟ್ಟಿತ್ತು ಆ ದಿವ್ಯ ಮಂಚದ ಮೇಲೆ ಕಮಲದಂತೆ ಕಣ್ಣುಳ್ಳ ಒಂದು ಮಗುವು ಕಾಣಿಸಿತು

೧೩-೧೬ ಆ ಮಗುವೇ ವಟಪತ್ರಶಾಯೀ ಭಗವಾನ್ ಬಾಲಕೃಷ್ಣನಾಗಿದ್ದನು. ಆ ಅಚ್ಯುತನು ಅಗಸೇಹೂವಿನಂತೆ ಪ್ರಕಾಶಿಸುತ್ತಾ ಪೀತವರ್ಣದ ವಸ್ತ್ರವನ್ನು ಧರಿಸಿದ್ದನು ಕಮಲದಂತಹ ಕೈಗಳೂ, ಕಮಲದಂತಹ ಕಾಲುಗಳೂ, ತೊಟ್ಟಿರುವ ಆಭರಣಕಾಂತಿಗಳೂ ಆ ಮಗುವಿನ ಕಾಂತಿಯನ್ನು ಇಮ್ಮಡಿ ಮಾಡುತ್ತಿದ್ದವು ಸಹಸ್ರಕಮಲಮಧ್ಯದಲ್ಲಿರುವ ಮಹಾಲಕ್ಷ್ಮಿಯಂತೆ ಆ ಬಾಲಕೃಷ್ಣನು ಪ್ರಕಾಶಿಸುತ್ತಿದ್ದನು.

ಸ ಮಾಂ ದೃಷ್ಟ್ವಾ ತದಾ ಬಾಲಃ ಸ್ಮಿತಪೂರ್ವಮುವಾಚ ಹ ।
ಯದಿ ಶ್ರಾಂತೋಽಸಿ ಧರ್ಮಜ್ಞ ವಿಗ್ರಹಂ ವದನೇನ ಮೇ ॥ ೧೫ ॥

ಪ್ರವಿಶ್ಯ ವಿಶ್ರಮಸ್ವಾದ್ಯ ಯಾವದ್ವಾ ರುಚಿತಂ ತವ ।
ಏವಮುಕ್ತಸ್ಯ ಸಂಜಾತಾ ವ್ರೀಡಾ ಯದುಕುಲೋದ್ವಹ ॥ ೧೬ ॥

ತತೋಽಹಮವಶಸ್ತಸ್ಯ ಪ್ರವಿಷ್ಟೋ ನೃಪ ವಿಗ್ರಹಂ ।
ಜಗತೀಂ ತತ್ರ ಪಶ್ಯಾಮಿ ಸಶೈಲವನಕಾನನಾಂ ॥ ೧೭ ॥

ಯಥಾಪೂರ್ವಂ ಮಹಾಭಾಗ ನಗರಾಕಾರಶಾಲಿನೀಂ ।
ದೇವದೈತ್ಯೋರಗಾಕೀರ್ಣಾಂ ಸಮುದ್ರವರಭೂಷಣಾಂ ॥ ೧೮ ॥

ನೃಪರಾಷ್ಟ್ರಸಮಾಕೀರ್ಣಾಂ ವಣಿಗ್ಭಿರುಪಶೋಭಿತಾಂ ।
ದ್ವಿಜಾಧ್ಯಯನಸಂಘುಷ್ಟಾಂ ವರ್ಣಾಶ್ರಮಸಮಾಕುಲಾಂ ॥ ೧೯ ॥

ಆ ಮಗುವು ನಗುಮುಖದಿಂದ ನನ್ನನ್ನು ನೋಡುತ್ತಾ, ಎಲೈ ಧರ್ಮಜ್ಞನೇ ! ನೀನು ಬಹಳ ಬಳಲಿರುವಂತೆ ಕಾಣಿಸುತಲಿರುವಿ ಹಾಗಿದ್ದರೆ ನನ್ನ ಬಾಯಿಯೊಳಗಿಂದ ನನ್ನ ದೇಹವನ್ನು ಪ್ರವೇಶಿಸಿ ನಿನಗೆಷ್ಟುಕಾಲ ಬೇಕೋ ಅಲ್ಲಿಯತನಕ ವಿಶ್ರಮಿಸಿಕೋ, ಹೀಗೆಂದು ಆ ಮಗುವು ಹೇಳಿದ್ದನ್ನು ಕೇಳಿ ನನಗೆ ಬಹಳ ನಾಚಿಕೆಯಾಯಿತಯ್ಯ ! ಯದುಕುಲತಿಲಕ ವಜ್ರರಾಜ !

೧೭-೨೧ ವಜ್ರಭೂಪನೇ ! ಇನ್ನೂ ಕೇಳು ನಾನು ಅಧೀನತಪ್ಪಿ ಆ ಮಗುವಿನ ದೇಹದೊಳಕ್ಕೆ ಪ್ರವೇಶಿಸಿಬಿಟ್ಟೆನು ಆ ಮಗುವಿನ ಹೊಟ್ಟೆಯಲ್ಲಿ ಪ್ರಪಂಚವೆಲ್ಲವೂ ಗಿರಿ, ನದಿ, ಕಾನನಗಳಿಂದ ಕೂಡಿ ಕಾಣಿಸಿತು ಯಥಾಕ್ರಮವಾಗಿ ಅಲ್ಲಿ ಮಹಾ ಮಹಾ ನಗರಗಳನ್ನು ನೋಡಿದನು ದೇವತೆಗಳೂ, ದೈತ್ಯರೂ, ನಾಗರೂ, ಸಮುದ್ರಗಳೂ ಅಲ್ಲಿ ಕಾಣಿಸಿದುವು ಅನೇಕ ರಾಜಧಾನಿಗಳು ಕಂಡುಬಂದುವು ಅಲ್ಲಿ ದೊಡ್ಡದೊಡ್ಡ ಅಂಗಡೀ ಬೀದಿಗಳೂ, ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರ ಅಗ್ರಹಾರಗಳೂ ಕಂಡುಬಂದುವು ವರ್ಣಾಶ್ರಮ ಧರ್ಮಗಳನ್ನು ಕಾಪಾಡಿಕೊಂಡಿದ್ದ ಮಹನೀಯರನೇಕರನ್ನಲ್ಲಿ ನೋಡಿದನು ಹೊಳೆಗಳೂ, ಬೆಟ್ಟಗಳೂ, ಮರಗಳೂ,

ಸರಿತ್ಪರ್ವತವೃಕ್ಷಾಢ್ಯಾಂ ಯಜ್ಞೋತ್ಸವಸಮಾಕುಲಾಂ ।
ತಾಂ ದೃಷ್ಟ್ವಾ ಕೌತುಕಂ ಜಾತಂ ತಸ್ಯ ಬಾಲಸ್ಯ ಕರ್ಮಣಾ ॥ ೨೦ ॥

ದ್ರಷ್ಟುಮಿಚ್ಛಾಮಿ ತಸ್ಯಾಂತಂ ಭ್ರಮಮಾಣಸ್ತತಸ್ತತಃ ।
ಯದಾ ನಾಸಾದಯಾಮ್ಯತ್ರ ತಸ್ಯ ಬಾಲಸ್ಯ ಚೇಷ್ಟಿತಂ ॥ ೨೧ ॥

ಪೂರ್ಣೇ ಯುಗಸಹಸ್ರೇಽಪಿ ತಮೇವಾಹಂ ತದಾ ಶಿಶುಂ ।
ಸಂಪ್ರಾಪ್ತಃ ಶರಣಂ ರಾಜನ್ನಹಂ ಭಾವ್ಯರ್ಥಚೋದಿತಃ ॥ ೨೨ ॥

ತತೋಽಹಂ ವದನಾತ್ತಸ್ಯ ನಿರ್ಗತಶ್ಶಶಿಸನ್ನಿಭಾತ್ ।
ಯದಾ ತಸ್ಯೋದರೇಽಪಶ್ಯಂ ತ್ರೈಲೋಕ್ಯಂ ಸಚರಾಚರಂ ॥ ೨೩ ॥

ತಥಾ ಪಶ್ಯಾಮಿ ಸಕಲಂ ಬಹಿರ್ಭೂಮಿವಸತ್ತಮ ।
ತತೋಽಹಂ ಪತಿತಸ್ತಸ್ಯ ಪಾದಯೋಸ್ಸುಮಹಾತ್ಮನಃ ॥ ೨೪ ॥

---

ಯಜ್ಞ ಉತ್ಸವ ಇವುಗಳನ್ನೂ ಸಹ ನಾನು ಅಲ್ಲಿ ನೋಡಿದೆನು ಈ ರೀತಿ ಇದ್ದ ಭೂಲೋಕಲವನ್ನೂ ಆ ಮಗುವಿನ ಅದ್ಭುತ ಶಕ್ತಿಯನ್ನೂ ನಾನು ನೋಡಿ ಬೆರಗಾದೆನು ಆ ಮಗುವಿನ ದೇಹದ ತುದಿಮೊದಲನ್ನು ತಿಳಿಯಬೇಕೆಂದು ನಾನು ಅಲ್ಲೆಲ್ಲಾ ಬಹಳ ಸುತ್ತಾಡಿ ನೋಡಿದನು ನನಗ ಅದರ ಆದ್ಯಂತಗಳು ತಿಳಿಯಲೇ ಇಲ್ಲ

೨೨-೨೩ ಆ ಮಗುವಿನ ವಿಚಿತ್ರ ಚೇಷ್ಟೆಯನ್ನು ಅರಿಯಲಾರದ ಒಂದು ಸಾವಿರ ಯುಗಗಳ ಕಾಲ ಅಲ್ಲಿದ್ದು ಕೊನೆಗೆ ನಾನು ಅದೇ ಶಿಶುವನ್ನು ಮುಂದಿನ ಅರ್ಥದಿಂದ ಪ್ರೇರಿಸಲ್ಪಟ್ಟವನಾಗಿ ಶರಣುಹೊಂದಿದ ಬಳಿಕ ಆ ಮಗುವಿನ ಬಾಯಿಯಿಂದ ಹೊರಗೆ ಬಂದೆನು ಚಂದ್ರನಂತೆ ಪ್ರಕಾಶಮಾನವಾದ ಆ ಮಗುವಿನ ಬಾಯಿಯಿಂದೊಳಹೊಕ್ಕಾಗ ಆ ಮಗುವಿನ ಉದರದಲ್ಲಿ ಚರಾಚರಗಳಿಂದೊಡಗೂಡಿದ ಮೂರು ಲೋಕವನ್ನೂ ಕಂಡೆನು

೨೪ ಹಾಗೆಯೇ ಆ ಮಗುವಿನ ಹೊರಗೂ ಸಹ ಸಕಲ ಲೋಕಗಳನ್ನು ನೋಡಿದೆನು. ಆಗ ನಾನು ಏನೂ ತೋರದೆ ಮಹಾತ್ಮನಾದ ಆ ಬಾಲಕೃಷ್ಣನ ಪಾದಗಳಲ್ಲಿ ಬಿದ್ದುಬಿಟ್ಟೆನು.

**ತತಸ್ಸೋಽಂತರ್ಹಿತೋ ಬಾಲಸ್ಸಹ ತೇನೈವ ಶಾಖಿನಾ ।**
**ಏವಂ ಮಯಾ ತಸ್ಯ ನಿಶಾ ನರೇಂದ್ರ**
**ಸಂಪ್ರಾಪ್ಯ ಪುಣ್ಯಂ ಜಠರೇ ಹಿ ನೀತಾ ।**
**ಮಹಾಶರೀರಸ್ಯ ಮಹಾನುಭಾವ**
**ಮಹಾಪ್ರಮೇಯಸ್ಯ ಪಿತಾಮಹಸ್ಯ** ॥ ೨೫ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಬಾಲಪ್ರಭಾವ ಕಥನೋನಾಮ**
**ಅಷ್ಟಸಪ್ತತಿತಮೋಽಧ್ಯಾಯಃ**

---

---

೨೫ ಹೀಗೆ ನಾನು ಅಷ್ಟಬಿದ್ದು ಪುನಃ ಮೇಲೆದ್ದು ನೋಡಿದಾಗ ಆ ಬಾಲಕನು ಆ ಮಂಚವಿದ್ದ ಕೊಂಬೆ ಸಹಿತವಾಗಿ ಕಣ್ಣಿಗೆ ಕಾಣಿಸದೆ (ಅಂತರ್ಧಾನ) ಮರೆಯಾದನು ಎಲೈ ವಜ್ರರಾಜನೇ ! ಈ ರೀತಿಯಾಗಿ ನಾನು ಪುಣ್ಯವಶದಿಂದ ಬಾಲಮುಕುಂದನ ಹೊಟ್ಟೆಯಲ್ಲಿ ಬ್ರಹ್ಮನ ರಾತ್ರಿಯನ್ನು ಕಳೆದನು ಆ ಅಪ್ರಮೇಯನೂ, ಪಿತಾಮಹನೂ, ಮಹಾನುಭಾವನೂ, ಮಹಾಶರೀರಿಯೂ ಆದ ಮಹಾವಿಷ್ಣುವಿನ ಜಠರವಾಸವು ಪುಣ್ಯಾತ್ಮರಿಗೆ ಮಾತ್ರವೇ ದೊರೆಯುವುದು

ಇಲ್ಲಿಗೆ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಬಾಲಪ್ರಭಾವಕಥನವೆಂಬ ಹೆಸರಿನ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು



*

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನಾಶೀತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಕಸ್ತ್ವಸೌ ಬಾಲವೇಷೇಣ ಕಲ್ಪಾಂತೇಷು ಪುನಃ ಪುನಃ ।
ದೃಷ್ಟೋಽಪಿ ನ ತ್ವಯಾ ಜ್ಞಾತಸ್ತತ್ರ ಕೌತೂಹಲಂ ಮಹತ್ ॥ ೧ ॥

॥ ಮಾರ್ಕಂಡೇಯ ಉವಾಚ ॥

ಭೂಯೋಭೂಯಸ್ತ್ವಸೌ ದೃಷ್ಟೋ ಮಯಾ ದೇವೋ ಜಗತ್ಪತಿಃ ।
ಕಲ್ಪಕ್ಷಯೇ ನ ವಿಜ್ಞಾತಸ್ತನ್ಮಾಯಾಮೋಹಿತೇನ ವೈ ॥ ೨ ॥

ಕಲ್ಪಕ್ಷಯೇ ವ್ಯತೀತೇ ತು ತಂತು ದೇವಂ ಪಿತಾಮಹಾತ್ ।
ಅನಿರುದ್ಧಂ ವಿಜಾನಾಮಿ ಪಿತರಂ ತೇ ಜಗತ್ಪತಿಂ ॥ ೩ ॥

---

### ಎಪ್ಪತ್ತೊಂಭತ್ತನೆಯ ಅಧ್ಯಾಯವು

೧ ವಜ್ರರಾಜನು ಪುನಃ ಪ್ರಶ್ನೆಮಾಡುತ್ತಾನ — ಎಲೈ ಮಾರ್ಕಂಡೇಯ ಮಹಾಮುನಿಯೆ ! ಕಲ್ಪಾಂತಗಳಲ್ಲಿ ಪದೇ ಪದೇ ಬಾಲಕ ರೂಪದಿಂದ ಕಾಣಲ್ಪಡು ತ್ತಿದ್ದಾಗ್ಯೂ ನಿನ್ನ ಬುದ್ಧಿಗೇ ನಿಲುಕದಷ್ಟು ಮಹಿಮೆಯುಳ್ಳ ಆ ವ್ಯಕ್ತಿಯಾರು ? ನನಗ ಇದನ್ನು ತಿಳಿಯಬೇಕೆಂದು ಬಹಳ ಕುತೂಹಲನಾಗಿದೆ

೨-೩. ಮಾರ್ಕಂಡೇಯಋಷಿಯು ಹೇಳುತ್ತಾನೆ —ಜಗತ್ಪತಿಯಾದ ಮಹಾ ವಿಷ್ಣುವು ಪದೇ ಪದೇ ಕಲ್ಪಕ್ಷಯ ಕಾಲದಲ್ಲಿ ನನ್ನಿಂದ ನೋಡಲ್ಪಡುತ್ತಿದ್ದಾಗ್ಯೂ, ಆ ವೈಷ್ಣವೀಮಾಯೆಯಿಂದ ಮೋಹಿತನಾದ ನನ್ನಿಂದ ತಿಳಿಯಲ್ಪಡಲಾರದ ಹೋದನು. ಈ ರೀತಿ ಕಲ್ಪಕ್ಷಯ ಕಾಲವು ಕಳೆದುಹೋದ ಬಳಿಕ ಪಿತಾಮಹ (ಬ್ರಹ್ಮ) ನನ್ನು ಕುರಿತು ಈ ವಿಚಾರವನ್ನು ಪ್ರಶ್ನೆಮಾಡಲಾಗಿ ಆ ಮಹಾನುಭಾವನು ನಿನ್ನ ತಂದ ಯಾದ ಅನಿರುದ್ಧನೆಂದು ನನಗೆ ತಿಳಿಸಿದನು

॥ ವಜ್ರ ಉವಾಚ ॥

ಜ್ಞಾತವಾನಸಿ ತಂ ದೇವಂ ಕಥಂ ದೇವಾತ್ಪಿತಾಮಹಾತ್ ।
ದುರ್ವಿಜ್ಞೇಯಂ ಜಗದ್ಯೋನಿಂ ಸರ್ವಭೂತಭವೋದ್ಭವಂ ॥ ೪ ॥

॥ ಮಾರ್ಕಂಡೇಯ ಉವಾಚ ॥

ಮಾಯಯಾ ಮೋಹಿತಸ್ತಸ್ಯ ಬಾಲಸ್ಯಾಮಿತತೇಜಸಃ ।
ದೃಷ್ಟ್ವೋದರೇ ಜಗತ್ಕೃತ್ಸ್ನಂ ವಿಸ್ಮಯಾವಿಷ್ಟಚೇತನಃ ॥ ೫ ॥

ಗತ್ವಾಹಂ ಬ್ರಹ್ಮಸದನಂ ಪೃಷ್ಟವಾಂಸ್ತಂ ಪಿತಾಮಹಂ ।
ಏಕಾರ್ಣವೇ ಮಯಾ ಲೋಕೇ ದೇವದೇವೇ ಜಗತ್ಪತೌ ॥ ೬ ॥

ದೃಷ್ಟೋ ಬಾಲೋ ಮಹಾತೇಜಾಸ್ತಸ್ಯಾಹಮವಶಸ್ತತಃ ।
ಪ್ರವಿಷ್ಟೋ ಜಠರೇ ತಸ್ಯ ದೇವ ಸರ್ವಂ ಚರಾಚರಂ ॥ ೭ ॥

ಮಯಾ ದೃಷ್ಟಂ ಜಗತ್ಸರ್ವಂ ನ ಚ ಜಾನಾಮಿ ಬಾಲಕಂ ।
ಧ್ರುವಂ ತಂ ಭಗವಾನ್ವೇತ್ತಿ ಸರ್ವಜ್ಞತ್ವಾಜ್ಜಗದ್ಗುರುಃ ॥ ೮ ॥

---

೪ ವಜ್ರರಾಜನು ಪುನಃ ಪ್ರಶ್ನಿಸುತ್ತಾನೆ --ಎಲೈ ಮಾರ್ಕಂಡೇಯನೇ ! ತಿಳಿಯಲಶಕ್ಯನಾದ, ಜಗತ್ಕುಟುಂಬಿಯಾದ, ಸಕಲ ಭೂತಗಳ ಹುಟ್ಟು ಸಾವುಗಳಿಗೆ ಪರಮಕಾರಣನಾದ, ಆ ಮಹಾನುಭಾವನ ಸ್ವರೂಪವನ್ನು ಬ್ರಹ್ಮನಿಂದ ನೀನು ಹೇಗೆ ತಿಳಿದುಕೊಂಡೆ ! ಹೇಳು

೫-೮ ಮಾರ್ಕಂಡೇಯನು ಹೇಳುತ್ತಾನೆ — ಅಧಿಕ ತೇಜಸ್ವಿಯಾದ ಆ ಬಾಲಕನ ಮಾಯೆಯಿಂದ ನಾನು ಮೋಹಿತನಾಗಿ ಆ ಮಗುವಿನ ಶರೀರದಲ್ಲಿ ಸಕಲ ಲೋಕವೂ ಅಡಗಿದ್ದುದನ್ನು ನೋಡಿ ಬಹಳ ಆಶ್ಚರ್ಯಪಟ್ಟವನಾಗಿ ಕೂಡಲೇ ಬ್ರಹ್ಮನ ಮನೆಗೆ ಹೋಗಿ ಅವನನ್ನು ಕೇಳಿದೆನು “ ನನ್ನಿಂದ ಏಕಾರ್ಣವರೂಪವಾಗಿ ಕಂಡುಬಂದ ಪ್ರಳಯ ಜಲ ಮಧ್ಯದಲ್ಲಿ ಪರಮಾತ್ಮನು ಮಹಾತೇಜಶ್ಶಾಲಿಯಾದ ಬಾಲಕನಂತೆ ಕಂಡುಬಂದನು ನಾನು ಆ ಬಾಲಕನನ್ನು ನೋಡಿ ಜ್ಞಾನವಿಲ್ಲದ (ಅವಶನಾಗಿ) ಆತನ ಹೊಟ್ಟೆಯಲ್ಲಿ ಹೊಕ್ಕೆನು ಅಲ್ಲಿ ನೋಡಿದಾಗ ಸಕಲ ಚರಾಚರ ಪ್ರಪಂಚವೂ ಕಂಡು ಬಂದಿತು ಆ ಜಗತ್ತನ್ನು ನಾನು ನೋಡಿದನು ಆದರ ಆ ಬಾಲಕನನ್ನು ತಿಳಿಯಲಾರದೆ ಹೋದೆನು ನೀನು ಸರ್ವಜ್ಞನಾದ್ದರಿಂದ ಆ ಬಾಲಕ

ಏವಂ ಪೃಷ್ಟೋ ಮಯಾ ಬ್ರಹ್ಮಾ ಮಾಮುವಾಚ ಜಗದ್ಗುರುಃ ।
ಮಾರ್ಕಂಡೇಯ ವಿಜಾನಾಮಿ ಹ್ಯನಿರುದ್ಧಂ ಜಗದ್ಗುರುಂ ॥ ೯ ॥

ತ್ವಂ ಚ ತಂ ವೇತ್ಥ ತತ್ವೇನ ನ ಚ ಕಲ್ಪಕ್ಷಯೇ ಮುನೇ ।
ತ್ವಯಾ ದೃಷ್ಟಂ ಯಥಾ ತಸ್ಯ ಜಠರೇ ಭುವನಂ ಮುನೇ ॥ ೧೦ ॥

ತಥಾ ದೃಷ್ಟಂ ಮಯಾ ತಸ್ಯ ಜಗದ್ಯೋನೇರ್ಮಹಾತ್ಮನಃ ।
ಮದೀಯಸ್ಯ ದಿನಸ್ಯಾಂತೇ ಕದಾಚಿದ್ಭೃಗುನಂದನ ॥ ೧೧ ॥

ಏಕಾರ್ಣವೇ ತದಾ ಲೋಕೇ ನಷ್ಟೇ ಸ್ಥಾವರಜಂಗಮೇ ।
ನಾಗಪರ್ಯಂಕಶಯನೇ ಪಶ್ಯಾಮಿ ಪುರುಷಂ ತದಾ ॥ ೧೨ ॥

ತಸ್ಮಿನ್ಕಾಲೇ ನ ಜಾನಾಮಿ ತಮಹಂ ತೇನ ಮೋಹಿತಃ ।
ತತಃ ಪೃಚ್ಛಾಮಿ ತಂ ದೇವಂ ಕೋಽಭವಾನಿತಿ ವಿಸ್ಮಿತಃ ॥ ೧೩ ॥

---

ನನ್ನ ನೀನು ಚೆನ್ನಾಗಿಬಲ್ಲೆ ! ನೀನು ಸರ್ವಜ್ಞನು ! ಜಗದ್ಗುರುವು !" ಈ ರೀತಿ ನಾನು ಬ್ರಹ್ಮನನ್ನು ಪ್ರಶ್ನೆಮಾಡಲು ಆ ಜಗದ್ಗುರುವು ನನ್ನೊಡನೆ ಇಂತು ಹೇಳಿದನು ಎಲೈ ಮಾರ್ಕಂಡೇಯನೇ ! ಆ ಬಾಲಕನು ಜಗದ್ಗುರುವಾದ ಅನಿರುದ್ಧನೆಂದು ನಾನು ತಿಳಿದುಕೊಂಡಿದೇನೆ

೧೦-೧೨ ನೀನೂ ನನ್ನಹಾಗೆಯೇ ತಿಳಿದುಕೋ ! ನಿಜವಾಗಿ ನೀನು ಕಲ್ಪಕ್ಷಯ ಕಾಲದಲ್ಲಿ ಆ ಬಾಲಕನ ಹೊಟ್ಟೆಯಲ್ಲಿ ತ್ರಿಭುವನವನ್ನು ನೋಡಿದಯಷ್ಟು? ನಾನೂ ಸಹ ಅದೇ ರೀತಿಯಾಗಿ ನನ್ನ ದಿವಸದ ಕೊನೆಯಲ್ಲಿ ಒಸ್ಮೆ ಆ ಬಾಲಕನನ್ನು ನೋಡುತ್ತಿರುತ್ತೇನೆ ಆಗ ಲೋಕವೆಲ್ಲವೂ ಏಕಾರ್ಣವಾಗಿ ಸ್ಥಾವರ ಜಂಗಮಗಳೆಲ್ಲಾ ನಾಶವಾಗಿರುತ್ತವೆ ಆಗ ನಾಗಪರ್ಯಂಕ (ಆದಿಶೇಷನೆಂಬ ಮಂಚ) ದಲ್ಲಿ ಆ ಪರಮ ಪುರುಷನನ್ನು ನಾನು ದರ್ಶನ ಮಾಡುತ್ತೇನೆ

೧೩-೧೬. ಆ ಪ್ರಳಯಕಾಲದಲ್ಲಿ ಮಾತ್ರ ಆ ರಮಾರಮಣನ ಮಾಯೆಯಿಂದ ಮೋಹಿತನಾದ ನಾನು ಆತನನ್ನು ತಿಳಿಯಲಾರದೆ ನಾನೇ ಹೀಗೆ ಪ್ರಶ್ನೆಮಾಡುತ್ತೇನೆ "ಅಯ್ಯ ! ನೀನಾರು ?" ಅದಕ್ಕೆ ಆತನು ನಗುತ್ತಾ, "ಇದೆಲ್ಲಾ ಜಗತ್ತೂ, ನನ್ನದೇ ಆಗಿದೆ ನೀನು ನನ್ನನ್ನು ತಿಳಯಲಾರೆ ಈ ಜಗತ್ತಿನ ಈಶ್ವರರಿಗೆಲ್ಲಾ ನಾನೇ ಈಶ್ವರನಾಗಿದೇನೆ ಇದು ನಿಜವಾದ ತತ್ವವೆಂದು ತಿಳಿ "

**ಸ ಮಾಮುವಾಚ ಪ್ರಹಸನ್ಮಮೇದಂ ಸಕಲಂ ಜಗತ್ ।**
**ನ ತು ಮಾಂ ವೇತ್ಸಿ ತತ್ತ್ವೇನ ಜಗತಾಮೀಶ್ವರೇಶ್ವರಂ ॥ ೧೪ ॥**

**ಮಯಾಪ್ಯುಕ್ತಃ ಸ ದೇವೇಶೋ ಮಮೇದಂ ಸಕಲಂ ಜಗತ್ ।**
**ವೃಥಾ ಪ್ರಲಯಮಧ್ಯೇ ತೇ ಮತ್ಸಮೀಪೇ ವಿಶೇಷತಃ ॥ ೧೫ ॥**

**ವಿಪ್ರತ್ಯಯಶ್ಚ ಯದಿ ತೇ ಪ್ರವಿಶ್ಯ ಜರರಂ ಮಮ ।**
**ತ್ರೈಲೋಕ್ಯಮಖಿಲಂ ಪಶ್ಯ ಸಂಹೃತಂ ಯನ್ಮಯಾ ಸ್ವಯಂ ॥ ೧೬ ॥**

**ಏವಮುಕ್ತಸ್ಸ ತು ಮಯಾ ತದಾ ಕೇನಾಪಿ ಹೇತುನಾ ।**
**ಪ್ರವಿಶ್ಯ ಜರರಂ ಮೇ ಸ ಕ್ಷಣಮಾತ್ರಾದ್ವಿನಿರ್ಗತಃ ॥ ೧೭ ॥**

**ನಿರ್ಗಮ್ಯ ಮಾಮಬ್ರವೀಚ್ಚ ದೃಷ್ಟಂ ತ್ರಿಭುವನಂ ಮಯಾ ।**
**ತವೋದರೇ ಜಗನ್ನಾಥ ತ್ವಂ ಚ ಪಶ್ಯ ಮಮೋದರೇ ॥ ೧೮ ॥**

---

ಕೇಳು, ಮಾರ್ಕಂಡೇಯ! ನಾನು ಅದಕ್ಕೆ ಪುನಃ ಪ್ರಶ್ನೆಮಾಡಿದನು 'ಅಯ್ಯ! ಬಾಲಕ! ನನ್ನ ಜಗತ್ತನ್ನು ನಿನ್ನದೆಂದು ಹೇಗೆ ಹೇಳುತ್ತೀಯೆ? ಅದರಲ್ಲೂ ಈ ಮಹಾ ಪ್ರಳಯ ಸಮುದ್ರ ಮಧ್ಯದಲ್ಲಿದ್ದುಕೊಂಡು, ಹಾಗೂ, ವಿಶೇಷವಾಗಿ ನನ್ನ ಎದುರಿಗೇ ನೀನು ಈ ಮಾತನ್ನು ಹೇಳಬಹುದೇ? ನನ್ನ ಜಗತ್ತನ್ನುವುದನ್ನು ನೀನು ನಂಬದೆ ಹೋಗುವುದಾದರೆ ನನ್ನ ಉದರವನ್ನು ಪ್ರವೇಶಿಸಿ ನೋಡು! ಈ ಸಕಲ ತ್ರಿಲೋಕವೂ ನನ್ನಿಂದಲೇ ನಾಶಗೊಳಿಸಲ್ಪಟ್ಟು, ನನ್ನ ಹೊಟ್ಟೆಯಲ್ಲಿ ಅಡಗಿರುವುದನ್ನು ನೀನು ಪ್ರತ್ಯಕ್ಷವಾಗಿ ನೋಡುತ್ತೀಯ!'

೧೭ ಈ ರೀತಿ ನಾನು ಹೇಳಿದ ಮಾತನ್ನು ಕೇಳಿ ಆ ಬಾಲಕನು ಆಗ ಏನೋ ಒಂದು ಕಾರಣದಿಂದ ನನ್ನ ಉದರವನ್ನು ಪ್ರವೇಶಿಸಿ ಒಂದು ಕ್ಷಣದೊಳಗೆ ಈಚಗೆ ಬಂದನು

೧೮ ಈ ರೀತಿ ಈಚೆಗೆ ಬಂದ ಆ ಬಾಲಕನು, ಜಗನ್ನಾಥನಾದ ಎಲೈ ಬ್ರಹ್ಮನೇ? ನಿನ್ನ ಹೊಟ್ಟೆಯಲ್ಲಿ ತ್ರಿಭುವನವನ್ನೂ ನಾನು ನೋಡಿದೆನು ಈಗ ನೀನು ನನ್ನ ಹೊಟ್ಟೆಯನ್ನು ಪ್ರವೇಶಿಸಿ ನೋಡು

ಏವಮುಕ್ತ್ವಾ ಸ ಸುಷ್ವಾಪ ಭೋಗಿಭೋಗಾಸನೇ ತದಾ ।
ಅಹಮಪ್ಯವಶಸ್ತಸ್ಯ ಪ್ರವಿಷ್ಟೋ ಜಠರಂ ತದಾ ॥ ೧೯ ॥

ಪಶ್ಯಾಮಿ ಜಗತೀಂ ಬ್ರಹ್ಮನ್ಸಶೈಲವನಕಾನನಾಂ ।
ಸಸಮುದ್ರಸರಿದ್ದ್ವೀಪಲೋಕಪಾತಾಲಭೂಷಿತಾಂ ॥ ೨೦ ॥

ದೃಷ್ಟ್ವಾಽಹಂ ಪೃಥಿವೀಂ ತಸ್ಯ ತಥಾ ಜಠರಸಂಸ್ಥಿತಾಂ ।
ನಿರ್ಗಮಿಷ್ಯನ್ನಪಶ್ಯಾಮಿ ಶರೀರಂ ತಸ್ಯ ಭಾರ್ಗವ ॥ ೨೧ ॥

ಅಂತರಿಕ್ಷಂ ಪ್ರಪಶ್ಯಾಮಿ ನಿರಾಲಂಬಂ ಪರಿಭ್ರಮನ್ ।
ಪರಿಭ್ರಮಣಖಿನ್ನೋಽಸ್ಮಿ ತಮೇವ ಶರಣಂ ಗತಃ ॥ ೨೨ ॥

ತತಸ್ತು ತಸ್ಯ ಪಶ್ಯಾಮಿ ರಂಧ್ರಹೀನಂ ತು ವಿಗ್ರಹಂ ।
ತಸ್ಯ ದೇಹಾದ್ವಿನಿರ್ಗಂತುಂ ಶಕ್ತಿರ್ನಾಸೀತ್ತಥಾ ಚ ಮೇ ॥ ೨೩ ॥

ರಂಧ್ರಹೀನಾನ್ಮಹಾಭಾಗ ತಮೇವ ಶರಣಂ ಗತಃ ।
ತತೋಽಹಂ ಗತವಾನ್ಬ್ರಹ್ಮನ್ರಂಧ್ರಂ ಪ್ರಾಪ್ತಂ ಮಯಾನಘ ॥ ೨೪ ॥

---

೧೯-೨೨ ಹೀಗೆಂದು ಹೇಳಿ ಆ ಬಾಲಕನು ಆದಿಶೇಷನೆಂಬ ಮಂಚದ ಮೇಲೆ ಮಲಗಿಬಿಟ್ಟನು ಆಗ, ನಾನೂ ಸಹ ಸ್ವತಂತ್ರವಿಲ್ಲದೆ ಪರವಶನಾಗಿ ಆ ಬಾಲಕನ ಮುಖದ ಮೂಲಕ ಹೊಟ್ಟೆಯನ್ನು ಪ್ರವೇಶಿಸಿದೆನು ಅಲ್ಲಿ ನನ್ನ ಕಣ್ಣಿಗೆ ಬಿದ್ದುದೇನು ? ಬಲ್ಲೆಯಾ ? ಬೆಟ್ಟ, ಕಾಡು, ಹೊಳೆಗಳಿಂದ ಕೂಡಿದ ಭೂಲೋಕವು ಕಾಣಿಸಿತು ಮತ್ತು ಸಾಗರ, ದ್ವೀಪ, ಪಾತಾಳಗಳಿಂದ ವ್ಯಾಪ್ತವಾದ ತ್ರಿಲೋಕವೂ ಕಾಣಿಸಿತು ಆಗ ನಾನು ಆತನ ಹೊಟ್ಟೆಯಲ್ಲಿ ಹುದುಗಿದ್ದ ಭೂಲೋಕವನ್ನು ನೋಡಿಕೊಂಡು ಬಳಿಕ ಹೊರಗೆ ಬರಬೇಕೆಂದು ನೋಡಿದಾಗ ಆ ಬಾಲನ ಶರೀರವೇ ಕಾಣಬರಲಿಲ್ಲ ಆಗ ಆಕಾಶವು ಅವಲಂಬನವಿಲ್ಲದ ಅಲ್ಲಿ ಸುತ್ತುತ್ತಿದ್ದುದು ನನ್ನ ಕಣ್ಣಿಗೆ ಕಂಡಿತು ನಾನೂ ಕೂಡ ಅಲ್ಲೆಲ್ಲಾ ಸುತ್ತಿಸುತ್ತಿ ಸಾಕಾಗಿ ದಿಕ್ಕೇತೋರದ ಆ ಬಾಲಮುಕುಂದನನ್ನೇ ಮರೆಹೊಕ್ಕೆನು

೨೩-೨೪ ಆಗ ಮುಕುಂದನ ಮುಖದಿಂದಲಾಗಲೀ ಬೇರೆ ಯಾವುದಾದರೊಂದು ರಂಧ್ರದಿಂದಾಗಲೀ ಹೊರಗೆ ಬರಬೇಕೆಂದು ಯೋಚಿಸಿ ನೋಡಿ ಎಲ್ಲೆಲ್ಲಿ ಹುಡುಕಿದಾಗ್ಯೂ ಆ ವಿಗ್ರಹಕ್ಕೆ ರಂಧ್ರವೇ ಇಲ್ಲವೆಂದು ಗೊತ್ತಾಯಿತು ಆಗ ನನಗೆ

ಬಾಲಾಗ್ರಾದಪಿ ಸೂಕ್ಷ್ಮಂ ತತ್ತತೋಽಹಂ ತೇನ ನಿರ್ಗತಃ ।
ಪದ್ಮನಾಲೇನ ನಿಷ್ಕ್ರಾಂತಂ ಪಶ್ಯಾಮ್ಯಾತ್ಮಾನಮಾತ್ಮನಾ ॥ ೨೫ ॥

ನಾಭೀಸರಸಿ ತತ್ಪದ್ಮಂ ಜಾತಂ ದೇವಸ್ಯ ಶಾರ್ಙ್ಗಿಣಃ ।
ಶೇಷರತ್ನಾರ್ಕರಶ್ಮೈರಾಲಿ ವಿಕಾಸಿತದಲಂ ಮಹತ್ ॥ ೨೬ ॥

ತತೋಽಹಂ ಪದ್ಮಜನ್ಮೇತಿ ಲೋಕೇ ಖ್ಯಾತಿಮುಪಾಗತಃ ।
ನಾಭಿಜಾತಂ ಚ ಯತ್ಪದ್ಮಂ ತಸ್ಯ ದೇವಸ್ಯ ಭಾರ್ಗವ ॥ ೨೭ ॥

ತನ್ಮಹಾಮಂಡಲಂ ಕೃತ್ಸ್ನಂ ಮೇರುಸ್ತಸ್ಯ ಚ ಕರ್ಣಿಕಾ ।
ತತ್ರಾಹಂ ತಸ್ಯ ಸಂಭೂತೋ ದೇವದೇವಸ್ಯ ಚಕ್ರಿಣಃ ॥ ೨೮ ॥

ದೇವಸ್ಸ ವಿಷ್ಣುರ್ಜಗತಾಮಧೀಶಃ
ಸರ್ವೇಶ್ವರಃ ಸರ್ವಜಗತ್ಪ್ರಧಾನಃ ।
ಯೋ ಬಾಲರೂಪೀ ಭವತಾಂತಕಾಲೇ
ದೃಷ್ಟೋಽಸ್ಯ ಸರ್ವಸ್ಯ ಚರಾಚರಸ್ಯ ॥ ೨೯ ॥

---

ಆ ದೇಹದಿಂದ ಹೊರಗೆ ಹೋಗಲು ಶಕ್ತಿಯಿಲ್ಲದ, ರಂಧ್ರಹೀನವಾದ್ದರಿಂದ ಆ ವಿಗ್ರಹವನ್ನೇ ಶರಣು ಹೊಂದಿದೆನು ಆಗ ನನಗ ಒಂದು ರಂಧ್ರವು ಕಾಣಿಸಿತು ಆ ರಂಧ್ರವು ಬಾಲಾಗ್ರಕ್ಕಿಂತ ಬಹು ಸೂಕ್ಷ್ಮವಾಗಿತ್ತು ನಾನು ಆ ರಂಧ್ರದಿಂದ ಹೊರಗೆ ಬಂದೆನು ಪದ್ಮನಾಳದಿಂದ ಹೊರಕ್ಕೆ ಬಂದವನನ್ನು ನಾನೇ ನೋಡಿಕೊಂಡೆನು

೨೬-೩೦ ದೇವದೇವೋತ್ತಮನಾದ ಆ ಶ್ರೀಮನ್ನಾರಾಯಣನ ನಾಭಿಯೆಂಬ ಸರೋವರದಲ್ಲಿ ಆ ಪದ್ಮವು ಹುಟ್ಟಿತೆಂದೂ, ಆದಿಶೇಷನ ಹೆಡೆಗಳಲ್ಲಿರುವ ರತ್ನವೆಂಬ ಸೂರ್ಯನನ್ನು ನೋಡಿ ಆ ಪದ್ಮವು ಅರಳಿ ಮಹತ್ತಾದ ದಳವನ್ನು ಬಿಟ್ಟಿತೆಂದೂ ನನಗೆ ಆಗ ಗೊತ್ತಾಯಿತು. ಆರೀತಿ ನಾಭಿಕಮಲದಲ್ಲಿ ಹೊರಕ್ಕೆಬಂದ ನನಗೆ ಆಗಿನಿಂದಲೂ ಪದ್ಮಭವ, ಪದ್ಮಜನ್ಮ, ಪದ್ಮಯೋನಿಯೆಂಬ ಹೆಸರುಗಳು ಬಂದುವು ಕೇಳಯ್ಯ! ಆ ದೇವಾದಿದೇವನ ನಾಭಿಯಲ್ಲಿ ಹುಟ್ಟಿದ ಆ ಪದ್ಮವು ಬ್ರಹ್ಮಾಂಡಮಂಡಲವೆಂದೂ, ಮೇರುಪರ್ವತವು ಅದರ ಕೇಂದ್ರಸ್ಥಾನವೆಂದೂ ತಿಳಿಯಬೇಕು ಈರೀತಿ ದೇವದೇವೋತ್ತಮನಾದ ನಾರಾಯಣನ ಮಗನಾಗಿ ನಾನು ಹುಟ್ಟಿದೆನು ಆ ಮಹಾವಿಷ್ಣುವೇ ಈ ಜಗತ್ತಿಗೆ ಅಧೀಶ್ವರನು ಅವನೇ ಸರ್ವೇಶ್ವರನು ಸರ್ವಜಗತ್ತಿಗೂ ಅವನೇ ಪ್ರಧಾನಪುರುಷನು ಕಲ್ಪಾಂತದಲ್ಲಿ ನೀನು ಯಾವ ಬಾಲಕೃಷ್ಣನನ್ನು

ಏವಂ ಹಿ ತಸ್ಯೋದರಸಂಸ್ಥಿತೇನ
ಮಯೋಷಿತಂ ಜಾತಕುತೂಹಲೇನ ।
ತಸ್ಯೈವ ಮಯಾಪರಿಮೋಹಿತೇನ
ಕಲ್ಪಾಂತಕಾಲೇಷು ಸದಾ ನರೇಂದ್ರ ॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಪದ್ಮನಾಭೋಪಾಖ್ಯಾನೋ ನಾಮ
ಏಕೋನಾಶೀತಿತಮೋಧ್ಯಾಯಃ

---

ಕಂಡೆಯೋ ಅವನೇ ಚರಾಚರ ಜಗತ್ತಿಗೂ ಒಡೆಯನು ಈರೀತಿಯಾಗಿ ಆ ಮಹಾ ವಿಷ್ಣುವಿನ ಹೊಟ್ಟೆಯಲ್ಲಿ ನಾನು ವಾಸಮಾಡುತಲಿದ್ದಾಗ ಆ ಮಹಾಪುರುಷನ ಸರ್ವೇಶ್ವರತ್ವವನ್ನು ಅರಿತುಕೊಂಡೆನು ಆ ವೈಷ್ಣವೀಮಾಯೆಯಿಂದ ಮೋಹಿತನಾದ ನಾನು ಯಾವಾಗಲೂ ಕಲ್ಪಾಂತಸಮಯದಲ್ಲಿ ವಿಷ್ಣುಗರ್ಭದಲ್ಲೇ ವಾಸಮಾಡುತ್ತಾ ಸುಖ ನಿದ್ರೆಯನ್ನು ಮಾಡುತ್ತಿರುತ್ತೇನೆ, ಕೇಳು ದೊರೆಯೇ !

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಪದ್ಮನಾಭೋಪಾಖ್ಯಾನವೆಂಬ ಹೆಸರಿನ
ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಶೀತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಬ್ರಹ್ಮಣೋಽಸ್ಯ ಸಮುತ್ಪತ್ತಿಮಾರಭ್ಯ ಸುಮಹಾದ್ಯುತೇ ।
ಕಾಲಸ್ಯ ಗತಿಮಿಚ್ಛಾಮಿ ಶ್ರೋತುಂ ಭೃಗುಕುಲೋದ್ವಹ ॥ ೧ ॥

॥ ಮಾರ್ಕಂಡೇಯ ಉವಾಚ ॥

ಸ್ವೇನಾಹೋರಾತ್ರಮಾನೇನ ಬ್ರಹ್ಮಣೋಽಸ್ಯ ಜಗತ್ಪತೇಃ ।
ಸಮಾಷ್ಟಕಂ ಗತಂ ರಾಜನ್ಪಂಚಮಾಸಾಸ್ತಥೈವ ಚ ॥ ೨ ॥

ಅಹೋರಾತ್ರಚತುಷ್ಕಂ ಚ ವರ್ತಮಾನದಿನಾದ್ಗತಂ ।
ಅತಃ ಪರಂ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೩ ॥

---

### ಎಂಭತ್ತನೆಯ ಅಧ್ಯಾಯವು

೧ ವಜ್ರರಾಜನು ಪ್ರಶ್ನೆ ಮಾಡುತ್ತಾನೆ —ಎಲೈ ಭೃಗುವಂಶೋತ್ಪನ್ನನಾದ ಮಹಾತೇಜಸ್ವಿಯಾದ ಮಾರ್ಕಂಡೇಯ ಮಹಾಮುನಿಯೇ ! ಈರೀತಿ ನೀನು ಮೇಲೆ ವಿವರಿಸಿದ ಈ ಬ್ರಹ್ಮನ ಉತ್ಪತ್ತಿಯಿಂದಾರಂಭಿಸಿದ ಕಾಲದ ಗತಿಯಿಂದ ಇಲ್ಲಿಯುವರಗೆ ಹೇಗೆಹೇಗೆ ನಡೆಯುತ್ತಿದಯೆಂಬುದನ್ನು ಕೇಳಬೇಕೆಂದಾಶೆಯಾಗಿದ

೨-೩ ಮಾರ್ಕಂಡೇಯಋಷಿಯು ಹೇಳುತ್ತಾನೆ,— ಕೇಳ್ವ ವಜ್ರ ರಾಜೇಂದ್ರನೇ, ಜಗತ್ಪತಿಯಾದ ಈ ಬ್ರಹ್ಮನ ಅಹೋರಾತ್ರಿ ಪ್ರಮಾಣದಿಂದ ಇದು ವರಿಗೆ ಎಂಟುವರ್ಷ ಐದುತಿಂಗಳು ನಾಲ್ಕುದಿನಗಳು ಕಳೆದುಹೋಗಿವೆ ಇಲ್ಲಿಂದ ಮುಂದೆ ಹೇಳುತ್ತೇನೆ ಕೇಳು

**ಮನವಃ ಷಡ್ ಗತಾಸ್ಸಪ್ತ ಸಂಧಯಶ್ಚ ತಥಾ ಗತಾಃ ।**
**ಸಪ್ತವಿಂಶದ್ವ್ಯತೀತಾಶ್ಚ ತಥೈವ ಚ ಚತುರ್ಯುಗಾಃ ॥ ೪ ॥**

**ಯುಗತ್ರಯಂ ತಥಾತೀತಂ ವರ್ತಮಾನಚತುರ್ಯುಗಾತ್ ।**
**ಸಂವತ್ಸರಾಣಾಂ ದಶಕಂ ತಥಾ ಕಲಿಯುಗಾದ್ಗತಂ ॥ ೫ ॥**

**ವಾತಾಶ್ವಮೇಘಕಾಲೇಽಸ್ಮಿನ್ಸಹ ಯಜ್ಞೇಣ ಯಾದವ ।**
**ಭವಿಷ್ಯಾಣಾಮತೀತಾನಾಂ ಬ್ರಹ್ಮಣಾಂ ಭೂರಿದಕ್ಷಿಣ ॥ ೬ ॥**

**ಅನಾದಿಮತ್ವಾತ್ಕಾಲಸ್ಯ ಸಂಖ್ಯಾಂ ವಕ್ತುಂ ನ ಶಕ್ಯತೇ ।**
**ಗಂಗಾಯಾಃ ಸಿಕತಾ ಧಾರಾ ಯಥಾ ವರ್ಷತಿ ವಾಸವಃ ॥ ೭ ॥**

**ಶಕ್ಯಾ ಗಣಯಿತುಂ ರಾಜನ್ನವ್ಯತೀತಾಃ ಪಿತಾಮಹಾಃ ।**
**ಅಂತವತ್ತಾಂ ಬುಧೋ ಬುದ್ಧ್ವಾ ಸರ್ವಸ್ಯ ಜಗತೀಪತೇ ॥ ೮ ॥**

---

೪ ಇಲ್ಲಿಯವರೆವಿಗೆ ಆರುಜನ ಮನುಗಳು ಬಂದುಹೋದರು. ಅಷ್ಟೇ ಸಂಖ್ಯಾನುಸಾರವಾಗಿ ಸಂಧಿಕಾಲಗಳು ಕಳೆದುವು. ನಾಲ್ಕುಯುಗಗಳು ಇಪ್ಪತ್ತೇಳು ಬಾರಿ ಕಳೆದುಹೋಗಿವೆ.

೫ ಇಪ್ಪತ್ತೆಂಟನೆಯಬಾರಿಯ ಚತುರ್ಯುಗಗಳಲ್ಲಿ ಈಗ್ಯೆ ಕೃತ ತ್ರೇತ ದ್ವಾಪರ ಗಳೆಂಬ ಮೂರು ಯುಗಗಳು ಕಳೆದಿವೆ. ಈಗ ನಡೆಯುತ್ತಿರುವ ವರ್ತಮಾನ ಕಲಿ ಯುಗದಲ್ಲಿ ಹತ್ತುವರ್ಷಗಳು ಕಳೆದಿವೆ.

ಟಿಪ್ಪಣಿ --ವಾಚಕರು ಇಲ್ಲೊಂದು ಸಂಗತಿಯನ್ನು ನನಸಿನಲ್ಲಿಡಬೇಕಾದುದು ಅತ್ಯವಶ್ಯಕ. ವ್ಯಾಸರು ಈ ಗ್ರಂಥವನ್ನು (ವಿಷ್ಣುಧರ್ಮೋತ್ತರ ಪುರಾಣವನ್ನು) ರಚಿಸಿ ೫೦೩೫ ವರ್ಷಗಳಾದುವೆಂದು, ಈ ಗ್ರಂಥರಚನಾಕಾಲವನ್ನು ನಾವು ಸುಲಭವಾಗಿ ಈ ಶ್ಲೋಕದಿಂದ ಕಂಡುಹಿಡಿಯಬಹುದು. ಈಗ ನಡೆಯುತ್ತಿರುವ ತಾರಣಸಂವತ್ಸರಕ್ಕೆ ಕಲಿಯುಗವು ೨೮ ನೇ ಬಾರಿ ಹುಟ್ಟಿ ೫೦೪೫ ವರ್ಷಗಳಾದುವು. ಕಲಿಯುಗ ಹುಟ್ಟಿದ ೧೦ ವರ್ಷದ ಮೇಲೆ ಈ ಗ್ರಂಥರಚನೆಯ ಕಾರ್ಯವು ನಡೆದಿದೆ.

೬-೮. ಎಲೈ ವಜ್ರನರಪತಿಯೇ, ಈ ಕಾಲಕ್ಕೆ ವಾತಾಶ್ವಮೇಘಕಾಲವೆಂದು ಹೆಸರು. ಹಿಂದೆ ಕಳೆದುಹೋದ ಮುಂದೆ ಬಂದು ಕಳೆದುಹೋಗತಕ್ಕದಾಗಿರುವ ಬ್ರಹ್ಮನ ದಿನಗಳು ಅನಾದಿಯಾದ್ದರಿಂದ ಅದರ ಸಂಖ್ಯೆಯನ್ನು ತಿಳಿಸಲು ಸಾಧ್ಯವಿಲ್ಲ.

ತನ್ಮಾರ್ಗಂ ಪರಿಮಾರ್ಗಂತೇ ಯದ್ವಿಷ್ಣೋಃ ಪರಮಂ ಪದಂ ।

॥ ವಜ್ರ ಉವಾಚ ॥

ಕಿಯತ್ಕಾಲಪರೀಮಾಣಂ ಮಯಾ ಶಾಸ್ಯಾ ವಸುಂಧರಾ ॥ ೯ ॥

ಪರೀಕ್ಷಿತಾ ಚ ಧರ್ಮಜ್ಞ ತನ್ಮೇ ಬ್ರೂಹಿ ಭೃಗೂತ್ತಮ ।

॥ ಮಾರ್ಕಂಡೇಯ ಉವಾಚ ॥

ಅದ್ಯಪ್ರಭೃತಿ ರಾಜೇಂದ್ರ ಸಮಾಪಂಚಾಶಕೇ ಗತೇ ॥ ೧೦ ॥

ಪರೀಕ್ಷಿತಿ ಮಹಾರಾಜೇ ದಿವಂ ಪ್ರಾಪ್ತೇ ಕುರೂದ್ವಹೇ ।
ಪರೀಕ್ಷಿದ್ವಿನೇ ಲೋಕೇಽಸ್ಮಿನ್ಪ್ರಾಣಿತುಂ ತ್ವಂ ತು ಶಕ್ಯಸೇ ॥ ೧೧ ॥

ಮಹಾಪ್ರಸ್ಥಾನಮಾವಿಶ್ಯ ನಾಗಲೋಕಂ ಗಮಿಷ್ಯಸಿ ।
ಸ್ವರ್ಗತೇ ತ್ವಯಿ ರಾಜೇಂದ್ರ ಪರೀಕ್ಷಿತಿ ತಥಾ ನೃಪೇ ॥ ೧೨ ॥

ರಾಜಾ ನಾಗಪುರೇ ಭಾವೀ ಪಾರೀಕ್ಷಿಜ್ಜನಮೇಜಯಃ ।
ಮಧುರಾಯಾಂ ತಥಾ ಭಾವೀ ತವ ಪುತ್ರೋಽಚಲೋ ನೃಪಃ ॥ ೧೩ ॥

---

ಅದರಂತೆಯೇ ಬ್ರಹ್ಮರುಗಳು ಎಷ್ಟುಮಂದಿ ಇದುವರಿಗೆ ಆಗಿಹೋಗಿರುವರೆಂಬುದನ್ನು ತಿಳಿಸಲೂ ಸಾಧ್ಯವಿಲ್ಲ ಇಂದ್ರನು ಸುರಿಸುವ ಮಳೆಯ ಹನಿಗಳನ್ನೂ ಗುಗೆಯಲ್ಲಿರುವ ಮರಳಿನ ರಾಶಿಯನ್ನೂ ಒಂದೊಂದು ಹನಿಯಾಗಿ ಒಂದೊಂದು ಕಣವಾಗಿ ಎಣಿಸಬಹುದು (ಅದೂ ಅಸಾಧ್ಯ) ಆದರೆ ಕಾಲಗತಿಯನ್ನು ಮಾತ್ರ ಎಣಿಸಲು ಸುತರಾಂ ಸಾಧ್ಯವಿಲ್ಲ ಇದರಂತೆ ಅನಾದಿನಿಧನನಾದ ಪರಮಾತ್ಮನ ಮಾರ್ಗವನ್ನು ಹುಡುಕುವುದೂ ಸಾಧ್ಯವಿಲ್ಲ ಭಗವಂತನ ಮಾರ್ಗವನ್ನಾರು ಕಂಡುಹಿಡಿಯಲು ಪ್ರಯತ್ನಿಸುವರೋ ಅವರು ವಿಷ್ಣುವಿನ ಪರಮಪದವಿಯನ್ನು ನಡೆಯುವರು

೯-೧೦ ವಜ್ರರಾಜನು ಪ್ರಶ್ನೆಮಾಡುತ್ತಾನೆ —ನಾನು ಈ ಭೂಮಿಯನ್ನು ಎಷ್ಟುದಿವಸ ಆಳಬೇಕಾಗಿದೆಯೆಂಬುದನ್ನು ದಯಮಾಡಿ ತಿಳಿಸು ಮತ್ತು ಪರೀಕ್ಷಿದ್ರಾಜನಿಂದ ಎಷ್ಟು ವರ್ಷಗಳು ಈ ಭೂಮಂಡಲವು ಪರಿಪಾಲಿಸಲ್ಪಡುತ್ತದೆಯೆಂಬುದನ್ನು ತಿಳಿಸು

೧೦-೧೩ ಮಾರ್ಕಂಡೇಯನು ಉತ್ತರ ಕೊಡುತ್ತಾನೆ – ಎಲೈ ವಜ್ರ ಧೊರೆಯೇ ! ಕೇಳು ಇಲ್ಲಿಂದ ಮುಂದೆ ಐವತ್ತುವರ್ಷಗಳು ಕಳೆದು ಆಮೇಲೆ

ನಗರಂ ಖಾಂಡವಪ್ರಸ್ಥಂ ಭಯಾದಿವಿನಿವರ್ಜಿತಂ ।
ಪಾಲಯಿಷ್ಯತಿ ಧರ್ಮಾತ್ಮಾ ಪುತ್ರಸ್ತೇ ಭೀಮವಿಕ್ರಮಃ ॥ ೧೪ ॥

ದಾನವೇಂದ್ರೋ ಮಯಃ ಪೂರ್ವಂ ಫಾಲ್ಗುನೇನ ಪ್ರಯಾಸ್ಯತಾ ।
ಮಹಾಪ್ರಸ್ಥಾನಮಿತ್ಯುಕ್ತೋ ರಾಜಂಸ್ತ್ವತ್ಪ್ರಿಯಕಾಮ್ಯಯಾ ॥ ೧೫ ॥

ಯಾವದ್ವಜ್ರೋ ಮಹೀಂ ಭುಂಕ್ತೇ ಖಾಂಡವಪ್ರಸ್ಥಮಾಶ್ರಿತಃ ।
ತಾವತ್ಸಭೇಯಂ ಸಂರಕ್ಷ್ಯಾ ತ್ವಯಾ ಮದುಪರೋಧತಃ ॥ ೧೬ ॥

ಸೇಯಂ ಸಂರಕ್ಷ್ಯತೇ ತೇನ ಪ್ರತಿಜ್ಞಾಯ ಧನಂಜಯೇ ।
ತ್ವಯಿ ನಾಕಮನುಪ್ರಾಪ್ತೇ ಸಭೇಯಂ ಮಯಶಾಸನಾತ್ ॥ ೧೭ ॥

ಹಿಮಾಚಲಂ ತು ನೇಷ್ಯಂತಿ ಯತ್ರ ಬಿಂದುಸರಃಸರಃ ।
ರಾಕ್ಷಸಾಃ ಕಿಂಕರಾ ನಾಮ ಯತ್ತಸ್ಯಾಂ ನಿರ್ಮಿತಾ ಪುರಾ ॥ ೧೮ ॥

---

ಪರೀಕ್ಷಿನ್ಮಹಾರಾಜನು ಸ್ವರ್ಗಕ್ಕೆ ಪ್ರಯಾಣಮಾಡುತ್ತಾನೆ ಪರೀಕ್ಷಿನ್ಮಹಾರಾಜನು ಭೂಲೋಕವನ್ನು ಬಿಟ್ಟು ಹೊರಟುಹೋದಮೇಲೆ ನೀನು ಬದುಕಿರಲು ಶಕ್ತಿಯುಳ್ಳವನಾಗಿದ್ದಾಗ್ಯೂ ಮಹಾಪ್ರಸ್ಥಾನಕ್ರಮದಿಂದ (ಈ ಶರೀರವಿಂದಲೇ ಸ್ವರ್ಗಕ್ಕೆ ಹೋಗುವುದು) ನಾಗಲೋಕಕ್ಕೆ ಪ್ರಯಾಣಮಾಡುತ್ತೀಯೆ ನೀನೂ ಭೂಲೋಕವನ್ನು ಬಿಟ್ಟು ಪರೀಕ್ಷಿನ್ಮಹಾರಾಜನಂತೆ ಈ ಲೋಕವನ್ನು ಬಿಟ್ಟು ಸ್ವರ್ಗಕ್ಕೆ ಹೊರಟುಹೋದ ಬಳಿಕ ಪರೀಕ್ಷಿನ್ಮಹಾರಾಜನ ಮಗನಾದ ಜನಮೇಜಯಮಹಾರಾಜನು ನಾಗಪುರದಲ್ಲಿ ರಾಜ್ಯವಾಳುತ್ತಿರುತ್ತಾನೆ ಅದೇ ಸಮಯದಲ್ಲಿ ನಿನ್ನ ಮಗ ಅಚಲರಾಜನು ಮಧುರಾ ಪಟ್ಟಣಕ್ಕೆ ಸೇರಿದ ಖಾಂಡವಪ್ರಸ್ಥದಲ್ಲಿ ನಿರ್ಭಯನಾಗಿ ರಾಜ್ಯಭಾರಮಾಡುತ್ತಾನೆ ಧರ್ಮಾತ್ಮನಾದ ನಿನ್ನ ಪುತ್ರನು ಇಂತು ರಾಜ್ಯವನ್ನಾಳುತ್ತಿರುವನು

೧೫-೧೮ ಪೂರ್ವದಲ್ಲಿ ಮಯನೆಂಬ ದಾನವನು, ಫಾಲ್ಗುನನೊಡನೆ ಮಹಾಪ್ರಸ್ಥಾನಯಾತ್ರೆಯನ್ನು ಹೊರಟಕಾಲದಲ್ಲಿ ಎಲೈ ರಾಜನೇ ! ನಿನ್ನ ಹಿತದೃಷ್ಟಿಯಿಂದ "ಖಾಂಡವಪ್ರಸ್ಥದಲ್ಲಿ ಎಷ್ಟುಕಾಲ ವಜ್ರಮಹಾರಾಜನು ಈ ಭೂಮಿಯನ್ನು ಪರಿಪಾಲಿಸುವನೋ ಅಲ್ಲಿಯವರೆಗೆ ಈ ಮಹಾಸಭೆಯು ನನ್ನ ಅಪ್ಪಣೆಯಿಂದ ಈ ಭೂಲೋಕದಲ್ಲಿರಲಿ" ಹೀಗೆಂದು ಅಚಲರಾಜನೊಡನೆ ಹೇಳಿದಬಳಿಕ ಮತ್ತೂ ಇಂತೆಂದನು

ಎಲೈ ರಾಜನೇ ! ನೀನೂ ಸಹ ಸ್ವರ್ಗಕ್ಕೆ ಹೊರಟುಹೋದಬಳಿಕ ಈ ಮಯಸಭೆಯು ನಿನ್ನ ಅಪ್ಪಣೆಯಂತೆ ಹಿಮಾಚಲಪರ್ವತದಲ್ಲಿರುವ ಬಿಂದುಸರೋವರವೆಂಬ

ಉಕ್ತಂ ಹಿ ತೇ ಕಾಲಗತಂ ಮಯೈತ-
ದಾಯುಃ ಪ್ರಮಾಣಂ ಚ ತಥಾ ತವೋಕ್ತಂ ।
ಅತಃ ಪರಂ ಧರ್ಮಭೃತಾಂ ವರಿಷ್ಠ
ವದಸ್ವ ಕಿಂ ತೇ ಕಥಯಾಮಿ ರಾಜನ್ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಯಾನಕಾಲವರ್ಣನೋ ನಾಮ
ಅಶೀತಿತಮೋಽಧ್ಯಾಯಃ

---

ಹಸರಿನ ಕೋಳಕ್ಕೆ ಹೊರಟುಹೋಗುತ್ತದ ವೂರ್ವದಲ್ಲಿ ಈ ಸಭೆಯು ಕಿಂಕರರೆಂಬ ದಾನವರಿಂದ ಸ್ಥಾಪಿತವಾದುದು

ಎಲೈ ವಜ್ರರಾಜನೇ ! ಈರೀತಿ ನಿನಗೋಸ್ಕರ ಕಾಲಗತಿಯೂ ಆಯುಃಪ್ರಮಾಣವೂ ಹೇಳಲ್ಪಟ್ಟಿತು ಇನ್ನುಮುಂದೆ ನಿನಗೆ ಬೇಕಾದುದನ್ನು ಕೇಳೆಂದು ಮಾರ್ಕಂಡೇಯರು ಹೇಳಿದರೆಂಬಲ್ಲಿಗೆ,

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಯಾನಕಾಲವರ್ಣನೆಯೆಂಬ ಹೆಸರಿನ
ಎಂಭತ್ತನಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಾಶೀತಿತಮೋಽಧ್ಯಾಯಃ ॥



॥ ವಜ್ರ ಉವಾಚ ॥

ತ್ವಯೋದಿತಾನಾಂ ಧರ್ಮಜ್ಞ ಸಮಾಸೇನ ಪೃಥಕ್ಪೃಥಕ್ ।
ಕಾಲಸ್ಯಾವಯವಾನಾಂ ಚ ಶ್ರೋತುಮಿಚ್ಛಾಮಿ ದೇವತಾಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪೌರುಷಂ ಯದಹೋರಾತ್ರಂ ಶ್ರುತವಾನಸಿ ಯಾದವ ।
ಕಾಲಾತ್ಮಾ ಪುರುಷಸ್ತಸ್ಯ ಸರ್ವಭೂತಪತಿಃ ಪ್ರಭುಃ ॥ ೨ ॥

ಕಲ್ಪಸ್ಯ ದೈವತಂ ಬ್ರಹ್ಮಾ ಯಸ್ಯೇದಂ ಸಕಲಂ ಜಗತ್ ।
ಕ್ರಮಾನ್ಮನ್ವಂತರಾಣಾಂ ತು ಮನವಸ್ತು ಚತುರ್ದಶ ॥ ೩ ॥

---

### ಎಂಭತ್ತೊಂದನೆಯ ಅಧ್ಯಾಯವು

೧ ವಜ್ರರಾಜನು ಪುನಃ ಕೇಳುತ್ತಾನೆ —ಎಲೈ ಧರ್ಮಜ್ಞನಾದ ಮಾರ್ಕಂಡೇಯನೇ! ಒಟ್ಟಾಗಿ ನೀನು ಹೇಳಿದ ಕಾಲದ ಅವಯವಗಳ ದೇವತೆಗಳು ಯಾರು ಯಾರೆಂಬುದನ್ನು ಕೇಳಬೇಕೆಂದು ಆಶಿಸಡುತ್ತೇನೆ.

೨ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರನರೇಂದ್ರನೇ! ಪೌರುಷದಿವಸದ ವರ್ಣನೆಯನ್ನು ನಾನು ಹಿಂದೆಯೇ ಮಾಡಿರುವೆನಷ್ಟೆ? ಆ ಪೌರುಷ ದಿವಸಕ್ಕೆ ಸಕಲಭೂತಪತಿಯೂ ಪ್ರಭುವೂ ಆದ ಕಾಲಾತ್ಮನೇ ಪುರುಷನೆಂದು ತಿಳಿ

೩. ಕಲ್ಪಕ್ಕೆ ದೇವತೆಯು ಬ್ರಹ್ಮನು ಈ ಜಗತ್ತು ಅವನ ವಶವಾಗಿರುವುದು ಕ್ರಮವಾಗಿ ೧೪ ಮನ್ವಂತರಗಳಿಗೂ ಚತುರ್ದಶ (ಹದಿನಾಲ್ಕು) ಮನುಗಳು ದೇವತೆಗಳು.

ಸ್ವಾಯಂಭುವಸ್ತು ಪ್ರಥಮೋ ಮನುಃ ಸ್ವಾರೋಚಿಷಸ್ತಥಾ ।
ವೈವಸ್ವತೋಽಥ ಸಾವರ್ಣಿರ್ಬ್ರಹ್ಮಪುತ್ರಸ್ತಥೈವ ಚ　　　॥ ೪ ॥

ಧರ್ಮಪುತ್ರೋ ರುದ್ರಪುತ್ರೋ ದಕ್ಷಪುತ್ರಶ್ಚ ಯಾದವ ।
ರೌಚ್ಯೋ ಭೌತ್ಯಶ್ಚ ವಿಶ್ವಾತ್ಮಾ ಮನವಸ್ತು ಚತುರ್ದಶ　　　॥ ೫ ॥

॥ ವಜ್ರ ಉವಾಚ ॥

ಯ ಏತೇ ಭವತಾ ಪ್ರೋಕ್ತಾ ಮನವಶ್ಚ ಚತುರ್ದಶ ।
ನಿತ್ಯಂ ಬ್ರಾಹ್ಮೇ ದಿನೇ ಪ್ರಾಪ್ತೇ ಏತ ಏವ ಕ್ರಮಾದ್ದ್ವಿಜ　　　॥ ೬ ॥

ಭವಂತ್ಯುತಾನ್ಯೇ ಧರ್ಮಜ್ಞ ಏತನ್ಮೇ ಛಿಂಧಿ ಸಂಶಯಂ ।
ಅಥವಾ ವರ್ತಮಾನೇಸ್ಮಿನ್ಭವತಾ ಮನು ಕೀರ್ತಿತಾಃ　　　॥ ೭ ॥

॥ ಮಾರ್ಕಂಡೇಯ ಉವಾಚ ॥

ಏತ ಏವ ಮಹಾರಾಜ ಮನವಸ್ತು ಚತುರ್ದಶ ।
ಕಲ್ಪೇಕಲ್ಪೇ ತ್ವಯಾ ಜ್ಞೇಯಾ ನಾತ್ರ ಕಾರ್ಯಾ ವಿಚಾರಣಾ　　　॥ ೮ ॥

---

೪-೫　ಆ ಹದಿನಾಲ್ಕುಮಂದಿ ಮನುಗಳು ಯಾರೆಂದರೆ -೧ ಸ್ವಾಯಂಭುವ, ೨ ಸ್ವಾರೋಚಿಷ, ೩ ವೈವಸ್ವತ, ೪ ಸಾವರ್ಣಿ, ೫ ಬ್ರಹ್ಮಪುತ್ರ, ೬ ಧರ್ಮ, ೭ ರುದ್ರಪುತ್ರ, ೮ ದಕ್ಷಪುತ್ರ, ೯ ರೌಚ್ಯ, ೧೦ ಭೌತ್ಯ, ೧೧ ವಿಶ್ವಾತ್ಮ, ೧೨ ಉತ್ತಮ, ೧೩ ತಾಮಸ, ೧೪ ರೈವತ

೬-೭　ವಜ್ರಮಹಾರಾಜನು ಕೇಳುತ್ತಾನೆ —ಎಲೈ ಮಾರ್ಕಂಡೇಯನೇ ! ಈಗ ನೀನು ಹೇಳಿದ ಯಾವ ಹದಿನಾಲ್ಕುಮಂದಿ ಮನುಗಳುಂಟೋ ಅವರು ಪ್ರತಿಯೊಂದು ಬ್ರಹ್ಮನ ಹಗಲಿನಲ್ಲಿ ಕ್ರಮವಾಗಿ ಬರುತ್ತಿರುತ್ತಾರೋ ಅಥವಾ ಬೇರೆ ಯಾರಾದರೂ ಇರುತ್ತಾರೋ ದಯಮಾಡಿ ಈಗ ಬಂದಿರುವ ನನ್ನ ಸಂಶಯವನ್ನು ಪರಿಹಾರಮಾಡು

೮-೯　ಮಾರ್ಕಂಡೇಯನು ಹೇಳುತ್ತಾನೆ —ಎಲೈ ಮಹಾರಾಜನೇ ! ಕಲ್ಪಕಲ್ಪದಲ್ಲೂ ಇದೇ ಮನುಗಳೇ ಬರುತ್ತಾರೆಂದು ತಿಳಿದುಕೋ　ಸಂಶಯಪಡಬೇಡ

ಏಕರೂಪಾಸ್ತ್ರಯಃ ಕಲ್ಪಾ ಜ್ಞಾತವ್ಯಾಸ್ಸರ್ವ ಏವ ಹಿ ।
ಕ್ವಚಿತ್ಕಿಂಚಿದ್ವಿಭಿನ್ನಾಶ್ಚ ಮಾಯಯಾ ಪರಮೇಷ್ಠಿನಃ ॥ ೯ ॥

ಜ್ಞಾತವ್ಯಮೇಕರೂಪತ್ವಮಬ್ದಾನಾಂ ಚ ತಥಾ ತ್ವಯಾ ।
ಕಲ್ಪೇಕಲ್ಪೇ ಮಹಾರಾಜ ಮನೂನಾಂ ಚ ವಿಶೇಷತಃ ॥ ೧೦ ॥

॥ ವಜ್ರ ಉವಾಚ ॥

ಕಲ್ಪಾನಾಂ ಜನಸಾದೃಶ್ಯೇ ಯುಕ್ತಿರ್ನೈವೋಪಪದ್ಯತೇ ।
ಕದಾಚಿದಪಿ ಧರ್ಮಜ್ಞ ತತ್ರ ಪಶ್ಯಾಮಿ ಕಾರಣಂ ॥ ೧೧ ॥

ಏಕಸ್ಮಿನ್ನಂತರೇ ಮುಕ್ತಿಂ ಕಲ್ಪೇಕಲ್ಪೇ ಗತೇ ದ್ವಿಜ ।
ಪ್ರಭವಿಷ್ಯಜ್ಜಗಚ್ಛೂನ್ಯಂ ಕಾಲಸ್ಯಾದೇರಭಾವತಃ ॥ ೧೨ ॥

॥ ಮಾರ್ಕಂಡೇಯ ಉವಾಚ ॥

ಜೀವಸ್ಯಾನ್ಯಸ್ಯ ಸರ್ಗೇಣ ನರೇ ಮುಕ್ತಿಮುಪಾಗತೇ ।
ಅಚಿಂತ್ಯಶಕ್ತಿರ್ಭಗವಾನ್ಜಗತ್ಪೂರಯತೇ ಸದಾ ॥ ೧೩ ॥

---

ಮೂರು ಕಲ್ಪಗಳೂ ಒಂದೇರೂಪವಾಗಿರುವುವು ಅಲ್ಲದೆ ಪರಮಾತ್ಮನ ಮಾಯೆಯಿಂದ ಸ್ವಲ್ಪಸ್ವಲ್ಪ ಭೇದದಿಂದ ಕೂಡಿರುವುವು

೧೦ ಪ್ರತಿಯೊಂದು ಮನುಗಳ ಕಲ್ಪದಲ್ಲೂ ಬರತಕ್ಕ ಸಂವತ್ಸರಗಳಿಗ ವಿಶೇಷತಃ ಒಂದೇರೂಪವೆಂದು ತಿಳಿಯತಕ್ಕದು

೧೧-೧೨ ವಜ್ರಮಹಾರಾಜನು ಪ್ರಶ್ನಿಸುವನು — ಕಲ್ಪಗಳೊಳಗೆ ಯಾವಾಗಲೂ ಜನಸಾದೃಶ್ಯವಿರುವುದೆಂಬ ವಿಷಯದಲ್ಲಿ ಯುಕ್ತಿಯು ಪ್ರಯೋಜನಕ್ಕೆ ಬರುವುದಿಲ್ಲ ಯಾವಾಗಲೂ ಆ ವಿಷಯದಲ್ಲಿ ಸರಿಯಾದ ಕಾರಣವಿದ್ದೇ ಇದೆ ಮಧ್ಯೆಮಧ್ಯೆ ಬರುವ ಕಲ್ಪಕಲ್ಪಗಳಲ್ಲೆಲ್ಲಾ ಜನರು ಮುಕ್ತಿಹೊಂದುವುದಾದರೆ ಮುಂದೆ ಉತ್ಪತ್ತಿಯಾಗುವ ಜಗತ್ತು ಜನಶೂನ್ಯವಾಗಿ ಹೋದೀತು ಆಗ ಕಾಲದ ಆದಿಯೇ ಅಭಾವವಾದೀತು

೧೩ ಮಾರ್ಕಂಡೇಯನು ಹೇಳುತ್ತಾನೆ —ಒಬ್ಬ ಜೀವ (ಮನುಷ್ಯ) ನು ಮುಕ್ತಿಹೊಂದುತ್ತಿರುವ ಸಮಯದಲ್ಲೇ ಮತ್ತೊಂದು ಜೀವವನ್ನು ಅಚಿಂತ್ಯಶಕ್ತಿಯುಕ್ತನಾದ ಭಗವಂತನು ಸೃಷ್ಟಿಸಿ ಸರ್ವದಾ ಜಗತ್ತನ್ನು ಪೂರ್ಣವಾಗಿ ತುಂಬುತ್ತಿರುತ್ತಾನೆ

ಬ್ರಹ್ಮಣಾ ಸಹ ಮುಚ್ಯಂತೇ ಬ್ರಹ್ಮಲೋಕಮುಪಾಗತಾಃ ।
ಸೃಜ್ಯಂತೇ ಚ ಮಹಾಕಲ್ಪೇ ತದ್ವಿಧಾಶ್ಚಾಪರೇ ಜನಾಃ ॥ ೧೪ ॥

ತೇ ಪ್ರಾಪ್ತಾಃ ಪರಮಂ ಸ್ಥಾನಂ ಯೇಷಾಂ ಜನ್ಮ ನ ವಿದ್ಯತೇ ।
ಸಮಜೀವಪ್ರಮಾಣಾಶ್ಚ ಸರ್ವೇ ಕಲ್ಪಾಸ್ತಥಾ ನೃಪ ।
ಬ್ರಹ್ಮಲೋಕೇ ವಿಷ್ಣುಲೋಕೇ ರುದ್ರಲೋಕೇ ಚ ಯೇ ಗತಾಃ ॥ ೧೫ ॥

ವಿಷ್ಣುಲೋಕಾಸ್ಸುಬಹವೋ ರುದ್ರಲೋಕಾಸ್ತಥೈವ ಚ ।
ಶ್ವೇತದ್ವೀಪಗತಾ ಯೇ ಚ ತೇಷಾಂ ಜನ್ಮ ನ ವಿದ್ಯತೇ ॥ ೧೬ ॥

ದನ ತು ಸರ್ವೇಷು ರಾಜೇಂದ್ರ ತೇಷು ಮುಕ್ತಿಃ ಪ್ರಕೀರ್ತಿತಾ ।
ಬ್ರಹ್ಮಲೋಕೋಪರಿಷ್ಟಾಚ್ಚ ಯೇ ಲೋಕಾ ರೌದ್ರವೈಷ್ಣವಾಃ ॥ ೧೭ ॥

ಮಯೋದಿತಾಸ್ತಯೋರ್ಗತ್ವಾ ಪುನರ್ಜನ್ಮ ನ ವಿದ್ಯತೇ ।
ಮಹಾಕಲ್ಪಕ್ಷಯೇ ಜೀವಾಃ ಸರ್ವೇ ತಂ ಪರಮೇಶ್ವರಂ ॥ ೧೮ ॥

---

೧೪ ಮುಕ್ತಜೀವರು ಬ್ರಹ್ಮನ ಕಲ್ಪಾಂತ್ಯದಲ್ಲಿ ಬ್ರಹ್ಮನೊಡನೆ ಮುಕ್ತರಾಗಿ ಬ್ರಹ್ಮಲೋಕವನ್ನು ಹೊಂದುತ್ತಾರೆ ಆಗ ಮಹಾಕಲ್ಪಾದಿಯಲ್ಲಿ ಅದೇವಿಧವಾದ ಬೇರೆ ಜನರು ಸೃಷ್ಟಿಸಲ್ಪಡುತ್ತಾರೆ

೧೪-೧೫ ಯಾರು ಪುನರ್ಜನ್ಮರಹಿತರಾಗಿ ಮುಕ್ತಿಯನ್ನು ಹೊಂದುತ್ತಾರೋ ಬ್ರಹ್ಮಲೋಕ, ರುದ್ರಲೋಕ, ವಿಷ್ಣುಲೋಕಗಳಿಗ ಯಾವ ಪುಣ್ಯಾತ್ಮರು ಹೊರಟು ಹೋಗುತ್ತಾರೋ ಅವರ ಬದಲಾಗಿ ಬೇರಯ ಜೀವರು ಸಕಲ ಕಲ್ಪದಲ್ಲೂ ಸಮ ಪ್ರಮಾಣದಿಂದ ಸೃಷ್ಟರಾಗುತ್ತಾರೆ

೧೬ ಅನೇಕ ವಿಷ್ಣುಲೋಕಗಳೂ, ಅನೇಕ ರುದ್ರಲೋಕಗಳೂ, ಶ್ವೇತ ದ್ವೀಪವೂ ಸಹ ಇವೆ ಪುಣ್ಯವಶದಿಂದ ಆ ಲೋಕಗಳಿಗೆ ಹೋದವರನ್ನು ಮುಕ್ತ ರೆಂದು ತಿಳಿದುಕೋ ಅವರಿಗ ಪುನರ್ಜನ್ಮವಿಲ್ಲ

೧೭-೧೮ ಎಲೈ ವಜ್ರಭೂಪತಿಯೇ ಕೇಳು ಆ ಲೋಕಗಳಲ್ಲೆಲ್ಲಾ ಮುಕ್ತಿ ಹೊಂದದೆ ಹಿಂತಿರುಗುವವರೂ ಉಂಟು ಬ್ರಹ್ಮಲೋಕದ ಮೇಲುಗಡೆಯಲ್ಲಿ ರುದ್ರ ಲೋಕ ವಿಷ್ಣುಲೋಕಗಳೆರಡೂ ಇವೆ ನನ್ನಿಂದ ಹೇಳಲ್ಪಟ್ಟ ಸುಕೃತಿಗಳು ಅವುಗಳಿಗೆ ಪ್ರವೇಶಿಸಿ ಪುನರ್ಜನ್ಮವಿಲ್ಲದವರಾಗುತ್ತಾರೆ. ಅಂಥವರಲ್ಲಿ ಯಾರಾದರೂ ಜ್ಞಾನಹೀನ

ಪ್ರಾಪ್ಯಾಪಿ ವಿನಿವರ್ತಂತೇ ವಿನಾ ಜ್ಞಾನೇನ ಯಾದವ ।
ಭೂಯ ಏವ ತದಾ ಲೋಕಾನ್ಸರ್ಗೇ ಸೃಜತಿ ತಾನ್ಪ್ರಭುಃ ॥ ೧೯ ॥

ಕಲ್ಪಮಧ್ಯೇ ತು ಕಲ್ಪಾಂತೇ ಜ್ಞಾನೋಜ್ಝಿತಕಲೇವರಾಃ ।
ಪ್ರಾಪ್ನುವಂತಿ ಪರಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ ॥ ೨೦ ॥

ಜೀವಬೀಜಾನ್ಯಸರ್ಗೇಣ ತತ್ಸ್ಥಾನಂ ಪರಮೇಶ್ವರಃ ।
ಪ್ರಪೂರಯತಿ ಧರ್ಮಜ್ಞ ರಾಜನ್ಕೇನಾಪಿ ಹೇತುನಾ ॥ ೨೧ ॥

॥ ವಜ್ರ ಉವಾಚ ॥

ಕಲ್ಪಾನಾಂ ಸತಿ ಸಾದೃಶ್ಯೇ ಯೋ ಭೇದೋ ಭೃಗುನಂದನ ।
ತಮಹಂ ಶ್ರೋತುಮಿಚ್ಛಾಮಿ ತತ್ರ ಮೇ ಕೌತುಕಂ ಮಹತ್ ॥ ೨೨ ॥

---

ರಾಗುವುದಾದರ ಅವರು ಪರಮೇಶ್ವರನ ಸಾಮೀಪ್ಯವನ್ನು ಹೊಂದಿದಾಗ್ಯೂ ಭೂಲೋಕಕ್ಕೆ ಹಿಂತಿರುಗಿ ಬಂದುಬಿಡಬೇಕಾಗುತ್ತದ ಆಗ ಅವರೆಲ್ಲರನ್ನೂ ಮಹಾಪ್ರಭುವು ಸೃಷ್ಟಿಯಾಗುವ ಸಮಯದಲ್ಲಿ ಪುನಃ ಸೃಷ್ಟಿಸಿಬಿಡುತ್ತಾನ

೨೦ ಅಂತಹ ಜೀವರು ಕಲ್ಪಮಧ್ಯದಲ್ಲೂ ಕಲ್ಪಾಂತ್ಯದಲ್ಲೂ ಜ್ಞಾನದಿಂದಲೇ ಇಚ್ಛಾಮರಣವುಳ್ಳವರಾಗಿ ಕಳೇಬರವನ್ನು ತ್ಯಜಿಸಿ ಪರಮಪದವನ್ನು ಹೊಂದುವರು ಅಂತಹವರ ಪದವಿಯು ವಿಷ್ಣುವಿನ ಪದವಿಗಿಂತ ಶ್ರೇಷ್ಠವಾದುದು

೨೧ ಎಲೈ ಧರ್ಮಜ್ಞನಾದ ಮಹಾರಾಜನೇ ಕೇಳು ಆರೀತಿ ಮುಕ್ತರಾದವರ ಸ್ಥಾನವನ್ನು ಏನಾದರೊಂದು ಕಾರಣದಿಂದ ಪರಮೇಶ್ವರನು ಬೇರೇ ಜೀವಬೀಜಸೃಷ್ಟಿಯಿಂದ ತುಂಬಿಬಿಡುತ್ತಾನೆ

೨೨ ವಜ್ರಮಹಾರಾಜನು ಅದಕ್ಕೆ ಪ್ರಶ್ನೆಮಾಡುತ್ತಾನೆ —ಎಲೈ ಮಾರ್ಕಂಡೇಯನೇ! ಕಲ್ಪಗಳು ಒಂದಕ್ಕೊಂದಕ್ಕೆ ಸಾದೃಶ್ಯವಿದ್ದಾಗ್ಯೂ, ಯಾವುದಾದರೊಂದು ಸಣ್ಣ ಭೇದವಿದೆಯೇನೋ ಎಂದು ಸಂದೇಹವಿದೆ ಅದನ್ನು ತಿಳಿಯಲು ನನಗೆ ಕುತೂಹಲವುಂಟಾಗಿದೆ, ದಯಮಾಡಿ ತಿಳಿಸು

॥ ಮಾರ್ಕಂಡೇಯ ಉವಾಚ ॥

ಕಲ್ಪಾನಾಂ ಸತಿ ಸಾದೃಶ್ಯೇ ಶೃಣು ಭೇದಂ ನರಾಧಿಪ ।
ಸಮತೀತೇ ಯಥಾ ಕಲ್ಪೇ ಷಷ್ಠೇ ಮನ್ವಂತರೇ ಗತೇ ॥ ೨೩ ॥

ಸಪ್ತಮಸ್ಯ ಚತುರ್ವಿಂಶೇ ರಾಜಂಸ್ತ್ರೇತಾಯುಗೇ ತದಾ ।
ಯದಾ ರಾಮೇಣ ಸಮರೇ ಸಗಣೋ ರಾವಣೋ ಹತಃ ॥ ೨೪ ॥

ರಾಮೇಣೈವ ತದಾ ರಾಜನ್ಕುಂಭಕರ್ಣೋ ನಿಪಾತಿತಃ ।
ವರ್ತಮಾನೇ ತು ಯದ್ವೃತ್ತಂ ಕಲ್ಪೇ ಯದುಕುಲೋದ್ವಹ ॥ ೨೫ ॥

ರಾಮಸ್ಯ ಚರಿತಂ ಬದ್ಧಂ ತದಾ ವಾಲ್ಮೀಕಿನಾ ಶುಭಂ ।
ಅತೀತಕಲ್ಪೇ ಯದ್ವೃತ್ತಂ ಮಯಾ ತತ್ಕಾಮ್ಯಕೇ ವನೇ ॥ ೨೬ ॥

ಯುಧಿಷ್ಠಿರಾಯ ಕಥಿತಂ ಧರ್ಮಪುತ್ರಾಯ ಪಾರ್ಥಿವ ।
ಕಲ್ಪಾನಾಂ ಸತಿ ಸಾದೃಶ್ಯೇ ಭೇದ ಏಷ ತವೇರಿತಃ ॥ ೨೭ ॥

ತೇಷಾಂ ಸ್ವರೂಪಂ ಚ ತಥಾ ತಥಾ ರಾಜನ್ನನುಕ್ರಮಂ ।
ಬ್ರಹ್ಮಜನ್ಮನಿಸರ್ಗಾಶ್ಚ ತಥಾ ತಸ್ಯ ಪೃಥಗ್ವಿಧಾಃ ॥ ೨೮ ॥

---

೨೩-೨೮ ಮಾರ್ಕಂಡೇಯನು ಹೇಳುತ್ತಾನೆ : ಕಲ್ಪಗಳು ಒಂದಕ್ಕೊಂದು ಸಮಾನವಾಗಿದ್ದಾಗ್ಯೂ ಅವರಲ್ಲಿನ ಭೇದವನ್ನೇನೆಂಬುದನ್ನು ತಿಳಿಸುವೆನು ಕೇಳು ಮಹಾರಾಜ ! ಆರನೇ ಮನ್ವಂತರವು ಕಳೆದು ಏಳನೇ ಮನ್ವಂತರವು ಆರಂಭವಾಗಿ ಅವರಲ್ಲಿನ ಇಪ್ಪತ್ತನಾಲ್ಕನೇ ತ್ರೇತಾಯುಗದಲ್ಲಿ ರಘುವಂಶೋತ್ಪನ್ನನಾದ ವಿಷ್ಣುರೂಪಿ ರಾಮನಿಂದ, ಸಪರಿವಾರನಾದ ರಾವಣನು ಸಂಹರಿಸಲ್ಪಟ್ಟನು ಅದೇ ಸಮಯದಲ್ಲಿ ಅದೇ ರಾಮನಿಂದಲೇ ಕುಂಭಕರ್ಣನೂ ಸಂಹೃತನಾದನು ಎಲೈ ಯದುಕುಲತಿಲಕನಾದ ವಜ್ರನರೇಂದ್ರನೇ ! ಈಗ ನಡೆಯುತ್ತಿರುವ ವರ್ತಮಾನಕಲ್ಪದ ತ್ರೇತಾಯುಗದಲ್ಲಿ ವಾಲ್ಮೀಕಿಮಹರ್ಷಿಯಿಂದ ಶ್ರೀರಾಮಚರಿತ್ರವು ರಾಮಾಯಣವೆಂಬ ಆದಿಕಾವ್ಯ ರೂಪವಾಗಿ ರಚಿಸಲ್ಪಟ್ಟಿತು ಹಿಂದೆ ಕಳೆದುಹೋದ ಕಲ್ಪದಲ್ಲಿ ಯಾವ ಚರಿತ್ರೆಯು ನನ್ನಿಂದ ಕಾಮ್ಯಕವನದಲ್ಲಿ ಯುಧಿಷ್ಠಿರನಾದ ಧರ್ಮರಾಜನಿಗೆ ಹೇಳಲ್ಪಟ್ಟಿತೋ ಅದೇ ಈ ರಾಮಾಯಣದ ಕಥೆಯೆಂದು ತಿಳಿ ಮಹಾರಾಜ ಕಲ್ಪಗಳ ಸಾದೃಶ್ಯವಿದ್ದಾಗ್ಯೂ ಯಾವಭೇದ ಉಂಟೆಂಬುದನ್ನು ಈಗ ನೀನು ತಿಳಿದಯಷ್ಟೆ ? ಆ ಭೇದಗಳಸ್ವರೂಪವೂ ಬ್ರಹ್ಮನ ಜನ್ಮದಿನಗಳಲ್ಲಿ ನಡೆಯುವ ಸೃಷ್ಟಿಕ್ರಮಗಳೂ, ಹಾಗೆಯೇ ಅವುಗಳ ಬೇರೆ ಬೇರೆ ಭೇದಗಳು

ಕಾರ್ತಿಕೇಯಸ್ಯ ಲಕ್ಷ್ಮ್ಯಾಶ್ಚ ತಥಾ ದೇವಸ್ಯ ಶೂಲಿನಃ ।
ಏವಮಾದ್ಯಾಃ ಪ್ರಭೇದಾಸ್ತು ತ್ವಯಾ ಜ್ಞೇಯಾ ನು ಪಾರ್ಥಿವ ।
ಕಲ್ಪಾದೀನಾಂ ಮಹಾರಾಜ ಚಾನ್ಯತ್ರಾಪಿ ಯದೂದ್ವಹ ॥ ೨೯ ॥

ಸಾದೃಶ್ಯಭೇದಾವಿಹ ಭೂಮಿಪಾಲ
ಕಲ್ಪಸ್ಯಕಲ್ಪಸ್ಯ ಮಯೋದಿತೌ ತೇ ।
ಯುಗಾದಿಭಿನ್ನಸ್ಯ ಚ ದೈವತಾನಿ
ವಕ್ಷ್ಯಾಮ್ಯತಸ್ತಾನಿ ನಿಬೋಧ ರಾಜನ್ ॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಲ್ಪಸಾದೃಶ್ಯೋ ನಾಮ
ಏಕಾಶೀತಿತಮೋಽಧ್ಯಾಯಃ

---

೨೯ ಕುಮಾರಸ್ವಾಮಿಯ ಉತ್ಪತ್ತಿಯೂ, ಲಕ್ಷ್ಮಿಯ ಜನನ ವೃತ್ತಾಂತವೂ ಪರಮೇಶ್ವರನ ಚರಿತ್ರೆಗಳೇ ಮುಂತಾದ ಬೇರೆಬೇರೆ ಭೇದಗಳು ಕಲ್ಪಾದಿಗಳಲ್ಲೂ ನಡೆದಿದಯೆಂಬ ವಿಚಾರವು ನಿನ್ನಿಂದ ಚೆನ್ನಾಗಿ ತಿಳಿಯಲ್ಪಟ್ಟಿರಲಿ.

೩೦ ಎಲೈ ವಜ್ರಭೂಮಿಶ್ವರನೇ ! ಕಲ್ಪಕಲ್ಪದಲ್ಲೂ ನಡೆಯುವ ಸಾದೃಶ್ಯ ಭೇದಗಳನ್ನು ನಿನಗೆ ತಿಳಿಸಿರುತ್ತೇನೆ. ಇನ್ನು ಮುಂದೆ ಯುಗವೇ ಮುಂತಾದ ಭಿನ್ನ ಭಿನ್ನಕಾಲದ ದೇವತೆಗಳ ಹೆಸರನ್ನು ತಿಳಿಸುತ್ತೇನೆ, ಮನಸ್ಸಿಟ್ಟು ಕೇಳಯ್ಯಾ ಎಂದು ಮಾರ್ಕಂಡೇಯಮಹರ್ಷಿಯು ವಜ್ರನರಪತಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ
ರೂಪವಾದ ಕಲ್ಪಸಾದೃಶ್ಯವೆಂಬ ಹೆಸರಿನ ಎಂಭತ್ತೊಂದನೆಯ ಅಧ್ಯಾಯವು
ಮುಗಿದುದು

---

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವ್ಯಶೀತಿತಮೋಽಧ್ಯಾಯಃ ॥



॥ ಮಾರ್ಕಂಡೇಯ ಉವಾಚ ॥

ಭಗವಾನ್ವಾಸುದೇವಶ್ಚ ತಥಾ ಸಂಕರ್ಷಣಃ ಪ್ರಭುಃ ।
ಪ್ರದ್ಯುಮ್ನಶ್ಚಾನಿರುದ್ಧಶ್ಚ ಕೃತಾದೀನಾಂ ಚ ದೈವತಾಃ ॥ ೧ ॥

ತಥಾ ಖಂಡಯುಗಾನೀಹ ದ್ವಾದಶೋಕ್ತಾನಿ ಭೂಪತೇ ।
ಷಷ್ಟ್ಯಾಬ್ದೇ ಚ ನಿವರ್ತಂತೇ ಪಂಚಾಬ್ದಾನಿ ಪೃಥಕ್ಪೃಥಕ್ ॥ ೨ ॥

ತೇಷಾಂ ತವ ಪ್ರವಕ್ಷ್ಯಾಮಿ ದೈವತಾಂಸ್ತು ಪೃಥಕ್ಪೃಥಕ್ ।
ವಿಷ್ಣುರ್ಬೃಹಸ್ಪತಿಶ್ಶಕ್ರೋ ವಹ್ನಿಸ್ತ್ವಷ್ಟಾ ತಥೈವ ಚ ॥ ೩ ॥

---

### ಎಂಭತ್ತೆರಡನೆಯ ಅಧ್ಯಾಯವು

೧ ಮಾರ್ಕಂಡೇಯನು ಹೇಳುವನು :— ಕೃತಯುಗಕ್ಕೆ ವಾಸುದೇವ, ತ್ರೇತಾಯುಗಕ್ಕೆ ಸಂಕರ್ಷಣ, ದ್ವಾಪರಕ್ಕೆ ಪ್ರದ್ಯುಮ್ನ, ಕಲಿಯುಗಕ್ಕೆ ಅನಿರುದ್ಧ, ಹೀಗೆ ನಾಲ್ಕು ಯುಗಗಳಿಗೂ ನಾಲ್ಕು ದೇವತೆಗಳು

೨ ಎಲೈ ವಜ್ರರಾಜನೇ ! ಕೇಳು ಅದರಂತೆ ಹನ್ನೆರಡು ಖಂಡ ಯುಗಗಳಿರುವುವು ಈ ಹನ್ನೆರಡೂ ಅರವತ್ತುವರ್ಷಗಳಲ್ಲಿ ತಿರುಗುತ್ತಿರುತ್ತವೆ ಒಂದೊಂದು ಖಂಡಯುಗಕ್ಕೂ ಬೇರೆಬೇರೆಯಾಗಿ ಐದೈದು ವರ್ಷಗಳು

೩-೪ ಈ ಹನ್ನೆರಡು ಖಂಡಯುಗವ ದೇವತೆಗಳ ಹೆಸರನ್ನು ಬೇರೆಬೇರೆಯಾಗಿ ಹೇಳುತ್ತೇನೆ ಕೇಳು ೧ ವಿಷ್ಣು, ೨ ಬೃಹಸ್ಪತಿ, ೩. ಇಂದ್ರ, ೪ ಅಗ್ನಿ,

ಅಹಿರ್ಬುಧ್ನ್ಯಶ್ಚ ಪಿತರೋ ವಿಶ್ವೇದೇವಾ ನಿಶಾಕರಃ ।
ಇಂದ್ರಾಗ್ನೀ ಚೈವ ನಾಸತ್ಯೌ ಭಗಶ್ಚೈವ ಮಹಾಬಲಃ ॥ ೪ ॥

ಇತಿ ದ್ವಾದಶ ತೇ ಪ್ರೋಕ್ತಾ ಮಯಾ ಖಂಡಯುಗೇಶ್ವರಾಃ ।
ಅಥ ಷಷ್ಟ್ಯಬ್ದನಾಮಾನಿ ನಿಬೋಧ ಗದತೋ ಮಮ ॥ ೫ ॥

ವರ್ತಮಾನೇ ತಥಾ ಕಲ್ಪೇ ಷಷ್ಠೇ ಮನ್ವಂತರೇ ಗತೇ ।
ತಸ್ಯೈವ ಚ ಚತುರ್ವಿಂಶೇ ರಾಜಂಸ್ತ್ರೇತಾಯುಗೇ ತದಾ ॥ ೬ ॥

ಯದಾ ರಾಮೇಣ ಸಮರೇ ಸಗಣೋ ರಾವಣೋ ಹತಃ ।
ಲಕ್ಷ್ಮಣೇನ ತದಾ ರಾಜನ್ಕುಂಭಕರ್ಣೋ ನಿಪಾತಿತಃ ॥ ೭ ॥

ಮಾಘಶುಕ್ಲಂ ಸಮಾರಭ್ಯ ಚಂದ್ರಾರ್ಕೌ ವಾಸವರ್ಕ್ಷಗೌ ।
ಜೀವಯುಕ್ತೌ ಯದಾ ಸ್ಯಾತಾಂ ಷಷ್ಟ್ಯಬ್ದಾದಿಸ್ತದಾ ಸ್ಮೃತಃ ॥ ೮ ॥

ಪ್ರಭವೋ ವಿಭವಃ ಶುಕ್ಲಃ ಪ್ರಮೋದಶ್ಚ ಪ್ರಜಾಪತಿಃ ।

೫ ಬ್ರಹ್ಮ, ೬ ಅಹಿರ್ಬುಧ್ನ್ಯ, ೭ ಪಿತೃಗಳು, ೮ ವಿಶ್ವೇದೇವರು, ೯ ಚಂದ್ರ, ೧೦ ಇಂದ್ರಾಗ್ನಿಗಳು, ೧೧ ಅಶ್ವಿನೀದೇವತೆಗಳು, ೧೨ ಮಹಾಬಲನಾದ ಭಗನಂತ ಇವರುಗಳಿಗೆ ಖಂಡಯುಗೇಶ್ವರರೆಂದು ಹೆಸರು

೫ ಅನಂತರ ಅರವತ್ತು ಸಂವತ್ಸರಗಳ ಹೆಸರುಗಳನ್ನು ನಿನಗೆ ತಿಳಿಸುತ್ತೇನೆ, ಕೇಳು ವಜ್ರರಾಜ

೬-೭ ಈಗ ನಡೆಯುತ್ತಿರುವ (ವರ್ತಮಾನ) ಕಲ್ಪದ ಆರನೇ ಮನ್ವಂತರವು ಕಳೆದ ಬಳಿಕ ಇಪ್ಪತ್ತನಾಲ್ಕನೇ ತ್ರೇತಾಯುಗದಲ್ಲಿ, ಯಾವಾಗ ರಾವಣನು ರಾಮನಿಂದ ಯುದ್ಧರಂಗದಲ್ಲಿ ಮಡಿದನೋ, ಲಕ್ಷ್ಮಣನಿಂದ ಕುಂಭಕರ್ಣನು ಮಡಿದನೋ ಆ ಮಾಘ ಶುದ್ಧ ಸಪ್ತಮಿಯಿಂದಾರಂಭಿಸಿ ಚಂದ್ರ ಸೂರ್ಯರು ಮೃಗಶಿರಾ ನಕ್ಷತ್ರಕ್ಕೆ ಪ್ರವೇಶಿಸಿ ಗುರುವಿನೊಡನೆ ಇರಲು ಆರಂಭಮಾಡಿದಾಗಿನಿಂದಲೂ ಅರವತ್ತು ಸಂವತ್ಸರಗಳು ಆರಂಭವಾಗುತ್ತವೆ

೯ ಇಲ್ಲಿಂದಾಚೆಗೆ ಅರವತ್ತು ಸಂವತ್ಸರಗಳ ಹೆಸರುಗಳು ಬಂದಿವೆ — ವೈಷ್ಣವನೆಂಬ (ವಾಸುದೇವ) ಹೆಸರಿನ ಪ್ರಥಮಖಂಡ ಯುಗದಲ್ಲಿ ಬರುವ ಪ್ರಭವ, ವಿಭವ

ವೈಷ್ಣವೇ ತು ಯುಗೇ ಪಂಚ ಪ್ರೋಕ್ತಾಸ್ಸಂವತ್ಸರಾಶ್ಶುಭಾಃ ॥ ೯ ॥

ಅಂಗಿರಾ ಶ್ರೀಮುಖೋ ಭಾವೋ ಯುವಾ ಧಾತಾ ತಥೈವ ಚ ।
ಅಬ್ದಾ ಜೀವಯುಗೇ ಪಂಚ ಯೇಷಾಮಾದ್ಯಾಶ್ಶುಭಾಸ್ತ್ರಯಃ ॥ ೧೦ ॥

ಈಶ್ವರೋ ಬಹುಧಾನ್ಯಶ್ಚ ಪ್ರಮಾಥೀ ವಿಕ್ರಮೋ ವಶಃ ।
ಶಕ್ರಾಬ್ದಾ ಪಂಚ ನಿರ್ದಿಷ್ಟಾಃ ಯೇಷಾಮಾದ್ಯಾವುಭೌ ಶುಭೌ ॥ ೧೧ ॥

ವಹ್ನಿಸ್ಸ್ವಭಾನುಸ್ತರಣೋ ಪಾರಿದಶ್ಚ ತಥಾಽವ್ಯಯಃ ।
ಆಗ್ನೇಯಾಃ ಪಂಚ ನಿರ್ದಿಷ್ಟಾ ದ್ವಿತೀಯಂ ತೇಷ್ವಶೋಭನಂ ॥ ೧೨ ॥

ಸರ್ವಜಿತ್ಸರ್ವಧಾರೀ ಚ ವಿರೋಧೀ ವಿಕೃತಿಃ ಖರಃ ।
ತ್ವಾಷ್ಟ್ರೇ ಪಂಚ ಯುಗೇ ತೇಷಾಂ ದ್ವಿತೀಯಂ ತು ಶುಭಪ್ರದಂ ॥ ೧೩ ॥

---

ಶುಕ್ಲ, ಪ್ರಮೋದೂತ, ಪ್ರಜೋತ್ಪತ್ತಿ ಎಂಬ ಹೆಸರುಗಳ ಐದು ಸಂವತ್ಸರಗಳೂ ಶುಭಕರವಾದುವು

೧೦ ಎರಡನೆಯದು ಬೃಹಸ್ಪತಿ (ಗುರು) ಯುಗ ಈ ಯುಗದ ಐದು ಸಂವತ್ಸರಗಳಾವುವೆಂದರೆ —ಅಂಗಿರಸ, ಶ್ರೀಮುಖ, ಭಾವ, ಯುವ, ಧಾತು, ಈ ಐದು ಸಂವತ್ಸರಗಳಲ್ಲಿ ಮೊದಲನೇ ಮೂರು ವರ್ಷಗಳು ಶುಭಕರಗಳು

೧೧ ಮೂರನೆಯ ಇಂದ್ರಯುಗದಲ್ಲಿ ಬರುವ ಐದು ವರ್ಷಗಳ ಹೆಸರುಗಳಿವು —ಈಶ್ವರ, ಬಹುಧಾನ್ಯ, ಪ್ರಮಾಥಿ, ವಿಕ್ರಮ, ವಿಷು (ವಶ) ಈ ಐದು ವರ್ಷಗಳೊಳಗೆ ಮೊದಲನೆಯ ಎರಡು ಸಂವತ್ಸರಗಳು ಶುಭವು

೧೨ ಚಿತ್ರಭಾನು, ಸ್ವಭಾನು, ತಾರಣ, ಪಾರ್ಥಿವ, (ಅ) ವ್ಯಯ — ಈ ಐದೂ ಅಗ್ನಿಯುಗ ಸಂವತ್ಸರಗಳು ಇದರಲ್ಲಿ ಎರಡನೆಯದು ತೀರಾ ಕೆಟ್ಟದು

೧೩ ಐದನೆಯದು ಬ್ರಹ್ಮಯುಗ ಈ ಯುಗದಲ್ಲಿ ಬರುವ ಸಂವತ್ಸರಗಳ ಹೆಸರಾವುವೆಂದರೆ —ಸರ್ವಜಿತ್, ಸರ್ವಧಾರೀ, ವಿರೋಧಿ, ವಿಕೃತಿ, ಖರ, ಇವುಗಳಲ್ಲಿ ಎರಡನೆಯದು ಬಹಳ ಒಳ್ಳೆಯದು

ನಂದನೋ ವಿಜಯಶ್ಚೈವ ಜಯಃ ಕಾಮುಶ್ಚ ದುರ್ಮುಖಃ ।
ಆಹಿರ್ಬುಧ್ನ್ಯೇ ಯುಗೇ ಪಂಚ ಯೇಷಾಮಾದ್ಯಾ ಹಿತಾಸ್ತ್ರಯಃ ॥ ೧೪ ॥

ಹೇಮಮಾಲೀ ವಿಲಂಬೀ ಚ ವಿಕಾರೀ ಶರ್ವರೀ ಪ್ಲವಃ ।
ಪೈತ್ರ್ಯೇ ಪಂಚಯುಗೇ ತೇಷಾಂ ಪಂಚಮಶ್ಚ ಶುಭಪ್ರದಃ ॥ ೧೫ ॥

ಶೋಕಕೃಚ್ಛುಭಕೃತ್ಕ್ರೋಧೀ ವಿಶ್ವಾವಸುಪರಾವಸೂ ।
ವೈಶ್ವೇ ಪಂಚ ಶುಭಾ ಹ್ಯೇಷಾಮುಚ್ಚೌ ರಾಜನ್ದ್ವಿಪಂಚಮೌ ॥ ೧೬ ॥

ಪ್ಲವಂಗಃ ಕೀಲಕಸ್ಸೌಮ್ಯಸ್ಸೋಮೋ ರೋಧಕೃದೇವ ಚ
ಸೌಮ್ಯೇ ಪಂಚ ಶುಭಾವೇಷಾಂ ಪ್ರಥಮಾನಂತರಾವುಭೌ ॥ ೧೭ ॥

ಧಾವನಂ ಮಥನಂ ವೀರಂ ರಾಕ್ಷಸಂ ಚಾನಲಂ ತಥಾ ।
ಇಂದ್ರಾಗ್ನಿದೈವತೇ ಪಂಚ ಸರ್ವ ಏವ ಶುಭಪ್ರದಾಃ ॥ ೧೮ ॥

---

೧೪ ನಂದನ, ವಿಜಯ, ಜಯ, ಮನ್ಮಥ, ದುರ್ಮುಖಿ —ಇವೈದೂ ಅಹಿರ್ಬುಧ್ನ್ಯಯುಗದ ಪಂಚವರ್ಷಗಳು ಇವುಗಳಲ್ಲಿ ಮೊದಲನೆಯ ಮೂರು ವರ್ಷಗಳು ಮಂಗಳಪ್ರದವು

೧೫ ಪಿತೃದೇವತಾತ್ಮಕವಾದ ಐದುಯುಗದ ಸಂವತ್ಸರಗಳ ಹೆಸರು — ಹೇವಿಳಂಬಿ, ವಿಳಂಬಿ, ವಿಕಾರಿ, ಶಾರ್ವರಿ, ಪ್ಲವ - ಇವುಗಳಲ್ಲೈದನೆಯ ಪ್ಲವವು ಶುಭಕರವು

೧೬, ಶುಭಕೃತ್, ಶೋಭಕೃತ್, ಕ್ರೋಧಿ, ವಿಶ್ವಾವಸು, ಪರಾಭವ ಇವೈದೂ ವಿಶ್ವೇದೇವಯುಗದ ಸಂವತ್ಸರಗಳು ಇವುಗಳಲ್ಲಿ ಎರಡನಯದೂ ಐದೂ ಶುಭಕರಗಳು

೧೭ ಪ್ಲವಂಗ, ಕೀಲಕ, ಸೌಮ್ಯ, ಸಾಧಾರಣ, ವಿರೋಧಿಕೃತ್, ಇವೈದೂ ಸೌಮ್ಯಯುಗ ವರ್ಷಗಳು ಇವುಗಳಲ್ಲಿ ಎರಡು ಮೂರನೆಯವು ಶುಭಕರಗಳು

೧೮ ಪರೀಧಾವಿ (ಧಾವನ), ಪ್ರಮಾದೀಚ (ಮಥನ), ಆನಂದ (ವೀರ), ರಾಕ್ಷಸ, ನಲ (ಅನಲ) —ಈ ಐದೂ ಶುಭಕರ ಸಂವತ್ಸರಗಳಾಗಿ ಇಂದ್ರಾಗ್ನಿದೈವತಾ ಯುಗಗಳೆನಿಸುವುವು.

**ಪಿಂಗಲಃ ಕಾಲಯುಕ್ತಶ್ಚ ಸಿದ್ಧಾರ್ಥೋ ರೌದ್ರಿದುರ್ಮತೀ ।**
**ಆಶ್ವಿನೇಽಪಿ ಯುಗೇ ಪಂಚ ಚತುರ್ಥಸ್ತೇಷು ಶಸ್ಯತೇ　　॥ ೧೯ ॥**

**ದುಂದುಭ್ಯಂಗಾರಕೌ ರಕ್ತಃ ಕ್ರೋಧಶ್ಚಾಪಿ ಕ್ಷಯಸ್ತಥಾ ।**
**ಭಾಗ್ಯೇ ಪಂಚ ಶುಭಾಸ್ಸರ್ವೇ ವಿಶೇಷೇಣ ತು ಪಂಚಮಃ　　॥ ೨೦ ॥**

**ಅತಃ ಪರಂ ಚಾರವಶಾದ್ದೇವಾಚಾರ್ಯಸ್ಯ ಪಾರ್ಥಿವ ।**
**ದ್ವಾದಶಾಬ್ದಾಧಿಪಾಂಸ್ತುಭ್ಯಂ ಕಥಯಾಮಿ ಫಲಾನ್ವಿತಾನ್　　॥ ೨೧ ॥**

**ಆಗ್ನೇಯಕಕ್ಷಗೇ ಜೀವೇ ವರ್ಷಂ ಸ್ಯಾದ್ವಹ್ನಿದೈವತಂ ।**
**ಅಹಿತಂ ತದ್ವಿನಿರ್ದಿಷ್ಟಂ ಗೋದ್ವಿಜಾಗ್ನ್ಯುಪಜೀವಿನಾಂ　　॥ ೨೨ ॥**

**ಸೌಮ್ಯರೌದ್ರೋವಗೇ ಜೀವೇ ಸೌಮ್ಯವರ್ಷಮುದಾಹೃತಂ ।**
**ಈತಯಸ್ಸಕಲಾ ಯತ್ರ ಚಾನಾವೃಷ್ಟಿಭಯಂ ತಥಾ　　॥ ೨೩ ॥**

---

೧೯　ಅಶ್ವಿನೀದೇವತಾಯುಗದ ಪಂಚ ಸಂವತ್ಸರಗಳನ್ನು ತಿಳಿಸುತ್ತೇವೆ — ಪಿಂಗಳ, ಕಾಲಾಯುಕ್ತಿ, ಸಿದ್ಧಾರ್ಥಿ, ರೌದ್ರಿ, ದುರ್ಮತಿ ಇವುಗಳಲ್ಲಿ ನಾಲ್ಕನೆಯದು ಒಳ್ಳೆಯದು

೨೦　ದುಂದುಭಿ, ರುಧಿರೋದ್ಗಾರಿ, ರಕ್ತಾಕ್ಷಿ, ಕ್ರೋಧನ, ಅಕ್ಷಯ :-- ಇವೈದು ವರ್ಷಗಳು ಭಗದ್ದೇವತಾಯುಗಕ್ಕೆ ಸೇರಿ ಎಲ್ಲವೂ ಶುಭ ಸಂವತ್ಸರಗಳೆಂದೂ, ಅವರಲ್ಲೂ ಅಕ್ಷಯ ಸಂವತ್ಸರವು ಪರಮೋತ್ಕೃಷ್ಟವಾದುದೆಂದೂ ಹೇಳಿಸಿಕೊಂಡಿದ

೨೧　ಅಲ್ಲಿಂದ ಮುಂದಕ್ಕೆ ಗುರುಚಾರವಶದಿಂದ ಫಲಪ್ರದರಾದ ದ್ವಾದಶ ಸಂವತ್ಸರಾಧಿಪತಿಗಳನ್ನು ನಿನಗೆ ತಿಳಿಸುತ್ತೇನೆ

೨೨　ಗುರುವು ಕೃತ್ತಿಕಾನಕ್ಷತ್ರಕ್ಕೆ ಪ್ರವೇಶಿಸಿದಾಗ ವಹ್ನಿದೈವತಾಕವಾದ ವರ್ಷವೆಂದು ತಿಳಿಯಬೇಕು ಆಗ ಪಶುಗಳಿಗೂ ಬ್ರಾಹ್ಮಣರಿಗೂ ಅನಿಷ್ಟವೆಂದು ಹೇಳಲ್ಪಟ್ಟಿದ

೨೩　ಗುರುವು ಮೃಗಶಿರ, ಆರ್ದ್ರಾ ಈ ನಕ್ಷತ್ರಗಳಿಗೆ ಪ್ರವೇಶಿಸಿದಾಗ ಸೌಮ್ಯ ವರ್ಷವೆನಿಸುವುದು ಈ ಕಾಲದಲ್ಲಿ ಸಕಲ ಈತಿಬಾಧೆಗಳೂ ಅನಾವೃಷ್ಟಿ ಭಯವೂ ಉಂಟಾಗುವುವು

**ಆದಿತ್ಯಪುಷ್ಯಗೇ ಚಾಬ್ದೋ ವಿಜ್ಞೇಯೋ ಗುರುದೈವತಃ ।**
**ಶುಭಂಕರೀ ಹಿತೋ ಲೋಕೇ ಕ್ಷೇಮಾರೋಗ್ಯಸುಭಿಕ್ಷದಃ ॥ ೨೪ ॥**

**ಸಾರ್ಪಪೈತ್ರ್ಯೇವಗೇ ಜೀವೇ ಪೈತ್ರ್ಯಂ ವರ್ಷಮುದಾಹೃತಂ ।**
**ಹಾರ್ದಂ ವೃಷ್ಟಿಪ್ರದಂ ಲೋಕೇ ಶಿವಸೌಭಿಕ್ಷ್ಯಕಾರಕಂ ॥ ೨೫ ॥**

**ಫಾಲ್ಗುನೀದ್ವಯಹಸ್ತಸ್ಥೇ ವರ್ಷಂ ಭಾಗ್ಯಮುದಾಹೃತಂ ।**
**ಚೌರಪ್ರಾಬಲ್ಯಕಂ ಘೋರಂ ನಾರೀದೌರ್ಬಲ್ಯಕಾರಕಂ ॥ ೨೬ ॥**

**ಚಿತ್ರಾಸ್ವಾತಿಗತೇ ಜೀವೇ ತ್ವಾಷ್ಟ್ರಃ ಸಂವತ್ಸರಃ ಶುಭಃ ।**
**ಶೂಕಧಾನ್ಯಕ್ಷಯಕರಃ ಶಿಬಿಧಾನ್ಯವಿವರ್ಧನಃ ॥ ೨೭ ॥**

**ಇಂದ್ರಾಗ್ನಿದೈವತಂ ಜೀವೇ ವಿಶಾಖಾಮೈತ್ರಸಂಸ್ಥಿತೇ ।**
**ಯಜ್ಞಕ್ರಿಯಾಪ್ರವೃತ್ತಾನಾಂ ಹಿತಂ ಮುದಿತಮಾನಸಂ ॥ ೨೮ ॥**

೨೪ ಗುರುವು ಪುನರ್ವಸು, ಪುಷ್ಯ ನಕ್ಷತ್ರಗಳಲ್ಲಿ ಸಂಚರಿಸುವಾಗ ಗುರುದೈವತಾಬ್ದವೆಂದು ತಿಳಿಯಬೇಕು ಆಗ ಲೋಕಕ್ಕೆ ಮಂಗಳವೂ ಹಿತವೂ ಉಂಟಾಗುವುದು ಆ ಕಾಲವು ಕ್ಷೇಮ ಆರೋಗ್ಯ ಸುಭಿಕ್ಷಗಳಿಂದ ಕೂಡಿರುವುದು

೨೫ ಗುರುವು ಆಶ್ಲೇಷಾ, ಮಘಾ ನಕ್ಷತ್ರಗಳಲ್ಲಿ ಪ್ರವೇಶಿಸಿದಾಗ ಪೈತ್ರ್ಯವರ್ಷವೆಂದು ಹೆಸರು ಆ ಕಾಲವು ಮನೋಹರವಾದುದಾಗಿ ಲೋಕದಲ್ಲಿ ಸುವೃಷ್ಟಿಯುಂಟಾಗಿ ಮಂಗಳವೂ, ಸುಭಿಕ್ಷವೂ ಉಂಟಾಗುವುವು

೨೬ ಪೂರ್ವ ಫಲ್ಗುನೀ (ಪುಬ್ಬ), ಉತ್ತರ ಫಲ್ಗುನೀ (ಉತ್ತರ), ಹಸ್ತ ನಕ್ಷತ್ರಗಳಲ್ಲಿ ಗುರುವು ಸಂಚರಿಸುವಾಗ ಭಾಗ್ಯವರ್ಷವೆಂದು ಹೆಸರು ಆ ಕಾಲವು ಭಯಂಕರವಾದುದಾಗಿ ಚೋರರ ಪ್ರಾಬಲ್ಯವು ಹೆಚ್ಚುವುದು ಹೆಂಗಸರು ದುರ್ಬಲರಾಗುವರು

೨೭ ಗುರುವು ಚಿತ್ತಾ, ಸ್ವಾತೀ ನಕ್ಷತ್ರಗಳಲ್ಲಿ ಸಂಚರಿಸುವಾಗ ತ್ವಾಷ್ಟ್ರ ಸಂವತ್ಸರವೆಂದು ಹೆಸರು ಆ ಕಾಲವು ಶುಭಪ್ರದವಾದುದು ಆಗ ನವಣೆ, ಕಾರುಭತ್ತ ಇವುಗಳು ನಾಶವಾಗುವುವು ಗೋಧಿ, ಕುಸುಬೆ ಇವುಗಳು ಬೆಳೆಯುವುವು

೨೮ ಗುರುವು ವಿಶಾಖ, ಅನೂರಾಧಾ ನಕ್ಷತ್ರಗಳಲ್ಲಿ ಸಂಚರಿಸುವಾಗ ಇಂದ್ರಾಗ್ನಿದೈವತ ವರ್ಷವೆನ್ನಿಸಿಕೊಳ್ಳುವುದು ಆ ಕಾಲದಲ್ಲಿ ಯಜ್ಞಯಾಗಾದಿಗಳಲ್ಲಿ ನಿರತರಾದ ಆಹಿತಾಗ್ನಿಗಳಿಗೆ ಹಿತವೂ ಸಂತೋಷವೂ ಉಂಟಾಗುವುದು

ಜ್ಯೇಷ್ಠಾಮೂಲಗತೇ ಜೀವೇ ಶಾಕ್ತಮಬ್ದಮುದಾಹೃತಂ ।
ಶೂಕಧಾನ್ಯಕ್ಷಯಕರಂ ಭೂತಾನಾಂ ಭಯವರ್ಧನಂ ॥ ೨೯ ॥

ಆಷಾಢಾದ್ವಯಗೇ ಜೀವೇ ವೈಶ್ವದೇವಮುದಾಹೃತಂ ।
ನಾಶುಭಂ ನ ಶುಭಂ ಲೋಕೇ ರಾಜ್ಞೋ ವಿಗ್ರಹಕಾರಕಂ ॥ ೩೦ ॥

ವಿಷ್ಣುವಾಸವಸಂಸ್ಥೇ ತು ವೈಷ್ಣವಂ ಪರಿಕೀರ್ತಿತಂ ।
ಕ್ಷೇಮಸೌಭಿಕ್ಷದಂ ಲೋಕೇ ಪಾಷಂಡಿಪರಿಪೀಡನಂ ॥ ೩೧ ॥

ಪ್ರೋಷ್ಠಪದಾದ್ವಯಗತೇ ಜೀವೇ ವಾರುಣಸಂಸ್ಥಿತೇ ।
ಪೂರ್ವಧಾನ್ಯಪ್ರದಂ ತ್ವಾಜಂ ಪಶ್ಚಾದ್ಧಾನ್ಯವಿನಾಶನಂ ॥ ೩೨ ॥

ಪೌಷ್ಣಾಶ್ವಿಯಾಮ್ಯಗೇ ಜೀವೇ ವರ್ಷಂ ಸ್ಯಾದಶ್ವಿದೈವತಂ ।
ಸುವೃಷ್ಟಿಕ್ಷೇಮದಂ ಲೋಕೇ ಸರ್ವಾತಂಕ ವಿವರ್ಜಿತಂ ॥ ೩೩ ॥

---

೨೯ ಗುರುವು ಜ್ಯೇಷ್ಠ ಮತ್ತು ಮೂಲಾ ನಕ್ಷತ್ರಗಳಲ್ಲಿ ಸಂಚರಿಸುವಾಗ ಶಾಕ್ತಾಬ್ದವೆಂದು ನಾಮಧೇಯವು ಆಗ ಸಜ್ಜೆ, ಭತ್ತಗಳು ನಾಶವಾಗುವುವಲ್ಲದೆ ಪ್ರಾಣಿಗಳಿಗೆ ಆ ಕಾಲದಲ್ಲಿ ಭಯ ಹೆಚ್ಚುತ್ತವೆ

೩೦ ಪೂರ್ವಾಷಾಢ, ಉತ್ತರಾಷಾಢಾ ನಕ್ಷತ್ರಗಳಲ್ಲಿ ಗುರುವು ಸಂಚರಿಸುವ ಕಾಲಕ್ಕೆ ವೈಶ್ವದೇವಾಬ್ದವೆಂದು ಹೆಸರು ಆಗ ಶುಭವೂ ಇಲ್ಲ, ಅಶುಭವೂ ಇಲ್ಲ ರಾಜರುಗಳಿಗ ಅನ್ಯೋನ್ಯ ಯುದ್ಧವುಂಟಾಗುವುದು

೩೧ ಗುರುವು ಶ್ರವಣ, ಧನಿಷ್ಠಗಳಲ್ಲಿ ಸಂಚರಿಸುವಾಗ ಅದು ವೈಷ್ಣವಾಬ್ದ ವೆನ್ನಿಸಿಕೊಳ್ಳುವುದು ಆಗ ಕ್ಷೇಮವೂ ಸುಭಿಕ್ಷವೂ ಉಂಟಾಗುವುದು ಪಾಷಂಡಿ (ನಾಸ್ತಿಕ) ಗಳಿಗೆ ಆಗ ಪೀಡೆಯುಂಟು

೩೨, ಗುರುವು ಶತಭಿಷಾ, ಪೂರ್ವಾಭಾದ್ರ ನಕ್ಷತ್ರಗಳಲ್ಲಿ ಸಂಚರಿಸುವ ಕಾಲಕ್ಕೆ ವಾರುಣಾಬ್ದವೆಂದು ಹೆಸರು ಆ ಕಾಲದಲ್ಲಿ ಧಾನ್ಯಬೆಳೆ ಚೆನ್ನಾಗಿ ನಡೆಸುವುದು ಕಾರುಬೆಳೆ ನಾಶವಾಗುವುವು

೩೩ ಉತ್ತರಾಭಾದ್ರ, ರೇವತೀ ನಕ್ಷತ್ರಗಳಲ್ಲಿ ಗುರುವು ಸಂಚರಿಸುವಾಗ ಅಶ್ವಿ ದೇವತ ವರ್ಷವೆಂದು ಹೆಸರು. ಆಗ ಜನರಿಗೆ ಸುವೃಷ್ಟಿಯೂ ಕ್ಷೇಮವೂ ಉಂಟಾಗು ವುದು ಮತ್ತು ಜನರು ಯಾವ ಆತಂಕವೂ ಇಲ್ಲದ ಸುಖವಾಗಿರುವರು

ಚೈತ್ರಶುಕ್ಲಸಮಾರಂಭೇ ಜಗತಾಂ ಜಗದೀಶ್ವರ ।
ಸರ್ವಂ ಚಕ್ರೇ ತದಾ ರಾಜಂಸ್ತತಸ್ತಸ್ಮಿನ್ನಹಾ ದಿನೇ ॥ ೩೪ ॥

ಸಂವತ್ಸರೇಶಃ ಕ್ರಿಯತೇ ಬ್ರಹ್ಮಣಾ ತು ಸದಾಗ್ರಹಃ ।
ನಾಗೋ ಯಕ್ಷಶ್ಚ ಧರ್ಮಜ್ಞ ಗಂಧರ್ವಶ್ಚ ತಥೈವಚ ॥ ೩೫ ॥

ಸಪ್ತಚ್ಛಿನ್ನೇ ತು ಯಃಶ್ಲೇಷಃ ಕಲಿಪಾತಸಮಾಗಣೇ ।
ಆದಿತ್ಯಾದಿಸ್ಸ ಬೋದ್ಧವ್ಯೋ ಗ್ರಹಃ ಸಂವತ್ಸರಾಧಿಪಃ ॥ ೩೬ ॥

ಆದಿತ್ಯೇನ ಸಹಾನಂತೋ ನಾಗೋ ಭವತಿ ಭೂಮಿಪ ।
ಚಿತ್ರಾಂಗದಶ್ಚ ಗಂಧರ್ವೋ ದೀರ್ಘಭದ್ರೋ ನಿಶಾಚರಃ ॥ ೩೭ ॥

ಸೌಮ್ಯೇನ ವಾಸುಕಿರ್ನಾಗಃ ಪೂರ್ಣಭದ್ರೋನಿಶಾಚರಃ ।
ಚಿತ್ರಸೇನಶ್ಚ ಗಂಧರ್ವಃ ಸಮಾಶ್ಚಾಮೀ ಪ್ರಕೀರ್ತಿತಾಃ ॥ ೩೮ ॥

ಭೌಮೇನ ತಕ್ಷಕೋ ನಾಗೋ ಮಣಿಭದ್ರೋ ನಿಶಾಚರಃ ।
ತದಾ ಚಿತ್ರರಥೋ ನಾಮ ಗಂಧರ್ವಶ್ಚಾಭಿಷಿಚ್ಯತೇ ॥ ೩೯ ॥

---

೩೪-೩೮ ಎಲೈ, ಜಗದೀಶ್ವರನೇ ಕೇಳು ಚೈತ್ರ ಶುದ್ಧ ಪಾಡ್ಯಮೀ ದಿನ ಸಕಲ ಜಗತ್ತುಗಳನ್ನೂ ಬ್ರಹ್ಮನು ಸೃಷ್ಟಿಸಿದನು. ಆದ್ದರಿಂದ ಆ ಶುಭದಿವಸದಲ್ಲಿ ಸಂವತ್ಸರಾಧಿಪತಿಯಾದ ಗ್ರಹವು ಬ್ರಹ್ಮನೊಡನೆ ಕೂಡಿ ಆ ವರ್ಷವೆಲ್ಲಾ ಆಧಿಪತ್ಯ ಮಾಡುವನು ಆಗ್ರಹಗಳಾವುವೆಂದರೆ, ಆದಿತ್ಯಾದಿ ನವಗ್ರಹಗಳೆಂದು ತಿಳಿಯ ಬೇಕು ಸಂವತ್ಸರಾದಿಯ ವಾರವಾವುದೋ ಆ ಗ್ರಹವೇ ಆ ವರ್ಷಕ್ಕೆ ದೊರೆಯು ಸೂರ್ಯನ ಜತೆಯಲ್ಲಿ ಅನಂತನೆಂಬ ನಾಗ, ಚಿತ್ರಾಂಗದನೆಂಬ ಗಂಧರ್ವ, ದೀರ್ಘ ಭದ್ರನೆಂಬ ನಿಶಾಚರರು ಸೇರಿಕೊಳ್ಳುವರು ಚಂದ್ರನ ಜತೆಯಲ್ಲಿ ವಾಸುಕಿ ನಾಮಕ ನಾಗ, ಪೂರ್ಣಭದ್ರನೆಂಬ ನಿಶಾಚರ, ಚಿತ್ರಸೇನನೆಂಬ ಗಂಧರ್ವರು ಸಹ ಸಮರನಿಸಿ ಕೊಂಡಿರುವರು

೩೯ ಅಂಗಾರಕನೊಡನೆ ತಕ್ಷಕನಾಮ ನಾಗನೂ, ಮಣಿಭದ್ರನೆಂಬ ನಿಶಾಚ ರನೂ, ಚಿತ್ರರಥನಾಮಕ ಗಂಧರ್ವನೂ ಸೇರುವರು

ಬುಧೇನ ನಾಗಃ ಕಾರ್ಕೋಟೋ ಯಕ್ಷಭದ್ರೋ ನಿಶಾಚರಃ ।
ತುಂಬುರುರ್ನಾಮ ಗಂಧರ್ವಃ ಸಮಾಸ್ವಾಮ್ಯಭಿಷಿಚ್ಯತೇ　　|| ೪೦ ||

ಜೀವೇನ ನಾಗಃ ಪದ್ಮಸ್ತು ದೀರ್ಘಬಾಹುರ್ನಿಶಾಚರಃ ।
ಗಂಧರ್ವಶ್ಚ ಮಹಾತೇಜಾಸ್ತಥಾ ಶಾಲಿಶಿರಃ ಪ್ರಭುಃ　　|| ೪೧ ||

ಮಹಾಪದ್ಮಸ್ತು ಶುಕ್ರೇಣ ನಾಗೋಭವತಿ ಭೂಪತೇ ।
ನಾರದಶ್ಚೈವ ಗಂಧರ್ವೋ ಮಹಾಬಾಹುರ್ನಿಶಾಚರಃ　　|| ೪೨ ||

ಸೌರೇಣ ನಾಗಃ ಶಂಖಸ್ತು ಮಹಾಕರ್ಣೋ ನಿಶಾಚರಃ ।
ಊರ್ಣಾಯುಶ್ಚೈವ ಗಂಧರ್ವಃ ಸಮಾಸ್ವಾಮ್ಯಭಿಷಿಚ್ಯತೆ　　|| ೪೩ ||

ಅತಃ ಪರಂ ಪ್ರವಕ್ಷ್ಯಾಮಿ ಸಮಾರೂಪಂ ಮಹೀಪತೇ ।
ಗ್ರಹಸ್ವಾಮಿಭವಂ ತುಭ್ಯಂ ಶೇಷಾಸ್ಸರ್ವೇ ತದಾಶ್ರಯಾಃ　　|| ೪೪ ||

---

೪೦　ಬುಧನ ರಾಜ್ಯಾಭಿಷೇಕ ಸಮಯದಲ್ಲಿ ಕಾರ್ಕೋಟಕ ನಾಗನೂ, ಯಕ್ಷಭದ್ರ ರಾಕ್ಷಸನೂ, ತುಂಬುರನೆಂಬ ಗಂಧರ್ವನೂ ನೇರುವರು

೪೧　ಗುರುವು ಸಿಂಹಾಸನಾಧಿಪತಿಯಾದಾಗ ಪದ್ಮನೆಂಬ ನಾಗನೂ, ದೀರ್ಘಬಾಹುನಾಮಕ ದಾನವನೂ, ಶಾಲಿಶಿರ ನಾಮಕನಾದ ಮಹಾ ತೇಜಸ್ವಿಯಾದ ಗಂಧರ್ವನೂ ಸಮನಾಗಿ ಸೇರುವರು

೪೨　ಶುಕ್ರನ ರಾಜ್ಯಭಾರ ಕಾಲದಲ್ಲಿ ಮಹಾಪದ್ಮನೆಂಬ ನಾಗನೂ, ನಾರದನೆಂಬ ಗಂಧರ್ವನೂ, ಮಹಾ ಬಾಹುನಾಮಕ ನಿಶಾಚರನೂ ಸಮಸಮನಾಗಿ ಸಹಾಯರಾಗಿ ನಿಲ್ಲುವರು

೪೩　ಶನಿಮಹಾರಾಜನು ಧೊರೆಯಾದಾಗ ಶಂಖನೆಂಬ ನಾಗನೂ, ಮಹಾಕರ್ಣದಾನವನೂ, ಊರ್ಣಾಯುವೆಂಬ ಗಂಧರ್ವನೂ ಸಮರಾಗಿ ಜತೆಯಲ್ಲಿರುತ್ತಾರೆ

೪೪　ಇಲ್ಲಿಂದ ಮುಂದಕ್ಕೆ ಗ್ರಹಾಧಿಪತಿಗಳಿಂದುಂಟಾಗುವ ಸಂವತ್ಸರ ಸ್ವರೂಪವನ್ನು ನಿನ್ನೊಡನೆ ಹೇಳುತ್ತೇನೆ, ಶೇಷ ಉಳಿದವರೆಲ್ಲರೂ ಅವರನ್ನಾಶ್ರಯಿಸಿಕೊಂಡಿರುತ್ತಾರೆ

ತೀಕ್ಷ್ಣಾರ್ಕಸ್ಸ್ವಲ್ಪಮತ್ಸ್ಯಶ್ಚ ಗತಮೇಘೋಽತಿಭಾಸ್ಕರಃ ।
ಬಹುನಾಗವ್ಯಾಧಿಗಣೋ ಭಾಸ್ಕರಾಬ್ದೋ ರಣಾಕುಲಃ ॥ ೪೫ ॥

ಬಹುವರ್ಷೋಽತಿಸಸ್ಯಶ್ಚ ಗವಾಂ ಕ್ಷೀರಪ್ರದಾಯಕಃ ।
ಚಂದ್ರಾಬ್ದಃ ಕಾಮಿನಾಮಿಷ್ಟಃ ಚಿತ್ಯಂಽತಮಹೀತಲಃ ॥ ೪೬ ॥

ಅಗ್ನಿತಸ್ಕರರೋಗಾಢ್ಯೋ ನೃಪವಿಗ್ರಹದಾಯಕಃ ।
ಗತಸಸ್ಯೋ ಬಹುವ್ಯಾಲೋ ಭೌಮಾಬ್ದೋ ಬಾಲಹಾಭೃಶಂ ॥ ೪೭ ॥

ವಿಪ್ರಕ್ಷತ್ರಿಯಸಸ್ಯಾನಾಂ ಜನಾನಾಂ ಚ ಕಲಾಭೃತಾಂ ।
ಬುದ್ಧಿಪ್ರದೋಬ್ದೋ ಬೌದ್ಧಸ್ತು ಬಹುಸಸ್ಯಾಕರಃಕ್ಷಿತೌ ॥ ೪೮ ॥

ಬಹುಯಜ್ಞೋಽತಿಸಸ್ಯಶ್ಚ ಗೋಗಜಾಶ್ವಹಿತಸ್ತಥಾ ।
ಬಹುವೃಷ್ಟಿಪ್ರದಃ ಸೌಮ್ಯೋ ಜೀವಾಬ್ದೋ ದ್ವಿಜಪುಷ್ಟಿದಃ ॥ ೪೯ ॥

---

೪೫ ಸೂರ್ಯನು ವರ್ಷಾಧಿಪತಿಯಾದಾಗ, ಸೂರ್ಯನು ಬಹು ತೀಕ್ಷ್ಣವಾಗಿ ರುತ್ತಾನ ಮತ್ಸ್ಯಗಳಿಗೆ ಹಾನಿ ಮೇಘಗಳು ಕಡಿಮೆ ಸೂರ್ಯನತಾಪ ಹೆಚ್ಚು ಸರ್ಪಭಯ, ವ್ಯಾಧಿ ಭಯಗಳು ಹೆಚ್ಚು ಆ ಭಾಸ್ಕರಾಬ್ದದಲ್ಲಿ ಯುದ್ಧವು ಬಹಳ ವಾಗಿ ನಡೆಯುತ್ತದೆ

೪೬ ಚಂದ್ರನು ಸಂವತ್ಸರಾಧಿಪತಿಯಾದ ಕಾಲದಲ್ಲಿ ಅತಿವೃಷ್ಟಿಯಾಗುವುದು ಅತಿಯಾಗಿ ಸಸ್ಯಗಳು ಬೆಳೆಯುವುವು ಹಸುಗಳು ಹಾಲು ಕೊಡುವುವು ಕಾಮುಕ ರಿಗೆ ಈ ಕಾಲವು ಇಷ್ಟವಾದುದು

೪೭ ಅಂಗಾರಕನು ವರ್ಷಾಧಿಪತಿಯಾದ ಕಾಲದಲ್ಲಿ, ಬೆಂಕಿಯ ಭಯ, ಕಳ್ಳರಭಯ, ರೋಗಗಳಭಯ, ರಾಜರುಗಳಿಗೆ ಪರಸ್ಪರ ಯುದ್ಧ, ಸಸ್ಯಗಳಿಗೆ ಹಾನಿ, ಸರ್ಪಗಳ ಕಾಟ, ಬಾಲಕರ ಮರಣಗಳು ಸಂಭವಿಸುವುವು

೪೮ ಬುಧನು ವರ್ಷಾಧಿಪತಿಯಾದ ಸಮಯದಲ್ಲಿ ಗೋಧಿ, ಭತ್ತಗಳು ಚೆನ್ನಾಗಿ ಬೆಳೆಯುವುವು ವಿದ್ವಾಂಸರಿಗೆ ಬುದ್ಧಿಯು ವಿಕಸಿತವಾಗುವುದು ಈ ಬೌದ್ಧನಾಮಕ ಸಂವತ್ಸರದಲ್ಲಿ ಭೂಮಿಯು ಬಹು ಸಸ್ಯ ಸಮೃದ್ಧಿಯಿಂದ ಕೂಡಿ ರುವುದು

೪೯. ಗುರುವು ಸಂವತ್ಸರಾಧಿಪತಿಯಾಗಲಾಗಿ ಬ್ರಾಹ್ಮಣರು ಯಜ್ಞಕರ್ಮ ನಿರತರಾಗುವರು ಸಸ್ಯಸಂಪತ್ತಿ ಹೆಚ್ಚುವುದು ಹಸುಗಳೂ, ಆನೆಗಳೂ ಕುದುರೆ

**ಸಸ್ಯಾಢ್ಯೋ ಧರ್ಮಬಹುಲೋ ಗತಾತಂಕೋ ಬಹೂದಕಃ ।**
**ಕಾಮಿನಾಂ ಕಾಮದಃ ಕಾಮಃ ಸಿತಾಬ್ದೋ ನೃಪಶರ್ಮದಃ ॥ ೩೦ ॥**

**ದುರ್ಭಿಕ್ಷಮಾರಕಾನ್ರೋಗಾನ್ಕರೋತಿ ಪವನಸ್ತಥಾ ।**
**ಶನೈಶ್ಚರಾಬ್ದಃ ಶೋಕಾಂಶ್ಚ ವಿಗ್ರಹಾಣಿ ಚ ಭೂಭುಜಾಂ ॥ ೩೧ ॥**

**ಕ್ರಮೇಣ ಪರಿವರ್ತಂತೇ ಪಂಚಯಾದವ ವತ್ಸರಾಃ ।**
**ತೇಷಾಮಧಿಪತೀನ್ವಕ್ಷ್ಯೇ ನಾಮಾನಿ ಚ ಫಲಾನಿ ಚ ॥ ೩೨ ॥**

**ಪಂಚ ಭಕ್ತೇತು ಯಚ್ಛೇಷಂ ತಿಷ್ಯೇದಬ್ದಗಣೇ ಗತೇ ।**
**ಸಂವತ್ಸರಾದ್ಯಃ ಸಂಜ್ಞೇಯೋ ನಿತ್ಯಂ ಸಂವತ್ಸರೋ ಬುಧೈಃ ॥ ೩೩ ॥**

**ಆದ್ಯಃ ಸಂವತ್ಸರೋ ನಾಮ ದ್ವಿತೀಯಃ ಪರಿವತ್ಸರಃ ।**
**ಇಡಾಖ್ಯಶ್ಚ ತೃತೀಯೋತ್ರ ಚತುರ್ಥಶ್ಚಾನುವತ್ಸರಃ ।**
**ಇದ್ವತ್ಸರಾಖ್ಯಃ ಕಥಿತಃ ತಥಾ ಚೈವಾತ್ರ ಪಂಚಮಃ ॥ ೩೪ ॥**

---

ಗಳೂ ಜನರಿಗೆ ಹಿತವನ್ನು ಉಂಟುಮಾಡುವುವು. ಈ ಸೌಮ್ಯವಾದ ವರ್ಷವು ಬಹು ವೃಷ್ಟಿಪ್ರದವಾಗಿಯೂ, ದ್ವಿಜಪುಷ್ಟಿಪ್ರದವಾಗಿಯೂ ಪರಿಣಮಿಸುವುದು.

೩೦. ಶುಕ್ರನು ವರ್ಷಾಧಿಪತಿಯಾಗಲಾಗಿ ಭೂಮಿಯಲ್ಲಿ ಸಸ್ಯಸಮೃದ್ಧಿಯೂ, ಧರ್ಮಬಾಹುಳ್ಯವೂ ಉಂಟಾಗುವುದು. ಜನರು ನಿರಾತಂಕರಾಗಿರುವರು. ಜಲಸಮೃದ್ಧಿಯಾಗಿರುವುದು. ಮನ್ಮಥನು ಕಾಮುಕರ ಕಾಮವನ್ನು ಹೆಚ್ಚಿಸುವನು. ದೊರೆಗಳು ಸುಖವಾಗಿರುವರು.

೩೧. ಶನೈಶ್ಚರನು ವರ್ಷಾಧಿಪತಿಯಾಗಲಾಗಿ ದುರ್ಭಿಕ್ಷವೂ ರೋಗಗಳೂ ಹೆಚ್ಚಾಗುತ್ತವೆ. ಗಾಳಿ ಹೆಚ್ಚಾಗಿ ಚಲಿಸುತ್ತದೆ. ದೊರೆಗಳಿಗೆ ಘೋರಯುದ್ಧವುಂಟಾಗುತ್ತವೆ.

೩೨. ಎಲೈ ವಜ್ರರಾಜನೇ! ಐದು ಸಂವತ್ಸರಗಳು ಈ ಕ್ರಮದಿಂದ ಪರಿವರ್ತನ ಹೊಂದುತ್ತಲೇ ಇರುತ್ತವೆ! ಅವುಗಳ ಅಧಿಪತಿಗಳನ್ನೂ ಹೆಸರುಗಳನ್ನೂ, ಫಲಗಳನ್ನೂ ಹೇಳುತ್ತೇನೆ, ಕೇಳು.

೩೩. ಸಂವತ್ಸರದ ಗುಂಪು ಕಳೆದುಹೋಗಲಾಗಿ ಐದರಿಂದ ಭಾಗಿಸಿದರೆ ಯಾವ ಶೇಷವು ನಿಲ್ಲುವುದೋ ಆ ವತ್ಸರವು ಸಂವತ್ಸರದ ಆದಿಯೆನ್ನಿಸಿಕೊಳ್ಳುವುದು.

೩೪. ಮೊದಲನೆಯದು ಸಂವತ್ಸರ, ಎರಡನೆಯದು ಪರಿವತ್ಸರ, ಮೂರನೆಯದು ಇಡಾವತ್ಸರ, ನಾಲ್ಕನೆಯದು ಅನುವತ್ಸರ, ಐದನೆಯದು ಇದ್ವತ್ಸರವು

**ಸಂವತ್ಸರೋಽಗ್ನಿಃ ಪರಿವತ್ಸರೋಽರ್ಕ ।**
**ಇಡಾಭಿಧಾನೋ ಭಗವಾಂಚ್ಛಶಾಂಕಃ ॥**
**ಬ್ರಹ್ಮಾ ಸ್ವಯಂಭೂರನುವತ್ಸರೋಽಪಿ ।**
**ಇದ್ವತ್ಸರಃ ಶೈಲಸುತಾಪತಿಶ್ಚ ॥ ೫೫ ॥**

**ವೃಷ್ಟಿಃ ಸಮಾಖ್ಯೋ ಕಥಿತಾದ್ವಿತೀಯೇ ।**
**ಪ್ರಭೂತತೋಯಾ ಕಥಿತಾ ತೃತೀಯೇ ॥**
**ಪಶ್ಚಾಜ್ಜಲಂ ಮುಂಚತಿ ಯಶ್ಚತುರ್ಥಃ ।**
**ಸ್ವಲ್ಪೋದಕಂ ಪಂಚಮಮಬ್ದಮುಕ್ತಂ ॥ ೫೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಅಬ್ದಫಲನಿರ್ದೇಶೋ**
**ನಾಮದ್ವ್ಯಶೀತಿತಮೋಧ್ಯಾಯಃ**

---

೫೫ ಸಂವತ್ಸರವು ಅಗ್ನಿಯು, ಪರಿವತ್ಸರವು ಅರ್ಕ, ಇಡಾವತ್ಸರವು ಭಗವಾನ್ ಚಂದ್ರನು, ಅನುವತ್ಸರವು ಸ್ವಯಂಭುವಾದ ಬ್ರಹ್ಮನು, ಇದ್ವತ್ಸರವೇ ಪರಮೇಶ್ವರನು

೫೬ ಸಂವತ್ಸರದಲ್ಲಿ ವೃಷ್ಟಿ, ಪರಿವತ್ಸರದಲ್ಲಿ ಮಳೆ, ಇಡಾವತ್ಸರದಲ್ಲಿ ಮಳೆ ಕಡಿಮೆ, ಅನುವತ್ಸರದಲ್ಲಿ ಸ್ವಲ್ಪಮಳೆ, ಇದ್ವತ್ಸರದೊಳ್ ಸಹ ನೀರಿನ ವಸತಿ ಕಡಿಮೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಅಬ್ದಫಲ ನಿರ್ದೇಶವೆಂಬ ಹೆಸರಿನ
ಎಂಭತ್ತೆರಡನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರ್ಯಶೀತಿತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಉತ್ತರಂ ತ್ವಯನಂ ದಿವ್ಯಂ ಪೈತ್ರ್ಯಂ ಸ್ಯಾದ್ದಕ್ಷಿಣಾಯನಂ ।
ವಸಂತಶ್ಚಾಗ್ನಿದೈವತ್ಯಃ ಶಾಕ್ರೋ ಗ್ರೀಷ್ಮ ಉದಾಹೃತಃ ॥ ೧ ॥

ವೈಶ್ವದೇವೀ ತಥಾ ಪ್ರಾವೃಟ್ಪ್ರಾಜಾ ಪತ್ಯಾ ಶರಸ್ಸ್ಮೃತಾ ।
ಹೇಮಂತೋ ವೈಷ್ಣವಃ ಪ್ರೋಕ್ತೋ ಮಾರುತಃ ಶಿಶಿರಃ ಸ್ಮೃತಃ ॥ ೨ ॥

ತ್ವಾಷ್ಟ್ರಶ್ಚೈತ್ರಸ್ತು ವೈಶಾಖೋ ಮಾಸಶ್ಚೈವಾಗ್ನಿದೈವತಃ ।
ಜ್ಯೇಷ್ಠಶ್ಚಾಕ್ರಸ್ಸ್ಮೃತೋ ಮಾಸ ಆಷಾಢೋ ವೈಶ್ವದೈವತಃ ॥ ೩ ॥

---

### ಎಂಭತ್ತಮೂರನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ — ಉತ್ತರಾಯಣಕ್ಕೆ ದಿವ್ಯಾಯನವೆಂದೂ, ದಕ್ಷಿಣಾಯನಕ್ಕೆ ಪೈತ್ರ್ಯಾಯನವೆಂದೂ ಹೆಸರು ವಸಂತಋತುವಿನ ದೇವತೆ ಅಗ್ನಿ, ಗ್ರೀಷ್ಮಋತುವಿಗ ಇಂದ್ರನು ದೇವತೆಯೆಂದು ತಿಳಿಯಬೇಕು

೨ ವರ್ಷಋತುವಿಗೆ ವಿಶ್ವೇದೇವರು, ಶರದೃತುವಿಗ ಪ್ರಜಾಪತಿ ಬ್ರಹ್ಮ, ಹೇಮಂತಋತುವಿಗೆ ವಿಷ್ಣು, ಶಿಶಿರಋತುವಿಗೆ ವಾಯು

೩ ಚೈತ್ರಕ್ಕೆ ಕೃಷ್ಣ, ವೈಶಾಖಕ್ಕೆ ಅಗ್ನಿ, ಜ್ಯೇಷ್ಠಮಾಸಕ್ಕೆ ಇಂದ್ರನು ಆಷಾಢಮಾಸಕ್ಕೆ ವಿಶ್ವೇದೇವರು

ಶ್ರಾವಣೋ ವಿಶ್ವದೈವತ್ಯ ಅಜೋ ಭಾದ್ರಪದಸ್ತಥಾ ।
ಅಶ್ವಯುಕ್ತಾಶ್ವಿನೋ ಮಾಸ ಆಗ್ನೇಯಃ ಕಾರ್ತಿಕಃ ಸ್ಮೃತಃ ॥ ೪ ॥

ಮಾರ್ಗಶೀರ್ಷಸ್ತಥಾ ಸೌಮ್ಯಃ ಪೌಷಸ್ಸ್ಯಾಜ್ಜೀವದೈವತಃ ।
ಪೈತ್ರ್ಯೋ ಮಾಸಸ್ಸ್ಮೃತೋ ಮಾಘಃ ಫಾಲ್ಗುನೋ ಭಗದೈವತಃ ॥ ೫ ॥

ಮಾಸೇಷು ಮಾಸದೈವತ್ಯಾಃ ಶುಕ್ಲಪಕ್ಷಾಃ ಪ್ರಕೀರ್ತಿತಾಃ ।
ಪಕ್ಷ್ಯಾಮಿ ಕೃಷ್ಣಪಕ್ಷಾಣಾಂ ದೈವತಾನಿ ತವಾನಘ ॥ ೬ ॥

ಚೈತ್ರೋ ಯಾಮ್ಯಸ್ಸ್ಮೃತೋ ರಾಜನ್ನಾಗ್ನೇಯಶ್ಚಾಪ್ಯನಂತರಃ ।
ಜ್ಯೇಷ್ಠೋ ರೌದ್ರಃ ಸ್ಮೃತಃ ಪಕ್ಷಸ್ತ್ವಾಷಾಢಃ ಸಾರ್ಪ ಉಚ್ಯತೇ ॥ ೭ ॥

ಪೈತ್ರಶ್ಚ ಶ್ರಾವಣೋ ಮಾಸಃ ಸಾವಿತ್ರಶ್ಚಾಪ್ಯನಂತರಃ ।
ಮೈತ್ರಶ್ಚಾಶ್ವಯುಜೋ ಮಾಸಃ ಶಾಕ್ರಶ್ಚಾಪ್ಯಗ್ನಿದೈವತಃ ॥ ೮ ॥

ತಥಾ ಚ ನೈಋರ್ತತಃ ಸೌಮ್ಯಃ ಪೌಷಃ ಸ್ಯಾದ್ವಿಷ್ಣುದೈವತಃ ।
ವಾರುಣಶ್ಚ ತಥಾ ಮೈತ್ರಃ ಫಾಲ್ಗುನಃ ಪೌಷ್ಣ ಉಚ್ಯತೇ ॥ ೯ ॥

---

೪-೫ ಆಷಾಢಮಾಸದಂತೆ ಶ್ರಾವಣಮಾಸಕ್ಕೂ ವಿಶ್ವದೇವತೆ ಭಾದ್ರಪದಕ್ಕೆ ಬ್ರಹ್ಮ, ಆಶ್ವಯುಜಕ್ಕೆ ಅಶ್ವನೀದೇವತೆಗಳು, ಕಾರ್ತಿಕಮಾಸಕ್ಕೆ ಅಗ್ನಿ, ಮಾರ್ಗಶೀರ್ಷಕ್ಕೆ ಚಂದ್ರ, ಪುಷ್ಯಮಾಸಕ್ಕೆ, ಗುರು, ಮಾಘಮಾಸಕ್ಕೆ ಪಿತೃಗಳು, ಫಾಲ್ಗುನಕ್ಕೆ ಭಗದೇವತೆ, ಇವರುಗಳು ಅಭಿಮಾನ ದೇವತೆಗಳೆಂದು ತಿಳಿಯಬೇಕು

೬ ಆಯಾಯ ಮಾಸದೇವತೆಗಳೇ ಪ್ರತಿಮಾಸದ ಶುಕ್ಲಪಕ್ಷಕ್ಕೂ ದೇವತೆಗಳೆಂದು ತಿಳಿಯಬೇಕು ಎಲೈ ವಜ್ರರಾಜನೇ ! ಮುಂದೆ ಕೃಷ್ಣಪಕ್ಷಗಳ ದೇವತೆಗಳನ್ನು ಹೇಳುತ್ತೇನೆ, ಕೇಳು

೭-೯ ಚೈತ್ರಕ್ಕೆ ಯಾಮ್ಯದೇವತೆ, ವೈಶಾಖಕ್ಕೆ ನಿಋುಋತಿ, ಜ್ಯೇಷ್ಠಕ್ಕೆ ರೌದ್ರ, ಆಷಾಢಕ್ಕೆ ಸಾರ್ಪ, ಶ್ರಾವಣಕ್ಕೆ ಪೈತ್ರ್ಯ, ಭಾದ್ರಪದಕ್ಕೆ ಸಾವಿತ್ರ, ಆಶ್ವಯುಜಕ್ಕೆ ಮೈತ್ರ, ಕಾರ್ತಿಕಕ್ಕೆ ಅಗ್ನಿ, ಮಾರ್ಗಶಿರಕ್ಕೆ ಇಂದ್ರ, ಪುಷ್ಯಕ್ಕೆ ವಿಷ್ಣು, ಮಾಘಕ್ಕೆ ವಾರುಣ, ಫಾಲ್ಗುಣಕ್ಕೆ ಪೌಷ್ಣ, ಇಂತು ದೇವತೆಗಳು

ಅತಃ ಪರಂ ಪ್ರವಕ್ಷ್ಯಾಮಿ ಯದ್ದೇವೋ ಯದ್ಗ್ರಹಃ ಸ್ಮೃತಃ ।
ಅಗ್ನಿರರ್ಕಸ್ಯ ಸ್ಮೃತಸ್ಸೋಮೋ ವರುಣಃ ಪರಿಕೀರ್ತಿತಃ ॥ ೧೦ ॥

ಅಂಗಾರಕಃ ಕುಮಾರಶ್ಚ ಬುಧಶ್ಚ ಭಗವಾನ್ಹರಿಃ ।
ಬೃಹಸ್ಪತಿಸ್ಸ್ಮೃತಃ ಶಕ್ರಃ ಶುಕ್ರೇ ದೇವೀ ಚ ಪಾರ್ವತೀ ॥ ೧೧ ॥

ಪ್ರಜಾಪತಿಶ್ಶನೈಶ್ಚರೋ ರಾಹುರ್ಜ್ಞೇಯೋ ಗಣಾಧಿಪಃ ।
ವಿಶ್ವಕರ್ಮಾ ಸ್ಮೃತಃ ಕೇತುರ್ಯೋ ಗ್ರಹಾಸ್ತೇ ಪುರಃ ಸ್ಮೃತಾಃ ॥ ೧೨ ॥

ಅತಃ ಪರಂ ಪ್ರವಕ್ಷ್ಯಾಮಿ ತವ ನಕ್ಷತ್ರದೈವತಾಃ ।
ಕೃತ್ತಿಕಾ ಚಾಗ್ನಿದೈವತ್ಯಾ ರೋಹಿಣ್ಯರ್ಕೇಶ್ವರಾ ಸ್ಮೃತಾ ॥ ೧೩ ॥

ಇಂದ್ವರ್ಕ್ಷಂ ಸೌಮ್ಯದೈವತ್ಯೋ ರೌದ್ರೀ ಆರ್ದ್ರಾ ತಥಾ ಸ್ಮೃತಾ ।
ಪುನರ್ವಸುಸ್ತಥಾಽದಿತ್ಯೋ ಪುಷ್ಯಶ್ಚ ಗುರುದೈವತಃ ॥ ೧೪ ॥

ಆಶ್ಲೇಷಾ ಸರ್ಪದೈವತ್ಯಾ ಮಘಾ ಚ ಪಿತೃದೈವತಾ ।
ಭಾಗ್ಯಾಶ್ಚ ಪೂರ್ವಫಾಲ್ಗುನ್ಯ ಆರ್ಯಮಾಶ್ಚ ತಥೋತ್ತರಾಃ ॥ ೧೫ ॥

ಸಾವಿತ್ರಿಶ್ಚ ತಥಾ ಹಸ್ತಿಶ್ಚಿತ್ರಾ ತ್ವಾಷ್ಟ್ರೀ ಪ್ರಕೀರ್ತಿತಾ ।
ಸ್ವಾತಿಶ್ಚ ವಾಯುದೈವತ್ಯಾ ನಕ್ಷತ್ರೇ ಪರಿಕೀರ್ತಿತಾ ॥ ೧೬ ॥

೧೦-೧೨ ಇನ್ನು ಮುಂದೆ ಗ್ರಹಾಧಿಪತಿಗಳ ಹೆಸರನ್ನು ಹೇಳುತ್ತೇನೆ — ಸೂರ್ಯನಿಗೆ ಅಗ್ನಿ, ಚಂದ್ರನಿಗೆ ವರುಣ, ಅಂಗಾರಕನಿಗೆ ಕುಮಾರಸ್ವಾಮಿ, ಬುಧನಿಗೆ ವಿಷ್ಣು, ಬೃಹಸ್ಪತಿಗೆ ಇಂದ್ರ, ಶುಕ್ರನಿಗೆ ಗೌರೀ, ಶನಿಗೆ ಬ್ರಹ್ಮ, ರಾಹುವಿಗೆ ಗಣಪತಿ, ಕೇತುವಿಗೆ ವಿಶ್ವಕರ್ಮ

೧೩-೨೧ ಇನ್ನುಮುಂದೆ ಇಪ್ಪತ್ತೇಳು ನಕ್ಷತ್ರಗಳಿಗೂ ದೇವತೆಗಳನ್ನು ಹೇಳುತ್ತೇನೆ, ಕೇಳಯ್ಯಾ ವಜ್ರರಾಜೇಂದ್ರ ! ಕೃತ್ತಿಕೆಗೆ ಅಗ್ನಿ, ರೋಹಿಣಿಗೆ ಬ್ರಹ್ಮ, ಮೃಗಶಿರಗೆ ಚಂದ್ರ, ಆರ್ದ್ರಗ ರುದ್ರ, ಪುನರ್ವಸುವಿಗೆ ಆದಿತ್ಯ, ಪುಷ್ಯಕ್ಕೆ ಬೃಹಸ್ಪತಿ, ಆಶ್ಲೇಷಗೆ ಸರ್ಪ, ಮಘಗೆ ಪಿತೃದೇವತೆಗಳು, ಪುಬ್ಬಗೆ ಸೂರ್ಯ, ಉತ್ತರಗ ಅರ್ಯಮಾ, ಹಸ್ತಕ್ಕೆ ಸವಿತೃ, ಚಿತ್ತೆಗೆ ತ್ವಷ್ಟೃಬ್ರಹ್ಮ, ಸ್ವಾತಿಗೆ ವಾಯು, ವಿಶಾಖೆಗೆ ಇಂದ್ರಾಗ್ನಿದೇವ

ಇಂದ್ರಾಗ್ನೀದೈವತಾ ಪ್ರೋಕ್ತಾ ವಿಶಾಖಾ ಯದುನಂದನ ।
ಮೈತ್ರಮೃಕ್ಷಮನೂರಾಧಾ ಶಾಕ್ರಂ ಜ್ಯೇಷ್ಠಾ ಪ್ರಕೀರ್ತಿತಾ ॥ ೧೭ ॥

ತಥಾ ನೈರ್ಋತ್ಯದೈವತ್ಯೋ ಮೂಲಂಚ ತದುದಾಹೃತಂ ।
ಆಪ್ಯಸ್ತ್ವಾಷಾಢಪೂರ್ವಾಃ ಸ್ಯುಶ್ಚೋತ್ತರಾ ವೈಶ್ವದೈವತಾಃ ॥ ೧೮ ॥

ಬ್ರಾಹ್ಮೀ ಚೈವಾಭಿಜಿತ್ಪ್ರೋಕ್ತಾ ಶ್ರವಣೋ ವೈಷ್ಣವಃ ಸ್ಮೃತಃ ।
ವಾಸವಂ ಚ ತಥಾ ಋಕ್ಷಂ ಧನಿಷ್ಠಾ ಪ್ರೋಚ್ಯತೇ ಬುಧೈಃ ॥ ೧೯ ॥

ತಥಾ ಶತಭಿಷಕ್ಪ್ರೋಕ್ತಂ ನಕ್ಷತ್ರೇ ವಾರುಣಂ ನೃಪ ।
ಆಜಂ ಭದ್ರಾಪದಾಪೂರ್ವಾ ಆಹಿರ್ಬುಧ್ನ್ಯಂ ತಥೋತ್ತರಾ ॥ ೨೦ ॥

ಪೌಷ್ಣಂ ಚ ರೇವತೀ ಚಾರ್ಕ್ಷಮಶ್ವಿನೀ ಚಾಶ್ವಿದೈವತಂ ।
ಭರಣ್ಯಶ್ಚ ತಥಾ ಯಾಮ್ಯಂ ಪ್ರೋಕ್ತಾಸ್ತೇ ಋಕ್ಷದೈವತಾಃ ॥ ೨೧ ॥

ಬ್ರಹ್ಮಾ ಪ್ರಜಾಪತಿರ್ವಿಷ್ಣುರ್ಯಮಸ್ಸೋಮಸ್ತಥೈವ ಚ ।
ಕುಮಾರೋ ಮುನಯಸ್ಸಪ್ತ ಹ್ಯಷ್ಟೌ ಚ ವಸವಸ್ತಥಾ ॥ ೨೨ ॥

ಪಿಶಾಚಶ್ಚ ತಥಾ ಧರ್ಮೋ ರುದ್ರಾಶ್ಚೈಕಾದಶ ಸ್ಮೃತಾಃ ।
ಆದಿತ್ಯಾ ದ್ವಾದಶ ತಥಾ ಕಾಮದೇವಸ್ತಥೈವ ಚ ॥ ೨೩ ॥

ಯಕ್ಷಾಶ್ಚ ಪಿತರಶ್ಚೈವ ಪ್ರತಿಪತ್ಪ್ರಭೃತಿಭಿಃನೃಪ ।
ತಿಥೀಶ್ವರಾಸ್ತಥಾ ಪ್ರೋಕ್ತಾ ಕರಣಾನ್ನಾಮತಃ ಶೃಣು ॥ ೨೪ ॥

---

ತೆಗಳು, ಅನೂರಾಧೆಗೆ ಮಿತ್ರ, ಜ್ಯೇಷ್ಠೆಗೆ ಇಂದ್ರ, ಮೂಲಾ ನಕ್ಷತ್ರಕ್ಕೆ ರಾಕ್ಷಸ, ಪೂರ್ವಾಷಾಢಕ್ಕೆ ಜಲಾಧಿಪತಿ ವರುಣ, ಉತ್ತರಾಷಾಢಕ್ಕೆ ವಿಶ್ವೇದೇವತೆಗಳು, ಶ್ರವಣಕ್ಕೆ ಮಹಾವಿಷ್ಣು, ಧನಿಷ್ಠಕ್ಕೆ ಅಷ್ಟವಸುಗಳು, ಶತಭಿಷೆಗೆ ವರುಣ ಅಥವಾ ಜಲ, ಪೂರ್ವಾ ಭಾದ್ರೆಗೆ ಬ್ರಹ್ಮ, ಉತ್ತರಾಭಾದ್ರಕ್ಕೆ ಈಶ್ವರ, ರೇವತಿಗೆ ಪೌಷ್ಣ (ಸೂರ್ಯ), ಅಶ್ವಿನಿಗೆ ಅಶ್ವಿನೀದೇವತೆಗಳು, ಭರಣೀ ನಕ್ಷತ್ರಕ್ಕೆ ಯಮ — ಈ ರೀತಿ ನಕ್ಷತ್ರಾಧಿದೇವತೆಗಳು

೨೨-೨೪ ಪಾಡ್ಯ ಮೊದಲುಗೊಂಡು ಪೂರ್ಣಿಮೆವರೆಗಿನ ಹದಿನೈದು ತಿಥಿಗಳ ಅಧೀಶ್ವರರ ಹೆಸರುಗಳನ್ನು ಹೇಳುತ್ತೇನೆ ಕೇಳು, ವಜ್ರರಾಜೇಂದ್ರ ! ಬ್ರಹ್ಮ, ಪ್ರಜಾ ಪತಿ, ವಿಷ್ಣು, ಯಮ, ಸೋಮ, ಕುಮಾರ, ಸಪ್ತಋಷಿಗಳು, ಅಷ್ಟವಸುಗಳು, ಪಿಶಾಚ, ಧರ್ಮ, ಏಕಾದಶರುದ್ರರು, ದ್ವಾದಶಾದಿತ್ಯರು, ಕಾಮದೇವ, ಯಕ್ಷರು, ಪಿತೃಗಳು — ಇನ್ನು ಮುಂದೆ ಕರಣಗಳ ಹೆಸರನ್ನು ಹೇಳುತ್ತೇನೆ, ಕೇಳು

ತಿಥ್ಯರ್ಧಭೋಗಿ ಕರಣಂ ಸದಾ ಭವತಿ ಪಾರ್ಥಿವ ।
ಸ್ಥಿರಾಣಿ ತೇಷಾಂ ಚತ್ವಾರಿ ಸಪ್ತ ವಿದ್ಧಿ ಚರಾಣಿ ಚ ॥ ೨೫ ॥

ಅಂತೇ ಕೃಷ್ಣಚತುರ್ದಶ್ಯಾಂ ದ್ವಿತೀಯೇ ಶಕುನಿಃ ಸ್ಮೃತಃ ।
ಪ್ರಥಮೇ ಪಂಚದಶ್ಯರ್ಧೇ ಕೃಷ್ಣೇ ಪ್ರೋಕ್ತಂ ಚತುಷ್ಪದಂ ॥ ೨೬ ॥

ತಸ್ಯೈವ ಚಾಪರೇ ರಾಜನ್ನಾಗಾಖ್ಯಂ ಕರಣಂ ಮತಂ ।
ಶುಕ್ಲಪ್ರತಿಪದಾರ್ಧೇ ತು ಕಿಂಸ್ತುಘ್ನಂ ಕರಣಂ ಮತಂ ॥ ೨೭ ॥

ಏತಾನಿ ರಾಜನ್ಪ್ರೋಕ್ತಾನಿ ಸ್ಥಿರಾಣಿ ಕರಣಾನಿ ತು ।
ಕಲಿರ್ಧರ್ಮಸ್ತಥಾ ಸರ್ಪೋ ಯೇಷಾಂ ವಾಯುಶ್ಚ ದೈವತಂ ॥ ೨೮ ॥

ಶುಕ್ಲಪ್ರತಿಪದಾರ್ಧೇ ತು ದ್ವಿತೀಯೇ ಯದುನಂದನ ॥ ೨೯ ॥

ಪಂಚಮ್ಯಾಂ ಚ ತಥಾ ಹ್ಯರ್ಧೇ ತ್ವಷ್ಟಮ್ಯಾಂ ಚ ತಥಾ ಪರೇ ।
ದ್ವಾದಶ್ಯರ್ಧೇ ತಥಾ ಪೂರ್ವೇ ಪೌರ್ಣಮಾಸ್ಯಾಂ ತಥಾ ಪರೇ ॥ ೩೦ ॥

೨೫-೨೮ ಒಂದು ಕರಣಕ್ಕೆ ಅರ್ಧತಿಥಿ. ಒಂದು ತಿಥಿಗೆ ಎರಡು ಕರಣಗಳೆಂದು ತಿಳಿಯಬೇಕು. ಇದರಲ್ಲಿ ನಾಲ್ಕು ಸ್ಥಿರಕರಣಗಳೆಂದೂ, ಏಳು ಚರಕರಣಗಳೆಂದೂ ತಿಳಿಯತಕ್ಕದ್ದು. ಸ್ಥಿರಕರಣಗಳು ಕೃಷ್ಣಪಕ್ಷಾಂತ್ಯದಲ್ಲಿ ಮಾತ್ರ ಬರುತ್ತವೆ. ಮಿಕ್ಕವು ಚಕ್ರಾಕಾರವಾಗಿ ಸುತ್ತುತ್ತಿರುತ್ತವೆ. ಬಹುಳ ಚತುರ್ದಶೀ ಎರಡನೇ ಭಾಗದಲ್ಲಿ ಶಕುನಿ ಕರಣವು ಬರುತ್ತದೆ. ಬಹುಳದ ಅಮಾವಾಸ್ಯ ಪ್ರಾತಃಕಾಲ ಚತುಷ್ಪದ ಕರಣವೂ, ಎರಡನೇ ಅರ್ಧ ತಿಥಿಯಲ್ಲಿ ನಾಗಕರಣವೂ, ಶುದ್ಧ ಪಾಡ್ಯಮೀ ಪ್ರಥಮಾರ್ಧದಲ್ಲಿ ಕಿಂಸ್ತುಘ್ನಕರಣವೂ ಬರುತ್ತವೆ. ಎಲೈ ರಾಜನೇ! ಇವು ಸ್ಥಿರಕರಣಗಳು. ಇವುಗಳಿಗೆ ಕ್ರಮವಾಗಿ ಕಲಿ, ಧರ್ಮ, ಸರ್ಪ, ವಾಯು ಇವರು ದೇವತೆಗಳು.

೨೯-೩೦ ಬವಕರಣಕ್ಕೆ ಇಂದ್ರನು ದೇವತೆ. ಈ ಕರಣವು ಪ್ರತಿ ತಿಂಗಳೂ ಇದರ ಕೆಳಗೆ ವಿವರಿಸಿದ ದಿವಸಗಳಲ್ಲಿ ಬರುತ್ತಿರುತ್ತದೆ. ಶುಕ್ಲಪಕ್ಷದ ಪಾಡ್ಯಮಿಯ ಮೊದಲಿನ ಅರ್ಧಭಾಗ, ಬಿದಿಗೆ ಪಂಚಮಿಯ ಪೂರ್ವಾರ್ಧ, ಅಷ್ಟಮಿಯ ಉತ್ತರಾರ್ಧ, ದ್ವಾದಶಿಯ ಪೂರ್ವಾರ್ಧ, ಪೂರ್ಣಿಮೆಯ ಉತ್ತರಾರ್ಧ, ಕೃಷ್ಣಪಕ್ಷ ಚತುರ್ಥಿಯ ದಿನ ಪ್ರಥಮಾರ್ಧ, ಸಪ್ತಮಿಯ ಉತ್ತರಾರ್ಧ, ಏಕಾದಶಿಯ ಪೂರ್ವಾರ್ಧ, ಈ ಸಮಯಗಳಲ್ಲಿ ಬವಕರಣವು ಬರುತ್ತದೆ.

ಕೃಷ್ಣಪಕ್ಷೇಚತುರ್ಥ್ಯಾಂ ತು ಪ್ರಥಮೇಽರ್ಧೇ ತಥೈವ ಚ ।
ಸಪ್ತಮ್ಯಾಂ ಚಾಪರೇ ತ್ವರ್ಧೇ ಹ್ಯೇಕಾದಶ್ಯಾಂ ತಥಾಽದ್ಯಕೇ ॥ ೩೧ ॥

ಕರಣಂ ತು ಬವಂ ನಾಮ ಕಥಿತಂ ಶಕ್ರದೈವತಂ ।
ದ್ವಿತೀಯಾರ್ಧೇ ತಥಾಽದ್ಯೇ ತು ಪಂಚಮ್ಯರ್ಧೇ ತಥಾ ಪರೇ ॥ ೩೨ ॥

ನವಮ್ಯರ್ಧೇ ತಥಾ ಪೂರ್ವೇ ದ್ವಾದಶ್ಯರ್ಧೇ ತಥಾ ಪರೇ ।
ಕೃಷ್ಣಪ್ರತಿಪದಾದ್ಯಾರ್ಧೇ ಚತುರ್ಥ್ಯರ್ಧೇ ತಥಾ ಪರೇ ॥ ೩೩ ॥

ಅಷ್ಟಮ್ಯರ್ಧೇ ತಥಾ ಪೂರ್ವೇ ಹ್ಯೇಕಾದಶ್ಯಾಂ ತಥಾ ಪರೇ ।
ಬಾಲವಂ ನಾಮ ಕರಣಂ ಕಥಿತಂ ಬ್ರಹ್ಮದೈವತಂ ॥ ೩೪ ॥

ಶುಕ್ಲಪಕ್ಷೇ ದ್ವಿತೀಯಾರ್ಧೇ ಷಷ್ಠ್ಯರ್ಧೇ ಪ್ರಥಮೇ ತಥಾ ।
ನವಮ್ಯರ್ಧೇ ತಥೈವಾಂತೇ ತ್ರಯೋದಶ್ಯಾಂ ತಥಾಽದ್ಯಕೇ ॥ ೩೫ ॥

ಕೃಷ್ಣಪ್ರತಿಪದಾರ್ಧೇ ತು ಪಂಚಮ್ಯಾಂ ಪ್ರಥಮೇ ತಥಾ ।
ದ್ವಿತೀಯಾರ್ಧೇ ತಥಾಽಷ್ಟಮ್ಯಾಂ ದ್ವಾದಶ್ಯಾಂ ಪ್ರಥಮೇ ತಥಾ ॥ ೩೬ ॥

ಕೌಲವಂ ನಾಮ ಕರಣಂ ಕಥಿತಂ ಮಿತ್ರದೈವತಂ ।
ಆದ್ಯೇ ಶುಕ್ಲತೃತೀಯಾರ್ಧೇ ಷಷ್ಠ್ಯರ್ಧೇ ಚ ತಥಾ ಪರೇ ॥ ೩೭ ॥

ಇನ್ನು ಎರಡನೆಯ ಬಾಲವಕರಣವು ಬರುವ ದಿವಸಗಳನ್ನು ತಿಳಿಸುತ್ತೇನೆ ಇದು ಬ್ರಹ್ಮದೈವತವಾದುದು ಶುಕ್ಲಪಕ್ಷ ಬಿದಿಗೆಯ ಪೂರ್ವಾರ್ಧ, ಪಂಚಮಿಯ ಪರಾರ್ಧ, ನವಮಿಯ ಪೂರ್ವಾರ್ಧ, ದ್ವಾದಶಿಯ ಪರಾರ್ಧ, ಕೃಷ್ಣಪಕ್ಷ ಪಾಡ್ಯದ ಮೊದಲನೆಯ ಅರ್ಧ, ಚತುರ್ಥೀ ದಿವಸ ಎರಡನೆಯ ಅರ್ಧಕಾಲ, ಅಷ್ಟಮಿಯ ದಿನ ಪೂರ್ವಾರ್ಧ, ಏಕಾದಶಿಯ ದಿನ ಪರಾರ್ಧ, ಈ ದಿವಸಗಳಲ್ಲಿ ಬಾಲವವು ಬರುವುದೆಂದು ತಿಳಿಯಬೇಕು

೩೫ ೩೭ ಕೌಲವ ಕರಣಕ್ಕೆ ದೇವತೆ ಮಿತ್ರನು ಈ ಕರಣವು ಬರುವ ದಿವಸಗಳನ್ನು ತಿಳಿಸುತ್ತೇನೆ ಶುಕ್ಲಪಕ್ಷದ ಬಿದಿಗೆಯ ಉತ್ತರಾರ್ಧ, ಷಷ್ಠೀ ಪ್ರಥಮಾರ್ಧ, ನವಮಿಯ ದಿನ ಪರಾರ್ಧ. ತ್ರಯೋದಶಿ ಪ್ರಥಮಾರ್ಧ, ಬಹುಳ ಪಾಡ್ಯದ

**ಕೃಷ್ಣದ್ವಿತೀಯಾಪ್ರಥಮೇ ಪಂಚಮ್ಯರ್ಧೇ ತಥಾ ಪರೇ ।**
**ನವಮ್ಯರ್ಧೇ ತಥಾ ಪೂರ್ವೇ ದ್ವಾದಶ್ಯರ್ಧೇ ತಥಾ ಪರೇ　　॥ ೩೮ ॥**

**ತೌತಿಲಂ ನಾಮ ಕರಣಮಾರ್ಯಮ್ಣಂ ಕಥಿತಂ ಬುಧೈಃ ।**
**ಅಂತೇ ಶುಕ್ಲತೃತೀಯಾರ್ಧೇ ಸಪ್ತಮ್ಯಾಂ ಪ್ರಥಮೇ ತಥಾ　　॥ ೩೯ ॥**

**ದಶಮ್ಯರ್ಧೇ ತಥೈವಾಂತೇ ಚತುರ್ದಶ್ಯಾಂ ತಥಾಽದ್ಯಕೇ ।**
**ಕೃಷ್ಣಪಕ್ಷದ್ವಿತೀಯಾಂತೇ ಷಷ್ಠ್ಯರ್ಧೇ ಪ್ರಥಮೇ ತಥಾ　　॥ ೪೦ ॥**

**ನವಮ್ಯಾಂಚ ತಥೈವಾಂತೇ ತ್ರಯೋದಶ್ಯಾಂ ತಥಾಽದ್ಯಕೇ ।**
**ಗರಾಭಿಧಾನಂ ಕರಣಂ ಪೃಥಿವೀದೈವತಂ ಸ್ಮೃತಂ　　॥ ೪೧ ॥**

**ಶುಕ್ಲಪಕ್ಷ ಚತುರ್ಥ್ಯರ್ಧೇ ಸಪ್ತಮ್ಯಾಂಚ ತಥಾಪರೇ ।**
**ಏಕಾದಶ್ಯಾಂ ತಥಾ ಪೂರ್ವೇ ಚತುರ್ದಶ್ಯಾಂ ತಥಾಽಪರೇ　　॥ ೪೨ ॥**

---

ಎರಡನೇ ಅರ್ಧ, ಪಂಚಮಿಯ ಪ್ರಥಮಾರ್ಧ, ಅಷ್ಟಮಿಯ ದ್ವಿತೀಯಾರ್ಧ ದ್ವಾದ ಶಿಯ ಪ್ರಥಮಾರ್ಧ' ಹೀಗೆ ಬರುವುದು

ಇನ್ನು ತೌತಿಲವೆಂಬ ಕರಣವು ಬರುವ ದಿವಸಗಳನ್ನು ತಿಳಿಸುವೆವು -- ಇದಕ್ಕೆ ಆರ್ಯಮನ್ನು ದೇವತೆ, ಶುದ್ಧ ತೃತೀಯದ ಪೂರ್ವಾರ್ಧ, ಷಷ್ಠಿಯ ದಿವಸ ಉತ್ತ ರಾರ್ಧ, ಬಹುಳ ಬಿದಿಗೆಯ ಪ್ರಥಮಾರ್ಧ, ಪಂಚಮಿಯ ದಿನ ಉತ್ತರಾರ್ಧ, ನವ ಮಿಯ ದಿವಸ ಪೂರ್ವಾರ್ಧ, ದ್ವಾದಶಿಯ ಉತ್ತರಾರ್ಧ, ಹೀಗೆ ಇದು ಸುತ್ತಿಕೊಂಡು ಬರುತ್ತಿರುವುದು

೩೯-೪೧　ಗರಕರಣವು ಭೂದೇವಾತ್ಮಕವಾದುದು　ಅದು ಬರುವ ತಿಥಿಗ ಳನ್ನು ಹೇಳುತ್ತೇವೆ　ಪ್ರತಿ ತಿಂಗಳ ಶುಕ್ಲಪಕ್ಷದ ತೃತೀಯಾರ್ಧ, ಸಪ್ತಮಿಯ ದಿನ ಪ್ರಥಮಾರ್ಧ, ದಶಮಿಯ ದಿನ ಉತ್ತರಾರ್ಧ, ಚತುರ್ದಶೀ ದಿವಸ ಪ್ರಥಮಾರ್ಧ, ಕೃಷ್ಣಪಕ್ಷದ ಬಿದಿಗೆಯ ಉತ್ತರಾರ್ಧ, ಷಷ್ಠೀದಿನ ಪ್ರಥಮಾರ್ಧ, ನವಮಿಯ ಉತ್ತ ರಾರ್ಧ, ತ್ರಯೋದಶಿಯ ದಿವಸ ಪ್ರಥಮಾರ್ಧ, ಹೀಗೆ ಬರುತ್ತದ

೪೨-೪೩　ಶ್ರೀದೇವತಾಕವಾದ ವಣಿಜನಾಮ ಕರಣವು ಬರುವ ತಿಥಿಗಳನ್ನು ತಿಳಿಸುವೆವು --ಶುಕ್ಲಪಕ್ಷದ ಚತುರ್ಥಿಯ ಮೊದಲನೆ ಅರ್ಧದಿನ, ಸಪ್ತಮಿಯ ಉತ್ತ

ಕೃಷ್ಣತೃತೀಯಾ ಪ್ರಥಮೇ ಷಷ್ಠ್ಯರ್ಧೇಚ ತಥಾಽಪರೇ ।
ದಶಮ್ಯರ್ಧೇ ತಥಾಪೂರ್ವೇ ತ್ರಯೋದಶ್ಯಾಂ ತಥಾಽಪರೇ ॥ ೪೩ ॥

ವಣಿಜಂ ನಾಮ ಕರಣಂ ಶ್ರೀದೇವಮಭಿಧೀಯತೇ ।
ಶುಕ್ಲಪಕ್ಷೇ ಚತುರ್ಥ್ಯಂತೇ ಹ್ಯಷ್ಟಮ್ಯಾಂ ಪ್ರಥಮೇತಥಾ ॥ ೪೪ ॥

ಏಕಾದಶಮ್ಯಾಪರೇ ಚಾರ್ಧೇ ಪೌರ್ಣಮಾಸ್ಯಾಂ ತಥಾಽದ್ಯಕೇ ।
ಅಂತೇ ಕೃಷ್ಣತೃತೀಯಾರ್ಧೇ ಸಪ್ತಮ್ಯಾಂ ಪ್ರಥಮೇತಥಾ ॥ ೪೫ ॥

ದ್ವಿತೀಯೇಚ ದಶಮ್ಯರ್ಧೇ ಚತುರ್ದಶ್ಯಾಂ ತಥಾಽದ್ಯಕೇ ।
ವಿಷ್ಟಿರಿತ್ಯೇವ ಕರಣಂ ತಥಿತಂ ಮೃತ್ಯುದೈವತಂ ॥ ೪೬ ॥

ಸರ್ವಕರ್ಮಸುರಾಜೇಂದ್ರ ಸರ್ವದಾ ಗರ್ಹಿತಂಚ ತತ್ ।
ಚತುರ್ವಿಂಶತ್ಯಹೋರಾತ್ರೇ ರಾಜನ್ ಹೋರಾಃ ಪ್ರಕೀರ್ತಿತಾಃ ॥ ೪೭ ॥

---

ರಾರ್ಧ, ಏಕಾದಶಿಯ ದಿನ ಪೂರ್ವಾರ್ಧ, ಚತುರ್ದಶಿಯ ಅಪರಾರ್ಧ, ಬಹುಳ ತದಿಗೆಯ ಪ್ರಥಮಾರ್ಧ, ಷಷ್ಠಿಯ ಅಪರಾರ್ಧ, ದಶಮಿಯ ಪೂರ್ವಾರ್ಧ, ತ್ರಯೋದಶಿಯ ಅಪರಾರ್ಧ, ಈ ರೀತಿ ವಣಿಕ್ ಕರಣದ ತಿಥಿಗಳು

೪೫-೪೬ ಭದ್ರಾ (ವಿಷ್ಟಿ) ಕರಣದ ತಿಥಿಗಳನ್ನು ಹೇಳುತ್ತೇವೆ —ಇದರ ದೇವತೆ ಮೃತ್ಯು ಶುಕ್ಲಪಕ್ಷದ ಚತುರ್ಥಿಯ ಉತ್ತರಭಾಗ, ಅಷ್ಟಮಿಯ ಪ್ರಥಮಾರ್ಧ, ಏಕಾದಶೀ ದಿನ ಅಪರಾರ್ಧ, ಪೂರ್ಣಿಮಾ ದಿನ ಆದಿ ಅರ್ಧ, ಬಳಿಕ ಬಹುಳ ತದಿಗೆಯ ಉತ್ತರಾರ್ಧ, ಸಪ್ತಮಿಯ ಪ್ರಥಮಾರ್ಧ, ದಶಮಿಯ ದಿವಸ ದ್ವಿತೀಯಾರ್ಧ, ಚತುರ್ದಶೀ ದಿನ ಪ್ರಥಮಾರ್ಧ ಈ ರೀತಿ ಭದ್ರಾಕರಣವು ಬರುವ ದಿವಸಗಳೆಂದು ತಿಳಿಯಬೇಕು

೪೭ ಮೇಲ್ಕಂಡ ಭದ್ರಾಕರಣವು ಸರ್ವಕರ್ಮಗಳಿಗೂ ನಿಷಿದ್ಧವಾದುದು ಮುಂದೆ ಹೋರಾ ವಿಚಾರವನ್ನು ತಿಳಿಸುತ್ತೇವೆ —ಅಹೋರಾತ್ರಿಗಳು ಸೇರಿ ಇಪ್ಪತ್ತು ನಾಲ್ಕು ಹೋರೆಗಳೆಂದು ಹೇಳಲ್ಪಟ್ಟಿದೆ

**ಗ್ರಹೇಶದೇವಗಂಧರ್ವ ನಾಗಯಕ್ಷೇಶ್ವರಪ್ರಭಾಃ ।**
**ಸೂರ್ಯೋದಯಾದಥಾರಭ್ಯ ದಿನಪಾದ್ಯಾಃ ಕ್ರಮೇಣತಾಃ ॥ ೪೮ ॥**

**ಷಷ್ಠ ಕ್ರಮೇಣಚ ತಥಾಕ್ರಮಂ ತಾಸಾಂನಿಬೋಧಮೇ ।**
**ಅರ್ಕಶುಕ್ರರ್ಕ್ಷರಾತ್ರೀಶ ಸೌರಜೀವ ಕುಜೇಶ್ವರಾಃ ॥ ೪೯ ॥**

**ಸರ್ವಾಸಾಂಚ ತಥಾಕಾಲಂ ರಾಹುರ್ಭುಂಕ್ತೇ ಮಹಾಗ್ರಹಃ ।**
**ಕುಲಿಕಶ್ಚ ತಥಾ ನಾಗೋ ಯಕ್ಷಃ ಪದ್ಮೋऽತಿವಿಶ್ರುತಃ ॥ ೫೦ ॥**

**ಅಂಗಾರಪರ್ಣಶ್ಚ ತಥಾ ಗಂಧರ್ವಶ್ಚಾಭಿಧೀಯತೇ ।**
**ಕುಲಿಕಸ್ಯತು ಯಾ ವೇಲಾ ಸಾವರ್ಜ್ಯಾ ಸರ್ವಕರ್ಮಸು ॥ ೫೧ ॥**

**ತಸ್ಯಾಂಭುಕ್ತೇ ಭವೇದ್ವ್ಯಾಧಿರ್ವಿಷಂ ಭುಕ್ತಂನಜೀರ್ಯತೇ ।**
**ಪ್ರತ್ಯಕ್ಷಮಪಿ ತಾರ್ಕ್ಷ್ಯಸ್ಯ ತಸ್ಯಾಂದಷ್ಟೋನ ಜೀವತಿ ॥ ೫೨ ॥**

**ಭುಕ್ತಂ ತಸ್ಯಾಂತು ಭೈಷಜ್ಯಂ ನ ತು ಕಾರ್ಯಕರಂ ಭವೇತ್ ।**
**ಸಾತುಕಾಲವಿದಾಜ್ಞೇಯಾ ಮಂತ್ರಿಣಾ ಭಿಷಜಾತಥಾ ॥ ೫೩ ॥**

೪೮ ನವಗ್ರಹಗಳು ದೇವ, ಗಂಧರ್ವ, ನಾಗ, ಯಕ್ಷೇಶ್ವರ, ಪ್ರಭಾ, ಈ ಆರು ದೇವತೆಗಳೂ ಸೂರ್ಯೋದಯ ಮೊದಲು ಮಾಡಿಕೊಂಡು ಸೂರ್ಯಾದಿ ಹೋರೆಗಳಿಗೆ ಅಧಿಪತಿಗಳಾಗಿರುತ್ತಾರೆ

೪೯-೫೧ ಅವುಗಳ ಕ್ರಮವನ್ನು ಆರಾರು ಹೋರಾ ಕ್ರಮದಿಂದ ಹೇಳುತ್ತೇನೆ, ಕೇಳು ಸೂರ್ಯಹೋರೆ, ಶುಕ್ರಹೋರೆ, ನಕ್ಷತ್ರಹೋರೆ, ಚಂದ್ರಹೋರ, ಗುರುಹೋರೆ, ಕುಜಹೋರ — ಈ ಆರು ಹೋರೆಗಳ ಕಾಲವನ್ನು ಮಹಾಗ್ರಹವಾದ ರಾಹುವು ಕ್ರಮವಾಗಿ ಅನುಭವಿಸುತ್ತಾನೆ ಇದರಂತೆ ಗುಲಿಕ ಕಾಲವು ನಾಗ, ಯಕ್ಷ, ಪದ್ಮ, ಅಂಗಾರವರ್ಣ, ಗಂಧರ್ವ ಎಂದು ಆರು ವಿಧವಾಗಿ ಉಕ್ತವಾಗಿದೆ ಈ ಗುಲಿಕ ಕಾಲವೆಂಬುದನ್ನು ಸಕಲ ಕರ್ಮಗಳಲ್ಲೂ ತ್ಯಾಗಮಾಡಬೇಕು

೫೨ ಇಂತಹ ಸಮಯದಲ್ಲಿ ಹಾವಿನಿಂದ ಕಚ್ಚಲ್ಪಟ್ಟವನು ಯಾವ ಚಿಕಿತ್ಸೆಯಿಂದಲೂ ಗುಣಹೊಂದದೆ ಮೃತನಾಗುವನು

೫೩ ಗುಲಿಕ ಕಾಲದಲ್ಲಿ ಹಾವು ಕಚ್ಚಿದರೆ ಚಿಕಿತ್ಸೆ ಮಾಡಿದರೂ ಪ್ರಯೋಜನವಿಲ್ಲ ಇವನ್ನು ಕಾಲಜ್ಞರಾದ ಜ್ಯೋತಿಷ್ಕರಿಂದಲೂ ಮಂತ್ರಿಗಳಿಂದಲೂ ವೈದ್ಯರಿಂದಲೂ ತಿಳಿದುಕೊಳ್ಳಬೇಕು

ಅವಿಜ್ಞಾಯ ತು ತಾಂ ವೇಲಾಂತ್ರ್ಯಯಸ್ತ್ರೀ ರಾಜಪುಂಗವ ।
ವೈಫಲ್ಯಕರಣಾನ್ಮೂಢಾಃ ಪ್ರಾಪ್ನುವಂತ್ಯ ಯಶೋಮಹತ್ ॥ ೫೪ ॥

ಪ್ರತ್ಯೇಕಸ್ಯೈವ ವೇಲಾಯಾಂ ರಾಹೋರ್ಭೋಗಂ ನಿಬೋಧಮೇ ।
ಏಕೈಕಾ ತುಭವೇದ್ಧೋರಾ ಸಾರ್ಧಂ ವಿಘಟಿಕಾಶತಂ ॥ ೫೫ ॥

ವಿನಾಡಿಕಾಃ ಸಪ್ತಷಷ್ಟ್ಯಾ ರವೇಃ ಷೋಡಶಕೀರ್ತಿತಾಃ।
ಹೋರಾಕುಲಿಕವೇಲಸ್ತು ಶೇಷಃ ಕಾಲೋರವೇಸ್ಸ್ಮೃತಃ ॥ ೫೬ ॥

ಸ್ವಹೋರಾಂತೇ ತಥಾ ವೇಲಾಶ್ಚತಸ್ರಸ್ತು ವಿನಾಡಿಕಾಃ ।
ರಾಹೋಶ್ಚಕ್ರಸ್ಯಕಥಿತಾಃ ಶೇಷಃ ಕಾಲಃ ಸಿತಸ್ಯಚ ॥ ೫೭ ॥

ಸೌಮ್ಯಹೋರಾಸಮಾರಂಭೇ ಚಷಕೌದ್ವೌ ಪ್ರಕೀರ್ತಿತೌ ।
ಹೋರಾ ಕುಲಿಕವೇಲಾತು ಶೇಷಃ ಕಾಲೋಬುಧಸ್ಯಚ ॥ ೫೮ ॥

ಈ ಗುಳಿಕ ಕಾಲ ವಿಚಾರವನ್ನರಿಯದ ಎಲೈ ರಾಜಶ್ರೇಷ್ಠನೇ! ಮೂಢರು ವಿಫಲ ಪ್ರಯತ್ನರಾಗಿ ಮಹತ್ತರವಾದ ಅಪಕೀರ್ತಿಯನ್ನು ಹೊಂದುತ್ತಾರೆ

೫೫ ಬೇರಬೇರೆ ವೇಳೆಯಲ್ಲಿ ರಾಹುಭೋಗವನ್ನು ತಿಳಿಸುತ್ತೇನೆ, ಕೇಳು ಒಂದೊಂದು ರಾಹುಹೋರೆಯೂ ನೂರೂವರೆ ವಿಘಳಿಗೆ ಕಾಲ (ದಿನಕ್ಕೆ ಒಂದೂವರೆ ಗಂಟೆ) ಇರುವುದು

೫೬-೫೮ ರವಿಹೋರೆಗೆ ೬೭ ವಿಘಳಿಗೆಗಳು ಈ ರವಿಹೋರಾಂತ್ಯದಲ್ಲಿ ೪ ವಿಘಳಿಗೆಗಳು ರಾಹುಚಕ್ರದಲ್ಲಿ ಬರದಿರುವ ಘಳಿಗೆಗಳು ಹೋಗಲಾಗಿ ಉಳಿದುದು ಶುಕ್ರಹೋರೆ ಚಂದ್ರಹೋರೆಯ ಆರಂಭದಲ್ಲಿ ೨ ಘಳಿಗೆಗಳು ಹೋಗಲಾಗಿ, ಉಳಿದ ಕಾಲವು ಬುಧಹೋರೆಯು ಚಂದ್ರಹೋರೆಯಲ್ಲಿ ೭೧ ವಿಘಳಿಗೆಗಳು ಕಳೆದ ಬಳಿಕ ೮ ವಿಘಳಿಗೆ ಗುಳಿಕಕಾಲ ಆ ಮೇಲೆ ಪುನಃ ಚಂದ್ರಹೋರಾ ಶನಿಹೋರೆಯಲ್ಲಿ ೮೬ ವಿಘಳಿಗೆ ಕಳೆದ ಮೇಲೆ ಉಳಿದ ಕಾಲವು ಕುಲಿಕಕಾಲ ಗುರುಹೋರೆಯಲ್ಲಿ ೭೭॥ ವಿಘಳಿಗೆ ಕಳೆದ ಮೇಲೆ ರಾಹುಹೋರೆ ರಾಹುಕಾಲ ಕಳೆದ ಮೇಲೆ ಪುನಃ ಗುರುಹೋರೆ ಕುಜಹೋರೆಯ ಆರಂಭ ಕಾಲದಲ್ಲಿ ೩೨ ವಿಘಳಿಗೆಗಳು ಕಳೆದ ಮೇಲೆ

ಏಕಸಪ್ತತಿ ಮುಲ್ಲಂಘ್ಯ ಹೋರಾಯಾಂ ತು ನಿಶಾಭೃತಃ ।
ಆಷ್ಟಾತು ಕುಲಿಕಸ್ಯೋಕ್ತಾಃ ಶೇಷಃ ಕಾಲೋ ನಿಶಾಭೃತಃ ॥ ೫೯ ॥

ಷಡಶೀತಿಮತಿಕ್ರಮ್ಯ ಚಷಕಾನ್ರವಿಜಸ್ಯತು ।
ಯುಚ್ಛೇಷಸ್ತದ್ವಿನಿರ್ದಿಷ್ಟಃ ಕಾಲಸ್ತು ಕುಲಿಕಸ್ಯಚ ॥ ೬೦ ॥

ಸಪ್ತಸಪ್ತತ್ಯತಿಕ್ರಮ್ಯ ಸಾರ್ಧಾಂಸ್ತು ಚಷಕಾನ್ಗುರೌ ।
ರಾಹೋಸ್ತು ಚಷಕೋ ಹೋರಾ ಶೇಷಕಾಲೋ ಗುರೋರ್ಮತಃ ॥ ೬೧ ॥

ಭೌಮಹೋರಾ ಸಮಾರಂಭೇ ದ್ವಾತ್ರಿಂಶತ್ತು ವಿನಾಡಿಕಾಃ
ವೇಲಾತು ಕುಲಿಕಸ್ಯೋಕ್ತಾ ಶೇಷಃ ಕಾಲಃ ಕುಜಸ್ಯತು ॥ ೬೨ ॥

ಜೀವಜ್ಞಶುಕ್ರಹೋರಾಸು ಸರ್ವಕರ್ಮಾಣಿ ಕಾರಯೇತ್ ।
ಕ್ರೂರಾಸು ಚ ತಥಾಽನ್ಯಾಸು ನ ಕಿಂಚಿತ್ಕುಲಿಕಸ್ಯಚ ॥ ೬೩ ॥

ಅತಃಪರಂ ಮುಹೂರ್ತಾನಾಂ ದೈವತಾನಿ ನಿಬೋಧಮೇ ।
ಸರ್ವಕ್ಷಾಣಿ ವಿವರ್ತಂತೇ ಹ್ಯಹೋರಾತ್ರೇಣ ಪಾರ್ಥಿವ ॥ ೬೪ ॥

---

ಗುಳಿಕ ಕಾಲಾರಂಭ ಆ ಮೇಲೆ ಪುನಃ ಕುಜಹೋರೆ ಗುರು, ಬುಧ, ಶುಕ್ರರ ಹೋರೆಗಳಲ್ಲಿ ಸಕಲ ಕರ್ಮಗಳನ್ನೂ ಅಗತ್ಯವಾಗಿ ಮಾಡಬೇಕು ಇತರ ಕ್ರೂರ ಹೋರೆಗಳಲ್ಲೂ ಸಹ ಒಳ್ಳೇ ಕಾರ್ಯಗಳನ್ನು ಮಾಡಬಹುದು. ಆದರೆ ಗುಲಿಕ ಕಾಲದಲ್ಲಿ ಖಂಡಿತವಾಗಿ ಯಾವ ಕಾರ್ಯಗಳನ್ನೂ ಮಾಡಬಾರದು

೬೪ ಇನ್ನು ಮುಂದೆ ಮುಹೂರ್ತಗಳ ದೇವತೆಗಳನ್ನು ತಿಳಿಸುತ್ತೇನೆ, ಕೇಳು ಎಲ್ಲ ನಕ್ಷತ್ರಗಳೂ ಅಹೋರಾತ್ರಿಯಲ್ಲಿ ಚಕ್ರದಂತೆ ಒಂದಾದ ಮೇಲೊಂದ ಸುತ್ತುತ್ತಿರುತ್ತವೆ

ಟಿಪ್ಪಣಿ — ರಾಹುಕಾಲದಲ್ಲಿ ಯಾವ ಕಾರ್ಯವನ್ನೂ ಮಾಡಬಾರದೆಂದೂ, ಗುಳಿಕ ಕಾಲವು ಅಷ್ಟು ಗಮನಿಸೀಯವಲ್ಲನೆಂದೂ ಕೆಲವರು ಹೇಳುವರು ಈ ಗ್ರಂಥದಲ್ಲಿ ಗುಳಿಕಕಾಲವು ಅನರ್ಥಕಾರಿಯೆಂದೂ ಖಂಡಿತವಾಗಿ ಹೇಳಿರುತ್ತಾರೆ ಆದರೆ ಪ್ರತಿನಿತ್ಯವೂ ಈ ಎರಡು ಕಾಲಗಳೂ ಬರುತ್ತವೆ

ಸತತಂ ತೇ ವಿನಿರ್ದಿಷ್ಟಾ ಮುಹೂರ್ತಾಸ್ತ್ರಿಂಶದೇವತು ।

॥ ವಜ್ರ ಉವಾಚ ॥

ಅಷ್ಟಾವಿಂಶತಿರುಕ್ತಾನಿ ತ್ವಯಾ ತಾನಿ ಮಮಾನಘ ॥ ೬೫ ॥

ತ್ರಿಂಶನ್ಮುಹೂರ್ತಾಶ್ಚ ಕಥಂತ ಏವ ದ್ವಿಜಸತ್ತಮ ।

॥ ಮಾರ್ಕಂಡೇಯ ಉವಾಚ ॥

ದಿನರಾತ್ರ್ಯೋಸ್ಸಮಾರಂಭೇ ಹ್ಯರ್ಧಂ ಭವತಿ ಪಾರ್ಥಿವ ॥ ೬೬ ॥

ತಯೋರ್ಮಧ್ಯೇ ಚ ಸತತಮಭಿಜಿಚ್ಚಾಭಿಧೀಯತೇ ।

ತಯೋರ್ದ್ವಿಗತ್ವಾನ್ಮಯಾ ತ್ರಿಂಶನ್ಮುಹೂರ್ತಾ ವಿಹಿತಾಸ್ತವ ॥ ೬೭ ॥

ನಕ್ಷತ್ರೈರ್ದೈವತೈಸ್ತೇಷಾಂ ದೇವತಾಃ ಪರಿಕೀರ್ತಿತಾಃ ।

ಕೇವಲಂ ಕ್ರಮಹಾನಿಶ್ಚ ಕ್ರಮಸ್ತೇಷಾಂ ನಿಬೋಧಮೇ ॥ ೬೮ ॥

ರೌದ್ರಸ್ಸಾರ್ಪಸ್ತಥಾ ಮೈತ್ರಃ ಪೈತ್ರೋವಾಸವ ಏವಚ ।

ಆಪ್ಯೋ ವೈಶ್ವಸ್ತಥಾ ರಾಜನ್ಬ್ರಹ್ಮೇಶ್ವರಃ ಶಕ್ರದೈವತಃ ॥ ೬೯ ॥

ಐಂದ್ರಾಗ್ನೇಯೌ ನೈಋತಸ್ತು ವಾರುಣಶ್ಚ ಮಹೀಪತೇ ।

ಆರ್ಯಮ್ಣಸ್ತು ತಥಾ ಭೋಗ್ಯೋ ಮುಹೂರ್ತಾಸ್ತುದಿವಾಚರಾಃ ॥ ೭೦ ॥

---

೬೫ ಯಾವಾಗಲೂ ಮೂವತ್ತು ಮುಹೂರ್ತಗಳೆಂದು ನಿರ್ದಿಷ್ಟವಾಗಿದೆ ವಜ್ರರಾಜನು ಪ್ರಶ್ನೆಮಾಡುತ್ತಾನೆ — ಎಲೈ ಮಾರ್ಕಂಡೇಯ ಋಷಿಯೆ ! ನೀವು ನನ್ನೊಡನೆ ಮುಹೂರ್ತಗಳು ಇಪ್ಪತ್ತೆಂಟೆಂದು ಹೇಳಿದ್ದಿಯಲ್ಲಾ ? ಈಗ ಅವು ಮೂವತ್ತು ಹೇಗಾಯಿತು ? ದಯಮಾಡಿ ಹೇಳು

೬೬-೬೭ ಹಗಲು ರಾತ್ರಿ ಆರಂಭವಾಗುವಾಗ ಅರ್ಧ ಲಗ್ನದಂತೆ ಒಂದು ಮುಹೂರ್ತ ಅನಂತರ ಮಧ್ಯದಲ್ಲಿ ಯಾವಾಗಲೂ ಬರುವ ಅಭಿಜಿಲ್ಲಗ್ನವೆಂಬ ಒಂದು ಮುಹೂರ್ತ ಇವೆರಡನ್ನೂ ಸೇರಿಸಿಕೊಂಡು ನಿನ್ನ ಸಂಗಡ ಮೂವತ್ತು ಮುಹೂರ್ತವೆಂದು ತಿಳಿಸಿರುತ್ತೇನೆ

೬೮ ನಕ್ಷತ್ರಗಳಂದಲೂ ದೇವತೆಗಳಂದಲೂ ಅವುಗಳಿಗೆ ದೇವತೆಗಳು ಹೇಳಲ್ಪಟ್ಟಿದೆ ಅವುಗಳ ಕ್ರಮಗಳನ್ನು ಹೇಳುವೆನು, ಕೇಳು

೬೯-೭೦ ರೌದ್ರ, ಸಾರ್ಪ, ಮೈತ್ರ, ಪೈತ್ರ, ವಾಸವ, ಆಪ್ಯ, ವೈಶ್ವ, ಇವೇಳೂ ಹಗಲಿನ ಮುಹೂರ್ತಗಳು ಇವುಗಳಿಗೆ ಕ್ರಮವಾಗಿ ದೇವತೆಗಳನ್ನು ಹೇಳುತ್ತೇವೆ ವರುಣ, ಇಂದ್ರ, ಇಂದ್ರಾಗ್ನಿ, ನೈಋತ, ವರುಣ, ಆರ್ಯಮಾದಿಗಳು

ರೌದ್ರಾಽಜಪೇವ್ರೋಽಹಿಬುರ್ಧ್ನ್ಯಾಃ ಪೌಷ್ಣಶ್ಚಾಶ್ವಿನ ಏವಚ ।
ಯಾಮ್ಯೋಽಗ್ನಿದೈವತಶ್ಚೈವ ಬ್ರಾಹ್ಮಸ್ಸೌಮ್ಯಸ್ತಥೈವಚ　　॥ ೭೦ ॥

ಆದಿತ್ಯೋ ಜೀವದೈವತ್ಯೋ ವೈಷ್ಣವಃ ಸೂರ್ಯದೈವತಃ ।
ತ್ವಾಷ್ಟ್ರಶ್ಚೈವಾಥ ವಾಯವ್ಯೋ ಮುಹೂರ್ತಾ ರಾತ್ರಿಚಾರಿಣಃ　　॥ ೭೨ ॥

ಅಹ್ನಃ ಪಂಚದಶೋ ಭಾಗೋ ರಾತ್ರೇಶ್ಚ ಯದುನಂದನ ।
ಮುಹೂರ್ತಸಂಜ್ಞಃ ಕಥಿತೋ ಮುನಿಭಿಸ್ತತ್ವದರ್ಶಿಭಿಃ　　॥ ೭೩ ॥

ಮಹಾಕಲ್ಪಾದಥಾರಭ್ಯ ಕಾಲಾವಯವದೈವತಾಃ ।
ಉಕ್ತಾಸ್ತವ ಮುಹೂರ್ತಾಶ್ಚ ತೇಷಾಂಕಾಲೇ ಸ್ವಕೇಽರ್ಚನಂ　　॥ ೭೪ ॥

ಮಹಾಫಲಂ ಹಿನಿರ್ದಿಷ್ಟಂ ಸ್ಯಾದ್ವಿಯೋಗೇವಿಶೇಷತಃ ।
ಸ್ವಕಾಲೇ ದೇವತಾಃ ಪೂಜ್ಯಾಃ ಸೋಪಚಾರೈರ್ವಿಶೇಷತಃ ।
ತಸ್ಯಾಸ್ಸಕಾಶಾದ್ಧರ್ಮಜ್ಞ ಕಾಮಯದ್ಭಿರ್ಮಹತ್ಫಲಂ　　॥ ೭೫ ॥

---

೭೦-೭೨　ರೌದ್ರ ಮುಹೂರ್ತಕ್ಕೆ ಬ್ರಹ್ಮದೇವತೆ. ಪೌಷ್ಣಕ್ಕೆ ಅಶ್ವಿನೀದೇವತೆ, ಯಾಮ್ಯಕ್ಕೆ ಅಗ್ನಿ, ಬ್ರಾಹ್ಮ ಮುಹೂರ್ತಕ್ಕೆ ಸೌಮ್ಯ, ಆದಿತ್ಯನಿಗ ಗುರುದೇವತೆ, ವೈಷ್ಣವ ಮುಹೂರ್ತಕ್ಕೆ ಸೂರ್ಯದೇವತೆ, ತ್ವಾಷ್ಟ್ರ ಮುಹೂರ್ತಕ್ಕೆ ವಾಯುವ್ಯನೇ ದೇವತೆ ಹೀಗೆ ಈ ಏಳೂ ರಾತ್ರಿ ಹೊತ್ತು ಬರುವ ಮುಹೂರ್ತಗಳು ಮತ್ತು ಅವುಗಳ ದೇವತೆಗಳು

೭೩　ಹಗಲು ಹದಿನೈದು ಭಾಗ ರಾತ್ರಿ ಹದಿನೈದು ಭಾಗ ಇವೆರಡೂ ಸೇರಿ ಮುಹೂರ್ತಗಳೆಂದು ತತ್ವದರ್ಶಿಗಳು ಹೇಳುತ್ತಾರೆ

೭೪　ಮಹಾಕಲ್ಪದಿಂದಾರಂಭಿಸಿ ನಾನು ಕಾಲಾವಯವ ದೇವತೆಗಳ ವಿಷಯವನ್ನೂ, ಮುಹೂರ್ತಾದಿಗಳ ವೃತ್ತಾಂತವನ್ನೂ ತಿಳಿಸಿರುತ್ತೇನೆ ಆಯಾಯ ಲಗ್ನ ಮುಹೂರ್ತ ಕಾಲಗಳಲ್ಲಿ ಆಯಾಯ ಅಭಿಮಾನಿ ದೇವತೆಗಳನ್ನು ಪೂಜಿಸಬೇಕು

೭೫　ಈ ರೀತಿ ಆಯಾ ದೇವತಾ ಪೂಜೆಗಳಿಂದ ಮಹಾಫಲವು ಹೇಳಲ್ಪಟ್ಟಿದೆ ವಿಯೋಗ ಸಂದರ್ಭದಲ್ಲಿ ವಿಶೇಷ ಪೂಜೆಯನ್ನೇ ಮಾಡಬೇಕು ಆಯಾಯ ಕಾಲಗಳಲ್ಲಿ ಕಾಲೋಕ್ತ ದೇವತೆಗಳನ್ನು ವಿಶೇಷವಾದ ಉಪಚಾರಗಳಿಂದ ಪೂಜೋಪಚಾರ ಮಾಡುತ್ತ ಬಂದರೆ ಆಯಾ ದೇವತೆಗಳಿಂದ ಏನೇ ಇಷ್ಟಾರ್ಥಗಳನ್ನು ಬಯಸಿದರೂ ಆಯಾಯ ದೇವತೆಗಳು ಆ ಇಷ್ಟಾರ್ಥವನ್ನು ನೆರವೇರಿಸಿಕೊಡುತ್ತವೆ

ಕಾಲೇಸ್ವಕೇಯಃ ಪ್ರಯತಸ್ತು ಭಕ್ತ್ಯಾ।
ದೇವಾನ್ಯಥಾವತ್ಸಮುಪೈತಿ ರಾಜನ್ ॥
ಸಪರ್ಯಯಾ ತಸ್ಯದಿಶಂತಿ ದೇವಾಃ ।
ಫಲಾನಭೀಷ್ಟಾರ್ನ್ನೃಷು ಲೋಹಿತಾಕ್ಷ ॥ ೭೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಾಲಾವಯವ ದೈವತಾನಾಂ ಮಾಹಾತ್ಮ್ಯ
ವರ್ಣನೋನಾಮ ತ್ರ್ಯಶೀತಿತಮೋಽಧ್ಯಾಯಃ



೭೬ ಯಾವ ಮನುಷ್ಯನು ಪರಿಶುದ್ಧಾಂತರಂಗನಾಗಿ ಭಕ್ತಿಯಿಂದ ಕಾಲಾವನ್ನು ಯಾವ ದೇವತೆಗಳನ್ನು ಆಯಾಯ ಕಾಲಗಳಲ್ಲಿ ತಿಳಿದುಕೊಂಡು ಪೂಜೆ ಮಾಡುತ್ತಾನೋ, ಅಂತಹ ಮನುಷ್ಯನಿಗೆ ಆಯಾಯ ದೇವತೆಗಳು ಅವನವನು ಕೇಳಿದ ಇಷ್ಟಾರ್ಥಗಳನ್ನೆಲ್ಲಾ ಕೊಟ್ಟು ಕಾಪಾಡುತ್ತಾರ, ಕೇಳೈ, ವಜ್ರಮಹಾರಾಜ! ಎಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಕಾಲಾವಯವ ದೇವತೆಗಳ ಮಾಹಾತ್ಮ್ಯ
ವರ್ಣನೆಯೆಂಬ ಹೆಸರಿನ ಎಂಭತ್ತಮೂರನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಚತುರಶೀತಿತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಲಗ್ನಾನಿದ್ವಾದಶೋಕ್ತಾನಿ ದಿನರಾತ್ರೇಣ ನಿತ್ಯಶಃ ।
ಯತ್ರಾದಿತ್ಯಃ ಸ್ಥಿತೋ ರಾಶೌ ತದಾದ್ಯಾನಿ ನರಾಧಿಪ ॥ ೧ ॥

ಮೇಷೋ ವೃಷೋಥ ಮಿಥುನಃ ಕುಲೀರಸ್ಸಿಂಹ ಏವಚ ।
ಕನ್ಯಾ ತುಲಾ ತಥಾಕೀಟೋ ಧನ್ವೀ ಮಕರ ಏವಚ ॥ ೨ ॥

ಕುಂಭೋಮೀನಶ್ಚರಾಜೇಂದ್ರ ಲಗ್ನಾದ್ವಾದಶಕೀರ್ತಿತಾಃ ।
ಕುಜಶ್ಶುಕ್ರೋ ಬುಧಶ್ಚಂದ್ರಃ ಸೂರ್ಯಶ್ಚಾಂದ್ರಿಸ್ಸಿತಸ್ತಥಾ ॥ ೩ ॥

ಭೌಮೋ ಜೀವಶ್ಚ ಸೌರಶ್ಚ ಶನಿರ್ಜೀವಿಸ್ತಥೈವಚ ।
ಮೇಷಾದೀನಾಂ ಕ್ರಮೇಣೋಕ್ತಾಃ ಪ್ರಭಾವಃ ಪೃಥಿವೀಪತೇ ॥ ೪ ॥

### ಎಂಭತ್ತನಾಲ್ಕನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ - ಪ್ರತಿ ದಿನವೂ ಅಹೋರಾತ್ರಿ ಪ್ರಮಾಣ ಸೇರಿ ಹನ್ನೆರಡು ಲಗ್ನಗಳೆಂದು ಹೇಳಲ್ಪಟ್ಟಿದೆ ಸೂರ್ಯನು ಯಾವ ರಾಶಿ ಯಲ್ಲಿರುತ್ತಾನೋ ಅದೇ ಆರಂಭಿಸಿ ಹನ್ನೆರಡು ಲಗ್ನಗಳು

೨-೩ ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನಸ್ಸು, ಮಕರ, ಕುಂಭ, ಮೀನ, ಇವು ಹನ್ನೆರಡೂ ಲಗ್ನಗಳ ಹೆಸರುಗಳು

೪ ಅಂಗಾರಕ, ಶುಕ್ರ, ಕುಜ, ಗುರು, ಸೌರ (ಶನಿ), ಶನಿ, ಗುರು, ಇವರು ಗಳು ಕ್ರಮವಾಗಿ ಮೇಷಾದಿಗಳಿಗೆ ಲಗ್ನದ ಅಧಿಪತಿಗಳು

ಲಗ್ನಸ್ಯಾರ್ಧಂ ಸ್ಮೃತಾಹೋರಾ ತಯೋರ್ವಿಷಮರಾಶಿಷು ।
ಆದಿತ್ಯಚಂದ್ರೌ ಚಂದ್ರಾರ್ಕಾವೀಶ್ವರೌ ಸಮರಾಶಿಷು ॥ ೫ ॥

ಲಗ್ನತ್ರಿಭಾಗೋ ದ್ರೇಕ್ಕಾಣಃ ಕ್ರಮಾತ್ತೇಷಾಂ ತಧೇಶ್ವರಾಃ ।
ಲಗ್ನೇಶಃ ಪಂಚಮೇಶಶ್ಚ ನವಮೇಶಸ್ತಥೈವಚ ॥ ೬ ॥

ಮೇಷಾದ್ಯಾಃ ಕಥಿತಾ ನಿತ್ಯಂ ಮೇಷಸಿಂಹಧನುರ್ಧರಾಃ ।
ಮಕರಾದ್ಯಾಸ್ತಥಾ ಪ್ರೋಕ್ತಾ ವೃಷಕನ್ಯಾ ಮೃಗಾಸ್ತಥಾ ॥ ೭ ॥

ತುಲಾದ್ಯಾಮಿಥುನಸ್ತೌಲೀ ಕುಂಭಶ್ಚ ವಸುಧಾಧಿಪ ।
ಕುಲೀರಾದ್ಯಾಃ ಕುಲೀರಶ್ಚ ಕೀಟೋ ಮೀನಸ್ತಥೈವಚ ॥ ೮ ॥

ಆದ್ಯುಕ್ತರಾಶಿಪ್ರಭೃತಿ ಗಣನೀಯಾ ನವಾಂಶಕಾಃ ।
ರಾಶೀನಾಂ ತು ಯಥೋಕ್ತಾನಾಂ ಕ್ರಮಾನ್ನವ ನವೇಶ್ವರಾಃ ॥ ೯ ॥

ಸ್ವರಾಶಿತಸ್ತಥಾರಭ್ಯ ಕ್ರಮೇಣೈವ ನವೇಶ್ವರಾಃ ।
ರಾಶೀಶ್ವರೇಶ್ವರಾಃ ಪ್ರೋಕ್ತಾ ರಾಶೀನಾಂ ದ್ವಾದಶಾಂಶಕಾಃ ॥ ೧೦ ॥

---

೫ ಲಗ್ನದ ಅರ್ಧಭಾಗಕ್ಕೆ ಹೋರೆ ಎಂದು ಹೆಸರು ಇವುಗಳಲ್ಲಿ ವಿಷಮ ರಾಶಿಗಳಲ್ಲಿ ಸೂರ್ಯ ಚಂದ್ರರೂ, ಸಮರಾಶಿಗಳಲ್ಲಿ ಚಂದ್ರ ಸೂರ್ಯರೂ ಅಧಿಪತಿಗಳಾಗಿ ಬರುವರು

೬ ಲಗ್ನದ ಮೂರನೇ ಒಂದು ಭಾಗಕ್ಕೆ ದ್ರೇಕ್ಕಾಣವೆಂದು ಹೆಸರು ಮೊದಲನೆಯ ಭಾಗವು ಆಯಾ ಲಗ್ನಾಧಿಪತಿಯ ದ್ರೇಕ್ಕಾಣ ಎರಡನೆಯ ಭಾಗವು ಆಯಾ ಲಗ್ನದಿಂದ ಐದನೇ ಲಗ್ನದ ಅಧಿಪತಿಯ ದ್ರೇಕ್ಕಾಣವು ಮೂರನೆಯ ಭಾಗವು ಆಯಾ ಲಗ್ನದಿಂದ ಒಂಭತ್ತನೇ ಲಗ್ನದ ಅಧಿಪತಿಯು ದ್ರೇಕ್ಕಾಣಗಳೆಂದು ತಿಳಿಯಬೇಕು

ಪಾದರಿಗಾಗಿ ಲಗ್ನಗಳ ಮತ್ತು ದ್ರೇಕ್ಕಾಣ ಭಾಗಗಳ ಒಂದು ಚಕ್ರವನ್ನು ಲಘುಜ್ಯೋತಿಷವೆಂಬ ಗ್ರಂಥದಲ್ಲಿ ಬರೆದಿದ್ದಾರೆ.

೭-೯. ಇವುಗಳ ವಿವರಣೆ ಮೇಲಿನ ಗ್ರಂಥದಲ್ಲೇ ತಪಶೀಲಾಗಿ ಬರೆಯಲಾಗಿದ

೧೦ ಸ್ವರಾಶಿಯಿಂದ ಆರಂಭಿಸಿ ಕ್ರಮವಾಗಿ ನವಮಾಧಿಪತಿಗಳಾದ ಗ್ರಹಗಳಿಗೆ ರಾಶೀಶ್ವರರೆಂದು ಹೆಸರು ಲಗ್ನವನ್ನು ೧೨ ಭಾಗಗಳಾಗಿ ಮಾಡಿದರೆ ಅದಕ್ಕೆ

**ಪಂಚಭೌಮಸ್ಯ ಸೌರಸ್ಯ ಪಂಚ ತ್ರಿಶಾಂಶಕಾ ಮತಾಃ ।**
**ಜೀವಸ್ಯಾಷ್ಟೌ ವಿನಿರ್ದಿಷ್ಟಾಃ ಸಪ್ತಪ್ರೋಕ್ತಾ ಬುಧಸ್ಯತು ॥ ೧೧ ॥**

**ಶುಕ್ರಸ್ಯೋಕ್ತಾಸ್ತಥಾಪಂಚ ರಾಶೌ ವಿಷಮ ಸಂಜ್ಞಕೇ**
**ಆದ್ಯಾಸ್ತು ಪಂಚ ಶುಕ್ರಸ್ಯ ತತಸ್ಸಪ್ತ ಬುಧಸ್ಯಚ ॥ ೧೨ ॥**

**ಜೀವಸ್ಯಾಷ್ಟೌ ತಥಾ ಪ್ರೋಕ್ತಾಃ ಪಂಚ ಸೌರಸ್ಯ ಚಾಪ್ಯಥ ।**
**ಕುಜಸ್ಯ ತು ತಥಾ ಪಂಚ ರಾಶೌ ತು ಸಮಸಂಜ್ಞಕೇ ॥ ೧೩ ॥**

**ಲಗ್ನಂ ಚ ಹೋರಾ ಚ ತಥಾ ದ್ರಿಕಾಣಾಂ ।**
**ನವಾಂಶಕಂ ದ್ವಾದಶಭಾಗ ಸಂಜ್ಞಕಂ ॥**

---

ದ್ವಾದಶಾಂಶವೆಂದು ಹೆಸರು  ಈ ದ್ವಾದಶಾಂಶವನ್ನು ಆಯಾಯ ಲಗ್ನಾದಿಯಾಗಿಯೇ ಎಣಿಸಬೇಕು  ಹೇಗೆಂದರೆ ಮೇಷಲಗ್ನದ ೧ನೆಯ ಅಂಶವು ಮೇಷಾಂಶ, ೨ನೇ ಅಂಶವು ವೃಷಭಾಂಶ, ಇದರಂತೆಯೇ ವೃಷಭಲಗ್ನದ ೧ನೇ ಅಂಶವು ವೃಷಭಾಂಶ, ೨ನೆಯದು ಮಿಥುನಾಂಶ, ೧೨ನೇ ಅಂಶವು ಮೇಷಾಂಶ  ಇದೇ ರೀತಿ ಎಲ್ಲವನ್ನೂ ತಿಳಿಯಬೇಕು

೧೧-೧೩  ಇನ್ನು ತ್ರಿಂಶಾಂಶಗಳ ವಿವರವನ್ನು ತಿಳಿಸಲಾಗುವುದು  ಓಜ (ವಿಷಮ) ಲಗ್ನಗಳಲ್ಲಿ ಮೊದಲನೆಯ ೫ ಅಂಶಗಳು, ಮೇಷ ಕುಜ ತ್ರಿಂಶಾಂಶ, ೬ರಿಂದ ೧೦ ಪೂರ್ತಾ ೫ ಅಂಶಗಳು ಕುಂಭ ಶನಿ ತ್ರಿಂಶಾಂಶ, ೧೧ರಿಂದ ೧೮ ಪೂರ್ತಾ ೮ ಅಂಶಗಳು ಧನುರ್ಗುರು ತ್ರಿಂಶಾಂಶ, ೧೯ ರಿಂದ ೨೫ ಪೂರ್ತಾ ೭ ಅಂಶಗಳು ಮಿಥುನ ಬುಧ ತ್ರಿಂಶಾಂಶ, ೨೬ ರಿಂದ ೩೦ ರ ಪೂರ್ತಾ ೫ ಅಂಶಗಳು ತುಲಾ ಶುಕ್ರ ತ್ರಿಂಶಾಂಶ  ಯುಗ್ಮಲಗ್ನಗಳಲ್ಲಿ ಮೊದಲನೆಯ ೫ ಅಂಶಗಳು ವೃಷಭ ಶುಕ್ರತ್ರಿಂಶಾಂಶ ೬ ರಿಂದ ೧೨ ಪೂರ್ತಿ ೭ ಅಂಶಗಳು ಕನ್ಯಾ ಬುಧ ತ್ರಿಂಶಾಂಶ, ೧೩ ರಿಂದ ೨೦ ಪೂರ್ತಿ ೮ ಅಂಶಗಳು ಮೀನ ಗುರು ತ್ರಿಂಶಾಂಶ, ೨೧ ರಿಂದ ೨೫ ರ ಪೂರ್ತಿ ೫ ಅಂಶಗಳು ಮಕರ ಶನಿ ತ್ರಿಂಶಾಂಶ, ೨೬ ರಿಂದ ೩೦ ರ ಪೂರ್ತಿ ೫ ಅಂಶಗಳು ವೃಶ್ಚಿಕ ಕುಜ ತ್ರಿಂಶಾಂಶವೆಂದು ತಿಳಿಯಬೇಕು

ತ್ರಿಂಶಾಂಶಕಂ ಚಾಪ್ಯಥ ಷಷ್ಠಮತ್ರ ।
ಷಡ್ಭೇದಮಾಹುರ್ಮುನಯಶ್ಚ ಲಗ್ನಂ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಷಡ್‌ಲಗ್ನವರ್ಣನೋನಾಮ
ಚತುರಶೀತಿತಮೋಧ್ಯಾಯಃ

೧೪ ಋಷಿಗಳು ಲಗ್ನವನ್ನು ಮೇಲೆ ವಿವರಿಸಿದ ರೀತಿಯಿಂದ ಲಗ್ನ, ಹೋರ ದ್ರೇಕ್ಕಾಣ, ನವಾಂಶ, ದ್ವಾದಶಾಂಶ, ತ್ರಿಂಶಾಂಶ ಎಂಬುದಾಗಿ ಆರು ಭೇದವನ್ನಾಗಿ ವಿಂಗಡಿಸಿರುತ್ತಾರೆ ಇದಕ್ಕೆ ಷಡ್ವರ್ಗ ಲಗ್ನವೆಂದು ಹೆಸರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಷಡ್ಲಗ್ನವರ್ಣನವೆಂಬ ಹೆಸರಿನ ಎಂಭತ್ತನಾಲ್ಕನೇ
ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಾಶೀತಿತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಶುಭೋ ವಾಪ್ಯಶುಭೋವಾಪಿ ಕಥಂಕಾಲೋ ಮಹೀತಲೇ ।
ಜ್ಞಾಯತೇ ಭಾರ್ಗವಶ್ರೇಷ್ಠ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಕೃತ್ತಿಕಾ ಯಾಮ್ಯವಾಯವ್ಯೇ ನಾಗವೀಥ್ಯುತ್ತರೋತ್ತರೇ ।
ಗಜವೀಥೀಹ್ಯುದಙ್ಮಧ್ಯೇ ಪ್ರಾಜಾಪತ್ಯಾದಯಸ್ತ್ರಯಃ ॥ ೨ ॥

ಐವರಾಣೇ ಹ್ಯುದಗ್ಭಾಗೇ ಅಹೋರಾತ್ರ ಚತುಷ್ಟಯಂ ।
ಮಧ್ಯೇವರೇ ತಥಾವೀಥೀ ಫಲ್ಗುನೀ ಋಕ್ಷಯೋರ್ದ್ವಯೋಃ ॥ ೩ ॥

### ಎಂಭತ್ತೈದನೆಯ ಅಧ್ಯಾಯವು.

೧ ವಜ್ರಮಹಾರಾಜನು ಹೇಳುತ್ತಾನೆ — ಎಲೈ ಮಾರ್ಕಂಡೇಯನೇ ! ಭೂಲೋಕದಲ್ಲಿ ಕಾಲವು ಶುಭವಾದುದು ಅಥವಾ ಅಶುಭಕರವಾದುದೆಂಬುದನ್ನು ತಿಳಿಯುವುದು ಹೇಗೆ ? ದಯಮಾಡಿ, ಈ ನನ್ನ ಪ್ರಶ್ನೆಗೆ ಉತ್ತರ ಕೊಡಬೇಕು

೨ ಮಾರ್ಕಂಡೇಯನು ಹೇಳುತ್ತಾನೆ — ಕೃತ್ತಿಕೆ, ಭರಣಿ, ಸ್ವಾತೀ ಈ ಮೂರು ನಕ್ಷತ್ರಗಳು ಉತ್ತರೋತ್ತರದಲ್ಲಿ ನಾಗವೀಥಿಯೆನಿಸಿಕೊಳ್ಳುವುದು ರೋಹಿಣಿ ಮೃಗಶಿರ, ಆರ್ದ್ರ ಈ ಮೂರು ನಕ್ಷತ್ರಗಳೂ ಉತ್ತರ ಮಧ್ಯದಲ್ಲಿ ಗಜವೀಥಿಯೆನಿಸಿ ಕೊಳ್ಳುವುವು

೩ ಪೂರ್ವ ಫಲ್ಗುನೀ, ಉತ್ತರ ಫಲ್ಗುನೀ ಈ ಎರಡು ನಕ್ಷತ್ರದ ಮಧ್ಯದಲ್ಲಿ ನಾಲ್ಕು ದಿನಗಳು ಉತ್ತರ ಭಾಗದಲ್ಲಿ ಮಧ್ಯವೀಥಿಯೆನಿಸಿಕೊಳ್ಳುವುದು

ಮಧ್ಯೇ-ಮಧ್ಯೇತು ಗೋವೀಥೀ ಅಜಾದ್ಯಂ ಭಚತುಷ್ಟಯಂ ।
ಮಧ್ಯಯಾಮೇ ಜರದ್ಗುಃ ಸ್ಯಾತ್ತ್ರಿತಯಂ ಶ್ರವಣಾದಿಕಂ ॥ ೪ ॥

ಯಾಮ್ಯೋತ್ತರೇಣ ತು ಮೃಗಾ ಹಸ್ತಚಿತ್ರೇ ಪ್ರಕೀರ್ತಿತೇ ।
ಅಜಾದಕ್ಷಿಣಮಧ್ಯೇತು ವಿಶಾಖಾ ಮೈತ್ರಯೋಸ್ಸ್ಮೃತಾಃ ॥ ೫ ॥

ಆವಿಕಾಯಾಮ್ಯಯಾಮ್ಯೇ ತು ಶಕ್ರಾದ್ಯಂ ಭಚತುಷ್ಟಯಂ ।
ವೈಶ್ವಾನರಪಥಂ ಪ್ರಾಹುಸ್ತಮೇವಾತ್ಯಂತ ದಾರುಣಂ ॥ ೬ ॥

ಉದಯಾಸ್ತಮಯಾಭ್ಯಾಂ ಚ ಚಾರೇಣಚ ತಥಾಗ್ರಹಾಃ ।
ಉತ್ತರಾಸು ಶುಭಾಃ ಪ್ರೋಕ್ತಾ ದಕ್ಷಿಣಾಸ್ತ್ವಶುಭಾವಹಾಃ ॥ ೭ ॥

ಸುಪ್ರಭಾರಶ್ಮಿಮಂತಶ್ಚ ನಾಗವೀಥ್ಯಾಂ ಯದಾಗ್ರಹಾಃ ।
ನ ತದಸ್ತಿ ಶುಭಂಲೋಕೇ ಯನ್ನಪಶ್ಯಂತಿ ಮಾನವಾಃ ॥ ೮ ॥

---

೪ ರೋಹಿಣ್ಯಾದಿಯಾಗಿ ನಾಲ್ಕು ನಕ್ಷತ್ರಗಳು ಮಧ್ಯೆ ಮಧ್ಯೆ ಗೋವೀಥಿ ಯೆನಿಸಿಕೊಳ್ಳುವುವು ಶ್ರವಣಾದಿ ಮೂರು ನಕ್ಷತ್ರಗಳು ಮಧ್ಯಯಾಮದಲ್ಲಿ ಜರದ್ಗವೀ ವೀಥಿಯೆನಿಸಿಕೊಳ್ಳುವುವು

೫ ಮೃಗಶಿರಾ, ಹಸ್ತ, ಚಿತ್ತ ನಕ್ಷತ್ರಗಳು ದಕ್ಷಿಣೋತ್ತರದಿಂದಲೂ, ವಿಶಾಖ, ಅನೂರಾಧ ನಕ್ಷತ್ರಗಳು ಮಧ್ಯದಲ್ಲಿಯೂ, ಅಜವೀಥಿಯೆನಿಸಿಕೊಳ್ಳುವುವು

೬ ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ತರಾಷಾಢ ಈ ನಾಲ್ಕು ನಕ್ಷತ್ರಗಳು ಆವಿಕಾವೀಥಿಯ ದಕ್ಷಿಣ ಯಾಮದಲ್ಲಿದ್ದಾಗ ವೈಶ್ವಾನರ ಪಥವೆಂದು ಹೇಳುವರು ಇದು ಭಯಂಕರವಾದುದೆಂದೂ ಹೇಳುತ್ತಾರೆ

೭ ಉದಯಾಸ್ತಮಯ ಕಾಲಗಳಲ್ಲಿ ಗ್ರಹಗಳು ಉತ್ತರ ಭಾಗದಲ್ಲಿ ಸಂಚರಿಸುವಾಗ ಶುಭವೆಂದೂ, ದಕ್ಷಿಣ ಭಾಗದಲ್ಲಿ ಸಂಚರಿಸುವಾಗ ಅಶುಭವೆಂದೂ ಹೇಳಲ್ಪಟ್ಟಿದೆ

೮ ನಾಗವೀಥಿಯಲ್ಲಿ ಯಾವಾಗ ಗ್ರಹಗಳು ಕಿರಣಗಳಿಂದ ವ್ಯಾಪ್ತವಾಗುವುವೋ ಆಗ ಲೋಕದಲ್ಲಿ ಶುಭದ ಹೆಸರೇ ಇರುವುದಿಲ್ಲ ಜನಗಳು ಆಗ ಸೌಖ್ಯವನ್ನು ಕಾಣಲಾರರು

ವಿರಶ್ಮಯೋ ವಿವರ್ಣಾಶ್ಚ ವೈಶ್ವಾನರಪಥಾಶ್ರಿತಾಃ ।
ನ ತದಸ್ತಿ ಶುಭಂರಾಮ ಯನ್ನ ಕುರ್ಯುರ್ಜಗತ್ತ್ರಯೇ ॥ ೯ ॥

ರೋಹಿಣೀಶಕಟಂ ಭಿಂದ್ಯುರ್ಗ್ರಹಾ ಯದಿ ಭವೇತ್ತದಾ ।
ನಾಶಃ ಪ್ರಜಾನಾಂ ಕ್ರೂರಶ್ಚ ವಿಶೇಷೇಣಾತ್ರ ಲಕ್ಷ್ಯತೇ ॥ ೧೦ ॥

ಸೌರಾರಸೂರ್ಯಾಃ ಕ್ರೂರಾಸ್ತು ತಥಾ ಕ್ಷೀಣಶ್ಚ ಚಂದ್ರಮಾಃ ।
ಕ್ರೂರೈರ್ಯುಕ್ತೋ ಬುಧಶ್ಚೈವ ರಾಹುಃ ಕೇತುಸ್ತಥೈವಚ ॥ ೧೧ ॥

ಶೇಷಾಸ್ಸೌಮ್ಯಗ್ರಹಾಃ ಪ್ರೋಕ್ತಾಃ ಮುನಿಭಿಸ್ತತ್ತ್ವದರ್ಶಿಭಿಃ ।
ರೋಹಿಣೀ ಕೃತ್ತಿಕಾ ಪಿತ್ರ್ಯಂ ವೈಷ್ಣವಂ ಮೈತ್ರಮೇವಚ ॥ ೧೨ ॥

ಪೀಡಯಂತೋ ಗ್ರಹಾ ಹನ್ಯುರ್ದಿಶಂ ವರುಣಪಾಲಿತಾಂ ॥
ಪೂರ್ವಸ್ಯಾಂ ದಿಶಿ ದೃಶ್ಯಂತೇ ಸರ್ವತಾರಗ್ರಹಾ ಯದಿ ॥ ೧೩ ॥

ಪ್ರಾಚ್ಯಾನಾಂ ತು ತದಾ ರಾಜ್ಞಾಂ ಭವೇತ್ಪೀಡಾ ಸುದಾರುಣಾ ।
ಮಧ್ಯೇಚ ಯದಿ ದೃಶ್ಯಂತೇ ಮಧ್ಯದೇಶನಿವಾಸಿನಾಂ ॥ ೧೪ ॥

ವಾರುಣ್ಯಾಂ ಯದಿ ದೃಶ್ಯಂತೇ ತಾಂ ದಿಶಂ ಪೀಡಯಂತಿಚ ॥
ಹೀನಾಧಿಕಂ ಚರಂತಶ್ಚವ್ಯಭ್ರೇ ವಾಽದರ್ಶನಂ ಗತಾಃ ॥ ೧೫ ॥

೯ ಯಾವಾಗ ಗ್ರಹಗಳು ರೋಹಿಣೀ ನಕ್ಷತ್ರನಾಮಕ ರಥವನ್ನು ಭೇದಿಸಿ ಬರುವವೋ ಆಗ ಪ್ರಜಾಕ್ಷಯವೆಂದು ತಿಳಿಯಬೇಕು

೧೦-೧೧ ಶನಿ, ಸೂರ್ಯ, ಕ್ಷೀಣಚಂದ್ರ ಇವರು ಕ್ರೂರರು ಈ ಕ್ರೂರಗ್ರಹಗಳೊಡನೆ ಬುಧ, ರಾಹು, ಕೇತುಗಳು ಸೇರಿದರೆ ಕ್ರೂರರಾಗುತ್ತಾರ

೧೨-೧೩ ಉಳಿದ ಗ್ರಹಗಳನ್ನು ತತ್ವವೇತ್ತರಾದ ಮುನಿಗಳು ಸೌಮ್ಯಗ್ರಹಗಳೆಂದು ಹೇಳುವರು ರೋಹಿಣಿ, ಕೃತ್ತಿಕೆ, ಮಘೆ, ಶ್ರವಣ ಅನೂರಾಧೆ ಇವುಗಳು ಪಶ್ಚಿಮದಿಕ್ಕಿನಲ್ಲಿದ್ದಾಗ ಪೀಡಾಪ್ರದ ಸಕಲ ತಾರಾಗ್ರಹಗಳೂ ಪೂರ್ವದಿಕ್ಕಿನಲ್ಲಿ ಕಂಡಾಗಲೂ ಹಾಗೆಯೇ

೧೪-೨೯. ತಾರಾಗ್ರಹಗಳು ಅಂಗಾರಕ, ಬುಧ, ಗುರು, ಶುಕ್ರ, ಶನಿಗಳೆಂದು ಈ ಹಿಂದೆಯೇ ಹೇಳಿದೆ ಇಂತಹ ಸಂದರ್ಭಗಳಲ್ಲಿ ನಾವು ತಾರಾಗ್ರಹ, ಮಹಾಗ್ರಹ, ಉಪಗ್ರಹಗಳನ್ನು ವಿವರಿಸಿ ಬರೆಯದೆ ಇದ್ದಾಗ್ಯೂ ವಾಚಕರು ಒಮ್ಮೆ ಓದಿದುದನ್ನು

ಧೂಮಾಯಂತೋ ಜ್ವಲಂತೋ ವಾ ವೇದಯಂತಿ ಮಹದ್ಭಯಂ ।
ಏಕಾಂತರಿತನಕ್ಷತ್ರಗತಾಃ ಸ್ಯುಶ್ಚೇದ್ಗ್ರಹಾದಿವಿ ॥ ೧೬ ॥

ಮಾಲಾನಾಮ ಭವೇದ್ಯೋಗೋ ಮಧ್ಯದೇಶ ಕ್ಷಿತೀಶಹಾ ।
ಪ್ರಾಸಶ್ಚಕ್ರಂ ಧನುರ್ವಜ್ರಂ ಸಸ್ಯಾನಾಂ ಕ್ಷುದ್ರವೃಷ್ಟಿದಾಃ ॥ ೧೭ ॥

ಗ್ರಹಾಭಯಾವಹಾ ನಿತ್ಯಂ ಶೃಂಗಾಟಕ ಪುರೋಗಮಾಃ ।
ಭವೇಯುರೇಕರ್ಕ್ಷಗತಾ ಸ್ತ್ರಿಭಿರೂರ್ಧ್ವಂ ಯದಾಗ್ರಹಾಃ ॥ ೧೮ ॥

ವಿನಾಶಾಯೈವ ಲೋಕಾನಾಂ ವಿಜ್ಞೇಯಾಸ್ಸುಮಹೀಕ್ಷಿತಾಂ ।
ಏಕೇನ ಯದಿವಾದ್ವಾಭ್ಯಾಂ ಗುಹಾಭ್ಯಾಂ ಸಹಿತೋಗುರುಃ ॥ ೧೯ ॥

ಶನೈಶ್ಚರೋ ವಾ ದೃಶ್ಯೇತ ತದಾ ದುರ್ಭಿಕ್ಷಮಾದಿಶೇತ್ ।
ಚಿತ್ರಾಯಾಂ ಲೋಹಿತೋ ಯತ್ರಮೂಲೇ ದೇವಗುರುಸ್ತಥಾ ॥ ೨೦ ॥

ಭಾರ್ಗವಶ್ಚ ಶ್ರವಿಷ್ಠಾಸು ತದಾ ಘೋರಂ ಭಯಂ ಭವೇತ್ ।
ಕೃತ್ತಿಕಾಸು ಶನೈಶ್ಚಾರೀ ವಿಶಾಖಾಸು ಬೃಹಸ್ಪತಿಃ ॥ ೨೧ ॥

ಸ್ಥಿತೌ ಪ್ರಜಾನಾಂ ಪೀಡಾಯೈ ವೃಷ್ಟಿಮಂತರ್ದಿವಂ ಭವೇತ್ ॥
ಪ್ರಾಗ್ದ್ವಾರೇಷು ಚರನ್ಭೇಷು ಸೌರೋ ವಕ್ರಮಿಯಾದ್ಯದಿ ॥ ೨೨ ॥

ಮನಸ್ಸಿನಲ್ಲಿಟ್ಟಿದ್ದರೆ ಮುಂದೆ ಬರೆಯುವ ವಿಚಾರಗಳೂ ಮನನವಾಗುವುವು ತಾರಾ ಗ್ರಹಗಳು ಮಧ್ಯದಲ್ಲಿ ಕಾಣಿಸಿದರೆ ಮಧ್ಯದೇಶವಾಸಿಗಳಿಗೂ, ಪೂರ್ವದಿಕ್ಕಿನಲ್ಲಿ ಕಾಣಿಸಿದರೆ ಪೂರ್ವದೇಶವಾಸಿಗಳಿಗೂ, ಪಶ್ಚಿಮದಿಕ್ಕಿನಲ್ಲಿ ಕಾಣಿಸಿದರ ಪಶ್ಚಿಮದಿಕ್ಕಿಗೂ ಪೀಡೆಯೆಂದು ತಿಳಿಯಬೇಕು ಇವು ಹೆಚ್ಚು ಕಡಿಮೆಯಾಗಿ ಸಂಚರಿಸಿದರೂ ಆಕಾಶದಲ್ಲಿ ಕಾಣಿಸದ ಹೋದರೂ, ಹೊಗೆಯಾಡುವಂತೆ ಉರಿಯುವಂತೆ ಕಂಡರೂ, ಮಹಾಭಯವೆಂದು ಅರಿಯಬೇಕು ಈ ಗ್ರಹಗಳು ಒಂದೇ ನಕ್ಷತ್ರದಲ್ಲಿ ಅಂತರಿತವಾದರೆ ಮಾಲಾನಾಮಕ ಯೋಗವು ಪ್ರಾಪ್ತವಾಗುವುದು ಆಗ್ಯೆ ಮಧ್ಯದೇಶ (ಮಧ್ಯಪ್ರಾಂತ್ಯಗಳು) ವಾಸಿಗಳಾದ ಕ್ಷಿತಿಪತಿಗಳಿಗೆ ನಾಶಿಯು ಪ್ರಾಸ, ಚಕ್ರ, ಬಿಲ್ಲು ವಜ್ರಾಯುಧ ರೂಪವಾಗಿ ಗ್ರಹಗಳು ಕಂಡರೆ ಮಳೆ ಸ್ವಲ್ಪನಾಗಿ ಆಗುವುದು, ಆಗ ಗ್ರಹಗಳು ಲೋಕಕ್ಕೆ ಭಯವನ್ನುಂಟುಮಾಡುವುವು

ಮೂರಕ್ಕಿಂತ ಹೆಚ್ಚು ಗ್ರಹಗಳು ಏಕನಕ್ಷತ್ರಗತವಾದ ಕಾಲದಲ್ಲಿ ಲೋಕದ ಜನರಿಗೂ ರಾಜರಿಗೂ ಪೀಡೆಯೆಂದು ತಿಳಿಯಬೇಕು. ಗುರು ಮತ್ತು ಶನೈಶ್ಚರರು

**ಪೃಥಿವೀಂ ಪೀಡಯೇತ್ಸರ್ವಾಂ ಪೂರ್ವದೇಶಂ ವಿಶೇಷತಃ ।**
**ರೌದ್ರೇ ಹಸ್ತೇ ತಥೈವಾಪ್ಯೇ ಆಹಿರ್ಬುಧ್ನ್ಯೇ ಶನೈಶ್ಚರಃ ॥ ೨೩ ॥**

**ಯದೋದಯಂ ಪ್ರಪದ್ಯೇತ ತದಾ ನಶ್ಯಂತಿ ಪಾರ್ಥಿವಾಃ ।**
**ಸೌಮ್ಯೇ ತ್ವಾಷ್ಟ್ರೇ ಶ್ರವಿಷ್ಠಾಸು ಸ್ಥಿತೇ ಸೌರೇ ಮಹೀಕ್ಷಿತಃ ॥ ೨೪ ॥**

**ಸರ್ವಪೀಡಾಂ ಸಮರ್ಹಂತಿ ಯಮಯಾ ಯಾಂತಿ ಯಮಾಂತಿಕಂ ।**
**ಪೂರ್ವಾಂ ಪರಾಶಾಂ ಸಂಪ್ರಾಪ್ತೌ ಭೃಗುಜೀವೌ ಪರಸ್ಪರೇ ॥ ೨೫ ॥**

**ಸಪ್ತಮರ್ಕ್ಷಗತೌ ಸ್ಯಾತಾಂ ತದಾ ದೇವೋ ನ ವರ್ಷತಿ ।**
**ಅಪರ್ವಣಿ ಶಶಾಂಕಾರ್ಕೌ ತ್ವಷ್ಟಾನಾಮ ಮಹಾಗ್ರಹಃ ॥ ೨೬ ॥**

**ಆವೃಣೋತಿ ತಮಃ ಶ್ಯಾಮಃ ಸರ್ವಲೋಕವಿಪತ್ತಯೇ ।**
**ಉದಯಾಸ್ತಮಯೇ ಭಾನೋಶ್ಚಂದ್ರಸ್ಯ ಚ ಯದಾ ಭವೇತ್ ॥ ೨೭ ॥**

---

ಒಂದು ಅಥವಾ ಎರಡು ಗ್ರಹಗಳೊಡನೆ ಸೇರಿದರೆ ಆಗ ದುರ್ಭಿಕ್ಷವು ಪ್ರಾಪ್ತವಾಗುವುದು ಚಿತ್ತಾನಕ್ಷತ್ರದಲ್ಲಿ ಅಂಗಾರಕ, ಮೂಲಾ ನಕ್ಷತ್ರದಲ್ಲಿ ಗುರು, ಶ್ರವಣದಲ್ಲಿ ಶುಕ್ರ ಇವರು ಸೇರಿದಾಗ ಘೋರ ಭಯವುಂಟು ಕೃತ್ತಿಕಯಲ್ಲಿ ಶಸಿಗ್ರಹ, ವಿಶಾಖದಲ್ಲಿ ಗುರು ಇವರುಗಳು ಸೇರಿದರೆ ಪ್ರಜಾಪೀಡೆಯುಂಟಾಗುವುದು ಮತ ಅಟ್ಟಕ್ಕೆ ಏರುವುದು

ಇದೇ ತಾರಾಗ್ರಹಗಳು ಪೂರ್ವದಿಕ್ಕಿನಲ್ಲಿ ಸಂಚರಿಸುತ್ತಿರುವಾಗಲೂ, ಶನಿಮಹಾ ರಾಜನು ವಕ್ರನಾದಾಗಲೂ ಭೂಲೋಕಕ್ಕೆ ಪೀಡೆಯೆಂದು ತಿಳಿಯತಕ್ಕದ್ದು ಅದರಲ್ಲೂ ಪೂರ್ವದೇಶಕ್ಕೆ ಹೆಚ್ಚು ಹಾನಿಯು

ಆರ್ದ್ರೆ, ಹಸ್ತ, ಪೂರ್ವಾಭಾದ್ರಗಳಲ್ಲಿ ಶನೈಶ್ಚರನು ಉದಯನಾದರೆ ಆಗ ರಾಜ ರೆಲ್ಲರೂ ನಾಶವಾಗುತ್ತಾರೆ ಮೃಗಶಿರ, ಉತ್ತರಾಭಾದ್ರಪದ, ಶ್ರವಣಗಳಲ್ಲಿ ಶನಿ ಸಂಚಾರನಾದಾಗ ಯಮನ ಪಟ್ಟಣದ ಬಾಗಿಲು ವಿಶಾಲವಾಗಿ ತೆರೆಯಲ್ಪಡುವುದು (ಅಂದರ ಲೋಕಪೀಡೆಯು) ಶುಕ್ರ ಮತ್ತು ಗುರುಗಳು ಪೂರ್ವ ಪಶ್ಚಿಮ ದಿಕ್ಕುಗ ಳನ್ನು ಪರಸ್ಪರ ವ್ಯಾಪಿಸಿ ಮೃಗಶಿರಾ ನಕ್ಷತ್ರಕ್ಕೆ ಪ್ರವೇಶಿಸಿದರೆ ಲೋಕದಲ್ಲಿ ದುರ್ಭಿಕ್ಷವು ಪ್ರಾಪ್ತವಾಗುತ್ತದ

ಚಂದ್ರ ಸೂರ್ಯರನ್ನು ಉದಯಾಸ್ತಮಯಗಳಲ್ಲಿ ತ್ವಷ್ಟಾನಾಮಕ ಮಹಾ ಗ್ರಹವು ಆವರಿಸುವುದಾದರ ಪ್ರಪಂಚವೆಲ್ಲಾ ಕತ್ತಲೆಯಾಗಿ ಸಕಲ ಲೋಕಕ್ಕೂ

**ಪರಿವೇಷಸ್ತದಾ ರಾಜಾ ಕ್ಷಿಪ್ರಂ ವಧಮವಾಪ್ನುಯಾತ್ ।**
**ಸಕಲಂ ಚೇದಹಸ್ಸೂರ್ಯೋ ರಾತ್ರಿಂ ಚೇತ್ಸಕಲಾಂ ಶಶೀ ॥ ೨೮ ॥**

**ಪರಿವೇಷೀ ಭವೇದ್ರಾಜಾ ತತ್ರಾಪಿ ವಧಮರ್ಹತಿ ।**
**ದ್ವಿಸೂರ್ಯೇ ಗಗನೇ ವೃದ್ಧಿಂ ಕ್ಷತ್ರಿಯಾಣಾಂ ವಿನಿರ್ದಿಶೇತ್ ॥ ೨೯ ॥**

**ದ್ವಿಚಂದ್ರೇ ಬ್ರಾಹ್ಮಣಾನಾಂ ತು ಚಾಧಿಕ್ಯಂ ಪ್ರಲಯಾಯತು ।**
**ಉದಯಾಸ್ತಮಯೌ ಯತ್ರ ಸೋಮಾರ್ಕೌ ರಕ್ತಮಂಡಲೌ ॥ ೩೦ ॥**

**ನ ಚಾತ್ರಾಭ್ರಾಣಿ ದೃಶ್ಯಂತೇ ತನ್ಮಹಾಭಯಲಕ್ಷಣಂ ।**
**ಚಂದ್ರಮಾ ಜನ್ಮನಕ್ಷತ್ರಂ ಪರಿತ್ಯಜತಿ ಯಸ್ಯತು ॥ ೩೧ ॥**

**ಶ್ಯಾವೋ ರೂಕ್ಷೋಽಪಸವ್ಯಂ ತು ತಸ್ಯ ವಿಂದ್ಯಾದುಪದ್ರವಂ ।**
**ಅತ್ಯಂತಾದರ್ಶನೇ ರಾಹೋಸ್ತಥಾ ಚಾತ್ಯಂತದರ್ಶನೇ ॥ ೩೨ ॥**

**ಪ್ರಜಾಪೀಡಾ ವಿನಿರ್ದೇಶ್ಯಾ ವ್ಯಾಧಿದುರ್ಭಿಕ್ಷತಸ್ಕರೈಃ ।**
**ಯನ್ನಕ್ಷತ್ರಗತೋ ರಾಹುರ್ಗ್ರಸತೇ ಚಂದ್ರಭಾಸ್ಕರೌ ॥ ೩೩ ॥**

---

ವಿಪತ್ತು ಪ್ರಾಪ್ತನಾಗುವುದು ಸೂರ್ಯಚಂದ್ರರಿಗೆ ಉದಯಾಸ್ತಮಯ ಕಾಲಗಳಲ್ಲಿ ಪರಿವೇಷವು ಪ್ರಾಪ್ತವಾದರೆ, ಆಗ ರಾಜನು ಜಾಗ್ರತೆಯಾಗಿ ಮರಣಹೊಂದುತ್ತಾನೆ ಮತ್ತು ಸೂರ್ಯನು ಹಗಲೆಲ್ಲಾ ಪರಿವೇಷದಿಂದಾವೃತನಾದಾಗಲೂ, ಚಂದ್ರನು ರಾತ್ರಿಯೆಲ್ಲೆಲ್ಲಾ ಪರಿವೇಷದಿಂದ ಸುತ್ತಲ್ಪಟ್ಟಿದ್ದರೂ ಆ ಕಾಲದಲ್ಲೂ ರಾಜಮರಣವೆಂದು ತಿಳಿಯಬೇಕು

೨೯-೩೯ ಆಕಾಶದಲ್ಲಿ ಎರಡು ಸೂರ್ಯರು ಕಾಣಿಸಿದರೆ ಕ್ಷತ್ರಿಯರು ಅಭಿವೃದ್ಧಿ ಹೊಂದುವರು ಎರಡು ಚಂದ್ರರು ಕಂಡರೆ ಬ್ರಾಹ್ಮಣರಿಗೆ ಶ್ರೇಯಸ್ಸಾಗುವುದು ಉದಯಾಸ್ತಮಾನ ಕಾಲಗಳಲ್ಲಿ ಚಂದ್ರ ಸೂರ್ಯರ ಮಂಡಲಗಳು ಕೆಂಪಾಗಿ ಕಾಣಿಸಿದರೆ ಅದು ಮಹಾಭಯಲಕ್ಷಣವೆಂದರಿಯಬೇಕು. ಯಾರ ಜನ್ಮ ನಕ್ಷತ್ರವನ್ನು ಚಂದ್ರನು ಬಿಟ್ಟು ಮುಂದಕ್ಕೆ ಹೋಗುತ್ತಾನೋ ಅವರಿಗೆ ಉಪದ್ರವವೆಂದರಿಯಬೇಕು ರಾಹು ಕಣ್ಣಿಗೆ ಕಾಣಿಸದೆಹೋದರೂ, ಚೆನ್ನಾಗಿ ಕಂಡರೂ ಸಹ ಪ್ರಜಾಪೀಡೆಯೂ, ವ್ಯಾಧಿ, ದುರ್ಭಿಕ್ಷ, ತಸ್ಕರೋಪದ್ರವಗಳೆಂದೂ ತಿಳಿಯಬೇಕು ಯಾರ ನಕ್ಷತ್ರದಲ್ಲಿ ರಾಹುವು ಚಂದ್ರ ಸೂರ್ಯರನ್ನು ಗ್ರಾಸಮಾಡುತ್ತಾನೆಯೋ ಆ ನಕ್ಷತ್ರದಲ್ಲಿ ಹುಟ್ಟಿದವನು

ತಜ್ಞಾತಾನಾಂ ಭವೇತ್ಪೀಡಾ ಯೇ ನರಾಶ್ಯಾಂತಿ ವರ್ಜಿತಾಃ ।
ಗ್ರಹೋಪಸೃಷ್ಟೇ ನಕ್ಷತ್ರೇ ಗ್ರಹಣಂ ತು ಯದಾಭವೇತ್ ॥ ೩೪ ॥

ತದಾ ಪೀಡಾ ವಿನಿರ್ದೇಶ್ಯಾ ಸೈನಿಕಾನಾಂ ನೃಪೈಸ್ಸಹ ।
ಗೃಹೀತೋ ರಾಹುಣಾ ಚಂದ್ರಃ ಸೂರ್ಯೋ ವಾ ಗಗನಾಚ್ಚ್ಯುತಃ ॥ ೩೫ ॥

ಉಲ್ಕಾನಿ ಹನ್ಯಾತ್ತತ್ರಾನ್ಯೋ ರಾಜಾ ರಾಜ್ಯಂ ಕರಿಷ್ಯತಿ ।
ಗೃಹೀತೌ ಪರಿವೇಷೇ ತೌ ಯದಾ ಚಂದ್ರದಿವಾಕರೌ ॥ ೩೬ ॥

ಸಮಂತಾತ್ಪೀಡ್ಯತೇ ದೇಶಃ ಶತ್ರುಕೋಪಶ್ಚ ಜಾಯತೇ ।
ಮೇಘೈಸ್ಸಂಛಾದ್ಯತೇ ರಾಹುಸ್ತ್ವತಿವರ್ಷತಿ ವಾಯದಾ ॥ ೩೭ ॥

ಅಕಾಲಜ್ಯೈಸ್ತದಾ ರಾಜ್ಞೋ ಭಯಂ ವಿಂದ್ಯಾದುಪಸ್ಥಿತಂ ।
ಯನ್ನಕ್ಷತ್ರಗತೇ ಸೂರ್ಯೇ ಛಿದ್ರಂ ವೈ ಸಂಪ್ರಪದ್ಯತೇ ॥ ೩೮ ॥

ತಜ್ಞಾತಃ ಪಾರ್ಥಿವಃ ಕ್ಷಿಪ್ರಂ ಯಮಲೋಕಂ ಗಮಿಷ್ಯತಿ ।
ತಾಮ್ರಕುಂಕುಮರೂಕ್ಷಾಭೋ ಘೃತಹಾರಿದ್ರಸನ್ನಿಭಃ ॥ ೩೯ ॥

ಬಂಧುಜೀವನಿಭೋ ಭಾನುಃ ಶಿಶಿರಾಖ್ಯೇಷು ಶಸ್ಯತೇ ।
ಅಸ್ವಚ್ಛವರ್ಣಃ ಪರುಷೋ ಪೇವನಃ ಖಂಡಮಂಡಲಃ ॥ ೪೦ ॥

ಶಾಂತಿಕರ್ಮವನ್ನು ಮಾಡಿಕೊಳ್ಳಬೇಕು ಹಾಗೆ ಶಾಂತಿ ಮಾಡಿಕೊಳ್ಳದೆ ಹೋದರೆ ಅವನಿಗೆ ಪೀಡೆಯುಂಟು ಗ್ರಹಣವಾದಾಗ ಯಾವ ಗ್ರಹ, ಯಾವ ನಕ್ಷತ್ರಗಳ ಸಂಬಂಧವಿರುವುದೋ ಆಗ ರಾಜರಿಗೂ ಸೈನಿಕರಿಗೂ ಪೀಡಾಪ್ರಾಪ್ತವಾಗುತ್ತದೆ ರಾಹುವಿನಿಂದ ಚಂದ್ರಗ್ರಹಣವಾದಾಗಲೂ, ಸೂರ್ಯನು ಗಗನದಿಂದ ಚ್ಯುತನಾದಾಗಲೂ ರಾಜರ ಪರಿವರ್ತನೆಯಾಗುತ್ತದೆ ಚಂದ್ರಸೂರ್ಯರಿಗೆ ಪರಿವೇಷ ಕಟ್ಟಿದಾಗ ಎಲ್ಲಾ ದೇಶಭಾಗಗಳಿಗೂ ಹಾನಿಯಾಗುವುದು, ಯುದ್ಧ ಸಂಭವಿಸುವುದು ಮೇಘದಿಂದ ರಾಹು ಮುಚ್ಚಿಹೋದಾಗಲೂ, ಆಕಾಶದಲ್ಲಿ ಅತಿವೃಷ್ಟಿಯುಂಟಾದಾಗಲೂ ರಾಜರಿಗೆ ಭಯ ಪ್ರಾಪ್ತವಾದಂತೆ ತಿಳಿಯಬೇಕು ಸೂರ್ಯನಿಗೆ ಯಾವ ನಕ್ಷತ್ರದಲ್ಲಿ ಸಂಬಂಧವುಂಟಾದಾಗ ರಂಧ್ರಗಳು ಕಾಣಿಸುತ್ತವೆಯೋ, ಆ ನಕ್ಷತ್ರದಲ್ಲಿ ಹುಟ್ಟಿದ ರಾಜನು ಶೀಘ್ರದಲ್ಲಿ ಮರಣಹೊಂದುತ್ತಾನೆ

೩೯-೪೨ ಶಿಶಿರಋತುವಿನ ಆದಿಭಾಗದಲ್ಲಿ ಕೆಂಪಾಗಿ, ಹಳದಿ ಬಣ್ಣವಾಗಿ ಸೂರ್ಯನು ಕಂಡರೆ ಶುಭ ಹಾಗಲ್ಲದೆ ಮುಸುಕು ಮುಸುಕಾಗಿ ನಡುಗುತ್ತಾ, ಖಂಡ

**ಸಚ್ಛಿದ್ರೇ ರಜಸಾ ಧ್ವಸ್ತ ಉಲ್ಕಾದ್ಯುಪಹತೋಽಪಿ ವಾ ।**
**ಮಂಡಲಾದನ್ಯಸಂಸ್ಥಾನಂ ಮೇಘೈಶ್ಚಾಯುಧಸನ್ನಿಭೈಃ ॥ ೪೧ ॥**

**ಉದಯಾಸ್ತಮಯೇ ಚ್ಛನ್ನಃ ಪಾರ್ಥಿವಾನಾಂ ನ ಶಸ್ಯತೇ ।**
**ಪಕ್ಷಾದೌ ಚಾಪಸಂಸ್ಥಾನೇ ಯುದ್ಧಂ ಶಶಿನಿ ನಿರ್ದಿಶೇತ್ ॥ ೪೨ ॥**

**ಲಾಭಸ್ತೇಷಾಂ ಜಯಸ್ತೇಷಾಂ ಯತ್ರ ದೃಷ್ಟಂ ಭಯಂ ತತಃ ।**
**ಸಮಕೋಟಿವಿಶಾಲಶ್ಚ ಕಿಂಚಿದ್ವಾಪ್ಯುತ್ತರೋನ್ನತಃ ॥ ೪೩ ॥**

**ಮಾಸಾದೌ ಚಂದ್ರಮಾಃ ಶಸ್ತೋ ವಾಮ ಏವ ವಿಪರ್ಯಯಃ ।**
**ಮಂಡಲೇನಾಂತರೀಕುರ್ವನ್ ಶೃಂಗೇ ಸಾ ಯದಿ ವಾ ಸ್ಪೃಶೇತ್ ॥ ೪೪ ॥**

**ತಾರಾಗ್ರಹಂ ತದಾ ಕುರ್ಯಾದ್ಭಯಂ ಜನಪದೇ ಶಶೀ ।**
**ಶುಕ್ಲಪಕ್ಷಸ್ಯ ಯಾ ವೃದ್ಧಿರ್ಲೋಕೇ ಕ್ಷೇಮಸುಭಿಕ್ಷದಾ ॥ ೪೫ ॥**

**ಸಾ ಸಿತೇತರಪಕ್ಷಸ್ಯ ಪೃಥಿವ್ಯಾಂ ನೈವ ಶಸ್ಯತೇ ।**
**ಶ್ರವಣೇಭ್ಯುದಿತೋ ಭೌಮಃ ಪುಷ್ಯೇ ವಕ್ರಮಿಯಾದ್ಯದಿ ॥ ೪೬ ॥**

**ಪ್ರಾಜಾಪತ್ಯುದಿತಶ್ಚಂದ್ರೋ ನಾಶಾಯಸ್ಯಾನ್ಮಹೀಕ್ಷಿತಾಂ ।**
**ಗತಾಗತಂ ಯದಾ ಕುರ್ಯಾನ್ಮಘಾಮಧ್ಯೇನ ಲೋಹಿತಃ ॥ ೪೭ ॥**

ಮಂಡಲದಂತೆ, ಆಯುಧದಂತೆ ಇರುವ ಮೇಘಗಳಿಂದ ಉದಯಾಸ್ತಗಳಲ್ಲಿ ಮುಚ್ಚಿ ಕೊಂಡಿದ್ದರೆ ರಾಜರಿಗೆ ಕೆಡುಕು

೪೨-೪೫ ಶಶಿಗೆ ಪಕ್ಷಾದಿಯಲ್ಲಿ ಪರಿವೇಷ ಕಂಡರೆ ಯುದ್ಧಭಯ ಅದು ಎಲ್ಲಿ ಕಂಡರೂ ಭಯವೇ ಉಳಿದವರಿಗೆ ಜಯವೂ ಲಾಭವೂ ಉಂಟು ಮಾಸಾದಿಯಲ್ಲಿ ಚಂದ್ರನು ಉತ್ತರದಲ್ಲಿ ಉನ್ನತನಾಗಿ ಕಂಡರೆ ಒಳ್ಳೆಯದು, ದಕ್ಷಿಣದಲ್ಲಿ ಕಂಡರೆ ಕೆಟ್ಟುದು ತಾರಾಗ್ರಹವು ಯಾವಾಗ ಚಂದ್ರಮಂಡಲದಿಂದ ಮುಚ್ಚಲ್ಪಡುವುದೋ ಆಗ ದೇಶದಲ್ಲಿ ಯುದ್ಧ ಸಂಭವಿಸುವುದು ಶುಕ್ಲಪಕ್ಷದ ವೃದ್ಧಿಯಿಂದ ಸುಭಿಕ್ಷವೂ, ಕೃಷ್ಣಪಕ್ಷದ ವೃದ್ಧಿಯಿಂದ ದುರ್ಭಿಕ್ಷವೂ ಸಂಭವಿಸುವುದು

ಅಂಗಾರಕನು ಶ್ರವಣ ನಕ್ಷತ್ರದಲ್ಲಿ ಉದಯವಾಗಿ, ಪುಷ್ಯ ನಕ್ಷತ್ರದಲ್ಲಿ ವಕ್ರನಾದರೆ ರಾಜರು ನಾಶಹೊಂದುವರು ಅಂಗಾರಕನು ಮಘಾನಕ್ಷತ್ರ ಮಧ್ಯದಲ್ಲಿ ಅತ್ತಿತ್ತ ತಿರುಗಾಡಿದರೆ ಆಗ ಅನಾವೃಷ್ಟಿ ಸಂಭವಿಸುವುದು ಆಗ ಪಾಂಡುರಾಜನು ಸಾಯು

**ತದಾ ಭವತ್ಯನಾವೃಷ್ಟಿಃ ಪಾಂಡ್ಯೋ ರಾಜಾ ವಿನಶ್ಯತಿ ।**
**ಫಲ್ಗುನ್ಯೋರುದಯಂ ಕೃತ್ವಾ ವಕ್ರಃಸ್ಯಾದ್ವೈಶ್ವದೈವಕೇ ॥ ೪೮ ॥**

**ಪ್ರಾಜಾಪತ್ಯೇ ಪ್ರವಾಸಶ್ಚ ತ್ರೈಲೋಕ್ಯಂ ತತ್ರ ಪೀಡ್ಯತೇ ।**
**ಧ್ರುವೇಷು ವೈಷ್ಣವೇ ಮೂಲೇ ಶಾಕ್ರೇ ಚ ವಿಚರನ್ಕುಜಃ ॥ ೪೯ ॥**

**ಘೋರಾಂ ಕರೋತ್ಯನಾವೃಷ್ಟಿಂ ಕೃತ್ತಿಕಾಸು ಮಘಾಸು ಚ ।**
**ಕಾರ್ತಿಕೇಽಶ್ವಯುಜೇ ಪೌಷೇ ಚಾಷಾಢೇ ಶ್ರಾವಣೇ ಬುಧಃ ॥ ೫೦ ॥**

**ದೃಷ್ಟೋ ಲೋಕೇ ಭಯಾಯ ಸ್ಯಾನ್ಮಾಘವೈಶಾಖಯೋಸ್ತಥಾ ।**
**ಅಕಸ್ಮಾದ್ಯತ್ರ ದೃಶ್ಯೇತ ದಿವಾ ದೇವಪುರೋಹಿತಃ ॥ ೫೧ ॥**

**ರಾಜಾ ವಾ ಮ್ರಿಯತೇ ತತ್ರ ಸ ವಾ ದೇಶೋ ವಿನಶ್ಯತಿ ।**
**ಅಹಸ್ಸರ್ವಂ ಯದಾ ಶುಕ್ರೋ ದೃಶ್ಯತೇಽಥ ಮಹಾಗ್ರಹಃ ॥ ೫೨ ॥**

**ತದಾ ತ್ವಗ್ನ್ಯಾದಿಭಿರ್ಗ್ರಾಮಾನ್ಬಾಧತೇ ನಗರಾಣಿ ಚ ।**
**ಕಾರ್ತಿಕೇ ತು ಯದಾ ಮಾಸಿ ಕುರ್ವಾತೇಽಸ್ತಮಯೋದಯೌ . ॥ ೫೩ ॥**

**ತದಹ್ನಾಂ ನವತಿಂ ಪೂರ್ಣಂ ಭುವಿ ದೇವೋ ನ ವರ್ಷತಿ ।**
**ಶನೈಶ್ಚರೋ ದೇಶಪೀಡಾಂ ದೇಶನಕ್ಷತ್ರಪೀಡನೇ ॥ ೫೪ ॥**

---

ವನು ಪೂರ್ವ, ಉತ್ತರ ನಕ್ಷತ್ರಗಳಲ್ಲಿ ಉದಯವಾಗಿ, ಉತ್ತರಾಷಾಢಾ ನಕ್ಷತ್ರದಲ್ಲಿ ಅಂಗಾರಕನು ವಕ್ರನಾದರೆ ಮೂರು ಲೋಕಕ್ಕೂ ಹಾನಿಯು ರೋಹಿಣೀ ನಕ್ಷತ್ರ ಪ್ರವೇಶದಿಂದ ಪ್ರವಾಸ ಸಂಭವಿಸುವುದು

೫೦-೫೫ ಶ್ರವಣ, ಮೂಲ, ವಿಶಾಖಾ ನಕ್ಷತ್ರಗಳಲ್ಲಿ ಅಂಗಾರಕನು ಸಂಚರಿಸುತ್ತಿರುವಾಗಲೂ, ಕೃತ್ತಿಕಾ, ಮಘಾ ನಕ್ಷತ್ರ ಸಂಚಾರ ಕಾಲದಲ್ಲೂ ಭಯಂಕರವಾದ ಅನಾವೃಷ್ಟಿ ಸಂಭವಿಸುವುದು ಬುಧನು ಕೃತ್ತಿಕ, ಅಶ್ವಿನೀ, ಪುಷ್ಯ, ಉತ್ತರಾಷಾಢ, ಶ್ರವಣ ನಕ್ಷತ್ರಗಳಲ್ಲೂ, ಮಘಾ, ವಿಶಾಖ ನಕ್ಷತ್ರಗಳಲ್ಲೂ ಸಂಚರಿಸುವ ಕಾಲದಲ್ಲಿ ಲೋಕದಲ್ಲಿ ಜನರಿಗೆ ಭಯವು ಪ್ರಾಪ್ತವಾಗುವುದು ಹಗಲಿನಲ್ಲಿ ಅಕಸ್ಮಾತ್ತಾಗಿ ಗುರುವು ಕಾಣಿಸಿಕೊಂಡರೆ ರಾಜಮರಣ ಮತ್ತು ದೇಶನಾಶವೂ ಸಂಭವಿಸುವುದು. ಶುಕ್ರ ಮತ್ತು ಚಂದ್ರರು ಹಗಲಿನಲ್ಲಿ ಕಾಣಿಸಿಕೊಂಡರೆ ನಗರಗಳಿಗೂ ಗ್ರಾಮಗಳಿಗೂ

ಧ್ರುವಂ ಕರೋತಿ ರಾಜೇಂದ್ರ ನಿತ್ಯಂ ಚಾರವಶೇನ ತು ।
ಸಪ್ತಾಹಾಂತರ್ಗತಾ ಯೇ ವೈ ದಿವ್ಯಪಾರ್ಥಿವನಾಭಸಾಃ ।
ಗ್ರಹೋಪರಾಗೇ ತೀವ್ರಾಸ್ಸ್ಯುರುತ್ಪಾತಾಸ್ಸ್ವಫಲೇಷು ತೇ ॥ ೫೫ ॥

ಏಕಸ್ಮಿನ್ಯದಿ ಮಾಸೇ ಸ್ಯಾದ್ಗ್ರಹಣಂ ಚಂದ್ರಸೂರ್ಯಯೋಃ ।
ಬ್ರಹ್ಮಕ್ಷತ್ರವಿರೋಧಾಯ ವಿಪರೀತನಿವೃದ್ಧಯೇ ॥ ೫೬ ॥

ಯಸ್ಮಿನ್ದೃಶ್ಯೇತ ನಕ್ಷತ್ರೇ ವಿಶಾಖಾಯಾಂ ಪ್ರಧೂಪವತ್ ।
ತದ್ದೇಶಜಾತಾ ಪೀಡಾ ಸ್ಯಾದ್ಬುಧಕೇತುಮಹಾಗ್ರಹಾಃ ॥ ೫೭ ॥

ಉಲ್ಕಾದ್ಯಭಿಹತೇ ಸೂರ್ಯೇ ಕೇತುಭಿರ್ವಾ ವಿಧೂಮಿತೇ ।
ಅಗಸ್ತ್ಯೇ ವಾ ಧ್ರುವೇ ವಾಪಿ ಪ್ರಜಾಪೀಡಾಂ ವಿನಿರ್ದಿಶೇತ್ ॥ ೫೮ ॥

ಉಲ್ಕಯಾಭಿಹತಾ ರೂಕ್ಷಾ ಸ್ಫುರಣಾ ರಜಸಾ ಯುತಾಃ ।
ಋಷಯಸ್ಸಪ್ತ ಲೋಕಾನಾಂ ವಿನಾಶಾಯ ಚ ಭೂಭೃತಾಂ ॥ ೫೯ ॥

---

ಅಗ್ನಿಭಯವುಂಟು ಕಾರ್ತಿಕ ಮಾಸದಲ್ಲಿ ಶುಕ್ರನ ಅಸ್ತೋದಯಗಳುಂಟಾದರೆ ಆಗ ಮೂರು ತಿಂಗಳು ಮಳೆಯಾಗುವುದಿಲ್ಲ ಆಗ ಶನಿಚಾರ ವಶದಿಂದ ದೇಶ ನಕ್ಷತ್ರಗಳಿಗೆ ಪೀಡೆಯುಂಟಾಗುವುದು ಏಳು ದಿನಗಳೊಳಗೆ ಶ್ರವಣಾದಿ ನಕ್ಷತ್ರಗಳು ಉದಯವಾಗಿ ಚಂದ್ರೋಪರಾಗವುಂಟಾದರೆ ಉತ್ಪಾತಗಳುಂಟಾಗುವುವು

೫೬. ಒಂದೇ ತಿಂಗಳಲ್ಲಿ ಸೂರ್ಯಗ್ರಹಣ ಚಂದ್ರಗ್ರಹಣಗಳೆರಡೂ ಸಂಭವಿಸಿದರೆ ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ವಿಪರೀತ ವಿರೋಧವುಂಟಾಗುವುದು

೫೭-೫೯ ಬುಧ, ಕೇತು, ಚಂದ್ರ, ಸೂರ್ಯರು ವಿಶಾಖಾ ನಕ್ಷತ್ರದಲ್ಲಿ ಧೂಪದ ಹೊಗೆಯಂತೆ ಯಾವ ದೇಶಕ್ಕೆ ಕಾಣುವರೋ ಆ ದೇಶದ ಜನರಿಗೆ ಪೀಡೆಯುಂಟಾಗುವುದು ಸೂರ್ಯ ಮಂಡಲದಿಂದ ಕೊಳ್ಳಿಗಳು ಕಾಣಿಸಿದರೆ, ಕೇತುವು ಹೊಗೆಯಾಡುವಂತೆ ಕಂಡರೆ, ಅಗಸ್ತ್ಯ, ಧ್ರುವ ನಕ್ಷತ್ರಗಳೂ ಸಹ ಹೊಗೆ ಹಾಯುವಂತೆ ಕಂಡರೆ ಪ್ರಜಾಪೀಡೆಯೆಂದು ತಿಳಿಯಬೇಕು ಉಲ್ಕಾಪಾತದಿಂದಲೂ, ಧೂಳುಗಳಿಂದಲೂ ಸಪ್ತಋಷಿಮಂಡಲವು ತುಂಬಿರುವಂತೆ ಕಂಡರೆ ರಾಜರಿಗೆ ಹಾನಿ

**ಕೃತ್ತಿಕಾಭಿಸ್ಸಹೋದೇತಿ ಶಾಂಕರೀಂ ದಿಶಮಾಶ್ರಿತಃ ।**
**ಕುಮಾರೀಪ್ರೀತಿತೋ ಹನ್ಯಾಲ್ಲೋಕೇ ನೃಪಕುಮಾರಕಾನ್ ॥ ೬೦ ॥**

**ಸಮಾಗಮೇ ಗ್ರಹಾಣಾಂ ತು ಚಂದ್ರಮಾಃ ಶಸ್ಯತೇ ಹ್ಯುದಕ್ ।**
**ನಕ್ಷತ್ರಾಣಾಂ ಚ ರಾಜೇಂದ್ರ ದಕ್ಷಿಣೇನ ನ ಶಸ್ಯತೇ ॥ ೬೧ ॥**

**ರಾಹುಃ ಕೇತುಃ ಕುಜಃ ಶುಕ್ರಶ್ಚಂದ್ರೇಣ ಸಹ ಯಾಯಿನಃ ।**
**ಬುಧೋ ಜೀವಶ್ಚ ಸೌರಶ್ಚ ನಾಗರಾ ರವಿಣಾ ಸಹ ॥ ೬೨ ॥**

**ಯಾಯಿನಾ ವಿಜಿತೇ ಪೌರೇ ರಾಜ್ಞಾಂ ಸ್ಯಾದಾಯಿನಾಂ ಜಯಃ ।**
**ಯಾಯಿಗ್ರಹೇ ಪೌರಜಿತೇ ಪುರಾ ರಾಜ್ಞಾಂ ಜಯೋ ಮೃಧೇ ॥ ೬೩ ॥**

**ಪೌರೇಣ ವಿಜಿತೇ ಪೌರೇ ಪೌರ್ಯಃ ಪೌರಕ್ಷಯಂ ವದೇತ್ ।**
**ಯಾಯಿನಾ ಯಾಯಿನಿ ಹತೇ ಯಾಯಿಭ್ಯೋ ಯಾಯಿನಾಂ ಕ್ಷಯಃ ೬೪**

**ಗ್ರಹಾಣಾಂ ಚೇದ್ಭವೇತ್ಸಾಮ್ಯಂ ಸೌಮ್ಯಂ ರಾಜ್ಞಾಂ ವಿನಿರ್ದಿಶೇತ್ ।**
**ಜಯಾಜಯೌ ನರೇಂದ್ರಾಣಾಂ ನಿರ್ದೇಶ್ಯೌ ಗ್ರಹವದ್ಬುಧೈಃ ॥ ೬೫ ॥**

---

೬೦-೬೧ ಚಂದ್ರನು ಈಶಾನ್ಯ ದಿಕ್ಕಿನಲ್ಲಿ ಕೃತ್ತಿಕಾ ನಕ್ಷತ್ರದಲ್ಲಿ ಉದಯಿಸಿದರೆ ಕುಮಾರೀ ಪ್ರೀತಿಗಾಗಿ ರಾಜಕುಮಾರರನ್ನು ಸಂಹರಿಸುತ್ತಾನೆ ಉತ್ತರ ದಿಕ್ಕಿನಲ್ಲಿ ಗ್ರಹಗಳ ಸಮಾಗಮವಾದರ ಒಳ್ಳೆಯದು ದಕ್ಷಿಣದಲ್ಲಿ ನಕ್ಷತ್ರಗಳ ಸಮಾಗಮವಾದರೆ ಒಳ್ಳೆಯದಲ್ಲ

೬೨-೬೩ ರಾಹು, ಕೇತು, ಕುಜ, ಶುಕ್ರ ಇವರುಗಳು ಚಂದ್ರನೊಡನೆ ಸಂಚರಿಸಿದರೆ, ಬುಧ, ಗುರು, ಶನಿಗಳು ಚಂದ್ರನೊಡನೆ ಸಂಚರಿಸಿದರೆ ರಾಜರಿಗೆ ಯುದ್ಧ ಸಂಭವಿಸುವುದು

೬೪-೬೫ ನಾಗರಿಕರು ನಾಗರಿಕರೊಡನೆ ಹೊಡೆದಾಡಿ ಒಬ್ಬರಿಗೊಬ್ಬರು ಸೋತು ಸತ್ತರೆ ಊರಿಗೆ ಊರೇ ಹಾಳಾಗುವಂತೆ, ಯಾಯಿಗ್ರಹಗಳು ಯಾಯಿಗ್ರಹಗಳೊಡನೆ ಯುದ್ಧಮಾಡಿದರೆ ಸಮಸಮನಾಗಿ ಗೆಲ್ಲುವುವು, ಅಥವಾ ಸೋಲುವುವು ಹಾಗೆಯೇ ಗ್ರಹಸಾಮ್ಯವನ್ನನುಸರಿಸಿ ರಾಜರುಗಳು ಯುದ್ಧ ಪ್ರವೃತ್ತರಾಗುತ್ತಾರೆಂದು ತಾತ್ಪರ್ಯ ಅದರಲ್ಲಿ ಜಯಾಪಜಯಗಳು ನಿಶ್ಚಯವಿಲ್ಲ ಉಚ್ಚಗ್ರಹವು ಗೆದ್ದು ನೀಚಗ್ರಹವು ಸೋಲುವುದು ಶುಕ್ರಗ್ರಹವು ಎಲ್ಲಕ್ಕಿಂತ ವಿಜಯಶಾಲಿಯೆಂದು

ಗ್ರಹಾರೂಢಶ್ಚ್ಯುತಸ್ಸ್ಥಾನಾತ್ಸ್ವರೇಣ ವಿಜಿತೋ ಗ್ರಹಃ ।
ವಿಜಿತೋ ಜಯಲಿಂಗೈಶ್ಚ ಕೃಷ್ಣಃ ಶ್ಯಾಮದ್ಯುತಿಸ್ತಥಾ ॥ ೬೬ ॥

ಉದಙ್ಮಾರ್ಗಗತಿಃಸ್ನಿಗ್ಧೋ ವಿಮಲೋ ವಿಮಲಪ್ರಭಃ ।
ಬೃಹದ್ರೂಪೋತಿಶುಕ್ರಶ್ಚ ವಿಜಯೀ ಕಥಿತೋ ಗ್ರಹಃ ॥ ೬೭ ॥

ನ ದೇಯಮೇತಚ್ಚ ಖಲಸ್ಯ ಲೋಕೇ ನ ನಾಸ್ತಿಕಸ್ಯಾಧಮಪೂರುಷಸ್ಯ ।
ಗುಹ್ಯಂ ಮುನಿನಾಮಪಿ ಪಾರ್ಥಿವೇಂದ್ರ ಮಯೋರಿತಂ ಕಾಲವಿನಿಶ್ಚಿಯಂ ತೇ

ಇತಿ ಶ್ರೀ ವಿಷ್ಣು ಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗ್ರಹಶುಭಾಶುಭಪರಿಜ್ಞಾನವರ್ಣನಂ ನಾಮ
ಪಂಚಾಶೀತಿತಮೋಽಧ್ಯಾಯಃ



ತಿಳಿಯಬೇಕು ಈ ಗ್ರಹಗಳ ವೃತ್ತಾಂತವನ್ನು ಲೋಕದಲ್ಲಿ ಚನಲರಿಗೂ, ನಾಸ್ತಿಕರಿಗೂ, ನೀಚರಿಗೂ ಹೇಳಬಾರದು ಮುನಿಗಳು ಹೇಳಿದ ಈ ಕಾಲ ನಿಶ್ಚಯವನ್ನು ನಿನಗೆ ತಿಳಿಸಿದೇನೆಂದು ಮಾರ್ಕಂಡೇಯರು ವಜ್ರಭೂಪತಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಗ್ರಹ ಶುಭಾಶುಭ ಪರಿಜ್ಞಾನ ವರ್ಣನನೆಂಬ ಹೆಸರಿನ
ಎಂಭತ್ತೈದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಷಡಶೀತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಪ್ರತಿದೇಶಂ ಮಹಾಭಾಗ ಕಥಂ ಪ್ರಾಪ್ತಮುಪದ್ರವಂ ।
ನಿಜ್ಞಾಯತೇ ದ್ವಿಜಶ್ರೇಷ್ಠ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಕೃತ್ತಿಕಾಂ ರೋಹಿಣೀಂ ಸೌಮ್ಯಂ ಮಧ್ಯದೇಶಸ್ಯ ನಿರ್ದಿಶೇತ್ ।
ಪೀಡಿತೇ ತ್ರಿತಯೇಽತಸ್ಮಿನ್ಮಧ್ಯದೇಶಃ ಪ್ರಪೀಡ್ಯತೇ ॥ ೨ ॥

ಆರ್ದ್ರಾಂ ಪುನರ್ವಸುಂ ಪುಷ್ಯಂ ಪೂರ್ವದೇಶಸ್ಯ ನಿರ್ದಿಶೇತ್ ।
ಪೀಡಿತೇ ತ್ರಿತಯೇ ತಸ್ಮಿನ್ಪೂರ್ವದೇಶಃ ಪ್ರಪೀಡ್ಯತೇ ॥ ೩ ॥

---

### ಎಂಭತ್ತಾರನೆಯ ಅಧ್ಯಾಯವು

೧. ವಜ್ರರಾಜನು ಪುನಃ ಪ್ರಶ್ನೆ ಮಾಡುತ್ತಾನೆ -- ಪ್ರತಿಯೊಂದು ದೇಶವೂ ಹೇಗೆ ಉಪದ್ರವಕ್ಕೆ ಒಳಗಾಗುವುವೆಂಬ ವಿಚಾರವನ್ನು ತಿಳಿಯಲಪೇಕ್ಷಿಸುತ್ತೇನೆ ದಯವಿಟ್ಟು ಈ ವಿಚಾರವನ್ನು ನನಗೆ ತಿಳಿಸಬೇಕೆಂದು ವಜ್ರಮಹಾರಾಜನು ಮಾರ್ಕಂಡೇಯನನ್ನು ಕೇಳಿದನು

೨ ಮಾರ್ಕಂಡೇಯನು ಉತ್ತರ ಹೇಳುತ್ತಾನೆ -- ಮಧ್ಯದೇಶಕ್ಕೆ ಕೃತ್ತಿಕೆ, ರೋಹಿಣಿ, ಮೃಗಶಿರಾ ಈ ಮೂರು ನಕ್ಷತ್ರಗಳು ಮುಖ್ಯವಾದುವು ಈ ಮೂರು ನಕ್ಷತ್ರ ಪೀಡೆಯುಂಟಾದ ಕಾಲದಲ್ಲಿ ಮಧ್ಯದೇಶಕ್ಕೆ ಹಾನಿಯೆಂದರಿಯಬೇಕು

೩ ಪೂರ್ವದೇಶಕ್ಕೆ ಆರ್ದ್ರಾ, ಪುನರ್ವಸು, ಪುಷ್ಯ ಈ ಮೂರೂ ಮುಖ್ಯವಾದ ನಕ್ಷತ್ರಗಳು. ಈ ನಕ್ಷತ್ರಗಳಿಗೆ ಪೀಡೆಯುಂಟಾದರೆ ಪೂರ್ವದೇಶಕ್ಕೆ ಹಾನಿಯೆಂದು ತಿಳಿಯಬೇಕು

ಆಶ್ಲೇಷಾಂ ತು ಮಘಾಂ ಪೂರ್ವಾಂ ಚಾಗ್ನೇಯ್ಯಾಂ ದಿಶಿ ನಿರ್ದಿಶೇತ್ ।
ಪೀಡಿತೇ ತ್ರಿತಯೇ ತಸ್ಮಿನ್ನಾಗ್ನೇಯೀ ಪೀಡ್ಯತೇಽಥ ದಿಕ್ ॥ ೪

ಅರ್ಯಮ್ಣಮಥ ಹಸ್ತಂ ಚ ತ್ವಾಷ್ಟ್ರಂಸ್ಯಾದ್ದಿಶಿ ದಕ್ಷಿಣೇ ।
ಪೀಡಿತೇ ತ್ರಿತಯೇ ತಸ್ಮಿನ್ಪೀಡ್ಯತೇ ದಕ್ಷಿಣಾ ಚ ದಿಕ್ ॥ ೫ ॥

ಸ್ವಾತಿಂ ವಿಶಾಖಾಂ ಮೈತ್ರಂ ಚ ನೈಋರ್ತ್ಯಾಂ ದಿಶಿ ನಿರ್ದಿಶೇತ್ ।
ಪೀಡಿತೇ ತ್ರಿತಯೇ ತಸ್ಮಿನ್ಪೀಡ್ಯತೇ ನೈಋರ್ತೀ ಚ ದಿಕ್ ॥ ೬ ॥

ವಾಯವ್ಯಾಂ ದಿಶಿ ನಿರ್ದಿಷ್ಟಾ ವೈಶ್ವವೈಷ್ಣವವಾಸವಾಃ ।
ಪೀಡಿತೇ ತ್ರಿತಯೇ ತಸ್ಮಿನ್ವಾಯವೀ ಪೀಡ್ಯತೇ ಚ ದಿಕ್ ॥ ೭ ॥

ವಾರುಣಂ ಚಾಜದೈವತ್ಯಂ ಚಾಹಿರ್ಬುಧ್ನ್ಯಂ ತಥೋತ್ತರೇ ।
ಪೀಡಿತೇ ತ್ರಿತಯೇ ತಸ್ಮಿನ್ನುತ್ತರಾ ದಿಕ್ಪ್ರಪೀಡ್ಯತೇ ॥ ೮ ॥

---

೪ ಆಶ್ಲೇಷ, ಮಖ, ಪುಬ್ಬ ಈ ಮೂರು ನಕ್ಷತ್ರಗಳೂ ಆಗ್ನೇಯ ದಿಕ್ಕಿನ ಮುಖ್ಯ ನಕ್ಷತ್ರಗಳು ಈ ನಕ್ಷತ್ರಗಳಿಗೆ ಪೀಡೆಯುಂಟಾದರೆ ಆಗ್ನೇಯ ದಿಕ್ಕಿಗೇ ಪೀಡೆಯೆಂದರಿಯಬೇಕು

೫ ಉತ್ತರ, ಹಸ್ತ, ಚಿತ್ತ ಈ ಮೂರು ನಕ್ಷತ್ರಗಳೂ ದಕ್ಷಿಣ ದಿಗ್ಭಾಗದಲ್ಲಿ ಇರತಕ್ಕವು ಇವುಗಳಿಗೆ ಪೀಡೆಯುಂಟಾದರೆ ದಕ್ಷಿಣ ದಿಕ್ಕಿಗೇ ಹಾನಿಯೆಂದು ತಿಳಿಯಬೇಕು

೬ ಸ್ವಾತಿ, ವಿಶಾಖ, ಅನೂರಾಧೆ, ಈ ಮೂರು ನಕ್ಷತ್ರಗಳೂ ನಿರಋತಿ ದಿಕ್ಕಿನಲ್ಲಿ ನಿರ್ದಿಷ್ಟನಾಗಿರತಕ್ಕವುಗಳು ಇವುಗಳಿಗೆ ಪೀಡಾ ಸಂಭವಿಸಿದರ ನಿರಋತಿ ದಿಕ್ಕಿಗೆ ಹಾನಿಯೆಂದು ತಿಳಿಯಬೇಕು

೭ ಉತ್ತರಾಷಾಢ, ಶ್ರವಣ, ಧನಿಷ್ಠ ನಕ್ಷತ್ರಗಳು ವಾಯುವ್ಯದಿಕ್ಕಿನಲ್ಲಿ ವಾಸವಾಗಿರತಕ್ಕವು ಈ ಮೂರಕ್ಕೂ ಪೀಡೆಯೇನಾದರೂ ಒದಗಿದರೆ ವಾಯುವ್ಯದಿಕ್ಕಿಗೆ ಕೆಡಕೆಂದು ತಾತ್ಪರ್ಯ

೮ ಶತಭಿಷ, ಪೂರ್ವಾಭಾದ್ರ, ಉತ್ತರಾಭಾದ್ರ ನಕ್ಷತ್ರಗಳು ಉತ್ತರದಿಕ್ಕಿನಲ್ಲಿರುತ್ತವೆ ಆ ಗ್ರಹತ್ರಯಕ್ಕೆ ಪೀಡೆ ಸಂಭವಿಸಿದರೆ ಉತ್ತರದಿಗ್ಭಾಗದ ಪ್ರಾಣಿಗಳಿಗೆ ಪೀಡೆಯುಂಟು

**ರೇವತೀ ಚಾಶ್ವಿನೀ ಯಾಮ್ಯಮೈಶಾನೀ ದಿಕ್‌ಪ್ರಪೀಡಿತಾ ।**
**ಪೀಡಿತೇ ತ್ರಿತಯೇತಸ್ಮಿನ್ನೈಶಾನೀ ದಿಕ್ ಪ್ರಪೀಡ್ಯತೇ ॥ ೯ ॥**

**ಆದಿತ್ಯೋ ಭೃಗುಜೋ ಭೌಮೋ ರಾಹುಃ ಸೌರೋ ನಿಶಾಕರಃ ।**
**ಬುಧೋ ಬೃಹಸ್ಪತಿಶ್ಚೈವ ಪ್ರಾಚ್ಯಾದೀಶಾಃ ಪ್ರಕೀರ್ತಿತಾಃ ॥ ೧೦ ॥**

**ವಿಧ್ವಸ್ತವಪುಷಸ್ತೇ ಚ ಗ್ರಹಯುದ್ಧೇ ಪರಾಜಿತಾಃ ।**
**ನೀಚಾಃ ಪಿತೃಗೃಹಸ್ಥಾಶ್ಚ ಸ್ವಾಂ ದಿಶಂ ಪೀಡಯಂತಿ ತೇ ॥ ೧೧ ॥**

**॥ ವಜ್ರಉವಾಚ ॥**

**ಸ್ವದೇಶಪೀಡನಂ ಕುರ್ಯಾನ್ನಕ್ಷತ್ರೈಃ ಪೀಡಿತಃ ಕಥಂ ।**
**ಸರ್ವಮೇತನ್ಮಮಾಚಕ್ಷ್ವ ಸರ್ವಧರ್ಮಭೃತಾಂ ವರ ॥ ೧೨ ॥**

**॥ ಮಾರ್ಕಂಡೇಯಉವಾಚ ॥**

**ಶನೈಶ್ಚರಾರ್ಕೌ ಚಾರೇಣ ವಕ್ರೇಣಾಂಗಾರಕೋ ಗ್ರಹಃ ।**
**ಉಪರಾಗೇಣ ರಾಹುಶ್ಚ ಕೇತುಶ್ಚಾಧೂಮನೋದಯೈಃ ॥ ೧೩ ॥**

---

೯ ರೇವತೀ, ಅಶ್ವಿನೀ, ಭರಣಿ ನಕ್ಷತ್ರಗಳು ಈಶಾನ್ಯಭಾಗದಲ್ಲಿರುವುದರಿಂದ ಆ ನಕ್ಷತ್ರಗಳಿಗೆ ಪೀಡೆಯುಂಟಾದರೆ ಈಶಾನ್ಯ ದಿಕ್ಕಿಗೆ ಹಾನಿ ಸಂಭವಿಸುವುದು

೧೦ ಸೂರ್ಯ-ಶುಕ್ರ-ಅಂಗಾರಕ-ರಾಹು-ಶನಿ-ಚಂದ್ರ-ಬುಧ-ಗುರು ಇವರುಗಳು ಪೂರ್ವದಿಕ್ಕಿನಿಂದ ಆರಂಭಿಸಿ ಕ್ರಮವಾಗಿ ಆಯಾಯ ದಿಕ್ಕಿನ ಅಧಿಪತಿಗಳಾಗಿರುವರು

೧೧ ಮೇಲೆ ಬರೆದ ಗ್ರಹಗಳು ಪಿತೃ ನಕ್ಷತ್ರಕ್ಕೆ ಬಂದಾಗ ನೀಚರಾಗಿ ಗ್ರಹ ಯುದ್ಧದಲ್ಲಿ ಪರಾಜಿತರಾಗಿ ಧ್ವಂಸ ಮಾಡಲ್ಪಟ್ಟ ಅವಯವವುಳ್ಳವರಾಗಿ ತಮ್ಮ ತಮ್ಮ ದಿಕ್ಕುಗಳಿಗೇ ಹಾನಿಯನ್ನು ತಂದೊಡ್ಡುತ್ತಾರ

೧೨ ವಜ್ರಭೂಪತಿಯು ಪ್ರಶ್ನೆ ಮಾಡುತ್ತಾನೆ — ಗ್ರಹಗಳು ತಮ್ಮ ದೇಶಕ್ಕೆ ಪೀಡೆಯನ್ನುಂಟುಮಾಡುವುದಾದರೆ ಮಾಡಿಕೊಳ್ಳಲಿ ನಕ್ಷತ್ರಕ್ಕೆ ಪೀಡೆಯುಂಟಾಗುವುದೇಕೆ ? ಈ ವಿಚಾರವನ್ನು ದಯಮಾಡಿ ತಿಳಿಸೈ ! ಮುನಿಕುಲಲಲಾಮ ! ಧರ್ಮವೇತ್ತ !!

೧೩ ಮಾರ್ಕಂಡೇಯನು ಉತ್ತರ ಕೊಡುತ್ತಾನೆ — ಶನಿಯೂ, ಸೂರ್ಯನೂ ವಕ್ರವಾಗಿ ಸಂಚರಿಸುವ ಕಾಲದಲ್ಲಿ ಅಂಗಾರಕನು ಅವರನ್ನು ಪೀಡಿಸುತ್ತಾನೆ ರಾಹುವು

ಉದಯಾಸ್ತಮಯಾಭ್ಯಾಂ ಚ ಜೀವಶುಕ್ರಶಶಾಂಕಜಾಃ ।
ಸಂಛಾದನೇನ ಚ ಶಶೀ ಹ್ಯಗಸ್ತ್ಯಶ್ಚೈವ ಯೋಗತಃ ॥ ೧೪ ॥

ತಥಾಯುಸ್ಮಿಂಶ್ಚ ನಕ್ಷತ್ರೇ ದಿವ್ಯಪಾರ್ಥಿವನಾಭಸಾಃ ।
ದೃಶ್ಯಂತೇ ತು ಮಹೋತ್ಪಾತಾಃ ಸ್ವಾಂ ದಿಶಂ ಸಂಪ್ರಪೀಡಯೇತ್ ॥ ೧೫ ॥

ದೇಶೇಷು ಸರ್ವೇಷು ಮಯೇರಿತಂ ತೇ ।
ಶುಭಾಶುಭಂ ಯಾದವಮುಖ್ಯನಾಥ ॥
ಅತಃ ಪರಂ ಧರ್ಮಭೃತಾಂ ವರಿಷ್ಠ ।
ವದಸ್ವ ಕಿಂ ತೇ ಕಥಯಾಮಿ ರಾಜನ್ ॥ ೧೬ ॥

ಇತಿ ವಿಷ್ಣುಧರ್ಮೋತ್ತರಪುರಾಣೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರತಿದೇಶಪೀಡಾವರ್ಣನಂ ನಾಮ
ಷಡಶೀತತಮೋಽಧ್ಯಾಯಃ

ಉಪರಾಗ(ಗ್ರಹಣ) ಕಾಲದಲ್ಲಿ ಚಂದ್ರನನ್ನೂ ಸೂರ್ಯನನ್ನೂ ಪೀಡಿಸುತ್ತಾನೆ ಕೇತು ಗ್ರಹ ನವ ಧೂಮದ (ಹೊಗೆ) ಉದಯವಾದಾಗ ಮಹಾಗ್ರಹಗಳನ್ನು ಪೀಡಿಸುತ್ತಾನೆ

೧೪. ಗುರು, ಶುಕ್ರ, ಚಂದ್ರರು ಉದಯಾಸ್ತಮಯ ಕಾಲಗಳಲ್ಲಿ ಮುಚ್ಚಿಕೊಳ್ಳುವದರಿಂದ ಪೂರ್ವ ದಕ್ಷಿಣ ದಿಕ್ಕುಗಳಿಗೆ ಯೋಗವು

೧೬. ಎಲೈ ವಜ್ರಮಹಾರಾಜನೆ! ಸಕಲ ದೇಶಗಳಿಗೂ ಯಾವ ಯಾವ ಕಾಲದಲ್ಲಿ ಯಾವ ಯಾವ ಗ್ರಹ ನಕ್ಷತ್ರಗಳಿಂದ ಶುಭಾಶುಭ ಫಲಗಳಾಗುವುವೆಂಬ ಸಂಗತಿಯನ್ನು ತಿಳಿಸಿರುತ್ತೇನೆ. ಇನ್ನು ಮುಂದೆ ಏನು ಕೇಳಬೇಕೆಂದಿರುವೆಯೋ, ಅದನ್ನು ಕೇಳೆಂದು ಮಾರ್ಕಂಡೇಯರು ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಪ್ರತಿದೇಶ ಪೀಡಾವರ್ಣನೆಯೆಂಬ ಹೆಸರಿನ
ಎಂಭತ್ತಾರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತಾಶೀತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಶುಭಾಶುಭಪರಿಜ್ಞಾನಂ ಭಗವನ್ಪುರುಷಂ ಪ್ರತಿ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಜನ್ಮಾತ್ರಿತಸ್ತ್ರಿಷಷ್ಠಶ್ಚ ಸಪ್ತಮೋ ದಶಮಸ್ತಥಾ ।
ಏಕಾದಶಃ ಶಶೀಯೇಷಾ ತದಾ ತೇಷಾಂ ಶುಭಂಭವೇತ್ ॥ ೨ ॥

ಜನ್ಮನ್ಯಥ ಚತುರ್ಥೇಚ ಸಾಷ್ಟಮೇ ದಶಮೇತಥಾ ।
ಏಕಾದಶೇ ಬುಧೋಯೇಷಾಂ ತೇಷಾಮಪಿ ಶುಭಂಭವೇತ್ ॥ ೩ ॥

---

### ಎಂಭತ್ತೇಳನೆಯ ಅಧ್ಯಾಯವು.

೧ ವಜ್ರಮಹಾರಾಜನು ಕೇಳುತ್ತಾನೆ --ಎಲೈ ಮಾರ್ಕಂಡೇಯ ಋಷಿಯು! ಪ್ರತಿಯೊಬ್ಬ ಮನುಷ್ಯನಿಗೂ ಗ್ರಹಗಳಿಂದ ಒದಗುವ ಶುಭಾಶುಭ ಪರಿಜ್ಞಾನವನ್ನು ನಿನ್ನ ಮುಖದಿಂದ ಕೇಳಬೇಕೆಂದು ಆಶೆಯಾಗಿದೆ, ದಯಮಾಡಿ ಅದನ್ನು ತಿಳಿಸು

೨-೬ ಮಾರ್ಕಂಡೇಯನು ಹೇಳುತ್ತಾನೆ ಸೂರ್ಯನು ೩-೬-೧೦ನೇ ಮನೆಗಳಲ್ಲಿದ್ದರೆ ಶುಭನು ಚಂದ್ರನು ಜನ್ಮ-೩-೬-೭-೧೦-೧೧ನೇ ಮನೆಗಳಲ್ಲಿದ್ದರೆ ಶುಭನು ಅಂಗಾರಕ, ಶನಿ, ರಾಹು, ಕೇತುಗಳು ೩-೬ ನೇ ಸ್ಥಾನಗಳಲ್ಲಿಯೂ, ಬುಧನು ೬-೪-೨-೮-೧೦ನೇ ಮನೆಗಳಲ್ಲಿಯೂ ಶುಭ ಫಲವನ್ನು ಕೊಡುವರು. ಗುರುವು ೮-೯-೫-೨ನೆಯ ಮನೆಗಳಲ್ಲಿದ್ದ ಸಮಯವಲ್ಲಿಯೂ, ಶುಕ್ರನು ೧-೨-೩-೪-೫-೮-೯-೧೧-೧೨ನೇ ಮನೆಗಳಲ್ಲಿದ್ದರೂ ಶುಭಫಲವನ್ನು ಕೊಡುತ್ತಾರೆ ಈ ಶುಕ್ರಗ್ರಹವು

ದ್ವಿಪಂಚಮಗತೋ ಜೀವಸ್ಸಪ್ತಮೋ ನವಮಸ್ತಥಾ ।
ಏಕಾದಶಸ್ತಥಾ ಹ್ಯೇಷಾಂ ತೇಷಾಮಪಿ ಶುಭಂವದೇತ್ ॥ ೪ ॥

ಷಷ್ಠಸಪ್ತಮಗಃ ಶುಕ್ರೋ ದಶಮೋ ನ ಚ ಶೋಭನಃ ।
ದ್ವಾದಶಶ್ಚ ತಥಾ ಹ್ಯೇಷಾಂ ತೇಷಾಂ ಪೀಡಾಂ ವಿನಿರ್ದಿಶೇತ್ ॥ ೫ ॥

ತೃತೀಯೋ ದಶಮೋ ಷಷ್ಠೋ ತಥಾ ಚೈಕಾದಶೇ ಶುಭಾಃ ।
ಸೌರಾರತೀಕ್ಷ್ಣಕಿರಣಾ ಯೇಷಾಂ ತೇಷಾಂ ಶುಭಂವದೇತ್ ॥ ೬ ॥

ಯಸ್ಮಿನ್ಹಿ ಜನನಂ ಯಸ್ಯ ಜನ್ಮರ್ಕ್ಷಂ ತಸ್ಯತತ್ಸ್ಮೃತಂ ।
ಚತುರ್ಥಂ ಮಾನಸಂ ತಸ್ಮಾದ್ದಶಮಂ ಕರ್ಮಸಂಜ್ಞಿತಂ ॥ ೭ ॥

ಸಂಘಾತಕಂ ಷೋಡಶಂ ಸ್ಯಾದ್ವಿಂಶಂ ಸ್ಯಾತ್ಸಾಮುದಾಯಿಕಂ ।
ವೈನಾಶಿಕಂ ತು ನಕ್ಷತ್ರಂ ಕರ್ಮರ್ಕ್ಷಂ ಯತ್ತ್ರಯೋದಶಂ ॥ ೮ ॥

ಷಣ್ಣಕ್ಷತ್ರಸ್ತು ಪುರುಷಸ್ಸರ್ವಃ ಪ್ರೋಕ್ತೋ ಮಹೀಪತೇ ।
ರಾಜಾಚ ನವನಕ್ಷತ್ರೋ ನಕ್ಷತ್ರತ್ರಿತಯಂ ಶೃಣು ॥ ೯ ॥

ನಿತ್ಯಮಭ್ಯಧಿಕಂ ಷಡ್ಭ್ಯಃ ಪಾರ್ಥಿವಸ್ಯ ನೃಪೋತ್ತಮ ।
ದೇಶಾಭಿಷೇಕನಕ್ಷತ್ರೌ ಜಾತಿನಕ್ಷತ್ರಮೇವಚ ॥ ೧೦ ॥

---

೬-೭-೧೦ನೆಯ ಮನೆಗಳಲ್ಲಿದ್ದರೆ ಅಶುಭಫಲವು. ೧೧ನೇ ಮನೆಯಲ್ಲಿ ಮಾತ್ರ ಎಲ್ಲಾ ಗ್ರಹಗಳೂ ಶುಭಫಲವನ್ನು ಕೊಡುತ್ತಾರೆ, ಇದಕ್ಕಾಗಿಯೇ ಗ್ರಹಶಾಂತಿ, ಹೋಮ ಮಾಡತಕ್ಕ ಕಾಲದಲ್ಲಿ ಎಲ್ಲಾ ಗ್ರಹಗಳೂ ಶುಭ ಏಕಾದಶಸ್ಥಾನ ಫಲವನ್ನು ಕೊಡಬೇಕೆಂಬುದಾಗಿ ಪ್ರಾರ್ಥಿಸುತ್ತಾರೆ

೭-೯ ಯಾವ ಮನುಷ್ಯನು ಯಾವ ನಕ್ಷತ್ರದಲ್ಲಿ ಜನಿಸುತ್ತಾನೋ ಅವನಿಗೆ ಅದೇ ಜನ್ಮನಕ್ಷತ್ರವೆಂದು ತಿಳಿಯಬೇಕು. ನಾಲ್ಕನೆಯದು ಮಾನಸಿಕ, ಹತ್ತನೆಯದು ಕಾರ್ಮಿಕ, ಹದಿನಾರನೆಯದು ಸಾಂಘಾತಿಕ, ಇಪ್ಪತ್ತನೆಯದು ಸಾಮುದಾಯಿಕ ನಕ್ಷತ್ರವೆಂದು ಹೇಳುವರು. ಹದಿಮೂರನೆಯದು ವೈನಾಶಿಕವೆಂದೂ, ಅವನ್ನೇ ಪೌರುಷವೆಂದೂ ಹೇಳುವರು

೧೦-೧೧ ರಾಜರಿಗೆ ಆರು ನಕ್ಷತ್ರಗಳು ನಿತ್ಯವೂ ಅಧಿಕ ಫಲಪ್ರದವೆಂದೂ, ಅವುಗಳಲ್ಲಿ ದೇಶ ಅಭಿಷೇಕ, ಜಾತಿಯೆಂದು ಮೂರು ಬಗೆಯಿದೆಯೆಂದೂ ಹೇಳುವರು

ಜಾತ್ಯಾಶ್ರಿತಾನಿ ವಕ್ಷ್ಯಾಮಿ ನಕ್ಷತ್ರಾಣಿ ತವಾನಘ ।
ಪೂರ್ವಾತ್ರಯಮಥಾಗ್ನೇಯಂ ಬ್ರಾಹ್ಮಣಾನಾಂ ಪ್ರಕೀರ್ತಿತಂ ॥ ೧೧ ॥

ಉತ್ತರಾತ್ರಿತಯಂ ಪುಷ್ಯಂ ಕ್ಷತ್ರಿಯಾಣಾಂ ಪ್ರಕೀರ್ತಿತಂ ।
ಪೌಷ್ಣಂ ಮೈತ್ರಂ ತಥಾ ಪಿತ್ರ್ಯಂ ಪ್ರಾಜಾಪತ್ಯಂ ವಿಶಾಂಸ್ಮೃತಂ ॥ ೧೨ ॥

ಆದಿತ್ಯಮಾಶ್ವಿನಂ ಹಸ್ತಃ ಶೂದ್ರಾಣಾಮಭಿಜಿತ್ತಥಾ ।
ಸಾರ್ಪಂ ವಿಶಾಖಾ ಯಾಮ್ಯಂಚ ವೈಷ್ಣವಂಚ ನರಾಧಿಪ ॥ ೧೩ ॥

ಪ್ರತಿಲೋಮಭವಾನಾಂಚ ಸರ್ವೇಷಾಂ ಪರಿಕೀರ್ತಿತಂ ।
ಈಹಾದೇ ರರ್ಥಹಾನಿಸ್ಸ್ಯಾಜ್ಜನ್ಮರ್ಕ್ಷೇ ಚೋಪತಾಪಿತೇ ॥ ೧೪ ॥

ಕರ್ಮರ್ಕ್ಷೇ ಕರ್ಮಣಾಂ ಹಾನಿಃ ಪೀಡಾ ಮನಸಿಮಾನಸೇ ।
ಮೂರ್ತಿದ್ರವಿಣಬಂಧೂನಾಂ ಹಾನಿಸ್ಸಾಂಘಾತಿಕೇ ಹತೇ ॥ ೧೫ ॥

---

ಅವುಗಳಲ್ಲಿ ಮೊದಲು ಜಾತಿಯನ್ನಾಶ್ರಯಿಸಿಕೊಂಡು ಬರುವ ನಕ್ಷತ್ರಗಳನ್ನು ತಿಳಿಸುತ್ತೇನೆ, ಕೇಳು.

೧೨-೧೫ ಪೂರ್ವಾಷಾಢ, ಉತ್ತರಾಷಾಢ, ಶ್ರವಣ, ಕೃತ್ತಿಕೆ ಇವುಗಳು ಬ್ರಾಹ್ಮಣಜಾತಿಯ ನಕ್ಷತ್ರಗಳು, ಉತ್ತರೆ, ಹಸ್ತ, ಚಿತ್ತ, ಪುಷ್ಯ ಈ ನಾಲ್ಕೂ ಕ್ಷತ್ರಿಯಜಾತಿಯ ನಕ್ಷತ್ರಗಳು ರೇವತಿ, ಅನೂರಾಧೆ, ಮಖೆ, ರೋಹಿಣಿ ಈ ನಾಲ್ಕು ವೈಶ್ಯಜಾತಿಯ ನಕ್ಷತ್ರಗಳು ಪುನರ್ವಸು, ಅಶ್ವಿನಿ, ಹಸ್ತ, ಅಭಿಜಿನ್ನಕ್ಷತ್ರಗಳು ಶೂದ್ರಜಾತಿಯ ನಕ್ಷತ್ರಗಳು ಆಶ್ಲೇಷೆ, ವಿಶಾಖೆ, ಭರಣಿ, ಶ್ರವಣ ಇವು ಸಂಕರ ಜಾತಿಯ ನಕ್ಷತ್ರಗಳೆಂದು ತಿಳಿಯಬೇಕು ಜನ್ಮನಕ್ಷತ್ರವು ಕರ್ಮನಕ್ಷತ್ರ ಪೀಡಿತವಾದರೆ ಕರ್ಮಕ್ಕೆ ಹಾನಿ, ಮಾನಸನಕ್ಷತ್ರವಾದರೆ ಮಾನಸಿಕವ್ಯಥೆ, ಸಾಂಘಾತಿಕ ನಕ್ಷತ್ರದಿಂದ ಪ್ರಪೀಡಿತವಾದರೆ ಹಣಕ್ಕೂ ನೆಂಟರಿಗೂ ಹಾನಿ, ಸಾಮುದಾಯಿಕ ನಕ್ಷತ್ರದಿಂದ ಪೀಡಿತವಾದರೆ ಮಿತ್ರ, ಭೃತ್ಯರಿಗೂ, ಅರ್ಥಕ್ಕೂ ನಾಶವೆಂದು ತಿಳಿಯಬೇಕು ವೈನಾಶಿಕ ನಕ್ಷತ್ರದಿಂದ ಬಾಧಿಸಲ್ಪಟ್ಟರೆ ದೇಹಕ್ಕೂ, ಹಣಕ್ಕೂ, ಸಂಪತ್ತುಗಳಿಗೂ ನಾಶಸಂಭವಿಸುವುದು. ಅಭಿಷೇಕ ನಕ್ಷತ್ರದಿಂದ ಪೀಡಿತವಾದರೆ ರಾಜ್ಯಭ್ರಂಶ ದೇಶನಕ್ಷದಿಂದ ಪೀಡಿತವಾದರೆ ದೇಶಕ್ಕೂ ನಗರಕ್ಕೂ ಹಾನಿ ಜಾತಿ ನಕ್ಷತ್ರದಿಂದ ಪೀಡಿತವಾದರೆ ರಾಜರಿಗೆ ವ್ಯಾಧಿಯೆಂದು ತಿಳಿಯಬೇಕು ಮೇಲೆ ವಿವರಿಸಿದ ಕ್ರಮಗಳನ್ನು ಚೆನ್ನಾಗಿ ವ್ಯಾಸಂಗಮಾಡಿ ಗ್ರಹನಕ್ಷತ್ರಗಳಿಂದ ಸಂಭವಿಸಬಹುದಾದ ಪೀಡೆಯನ್ನು

ಸಂತಪ್ತೇ ಸಾಮುದಾಯಕ್ಷೇ ಮಿತ್ರಭೃತ್ಯಾರ್ಥಸಂಕ್ಷಯಃ ।
ವೈನಾಶಿಕೇ ವಿನಾಶಸ್ಸ್ಯಾದ್ದೇಹದ್ರವಿಣಸಂಪದಾಂ ॥ ೧೬ ॥

ಪೀಡಿತೇ ಚಾಭಿಷೇಕರ್ಕ್ಷೇ ರಾಜ್ಯಭ್ರಂಶಂ ವಿನಿರ್ದಿಶೇತ್ ।
ದೇಶರ್ಕ್ಷೇ ಪೀಡಿತೇ ಪೀಡಾ ದೇಶಸ್ಯ ಚ ಪುರಸ್ಯಚ ॥ ೧೭ ॥

ಪೀಡಿತೇ ಜಾತಿನಕ್ಷತ್ರೇ ರಾಜ್ಞೋ ವ್ಯಾಧಿಂ ವಿನಿರ್ದಿಶೇತ್ ॥ ೧೮ ॥

ಗ್ರಹರ್ಕ್ಷಜಾತಾಂ ಸಮವಾಪ್ಯ ಪೀಡಾಂ ।
ಪೂಜಾತು ಕಾರ್ಯಾ ವಿಧಿನಾ ಸ್ವಕೇನ ॥
ತತಶ್ಶುಭಂ ವಿಂದತಿ ರಾಜಸಿಂಹ ।
ವಿಧೂತಪಾಪಃ ಪುರುಷಸ್ಸದೈವ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಪ್ರತಿಪುರುಷ ಶುಭಾಶುಭ ನಿರ್ದೇಶೋ ನಾಮ ಸಪ್ತಾಶೀತಿತಮೋಽಧ್ಯಾಯ

ಜನ್ಮನಕ್ಷತ್ರಗಳಿಂದ ಕಂಡುಹಿಡಿದುಕೊಂಡು ಜನರು ತಮ್ಮ ತಮ್ಮ ಶಾಖಾವಿಧಾನ ದಿಂದ ಆಯಾಯ ಗ್ರಹ ನಕ್ಷತ್ರಗಳ ಪೂಜಾಜಪಗಳನ್ನು ಮಾಡಬೇಕು, ಅಥವಾ ಋತ್ವಿಕ್ಕುಗಳಿಂದ ಮಾಡಿಸಬೇಕು ಆಗ ಆ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗಿ ಗ್ರಹನಕ್ಷತ್ರಗಳ ಅನುಗ್ರಹ ವಿಶೇಷದಿಂದ ಶುಭಪರಂಪರೆಯನ್ನು ಹೊಂದು ತ್ತಾನೆಂದು ಮಾರ್ಕಂಡೇಯರು ವಜ್ರನರಾಧೀಶ್ವರನಿಗೆ ವಿವರಿಸಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಪ್ರತಿಪುರುಷ ಶುಭಾಶುಭಫಲ ನಿರ್ದೇಶವೆಂಬ ಹೆಸರಿನ ಎಂಭತ್ತೇಳನೇ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಾಶೀತಿತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಗ್ರಹಾಣಾಂ ಭೃಗುಶಾರ್ದೂಲ ನಕ್ಷತ್ರಾಣಾಂ ತಥೈವ ಚ ।
ಪೂಜನೇ ವಿಧಿಮಾಚಕ್ಷ್ವ ತತ್ರ ಮೇ ಸಂಶಯೋ ಮಹಾನ್ ॥ ೧ ॥

॥ ಮಾರ್ಕಂಡೇಯ ಉವಾಚ ॥

ಗ್ರಹಸ್ಯಾಧಿಪತೇಃ ಕಾರ್ಯೋ ನಿತ್ಯಂ ಮಂಡಲಿಕೇ ಬುಧೈಃ ।
ನಕ್ಷತ್ರಚಂದ್ರಸಹಿತಸ್ತಥಾ ಸಾಧಿಪತಿರ್ನೃಪ ॥ ೨ ॥

ಸಂಖ್ಯಾತಾ ತಾರಕಾಸ್ತಸ್ಯ ಯಥಾವನ್ಮನುಜೇಶ್ವರ ।
ತೇಷಾಂ ತಾರಕಸಂಖ್ಯಾನಂ ನಿಬೋಧ ಗದತೋ ಮಮ ॥ ೩ ॥

---

### ಎಂಭತ್ತೆಂಟನೆಯ ಅಧ್ಯಾಯವು.

೧ ವಜ್ರಮಹಾರಾಜನು ಪುನಃ ಪ್ರಶ್ನೆಮಾಡುತ್ತಾನೆ — ಎಲೈ ಮಾರ್ಕಂಡೇಯ ಋಷೀಶ್ವರನೇ ! ಗ್ರಹಗಳನ್ನೂ ನಕ್ಷತ್ರಗಳನ್ನೂ ಪೂಜೆ ಮಾಡುವುದರಲ್ಲಿ ವಿಧಿಕ್ರಮವೆಂತಿರುವುದೆಂಬ ವಿಚಾರದಲ್ಲಿ ನನಗ ಸಂಶಯಬಂದಿದೆ ಆ ಸಂಶಯವನ್ನು ಪರಿಹರಿಸಬೇಕು

೨ ಮಾರ್ಕಂಡೇಯ ಮಹರ್ಷಿಗಳು ಉತ್ತರ ಹೇಳುತ್ತಾರೆ — ಗ್ರಹಾಧಿಪತಿಯಾದ ಸೂರ್ಯನ ಮಂಡಲವನ್ನೂ ನಕ್ಷತ್ರಾಧಿಪತಿಯಾದ ಚಂದ್ರನ ಮಂಡಲವನ್ನೂ ಮೊದಲು (ಬರೆದು) ಪೂಜೆಗೋಸ್ಕರ ಸಿದ್ಧಪಡಿಸಿಕೊಳ್ಳಬೇಕು.

೩. ಎಲೈ ರಾಜನೇ ! ತಾರಕಗಳು ಲೆಖ್ಖಮಾಡಲ್ಪಟ್ಟಿರುವುವು ಆ ನಕ್ಷತ್ರಗಳ ಲೆಖ್ಖವನ್ನು ಹೇಳುತ್ತೇನೆ, ಕೇಳು

ರೌದ್ರಂ ಪುಷ್ಯಂ ತಥಾ ತ್ವಾಷ್ಟ್ರಂ ವಾಯುವ್ಯಂ ವಾರುಣಂ ತಥಾ ।
ಪೌಷ್ಣಂ ಚ ಪಾರ್ಥಿವಶ್ರೇಷ್ಠ ಕಥಿತಂ ತ್ವೇಕತಾರಕಂ ॥ ೪ ॥

ದ್ವಿತಾರಂ ಫಲ್ಗುನೀ ಯುಗ್ಮಂ ತಥಾ ಭಾದ್ರಪದಾದ್ವಯಂ ।
ಆದಿತ್ಯಂ ಚ ತಥಾ ಮೂಲಂ ಚೈಂದ್ರಾಗ್ನಂ ಚಾಶ್ವಿನಂ ತಥಾ ॥ ೫ ॥

ತ್ರಿತಾರಂ ಭರಣೀ ಸೌಮ್ಯಮೈಂದ್ರಂ ಬ್ರಾಹ್ಮಂ ಸ ವೈಷ್ಣವಂ ।
ಚತುಸ್ತಾರಮಥಾಷಾಢೇ ದ್ವೇ ಮೈತ್ರಂ ಯದುನಂದನ ॥ ೬ ॥

ಪಂಚತಾರಃ ಸ್ಮೃತೋ ಹಸ್ತಃ ಪ್ರಾಜಾಪತ್ಯಂ ಚ ವಾಸವಂ ।
ಸಾರ್ಪಂ ಪೈತ್ರ್ಯಮಥಾಗ್ನೇಯಂ ಷಟ್ತಾರಂ ಪರಿಕೀರ್ತಿತಂ ॥ ೭ ॥

ಆದಿತ್ಯಮಂಡಲಂ ಕಾರ್ಯಂ ಪದ್ಮವರ್ಣಂ ನರಾಧಿಪ ।
ಶ್ವೇತಂ ಚಂದ್ರಮಸಃ ಕಾರ್ಯಂ ರಕ್ತಂ ಕಾರ್ಯಂ ಕುಜಸ್ಯ ಚ ॥ ೮ ॥

---

೪ ಮೊದಲು ಏಕತಾರಕ ನಕ್ಷತ್ರಗಳ ಹೆಸರನ್ನು ಕೇಳು ಆರ್ದ್ರ, ಪುಷ್ಯ, ಚಿತ್ತ, ಸ್ವಾತಿ, ಶತಭಿಷ, ರೇವತಿ ಈ ಆರೂ ಏಕತಾರೆಗಳು

೫ ಪೂರ್ವಫಲ್ಗುನಿ, ಉತ್ತರಫಲ್ಗುನಿ, ಪೂರ್ವಾಭಾದ್ರ, ಉತ್ತರಾಭಾದ್ರ, ಪುನರ್ವಸು, ಮೂಲ, ವಿಶಾಖ, ಅಶ್ವಿನಿ ಈ ಎಂಟೂ ದ್ವಿತಾರಕೆಗಳು

೬ ತ್ರಿತಾರಕೆಗಳಾವುವೆಂದರೆ -- ಭರಣಿ, ಮೃಗಶಿರ, ವಿಶಾಖ, ಚಿತ್ತ, ಶ್ರವಣ ಬಳಿಕ ಚತುಸ್ತಾರಗಳ ಹೆಸರನ್ನು ಕೇಳು — ಪೂರ್ವಾಷಾಢ, ಉತ್ತರಾಷಾಢ, ಅನೂರಾಧ ಈ ಮೂರು

೭ ಹಸ್ತ, ಉತ್ತರಾಭಾದ್ರ, ವಿಶಾಖ ಈ ಮೂರೂ ಪಂಚತಾರೆಗಳು ಆಶ್ಲೇಷ, ಮಖ, ಕೃತ್ತಿಕೆ ಈ ಮೂರೂ ಷಟ್ತಾರೆಗಳು

೮-೧೦ ಗ್ರಹರಾಜನಾದ ಸೂರ್ಯನ ವರ್ತುಲಾಕಾರ ಮಂಡಲವನ್ನು ತಾವರೇ ಕಮಲದ ಬಣ್ಣದಂತೆ ಮಧ್ಯದಲ್ಲಿ ರಚಿಸಬೇಕು ಅವರ ಆಗ್ನೇಯ ಭಾಗದಲ್ಲಿ ಚಂದ್ರ ಮಂಡಲವನ್ನು ಶ್ವೇತವರ್ಣದಿಂದ ಚತುರಶ್ರಾಕಾರವಾಗಿ ಬರೆಯಬೇಕು. ದಕ್ಷಿಣ ಭಾಗದಲ್ಲಿ ಅಂಗಾರಕ ಮಂಡಲವನ್ನು ತ್ರಿಕೋಣಾಕಾರವಾಗಿ ಕೆಂಪು ಬಣ್ಣದಿಂದ ಬರೆಯಬೇಕು ಈಶಾನ್ಯಭಾಗದಲ್ಲಿ ಬುಧ ಮಂಡಲವನ್ನು ಬಾಣಾಕಾರವಾಗಿ ನೀಲೀ ಬಣ್ಣದಿಂದ ಬರೆಯಬೇಕು ಉತ್ತರಭಾಗದಲ್ಲಿ ಬೃಹಸ್ಪತಿ ಮಂಡಲವನ್ನು ದೀರ್ಘ

ನೀಲಂ ಬುಧಸ್ಯ ಕರ್ತವ್ಯಂ ಪೀತವರ್ಣಂ ಬೃಹಸ್ಪತೇಃ
ಶ್ವೇತಂ ಶುಕ್ರಸ್ಯ ಕರ್ತವ್ಯಂ ಕೃಷ್ಣಂ ಸೌರಸ್ಯ ಪಾರ್ಥಿವ ॥ ೯ ॥

ಆಕಾಶವರ್ಣಂ ತಮಸಃ ಕೇತೋರ್ಧೂಮಪ್ರಭಂ ತಥಾ ।
ರಕ್ತವರ್ಣಂ ಕೃತ್ತಿಕಾನಾಂ ಫಲ್ಗುನೀದ್ವಿತಯಸ್ಯ ಚ ॥ ೧೦ ॥

ಹಸ್ತಸ್ಯ ಚ ಸಪೌಷ್ಣಸ್ಯ ಮೈತ್ರಸ್ಯ ಚ ನರಾಧಿಪ ।
ಪೀತಂ ಪುಷ್ಯಸ್ಯ ಕೇಶಸ್ಯ ಶಾಕ್ರವಾಡವಯೋಸ್ತಥಾ । ॥ ೧೧ ॥

ಶ್ವೇತಂ ಸೌಮ್ಯಸ್ಯ ರೌದ್ರಸ್ಯ ಆಪ್ಯವಾರುಣಯೋಸ್ತಥಾ ।
ಆದಿತ್ಯಸಾರ್ಪಪಿತ್ರ್ಯಾಣಾಂ ಬ್ರಾಹ್ಮವಾಯವ್ಯಯೋಸ್ತಥಾ ॥ ೧೨ ॥

ಪ್ರೋಷ್ಠಪಾದದ್ವಯಸ್ಯಾಥ ಶ್ವೇತಮೇವಾಭಿಧೀಯತೇ ।
ವಿಚಿತ್ರವರ್ಣಂ ತ್ವಾಷ್ಟ್ರಸ್ಯ ವೈಶ್ವದೇವಸ್ಯ ಚಾಪ್ಯಥ ॥ ೧೩ ॥

---

ಚತುರಶ್ರಾಕಾರವಾಗಿ ಹಳದೀ ಬಣ್ಣದಿಂದ ಬರೆಯಬೇಕು. ಪೂರ್ವಭಾಗದಲ್ಲಿ ಶುಕ್ರ ಮಂಡಲವನ್ನು ಪಂಚಕೋಣಾಕಾರವಾಗಿ ಬಿಳೀ ಬಣ್ಣದಿಂದ ಬರೆಯಬೇಕು ಪಶ್ಚಿಮ ಭಾಗದಲ್ಲಿ ಶನೈಶ್ಚರ ಮಂಡಲವನ್ನು ಧನುಸ್ಸಿನಾಕಾರವಾಗಿ ಕಪ್ಪು ಬಣ್ಣದಿಂದ ಬರೆಯ ಬೇಕು ನೈಋತ್ಯ ದಿಕ್ಕಿನಲ್ಲಿ ರಾಹು ಮಂಡಲವನ್ನು ಮೊರೆದ ಆಕಾರದಂತೆ ಆಕಾಶ ಬಣ್ಣದಿಂದ ಬರೆಯಬೇಕು ವಾಯುವ್ಯ ದಿಕ್ಕಿನಲ್ಲಿ ಕೇತುಗ್ರಹ ಮಂಡಲವನ್ನು ಬಾವು ಟದ ಆಕಾರದಂತೆ ಹೊಗೆಯ ಬಣ್ಣದಿಂದ ಬರೆಯಬೇಕು ಈ ಶ್ಲೋಕಗಳಲ್ಲಿ ಆದಿತ್ಯ ಮಂಡಲಂ ಎಂದು ಆರಂಭಿಸಿ ಕೇತು ಮಂಡಲದವರೆಗಿನ ರಚನಾಕ್ರಮವನ್ನು ವಿವರಿಸಿ ರುವೆವಾದರೂ ಮಂಡಲ ಲಕ್ಷಣ ಮತ್ತು ದಿಕ್ಕುಗಳನ್ನು ಹೇಳದ ಬಿಟ್ಟಿರುವುದರಿಂದ ಅವುಗಳನ್ನು ನಾವಿಲ್ಲಿ ಗುರೂಪದೇಶ ಕ್ರಮದಂತೆಯೂ ವಿಧಿವಿಹಿತವಾಗಿಯೂ ಬರೆದಿರು ತ್ತೇವೆ ನವಗ್ರಹಾರಾಧನೆಯಂ ಮಾಡುವುದಕ್ಕಿಂತ ಮುಂಚೆ ಈ ರೀತಿ ಮಂಡಲವಂ ನಿರ್ಮಿಸಿ ಅವರ ಮೇಲೆ ಆಯಾ ಗ್ರಹ ಧಾನ್ಯಗಳನ್ನು ಸುರಿದು ಪೂಜೆ ಮಾಡುವುದು ಪ್ರಾಚೀನ ಸಂಪ್ರದಾಯವೂ ಶಾಸ್ತ್ರೀಯವೂ ಆದುದು

೧೦-೧೬ ಕೃತ್ತಿಕಾ ನಕ್ಷತ್ರಕ್ಕೆ ಕೆಂಪುಬಣ್ಣ, ಪೂರ್ವ ಫಲ್ಗುನೀ, ಉತ್ತರ ಫಲ್ಗುನೀ ನಕ್ಷತ್ರಗಳಿಗೆ ಮತ್ತು ಜ್ಯೇಷ್ಠ, ಹಸ್ತಗಳಿಗೂ ಸಹ ಅದೇ ಕೆಂಪುವರ್ಣ, ಪುಷ್ಯ ಮೊದಲಾದ ನಾಲ್ಕು ತಾರೆಗಳಿಗೆ ಹಳದಿ ಮೃಗಶಿರ, ಆರ್ದ್ರ ಪೂರ್ವಾಷಾಢ

ಆಶ್ವಿನಸ್ಯ ತಥಾ ಕಾರ್ಯಂ ನಿತ್ಯಮೇವ ನರಾಧಿಪ ।
ಕೃಷ್ಣಂ ಯಾಮ್ಯಸ್ಯ ಮೂಲಸ್ಯ ಪಾಲಾಶಂ ಶ್ರವಣಸ್ಯ ಚ ॥ ೧೪ ॥

ವಿಶಾಖಾಯಾಂ ಪೀತರಕ್ತಂ ಕರ್ತವ್ಯಂ ನೃಪಮಂಡಲಂ ॥ ೧೫ ॥

ಯಥೋಕ್ತವರ್ಣೇನ ನರೇಂದ್ರ ಕೃತ್ವಾ
ಪೂರ್ವಂ ಗ್ರಹಸ್ಯಾನಘ ಮಂಡಲಂ ಸ್ವಂ ।
ಋಕ್ಷಸ್ಯ ವಾ ಪೂಜ್ಯತಮಸ್ಯ ರಾಜನ್
ಪೂಜಾ ವಿಧೇಯಾ ತದನಂತರಂ ಚ ॥ ೧೬ ॥

ಇತಿ ಶ್ರೀ ವಿಷ್ಣು ಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಗ್ರಹರ್ಕ್ಷಮಂಡಲನಿರ್ದೇಶೋ ನಾಮ
ಅಷ್ಟಾಶೀತಿತಮೋಽಧ್ಯಾಯಃ

ಶತಭಿಷೆಗಳಿಗೆ ಬಿಳೀಬಣ್ಣ ಹಸ್ತ, ಆಶ್ಲೇಷ, ಮಖಾ ಮತ್ತು ರೋಹಿಣಿ, ಸ್ವಾತಿ, ಪೂರ್ವಾಭಾದ್ರೆ, ಉತ್ತರಾಭಾದ್ರೆಗಳಿಗೂ ಬಿಳೀಬಣ್ಣ ಚಿತ್ರಾತಾರೆಗೆ ವಿಚಿತ್ರವರ್ಣ ಭರಣಿ, ಮೂಲಗಳಿಗೆ ಕೃಷ್ಣ (ಕಪ್ಪು) ವರ್ಣ ಶ್ರವಣಕ್ಕೆ ಮುತ್ತುಗದ ಹೂವರ್ಣ ವಿಶಾಖೆಗೆ ಹಳದಿ ಮತ್ತು ಕೆಂಪು ಈ ರೀತಿ ಮೇಲೆ ಹೇಳಿದ ಬಣ್ಣಗಳಿಂದ ಗ್ರಹಗಳಿಗ ಮತ್ತು ನಕ್ಷತ್ರಗಳಿಗೆ ಮಂಡಲವನ್ನು ಮಾಡಿ ಅದರ ಮೇಲೆ ಸ್ಥಾಪಿಸಿ ಆ ಬಳಿಕ ಪೂಜೆಗೆ ಆರಂಭ ಮಾಡಬೇಕು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಗ್ರಹನಕ್ಷತ್ರಮಂಡಲ ನಿರ್ದೇಶವೆಂಬ
ಹೆಸರಿನ ಎಂಭತ್ತೆಂಟನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನನವತಿತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಶಕೃನ್ಮೂತ್ರಂ ತು ಸಂಗೃಹ್ಯ ಶ್ವೇತಸ್ಯ ವೃಷಭಸ್ಯ ಚ ।
ಶ್ವೇತಗೋಃ ಪಯಸಾ ಸಾರ್ಧಂ ಸ್ನಾತವ್ಯಂ ಕುಶವಾರಿಣಾ ॥ ೧ ॥

ಜನ್ಮನಕ್ಷತ್ರಪೀಡಾಯಾಂ ತಸ್ಮಾದ್ದೋಷಾದ್ವಿಮುಚ್ಯತೇ ।
ಶಿರೀಷಚಂದನಾಶ್ವತ್ಥತಾಟನಾಗಾಂಬುಭಿರ್ನರಃ ॥ ೨ ॥

ಸ್ನಾನಶ್ಚೇನ್ಮಾನಸೇ ತಪ್ತೇ ತಸ್ಮಾದ್ದೋಷೋ ವಿಮುಚ್ಯತೇ ।
ಸಿದ್ಧಾರ್ಥಕಾನ್ಪ್ರಿಯಂಗುಂ ಚ ಶತಪುಷ್ಪಾಂ ಶತಾವರೀಂ ॥ ೩ ॥

ಸ್ನಾತವ್ಯಮಂಭಸಿ ಕ್ಷಿಪ್ತ್ವಾ ಕರ್ಮರ್ಕ್ಷೇ ನೃಪ ಪೀಡಿತೇ ।
ಪ್ರಿಯಂಗುಬಿಲ್ವಸಿದ್ಧಾರ್ಥಯವಾಶ್ವತ್ಥಸುರಾಹ್ವಯಾ ॥ ೪ ॥

---

### ಎಂಭತ್ತೊಂಭತ್ತನೆಯ ಅಧ್ಯಾಯವು.

೧ ಮಾರ್ಕಂಡೇಯ ಮಹರ್ಷಿಗಳು ಹೇಳುತ್ತಾರೆ — ಬಿಳೀ ಎತ್ತಿನ ಸಗಣಿ ಗಂಜಲದೊಡನೆ ಬಿಳಿಯ ಹಸುವಿನ ಹಾಲನ್ನು ಬೆರಸಿ ದರ್ಭೆಯ ನೀರಿನಿಂದ ಗ್ರಹ ನಕ್ಷತ್ರಗಳನ್ನು ಪ್ರೋಕ್ಷಿಸಬೇಕು

೨-೫ ಬೆಟ್ಟಮಲ್ಲಿಗೆ, ಗಂಧ, ಅರಳೀ ಪತ್ರೆಗಳನ್ನು ಮಂತ್ರೋದಕದಲ್ಲಿ ಹಾಕಿ ಗ್ರಹ ನಕ್ಷತ್ರ ಮಂಡಲವನ್ನು ಪ್ರೋಕ್ಷಿಸಿ (ಸ್ನಾನಮಾಡಿಸಿ) ದರೆ ಜನ್ಮನಕ್ಷತ್ರದಿಂದುಂಟಾದ ಪೀಡೆಯು ಪರಿಹಾರವಾಗುವುದು ಬಿಳೀ ಸಾಸುವೆ ನವಣೆ, ಕಮಲ, ಶತಾವರೀ ಪತ್ರಗಳನ್ನು ನೀರಿನಲ್ಲಿ ಹಾಕಿ ಸ್ನಾನ ಮಾಡಿಸಿದರೆ ಮಾನಸಿಕ ನಕ್ಷತ್ರದಿಂದ ಪ್ರಾಪ್ತ

ಚಂದನೋದಕಸಂಯುಕ್ತೇ ಸ್ನಾನೇ ಸಾಂಘಾತಿಕೇ ಹಿತೇ ।
ಸರ್ವಗಂಧೋದಕೈಃ ಸ್ನಾನಂ ತಥಾ ಸಿದ್ಧಾರ್ಥಕೈಃ ಶುಭೈಃ ॥ ೫ ॥

ಪೀಡಿತೇ ಸಾಮುದಾಯರ್ಕ್ಷೇ ಪುಂಸಾಂ ಕಲ್ಮಷನಾಶನಂ ।
ವೃಷಶೃಂಗೋದ್ಧೃತನ್ಮೃದಾ ತಥಾ ಬಿಲ್ವೋದಕೈಶ್ಶುಭೈಃ ॥ ೬ ॥

ಶತಪುಷ್ಪಾಸಸೋಮಾಹ್ವೈಃ ಸ್ನಾನಂ ವೈನಾಶಿಕೇ ಭವೇತ್ ।
ಪೀಡಿತೇ ಚಾಭಿಷೇಕರ್ಕ್ಷೇ ನವರತ್ನೋದಕೈಸ್ತಥಾ ॥ ೭ ॥

ಪೀಡಿದೇ ದೇಶನಕ್ಷತ್ರೇ ಮೃದ್ಭಿಸ್ಸ್ನಾನಂ ವಿಧೀಯತೇ ।
ಮೃತ್ತಿಕಾಶ್ಚ ಪ್ರವಕ್ಷ್ಯಾಮಿ ಗದತಃ ಶೃಣು ಮೇ ನೃಪ ॥ ೮ ॥

ನದೀಕೂಲದ್ವಯಾನ್ಮಧ್ಯಾತ್ಸಂಗಮಾತ್ಸರಸಸ್ತಟಾತ್ ।
ಅಶ್ವಸ್ಥಾನಾದ್ಗಜಸ್ಥಾನಾದ್ಗೋಸ್ಥಾನಾದ್ಗಿರಿಮಸ್ತಕಾತ್ ॥ ೯ ॥

ಸರ್ಪಸ್ಥಾನಾತ್ಸವಲ್ಮೀಕಾದ್ರಾಜಸ್ಥಾನಾದ್ವರಾಲಯಾತ್ ।
ಗಜಶೃಂಗೋದ್ಧೃತಾಂ ಚೈವ ವೃಷಶೃಂಗೋದ್ಧೃತಾಂ ತಥಾ ॥ ೧೦ ॥

---

ಪಾಪ ದೋಷವು ಪರಿಹಾರವಾಗುವುದು, ಸಾಸಿವೆ, ಬಿಲ್ವಪತ್ರೆ, ಅರಳಿ ಮುಂತಾದ ಪತ್ರೆಗಳನ್ನು ಬೆರೆಸಿದ ನೀರಿನಿಂದ ಪ್ರೋಕ್ಷಿಸಿದರೆ ಕರ್ಮನಕ್ಷತ್ರ ಪೀಡಿತವಾದ ದೋಷವು ಪರಿಹಾರವಾಗುವುದು ಸರ್ವಗಂಧೋದಕ ಸ್ನಾನದಿಂದ ಸಾಂಘಾತಿಕ ನಕ್ಷತ್ರದೋಷವು ಪರಿಹಾರವಾಗುತ್ತದೆ

೬-೮ ಎತ್ತಿನ ಕೊಂಬಿನಿಂದ ಮೀಟಲ್ಪಟ್ಟ ಮಣ್ಣಿನಿಂದೊಡಗೂಡಿದ ಬಿಲ್ವಪತ್ರೋದಕದಿಂದ ಸ್ನಾನಮಾಡಿಸಿದರೆ ಸಾಮುದಾಯಿಕ ನಕ್ಷತ್ರ ಪೀಡಿತ ಜನರ ಪಾಪವು ಪರಿಹಾರವಾಗುವುದು ತಾವರೇ ಕಮಲದ ನೀರಿನಿಂದ ಸ್ನಾನ ಮಾಡಿಸಿದರೆ ವೈನಾಶಿಕ ಗ್ರಹನಕ್ಷತ್ರ ಪೀಡಾದೋಷವು ಪರಿಹಾರವಾಗುವುದು ಸರ್ವರತ್ನೋದಕದ ಅಭಿಷೇಕದಿಂದ ಅಭಿಷೇಕ ನಕ್ಷತ್ರ ಪೀಡಾದೋಷವು ಪರಿಹಾರವಾಗುವುದು ಮೃತ್ತಿಕಾ ಸ್ನಾನದಿಂದ ದೇಶನಕ್ಷತ್ರ ಪೀಡಾದೋಷ ನಿವಾರಣೆಯಾಗುವುದು ಮೃತ್ತಿಕಾಸ್ನಾನಕ್ಕೆ ಯೋಗ್ಯವಾದ ಮೃತ್ತಿಕೆ (ಮಣ್ಣು) ಯ ಲಕ್ಷಣವನ್ನು ಹೇಳುತ್ತೇನೆ, ಕೇಳು

೯-೧೧ ನದಿಗಳ ಎರಡು ದಡದಲ್ಲಿರುವ ಅಥವಾ ನದಿಯ ಮಧ್ಯದಲ್ಲಿರುವ, ನದೀ ಸಂಗಮದಲ್ಲಿರುವ ಸರೋವರದ ದಡದಲ್ಲಿ ದೊರೆಯುವ ಅಶ್ವಶಾಲಾ,ಗಜಶಾಲಾ, ಗೋಶಾಲೆಗಳಲ್ಲಿರುವ ಅಥವಾ ಬೆಟ್ಟದ ಮೇಲುಗಡೆ ಇರುವ, ಹುತ್ತದಲ್ಲಿರುವ, ಅರ

**ಸರ್ವಬೀಜೋದಕಸ್ನಾತೋ ಜಾತಿನಕ್ಷತ್ರಪೀಡನೇ**
**ಮುಚ್ಯತೇ ಕಿಲ್ಬಿಷಾದ್ರಾಜನ್ನಾತ್ರ ಕಾರ್ಯಾ ವಿಚಾರಣಾ ॥ ೧೧ ॥**
**ಇದಮಾಪಃ ಪ್ರವಹತಃ ಸ್ನಾನಮಂತ್ರಾಃ ಪ್ರಕೀರ್ತಿತಾಃ ॥ ೧೨ ॥**

**ಸ್ನಾತಸ್ತಥೈವಂ ನೃಪಚಂದ್ರ ಪಶ್ಚಾತ್**
**ಸ್ನಾನಂ ಪ್ರಕುರ್ವೀತ ಗ್ರಹೋಪದಿಷ್ಟಂ ।**
**ಪೀಡಾಕರಸ್ಯಾಥ ತತಸ್ತುಕಾರ್ಯಂ**
**ನಕ್ಷತ್ರಯಾಗಾಭಿಹಿತಂ ಯಥಾವತ್ ॥ ೧೩ ॥**

**ಪೂಜಾ ಗ್ರಹೇಂದ್ರಸ್ಯ ನರೇಂದ್ರಚಂದ್ರ।**
**ಪೀಡಾಕರಸ್ಯಾಥ ತತಸ್ತು ಕಾರ್ಯಾ ।**
**ತಂ ಪೂಜಯೇಚ್ಚಾಪ್ಯಥ ಚಂದ್ರಯುಕ್ತಂ**
**ತತಃ ಸ ದೋಷಾನ್ಸಕಲಾನ್ಜಹಾತಿ ॥ ೧೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇಮಾರ್ಕಂಡೇಯ ವಜ್ರ ಸಂವಾದೇ ನಕ್ಷತ್ರಸ್ನಾನಂ ನಾಮ ಏಕೋನನವತಿತಮೋಽಧ್ಯಾಯಃ**

ಮನೆಯ ಬಳಿ ಇರುವ ಅಥವಾ ಸುಂದರ ಮಂದಿರದ ಬಳಿ ದೊರೆಯುವ, ಅಥವಾ ಆನೆಯ ಕೊಂಬಿನಿಂದ ನೀಟಲ್ಪಡುವ, ಎತ್ತಿನ ಕೊಂಬಿನಿಂದ ಮೀಟಲ್ಪಡುವ ಮೃತ್ತಿಕೆಗಳು ಶ್ರೇಷ್ಠವೆಂದು ತಿಳಿಯಬೇಕು ಸಕಲ ಬೀಜ ಸ್ನಾನದಿಂದ ಜಾತಿ ನಕ್ಷತ್ರ ಪೀಡಾದೋಷವು ಪರಿಹಾರನಾಗುವುದು ಎಲೈ ರಾಜನೇ ! ಹೀಗೆ ಮಾಡೋಣದ ರಿಂದ ಸಕಲ ಪಾಪವೂ ಪರಿಹಾರವಾಗುವುದೆಂದು ತಿಳಿದುಕೋ ಈ ವಿಷಯದಲ್ಲಿ ಸಂದೇಹ ಪಡಬೇಕಾಗಿಲ್ಲ

೧೨-೧೩ 'ಇದಮಾಪಃ-ಪ್ರವಹತ' ಎಂಬ ವೇದ ಮಂತ್ರವು ಸ್ನಾನಕ್ಕೆ ಉಕ್ತವಾಗಿದ ಈ ರೀತಿ ಮಂತ್ರಸ್ನಾನ ಮಾಡಿಸಿದ ಬಳಿಕ ಗ್ರಹಮಂತ್ರಗಳಿಂದ ಪ್ರೋಕ್ಷಿಸಬೇಕು ಪೀಡೆಗೊಳಗಾದ ಮನುಷ್ಯನು ನಕ್ಷತ್ರಯಾಗವೆಂಬ ವಿಧಿಯನ್ನನುಸರಿಸಿ ಅದರಲ್ಲಿ ಹೇಳಿರುವ ಕ್ರಮದಂತೆ ಗ್ರಹನಕ್ಷತ್ರ ಶಾಂತಿಯನ್ನು ಮಾಡಿಕೊಳ್ಳಬೇಕು ಮೊದಲು ಸೂರ್ಯ ಚಂದ್ರ ಮಹಾಗ್ರಹಗಳನ್ನು ಪೂಜಿಸಿ, ಪೀಡಾಪ್ರದ ಗ್ರಹ ನಕ್ಷತ್ರಗಳಂ ಪೂಜಿಸಿದರೆ, ಸೂರ್ಯ ಚಂದ್ರರು ಸಕಲ ದೋಷಗಳನ್ನೂ ಪರಿಹರಿಸಿ ರಕ್ಷಿಸುತ್ತಾರೆಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ನಕ್ಷತ್ರ ಸ್ನಾನವೆಂಬ ಹೆಸರಿನ ಮಾರ್ಕಂಡೇಯ ವಜ್ರಸಂವಾದ ರೂಪವಾದ ಎಂಭತ್ತೊಂಭತ್ತನಯ ಅಧ್ಯಾಯವು ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ನವತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಗ್ರಹಾಣಾಂ ಭಾರ್ಗವಶ್ರೇಷ್ಠ ನಕ್ಷತ್ರಾಣಾಂ ತಥೈವ ಚ ।
ಪೂಜಾವಿಧಿಮಹಂ ತ್ವತ್ತಃ ಶ್ರೋತುಮಿಚ್ಛಾಮಿ ತತ್ತ್ವತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಗ್ರಹಂ ವಾಪ್ಯಥ ನಕ್ಷತ್ರಂ ಯಂ ಪೂಜಯಿತುಮಿಚ್ಛತಿ ।
ಉಪಸ್ಪೃಶ್ಯ ಶುಚಿರ್ಭೂತ್ವಾ ಕೃತ್ವಾ ತಸ್ಯಾಥ ಮಂಡಲಂ ॥ ೨ ॥

ಮಂಡಲೇ ಕಲ್ಪಿತಂ ವಾಪಿ ಸ್ವಯಂ ದೈವವಿದಾ ನೃಪ ।
ಪೂಜ್ಯಸ್ನಾನೇನ ವಿಧಿವತ್ಸ್ನಾತಃ ಪ್ರಯತಮಾನಸಃ ॥ ೩ ॥

### ತೊಂಭತ್ತನೆಯ ಅಧ್ಯಾಯವು

೧. ವಜ್ರನರಪತಿಯು ಪ್ರಶ್ನೆಮಾಡುತ್ತಾನೆ —ಎಲೈ ಮಾರ್ಕಂಡೇಯ ಮಹರ್ಷಿಯೆ! ಗ್ರಹಗಳನ್ನೂ, ನಕ್ಷತ್ರಗಳನ್ನೂ ಪೂಜ ಮಾಡುವ ವಿಧಿಯನ್ನು ನಿನ್ನ ಮುಖದಿಂದ ಕೇಳಬೇಕೆಂದು ಆಶಿಸುತ್ತೇನೆ,

೨-೩ ಮಾರ್ಕಂಡೇಯನು ಹೇಳುತ್ತಾನೆ— ಗ್ರಹವನ್ನಾಗಲಿ, ನಕ್ಷತ್ರವನ್ನಾಗಲಿ ಯಾವುದನ್ನು ಯಾವ ಮನುಷ್ಯನು ಪೂಜೆ ಮಾಡಲಪೇಕ್ಷಿಸುವನೋ ಅವನು ಸ್ನಾನಮಾಡಿ ಪರಿಶುದ್ಧನಾಗಿ ಆಯಾ ಗ್ರಹ ನಕ್ಷತ್ರದ ಮಂಡಲವನ್ನು ತಾನೇ ಆಗಲಿ, ತನ್ನ ಮನೆಯ ಪುರೋಹಿತನಿಂದಾಗಲಿ ವಿರಚಿಸಿ ವಿಧಿವತ್ತಾಗಿ ಪೂಜಿಸಬೇಕು

ವಿಧಿನೋಪಸಮಾದಾಯ ಪ್ರಯತೋ ಜಾತವೇದಸಂ ।
ಅಥವೋಪಸಮಾದಾನೇ ಕೃತೇ ತತ್ರ ಪುರೋಧಸಾ ॥ ೪ ॥

ಪ್ರಾಕ್ತಂತ್ರೇ ಚ ಕೃತೇ ತತ್ರ ಚಕ್ಷುಷ್ಮತ್ರೇ ಯಥಾವಿಧಿ
ಮಂಡಲಾತ್ಪಶ್ಚಿಮೇ ಭಾಗೇ ಪ್ರಾಙ್ಮುಖಃ ಪ್ರಯತಶ್ಶುಚಿಃ ॥ ೫ ॥

ಮಂಡಲಸ್ಯ ತು ಶೌಚಾರ್ಥಂ ಪಂಚಗವ್ಯಂ ಪ್ರಕಲ್ಪಯೇತ್ ।
ಅಭ್ಯುಕ್ಷ್ಯ ಪಂಚಗವ್ಯೇನ ಮಂಡಲಂ ಪ್ರಯತಶ್ಶುಚಿಃ ॥ ೬ ॥

ಅರ್ಘ್ಯಾದಿಕಲ್ಪನಾಂ ಕುರ್ಯಾತ್ಪಾದ್ಯಾಂತಾಂ ತದನಂತರಂ ।
ಜೀವಾದಾನಂ ತತಃ ಕುರ್ಯಾಜ್ಜೀವಸ್ಯಾವಾಹನಂ ತತಃ ॥ ೭ ॥

ಪೂಜ್ಯಸ್ಯಾವಾಹನಂ ಕುರ್ಯಾತ್ತತೋಽರ್ಘ್ಯಂ ವಿನಿವೇದಯೇತ್ ।
ಪಾದ್ಯಂ ನಿವೇದಯೇತ್ಪಶ್ಚಾದಾಸನಂ ಚ ನಿವೇದಯೇತ್ ॥ ೮ ॥

ದತ್ವ್ವಾಚಮನೀಯಂ ಚ ಮಧುಪರ್ಕಂ ನಿವೇದಯೇತ್ ।
ತತೋಽನುಲೇಪನಂ ದದ್ಯಾತ್ತತೋ ದದ್ಯಾದ್ವಿಭೂಷಣಂ ॥ ೯ ॥

ತತೋಯಜ್ಞೋಪವೀತಂ ಚ ತತಃ ಪ್ರತಿಸರಾನ್ಶುಭಾನ್ ।
ವಸ್ತ್ರಂ ತಥಾ ಪತಾಕಾಂ ಚ ಪುಷ್ಪಂ ಧೂಪಂ ತಥೈವ ಚ ॥ ೧೦ ॥

ದೀಪಂ ಚ ದತ್ವಾ ನೈವೇದ್ಯಂ ಮುಖವಾಸಂ ಚ ಪಾರ್ಥಿವ ।
ತತೋಽಗ್ನಿಹವನಂ ಕುರ್ಯಾದ್ಯಸ್ಯ ಯಸ್ಯ ಯಥಾ ಭವೇತ್ ॥ ೧೧ ॥

---

೪-೬ ಪೂಜೆ ಬೇಕಾದ ಬಳಿಕ ಪುರೋಹಿತನಿಂದ ಅಗ್ನಿಪ್ರತಿಷ್ಠಾ ಮಾಡಿಸಿ ಯಥಾವಿಧಿಯಾಗಿ ಮಂಡಲದ ಪಶ್ಚಿಮಭಾಗದಲ್ಲಿ ಪೂರ್ವದಿಕ್ಕಿಗಭಿಮುಖವಾಗಿ ಕುಳಿತು, ಮಂಡಲ ಶುದ್ಧ್ಯರ್ಥವಾಗಿ ಪಂಚಗವ್ಯವನ್ನು ಮಾಡಿದ ಬಳಿಕ ಆದರಿಂದ ಮಂಡಲವನ್ನು ಪ್ರೋಕ್ಷಿಸಿ ಪರಿಶುದ್ಧನಾಗಿ

೭-೧೧ ಅರ್ಘ್ಯ, ಪಾದ್ಯ, ಆಚಮನೀಯಾದಿಗಳನ್ನರ್ಪಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು ಆ ಬಳಿಕ ಆವಾಹನ, ಅರ್ಘ್ಯ ಪಾದ್ಯಾದಿಗಳನ್ನರ್ಪಿಸಿ ಮಧುಪರ್ಕವನ್ನು ನಿವೇದಿಸಬೇಕು ಅನಂತರ ಗಂಧ, ಆಭರಣ, ಯಜ್ಞೋಪವೀತ ಪ್ರತಿ ಸರವಸ್ತ್ರ, ಧ್ವಜ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಾದಿಗಳನ್ನರ್ಪಿಸಿ ಅನಂತರ ಅಗ್ನಿಯಲ್ಲಿ ಹೋಮ ಮಾಡಬೇಕು ಯಾವ ಯಾವ ಗ್ರಹನಕ್ಷತ್ರಗಳಿಗೆ ಯಾವ ಯಾವ ಮಂತ್ರ ಹೋಮಗಳಿವೆಯೋ ಅದರಂತೆ ನಡೆಸಬೇಕು

ಕೃತ್ವೈವೋತ್ತರತಂತ್ರಂ ಚ ದತ್ವಾ ಪೂರ್ಣಾಹುತಿಂ ತತಃ ।
ತದುಕ್ತಾಂ ದಕ್ಷಿಣಾಂ ದತ್ವಾ ಮಂಡಲೇ ಪ್ರತಿಪಾದಯೇತ್ ॥ ೧೨ ॥

ಹೋತುರ್ವಸ್ತ್ರಯುಗ್ಮಂ ದೇಯಂ ಗೌಸ್ಸುವರ್ಣಂ ತಥೈವ ಚ ।
ಗ್ರಾಹ್ಯಂ ಕಾಲವಿದಾ ತಚ್ಚ ಯದ್ದತ್ತಂ ಗ್ರಹಮಂಡಲೇ ॥ ೧೩ ॥

ಯಥಾಶಕ್ತಿ ಚ ದಾತವ್ಯಾ ಬ್ರಾಹ್ಮಣಾನಾಂ ಚ ದಕ್ಷಿಣಾ ।
ವಿಸರ್ಜನಂ ತತಃ ಕಾರ್ಯಂ ತತೋ ಬ್ರಾಹ್ಮಣಭೋಜನಂ ॥ ೧೪ ॥

ಭುಕ್ತವತ್ಸು ಚ ವಿಪ್ರೇಷು ಪ್ರಮಾರ್ಷ್ಟಿರ್ಮಂಡಲೇ ಭವೇತ್ ।
ಅರ್ಘ್ಯಪುಷ್ಪಾದಿಕಂ ಸರ್ವಂ ಜಲೇ ಪ್ರಕ್ಷಿಪ್ಯ ಪಾರ್ಥಿವ ॥ ೧೫ ॥

ಅಂಬುನಾ ತರ್ಪಣಂ ಕಾರ್ಯಂ ಪೂಜಾಸ್ಯಾತ್ತದನಂತರಂ ॥ ೧೬ ॥

ಪೂಜಾವಿಧಿಸ್ತೇ ಗದಿತೋ ಮಯಾದ್ಯ
ಸಮಾಸತಃ ಪಾರ್ಥಿವಸಂಘಮುಖ್ಯ ।

---

೧೨-೧೬ ಹೋಮಾನಂತರ ಉತ್ತರ ತಂತ್ರವನ್ನು ಮುಗಿಸಿ ಪೂರ್ಣಾಹುತಿಯನ್ನು ಕೊಡಬೇಕು ಆ ಮೇಲೆ ಕಲ್ಪೋಕ್ತವಾದ ದಕ್ಷಿಣೆಯನ್ನು ಧಾರೆ ಎರೆದುಕೊಟ್ಟು ಮಂಡಲದಲ್ಲಿ ಇಡಬೇಕು ಹೋಮ ಮಾಡಿದವರಿಗೆ ಒಂದು ಜತೆ ವಂಚೆ, ಒಂದು ಹಸು, ಒಂದು ಚಿನ್ನದ ಕಾಸನ್ನೂ ಕೊಡಬೇಕು ಮತ್ತು ಗ್ರಹಮಂಡಲದಲ್ಲಿ ಇಟ್ಟ ದಕ್ಷಿಣೆಯನ್ನು ಜ್ಯೋತಿಷ್ಕರಿಗೆ ಕೊಡಬೇಕು ಮತ್ತು ಬ್ರಾಹ್ಮಣರಿಗೆ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಬಳಿಕ ವಿಸರ್ಜನೆಮಾಡಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು ಬ್ರಾಹ್ಮಣರಿಗೆ ಭೋಜನವಾದ ಬಳಿಕ ಅವರಿಂದ ಮಂಡಲದಲ್ಲಿ ಮಾರ್ಜನೆ (ಪ್ರೋಕ್ಷಣೆ) ಮಾಡಿಸಬೇಕು ಬಳಿಕ ಪೂಜೆಮಾಡಿದ ಹೂವು (ನಿರ್ಮಾಲ್ಯ) ಅರ್ಘ್ಯ ಪಾದ್ಯಾದಿಗಳನ್ನು ನೀರಿನಲ್ಲಿ ಬಿಡಬೇಕು ಪೂಜಾನಂತರ ಜಲತರ್ಪಣವಾಗ

ಅತಃ ಪರಂ ಕಿಂ ಕಥಯಾಮಿ ತುಭ್ಯಂ
ತನ್ಮೇ ವದಸ್ವಾಖಿಲರಾಜಸಿಂಹ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಗ್ರಹರ್ಕ್ಷಪೂಜಾವಿಧಿವರ್ಣನಂ ನಾಮ
ನವತಿತಮೋಽಧ್ಯಾಯಃ

---

ಬೇಕು ಎಲೈ ವಜ್ರರಾಜನೇ! ನಿನಗೆ ಪೂಜಾವಿಧಿಯನ್ನು ತಿಳಿಸಿದೇನೆ ಇನ್ನುಮುಂದೆ ಏನು ಕೇಳಬೇಕೆಂದಿರುವಿಯೋ ಕೇಳೆಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಗ್ರಹನಕ್ಷತ್ರಮಂಡಲನಿರ್ದೇಶವೆಂಬ ಹೆಸರಿನ
ತೊಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

ಅಥ

# ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕನವತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಗ್ರಹಾಣಾಂ ಭಾರ್ಗವಶ್ರೇಷ್ಠ ನಕ್ಷತ್ರಾಣಾಂ ಪೃಥಕ್‌ಪೃಥಕ್ ।
ಸ್ನಾನಾನಿ ಶ್ರೋತುಮಿಚ್ಛಾಮಿ ತತ್ಪೀಡಾ ಶಮನಾನ್ಯಹಂ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮಂಜಿಷ್ಠಾಂ ಮಾತುಲುಂಗಂ ಚ ಕುಂಕುಮಂ ರಕ್ತಚಂದನಂ ।
ಪೂರ್ಣಕುಂಭೇ ಕೃತೇ ತಾಮ್ರೇ ಸೂರ್ಯಸ್ನಾನಂ ವಿಧೀಯತೇ ॥ ೨ ॥

ಉಶೀರಂ ಚ ಶಿರೀಷಂ ಚ ಪದ್ಮಕಂ ಚಂದನಂ ತಥಾ ।
ಶಂಖೇ ನ್ಯಸ್ತಮಿದಂ ಸ್ನಾನಂ ಚಂದ್ರದೋಷನಿವಾರಣಂ ॥ ೩ ॥

---

### ತೊಂಭತ್ತೊಂದನೆಯ ಅಧ್ಯಾಯವು.

೧ ವಜ್ರರಾಜನು ಪ್ರಶ್ನೆಮಾಡುತ್ತಾನೆ -- ಎಲೈ ಮಾರ್ಕಂಡೇಯ ಮುನಿವರ್ಯರೇ ! ಗ್ರಹ ಮತ್ತು ನಕ್ಷತ್ರಗಳಿಗೆ ಬೇರೆ ಬೇರೆಯಾಗಿ ಸ್ನಾನಕ್ರಮವನ್ನೂ ಆ ಗ್ರಹ ನಕ್ಷತ್ರಗಳಿಂದುಂಟಾದ ಪೀಡೆಗೆ ಶಾಂತಿಯನ್ನೂ ಕೇಳಲಪೇಕ್ಷಿಸುತ್ತೇನೆ

೨, ಮಾರ್ಕಂಡೇಯನು ಹೇಳುತ್ತಾನೆ — ತಾಮ್ರದ ಪೂರ್ಣ ಕುಂಭದಲ್ಲಿ ಮಂಜಿಷ್ಠೆ, ಮಾತುಲುಂಗ, ಕುಂಕುಮ, ಕೆಂಪಿನ ಗಂಧ ಇದನ್ನು ಬೆರೆಸಿದರೆ ಸೂರ್ಯಸ್ನಾನಕ್ಕೆ ಯೋಗ್ಯವು

೩ ಲಾಮಂಚ, ಶಿರೀಷ, ಕಮಲ, ಚಂದನ ಇವುಗಳನ್ನು ಶಂಖದಲ್ಲಿ ಬೆರೆಸಿ ಸ್ನಾನಮಾಡಿಸಿದರೆ ಚಂದ್ರನಿಂದಾದ ದೋಷವು ನಿವಾರಣೆಯಾಗುವುದು

ಖದಿರಂ ದೇವದಾರುಂ ಚ ತಿಲಾನ್ಯಾಮಲಕಾನಿ ಚ ।
ಪೂರ್ಣಕುಂಭೇ ಕೃತೇ ರೌಪ್ಯೇ ಭೌಮಪೀಡಾವಿನಾಶನಂ ॥ ೪ ॥

ನದೀಸಂಗಮತೋಯಾನಿ ತನ್ಮೃದಾ ಸಹಿತಾನಿ ಚ ।
ನ್ಯಸ್ತಾನಿ ಕುಂಭೇ ಮಾಹೇಯೇ ಬುಧಪೀಡಾವಿನಾಶನಂ ॥ ೫ ॥

ಗೋರೋಚನಂ ನಾಗಮದಂ ಶತಪುಷ್ಪಾ ಶತಾವರೀ ।
ವಿನ್ಯಸ್ಯ ರಾಜತೇ ಕುಂಭೇ ಶುಕ್ರಪೀಡಾನಿವಾರಣಂ ॥ ೬ ॥

ತಿಲಾನ್ಮಾಷಾನ್ಪ್ರಿಯಂಗುಂ ಚ ಗಂಧಪುಷ್ಪಂ ತಥೈವ ಚ ।
ನ್ಯಸ್ತಂ ಕಾಷ್ಣಾಯಸೇ ಕುಂಭೇ ಸೌರಪೀಡಾನಿವಾರಣಂ ॥ ೭ ॥

ಗುಗ್ಗುಲಂ ಹಿಂಗುಲಂ ತಾಲಂ ಶುಭ್ರಾಂ ಚೈವ ಮನಃ ಶಿಲಾಂ ।
ಶೃಂಗೇ ಚ ಮಾಹಿಷೇ ನ್ಯಸ್ತಂ ರಾಹುಪೀಡಾವಿನಾಶನಂ ॥ ೮ ॥

---

೪ ಬೆಳ್ಳಿಯ ಪೂರ್ಣ ಕುಂಭಗಳಲ್ಲಿ ಕಗ್ಗಲಿ, ದೇವದಾರು, ಎಳ್ಳು, ನೆಲ್ಲಿಯ ಪತ್ರಗಳನ್ನು ಬೆರಸಿ ಸ್ನಾನಮಾಡಿಸಿದರೆ ಅಂಗಾರಕ ಗ್ರಹದಿಂದುಂಟಾಗುವ ದೋಷವು ಪರಿಹಾರವಾಗುವುದು.

೫ ಮಣ್ಣಿನಿಂದ ಮಾಡಿದ ಪೂರ್ಣ ಕುಂಭದಲ್ಲಿ ನದೀ ಸಂಗಮದ ನೀರನ್ನೂ ಅದರ ಮೃತ್ತಿಕೆಯನ್ನೂ ಬೆರಸಿ ಆ ತೀರ್ಥದಿಂದ ಬುಧ ಗ್ರಹಕ್ಕೆ ಸ್ನಾನಮಾಡಿಸಿದರ ಬುಧಗ್ರಹದಿಂದ ಪ್ರಾಪ್ತವಾಗುವ ಪೀಡಾಪರಿಹಾರ

೬ ಬೆಳ್ಳಿಯ ಪೂರ್ಣ ಕುಂಭದಲ್ಲಿ ಗೋರೋಚನ, ಕಸ್ತೂರೀ, ಶತಪುಷ್ಪಾ, ಶತಾವರೀ ಪತ್ರಗಳನ್ನು ಬೆರಸಿ ಸ್ನಾನಮಾಡಿಸಿದರೆ ಶುಕ್ರನಿಂದ ಸಂಭವಿಸುವ ಪೀಡೆಯು ಪರಿಹಾರವಾಗುವುದು

೭ ಕಬ್ಬಿಣದ ಚಂಬಿನಲ್ಲಿ ಎಳ್ಳು, ಉದ್ದು, ಪ್ರಿಯಂಗು, ಗಂಧದ ಪತ್ರೆಗಳನ್ನು ಬೆರೆಸಿ ಸ್ನಾನಮಾಡಿಸಿದರೆ ಶನೈಶ್ಚರಗ್ರಹದಿಂದುಂಟಾಗುವ ಪೀಡೆಯು ನಿವಾರಣವಾಗುವುದು

೮ ಎಮ್ಮೆಯ ಕೊಂಬಿನಿಂದ ಮಾಡಿದ ಕುಂಭದಲ್ಲಿ ಗುಗ್ಗುಲ, ಹಿಂಗುಲ, ತಾಳಿ, ಮನಶ್ಶಿಲಾ ಪತ್ರಗಳನ್ನು ಬೆರಸಿ ಸ್ನಾನ ಮಾಡಿಸಿದರೆ ರಾಹುವಿನಿಂದಾದ ಪೀಡೆಯು ಪರಿಹಾರವಾಗುವುದು

ವರಾಹನಿರ್ಹೃತಾಂ ರಾಜನ್ಪರ್ವತಾಗ್ರಮೃಗಂ ತಥಾ ।
ಛಾಗಂ ಕ್ಷೀರಂ ಶಂಗಪಾತ್ರೇ ಕೇತುಪೀಡಾವಿನಾಶನಂ ॥ ೯ ॥

ಗ್ರಹಸ್ನಾನಮಿದಂ ಪ್ರೋಕ್ತಮೃಕ್ಷಸ್ನಾನಮತಃ ಶೃಣು ।
ಯೇನ ಸಮ್ಯಕ್ಪ್ರಯುಕ್ತೇನ ಮುಚ್ಯತೇ ಕಿಲ್ಬಿಷಾನ್ನರಃ ॥ ೧೦ ॥

ವಟಾಶ್ವತ್ಥಶಿರೀಷಾಣಾಂ ಪತ್ರಾಣಿ ತು ಶಿಲೈಸ್ಸಹ ।
ಸರ್ವಗಂಧೋಪಪನ್ನಾನಿ ಕೃತ್ತಿಕಾಸು ವಿಧೀಯತೇ ॥ ೧೧ ॥

ಸರ್ವಬೀಜೋದಕಸ್ನಾನಂ ರೋಹಿಣೀಷು ಪ್ರಶಸ್ಯತೇ ।
ಸರ್ವರತ್ನೋದಕಸ್ನಾನಂ ಮೃಗಶೀರ್ಷೇ ವಿಧೀಯತೇ ॥ ೧೨ ॥

ವಚಾ ಚ ಗಂಧಾ ಕಾಂತಾಭಿಃ ಸ್ನಾನಂ ರೌದ್ರೇ ಪ್ರಕೀರ್ತಿತಂ ।
ಗೋಷ್ಠಮೃದ್ಗೋಮಯಸ್ನಾನಮಾದಿತ್ಯೇ ಪಾಪನಾಶನಂ ॥ ೧೩ ॥

ಸರ್ವೌಷಧ್ಯಃ ಪಂಚಗವ್ಯಂ ತಥಾ ಗೌರಾಶ್ಚ ಶಾಲಯಃ ।
ಸಿದ್ಧಾರ್ಥಕಾಸ್ಸರ್ವಗಂಧಾಸ್ತಿಷ್ಯಸ್ನಾನೇ ಶುಭಪ್ರದಾಃ ॥ ೧೪ ॥

---

೯. ಕತ್ತಿಯಲ್ಲಿ ಮಾಡಿದ ಪಾತ್ರೆಯಲ್ಲಿ ಹಂದಿಯ ಮುಸುಡಿಯಿಂದೆತ್ತಿದ ಮಣ್ಣು, ಬೆಟ್ಟದ ಮೇಲಿರುವ ಮಣ್ಣು, ಆಡಿನ ಹಾಲನ್ನು ಬೆರಸಿ ಸ್ನಾನಮಾಡಿಸಿದರೆ ಕೇತುವಿನಿಂದ ಆದ ಪೀಡೆಯು ಪರಿಹಾರವಾಗುತ್ತದೆ

೧೦ ಇದುವರಿಗೆ ಗ್ರಹಸ್ನಾನ ವಿಚಾರವನ್ನು ಹೇಳಿಯಾಯಿತು ಇನ್ನು ಮುಂದ ನಕ್ಷತ್ರಸ್ನಾನ ವಿಚಾರವನ್ನು ತಿಳಿಸುತ್ತೇನೆ, ಕೇಳು ಮುಂದೆ ಹೇಳುವ ಕ್ರಮದಂತೆ ಯಾರು ನಕ್ಷತ್ರ ಸ್ನಾನವನ್ನು ಮಾಡಿಸುವರೋ ಅಂತಹ ಮನುಷ್ಯರು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ

೧೧ ಆಲ, ಅರಳ, ಶಿರೀಷಪತ್ರೆ, ಎಳ್ಳುಗಳಿಗೆ ಸಕಲ ಗಂಧಗಳನ್ನೂ ಬೆರಸಿ ಆ ಉದಕದಿಂದ ಕೃತ್ತಿಕಾ ನಕ್ಷತ್ರಕ್ಕೆ ಸ್ನಾನಮಾಡಿಸಬೇಕು

೧೨-೧೯ ರೋಹಿಣೀ ನಕ್ಷತ್ರಕ್ಕೆ ಸರ್ವಬೀಜೋದಕದಿಂದ ಸ್ನಾನವು ಮೃಗಶಿರೆಗೆ ಸರ್ವರತ್ನೋದಕಸ್ನಾನ ಆರ್ದ್ರಾ ನಕ್ಷತ್ರಕ್ಕೆ ಬಜೇ ಗಂಧವನ್ನು ಬೆರಸಿ ಹೆಂಗಸರಿಂದ ಗಂಧೋದಕ ಮತ್ತು ಬಿಳಿಸಾಸುವೆ ಸ್ನಾನವಂ ಮಾಡಿಸಬೇಕು. ಪುನರ್ವಸು ನಕ್ಷತ್ರಕ್ಕೆ ಹಸುವಿನ ಗೊಂತಿನ ಮಣ್ಣು ಹಸುವಿನ ಸಗಣಿ ಇವುಗಳಿಂದ

ವಲ್ಮೀಕಾಗ್ರಮೃದಾ ಸ್ನಾನಂ ತಥಾ ಸಾರ್ಪೇ ಶುಭಪ್ರದಂ ।
ಸತಿಲಂ ದೇವನಿರ್ಮಾಲ್ಯಂ ಸ್ನಾನಂ ಶಸ್ತಂ ಮಘಾಸು ಚ ॥ ೧೫ ॥

ಫಲ್ಗುನೀಷು ಚ ಪೂರ್ವಾಸು ಶಾಡ್ವಲಂ ಲವಣಂ ಸ್ಮೃತಂ ।
ಉತ್ತರಾಸು ತಥಾ ಸ್ನಾನಂ ಶಿಂಬಿಮುಸ್ತಾಪ್ರಿಯಂಗುಭಿಃ ॥ ೧೬ ॥

ಹಸ್ತೇ ಸ್ನಾನಂ ಪ್ರಶಂಸಂತಿ ಪರ್ವತಾಗ್ರಸರೋಮೃದಾ ।
ಚಿತ್ರಾಸು ದೇವನಿರ್ಮಾಲ್ಯಂ ಸ್ವಾತೌ ಪುಷ್ಪೈರ್ಜಲೋದ್ಭವೈಃ ॥ ೧೭ ॥

ವಿಶಾಖಾಸು ಪ್ರಶಂಸಂತಿ ರೌದ್ರಚಂದನಪದ್ಮಕೈಃ ।
ನದೀಕೂಲದ್ವಯಾನ್ಮೃದ್ಭಿರ್ಮೈತ್ರೇ ಸ್ನಾನಂ ಪ್ರಕೀರ್ತಿತಂ ॥ ೧೮ ॥

ಜ್ಯೇಷ್ಠೋದಕೇನ ಜ್ಯೇಷ್ಠಾಸು ಸುವರ್ಣಸಹಿತಂ ಹಿತಂ ।
ಸರ್ವಮೂಲಜಲೈಃ ಸ್ನಾನಮಾಪ್ಯೇ ಮುಕ್ತಾಫಲೋದಕೈಃ ॥ ೧೯ ॥

---

ಬೆರದ ನೀರಿನಿಂದ ಸ್ನಾನಮಾಡಿಸಿದರೆ ಪಾಪನಾಶವಾಗುವುದು ಪುಷ್ಯ ನಕ್ಷತ್ರಕ್ಕೆ ಸಕಲ ಔಷಧರಸಗಳು, ಪಂಚಗವ್ಯ, ಬಿಳೀಭತ್ತ, ಸಕಲ ತೀರ್ಥ, ಸಿದ್ಧಾರ್ಥಕ (ಬಿಳಿಸಾಸುವೆ) ಗಳನ್ನು ನೀರಿಗೆ ಬೆರಸಿ ಸ್ನಾನಮಾಡಿಸಿದರೆ ಶುಭವುಂಟಾಗುವುದು. ಆಶ್ಲೇಷಾ ನಕ್ಷತ್ರಕ್ಕೆ ಹುತ್ತದ ಮಣ್ಣನ್ನು ಶುದ್ಧೋದಕಕ್ಕೆ ಬೆರಸಿ ಸ್ನಾನಮಾಡಿಸಿದರೆ ಶುಭಪ್ರದವು ಮಘಾ ನಕ್ಷತ್ರಕ್ಕೆ ದೇವರ ನಿರ್ಮಾಲ್ಯ ಎಳ್ಳುಗಳಿಂದ ಬೆರೆದ ನೀರಿನಿಂದ ಸ್ನಾನಮಾಡಿಸಿದರೆ ಒಳ್ಳೇದಾಗುವುದು. ಪೂರ್ವಫಲ್ಗುನಿ (ಪುಬ್ಬ) ನಕ್ಷತ್ರಕ್ಕೆ ಹುಲ್ಲುಗಾವಲಿನ ಹುಲ್ಲು, ಉಪ್ಪುಗಳನ್ನು ನೀರಿಗೆ ಬೆರಸಿ ಸ್ನಾನಮಾಡಿಸಬೇಕು. ಉತ್ತರ ಫಲ್ಗುನಿ (ಉತ್ತರ) ನಕ್ಷತ್ರಕ್ಕೆ ಶಿಂಬಿ, ಮುಸ್ತಕ (ಅಗರು), ನವಣೆಗಳಿಂದ ಬೆರದ ನೀರಿನ ಸ್ನಾನವು ಶುಭಕರವು ಹಸ್ತನಕ್ಷತ್ರಕ್ಕೆ ಬೆಟ್ಟದ ತುದಿಯ ಮಣ್ಣನ್ನು ತಂದು ನೀರಿನಲ್ಲಿ ಬೆರೆಸಿ ಸ್ನಾನಮಾಡಿಸಿದರೆ ಶುಭಪ್ರದವು. ಚಿತ್ತಾನಕ್ಷತ್ರಕ್ಕೆ ದೇವರ ನಿರ್ಮಾಲ್ಯವನ್ನು ಬೆರೆಸಿದ ನೀರಿನ ಸ್ನಾನ, ಸ್ವಾತೀ ನಕ್ಷತ್ರಕ್ಕೆ ನೀರಿನಲ್ಲಿ ಹುಟ್ಟುವ ಹೂಗಳನ್ನು ನೀರಿಗೆ ಬೆರಸಿ ಅದರಿಂದ ಸ್ನಾನ ಮಾಡಿಸಬೇಕು. ವಿಶಾಖೆಗೆ ಗಂಧ ಪದ್ಮೋದಕಗಳಿಂದ ಸ್ನಾನ ಅನೂರಾಧೆಗೆ ನದಿಯ ಎರಡು ದಡದಲ್ಲಿರುವ ಮಣ್ಣನ್ನೂ ತಂದು ನೀರಿಗೆ ಬೆರಸಿ ಅದರಿಂದ ಸ್ನಾನ ಮಾಡಿಸಬೇಕು ಜ್ಯೇಷ್ಠಾ ನಕ್ಷತ್ರಕ್ಕೆ ಸುವರ್ಣೋದಕ ಸ್ನಾನವೂ ಮತ್ತು ಮೂಲ, ಪೂರ್ವಾಷಾಢ ನಕ್ಷತ್ರಗಳಿಗೆ ಮುತ್ತಿನ ಮಣಿಗಳ ನೀರಿನಿಂದ ಸ್ನಾನವೂ ಪ್ರಶಸ್ತವಾದುದು

ವೈಶ್ವದೇವೇ ಪ್ರಶಂಸಂತಿ ಪದ್ಮಕೋಶೀರಚಂದನೈಃ ।
ಸರ್ವೌಷಧ್ಯೈಶ್ಚಾಭಿಜಿತಿ ಶ್ರವಣೇ ಸಂಗಮೋದಕೈಃ ॥ ೨೦ ॥
ನದೀವಾಪೀಜಲಯುಕ್ತೈರ್ವಾರುಣೇ ತು ಪ್ರಶಸ್ಯತೇ ।
ಆಜೇ ಶ್ರೀವಾಸಕಂ ಸ್ನಾನಂ ಕಾಂತಾ ಪುರುಹಿತಂ ಹಿತಂ ॥ ೨೧ ॥
ಆಹಿರ್ಬುಧ್ನ್ಯೇ ತಥಾ ಸ್ನಾನಂ ಪದ್ಮಕೋಶೀರಚಂದನೈಃ ।
ಕುಂಕುಮಾಗರುಕರ್ಪೂರೈಃ ಸಹಿತಂ ಪಾಪನಾಶನಂ ।
ದರ್ಭೈರ್ಮೂಲಯುಕ್ತೈಃ ಪೌಷ್ಣೇ ಹರಿದ್ರಾದ್ವಯಚಂದನೈಃ ॥ ೨೨ ॥

ನಾಗಾಶ್ವಗಂಧಾ ಮದವಂತಿಕಾ ಚ
ಕ್ಷೌದ್ರಾನ್ವಿತಾ ಚಾಶ್ವಿನಕೇ ಪ್ರದಿಷ್ಟಾ ।
ಸುರಾಹ್ವಕಾಷ್ಠಂ ರಜನೀದ್ವಯಂ ಚ
ಸ್ನಾನಂ ವಚಾಭಿಃ ಸಹಿತಂ ಚ ಯಾಮ್ಯಂ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಗ್ರಹನಕ್ಷತ್ರಸ್ನಾನವಿಧಿವರ್ಣನಂ ನಾಮ ಏಕನವತಿತಮೋಽಧ್ಯಾಯಃ

---

೨೦-೨೩ ಉತ್ತರಾಷಾಢಾ ನಕ್ಷತ್ರಕ್ಕೆ ಕಮಲದ ದಂಟಿನ ನೀರುಬೆರಸಿ ಸ್ನಾನ ಮಾಡಿಸಬೇಕು ಶ್ರವಣ ನಕ್ಷತ್ರಕ್ಕೆ ಸರ್ವೌಷಧಿಗಳನ್ನು ಬೆರಸಿ ನದೀ ಸಂಗಮೋದಕದಿಂದ ಸ್ನಾನ ಮಾಡಿಸಬೇಕು ಧನಿಷ್ಠಾ ನಕ್ಷತ್ರಕ್ಕೆ ನದಿ ಮತ್ತು ಭಾವಿಯ ನೀರುಗಳಿಂದ ಸ್ನಾನ ಮಾಡಿಸಬೇಕು ಶತಭಿಷೆ, ಪೂರ್ವಾಭಾದ್ರೆಗಳಿಗೆ ತಾವರೆ ದಂಟು, ಗಂಧಗಳಿಂದ ಬೆರೆದ ನೀರಿನ ಸ್ನಾನ ಉತ್ತರಾಭಾದ್ರಪದಕ್ಕೆ ಕೇಸರಿ ಪಚ್ಚಕರ್ಪೂರಗಳಂ ಬೆರೆಸಿದ ಜಲದಿಂದ ಸ್ನಾನ ರೇವತೀ ನಕ್ಷತ್ರಕ್ಕೆ ಹರಿದ್ರಾಕುಂಕುಮಗಳಂ ಬೆರೆಸಿದ ದರ್ಭೋದಕ ಜಲದಿಂದ ಸ್ನಾನ ಅಶ್ವಿನೀ ನಕ್ಷತ್ರಕ್ಕೆ ಹಿರೀಮದ್ದನ್ನು ಬೆರೆಸಿದ ನೀರಿನ ಸ್ನಾನವೂ, ಭರಣಿಗೆ ದೇವದಾರು ಚಕ್ಕೆಯಂ ಬಜೆಯ ಗಂಧದಿಂ ಬೆರಿಸಿದ ನೀರಿನ ಸ್ನಾನವೂ ಶುಭಪ್ರದಗಳೆಂದರಿಯಬೇಕು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಗ್ರಹನಕ್ಷತ್ರ ಸ್ನಾನವಿಧಿಯೆಂಬ ಹೆಸರಿನ ತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.

ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ದ್ವಿನವತಿತಮೋಽಧ್ಯಾಯಃ

---

॥ ವಜ್ರ ಉವಾಚ ॥

ಪ್ರಾಕ್ತಂತ್ರೋತ್ತರತಂತ್ರೌ ದ್ವೌ ಸರ್ವೇಷಾಮಗ್ನಿಕರ್ಮಣಾಂ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಸರ್ವಧರ್ಮಭೃತಾಂ ವರ ॥ ೧ ॥

॥ ಮಾರ್ಕಂಡೇಯ ಉವಾಚ ॥

ಉದ್ಧೃತ್ಯೋರ್ವೀಮಯೀಂ ಶುದ್ಧೇ ದೇಶೇ ವೇದಿಂ ಚ ಕಾರಯೇತ್ ।
ಪ್ರಾಗುದಕ್ಪ್ರವಣಾಂ ಶುದ್ಧಾಮಾಯಾಮಾತ್ಪದಸಪ್ತಕಂ ॥ ೨ ॥

ಪೂರ್ವಭಾಗೇ ಚ ವಿಜ್ಞೇಯಾ ವಿಸ್ತರಾತ್ಪದಪಂಚಕಂ ।
ಪಶ್ಚಿಮೇ ಚ ತಥಾ ಭಾಗೇ ವಿಸ್ತರಾತ್ಸ್ಯಾಚ್ಚತುಷ್ಟಯಂ ॥ ೩ ॥

---

## ತೊಂಭತ್ತೆರಡನೆಯ ಅಧ್ಯಾಯವು.

೧ ವಜ್ರಮಹಾರಾಜನು ಪ್ರಶ್ನಿಸುತ್ತಾನೆ — ಸಕಲರಿಗೂ ಗ್ರಹಯಜ್ಞದಲ್ಲಿ ಉಕ್ತವಾಗಿರುವ ಪೂರ್ವತಂತ್ರ, ಉತ್ತರ ತಂತ್ರಗಳ ವಿವರವನ್ನು ನಿನ್ನ ಮುಖದಿಂದ ಕೇಳಬೇಕೆಂದು ಅಪೇಕ್ಷಿಸುತ್ತೇನೆ ದಯಮಾಡಿ ತಿಳಿಸೈ! ಮಾರ್ಕಂಡೇಯ ಮುನಿ ರಾಯ

೨ ಮಾರ್ಕಂಡೇಯನು ಹೇಳುತ್ತಾನೆ —ಪರಿಶುದ್ಧವಾದ ಭೂಪ್ರದೇಶದಲ್ಲಿ ಮೊದಲು ಯಜ್ಞವೇದಿ (ಜಗುಲಿ) ಯನ್ನು ಪೂರ್ವಕ್ಕೂ ಉತ್ತರದಿಕ್ಕಿಗೂ ಏಳು ಅಡಿ ಯಷ್ಟು ಇರುವ ಪ್ರದೇಶವನ್ನು ಸಿದ್ಧಪಡಿಸಿಕೊಳ್ಳಬೇಕು

೩ ಯಜ್ಞಕುಂಡದ ಪ್ರದೇಶವು ಪೂರ್ವಭಾಗದಿಂದ ಮೂರು ಅಡಿ ಅಗಲ ವಿಸ್ತಾರವಾಗಿರಬೇಕು ಪಶ್ಚಿಮಭಾಗಕ್ಕೆ ನಾಲ್ಕಡಿ ಉದ್ದವಾಗಿರಬೇಕು

ಆಗಾರದೇಶೇ ಚ ತಥಾ ವಿಸ್ತೃತಾ ಸಾ ಪದತ್ರಯಂ ।
ಪೂರ್ವಭಾಗಾದತಿಕ್ರಮ್ಯ ಪಶ್ಚಾತ್ಪದಚತುಷ್ಟಯಂ ॥ ४ ॥

ಯಾಮ್ಯೇನೋತ್ತರತಶ್ಚೈವ ವಿಜ್ಞೇಯಂ ತು ಪದಂ ಪದಂ ।
ಆಗಾರಾತ್ಪಶ್ಚಿಮೇ ಭಾಗೇ ದೇವೀ ಜ್ಞೇಯಾ ಪದದ್ವಯಂ ॥ ೫ ॥

ವೇದಿಮೇವಂ ವಿಧಾಂ ಕೃತ್ವಾ ಸ್ನಾತ್ವಾಽಚಮ್ಯ ಪ್ರಯತ್ನತಃ ।
ಸೌವರ್ಣಾನ್ರಾಜತಾಂಸ್ತಾಮ್ರಾನಥವಾಪಿ ಮಹೀಮಯಾನ್ ॥ ೬ ॥

ಸೂತ್ರಾರ್ಘ್ಯಮಾಲ್ಯೈರ್ಗಂಧೈಶ್ಚ ಸಫಲೈಃ ಪಲ್ಲವೈರ್ಯುತಾನ್ ।
ಪೂರ್ಣೋದಕುಂಭಾಂಶ್ಚತುರೋ ವಿದಿಕ್ಷು ಸುದೃಢಂ ನ್ಯಸೇತ್ ॥ ೭ ॥

ವೇದ್ಯಾಮುಲ್ಲಿಖನಂ ಕಾರ್ಯಮ್ಮೈಂದ್ರೀಭಿರ್ನೃಪಸತ್ತಮ ।
ಉದುಂಬರಸ್ಯ ಶಾಖಾಭಿಃ ಪ್ರಾಗಗ್ರಾಭಿಃ ಸಮಂತತಃ ॥ ೮ ॥

ಶುಷ್ಕೇಂಧನಸಮೃದ್ಧಸ್ತು ತತಃ ಕಾರ್ಯೋ ಹುತಾಶನಃ ।
ನ ಧಮೇತ್ತಾಲವೃಂತೇನ ನ ಶೂರ್ಪೇಣ ನ ವಾಸಸಾ ॥ ೯ ॥

---

४ ಯಜ್ಞಕುಂಡದ ಪೂರ್ವಭಾಗದಲ್ಲಿ ಐದಡಿ ವಿಸ್ತಾರವೂ, ಪಶ್ಚಿಮಭಾಗದಲ್ಲಿ ನಾಲ್ಕಡಿ ವಿಸ್ತಾರವೂ ಉಳ್ಳ ಪ್ರದೇಶವು ಬಿಡುವಾಗಿರಬೇಕು

೫. ಹೋಮಸ್ಥಳದ ಪಶ್ಚಿಮದಿಕ್ಕಿನಲ್ಲಿ ಎರಡಡಿ ವಿಸ್ತಾರವಾದ ಜಗುಲಿ ಇರಬೇಕು ದಕ್ಷಿಣೋತ್ತರವಾಗಿ ಒಂದು ಹೆಜ್ಜೆ ಅಗಲವಿರಬೇಕು

೬-೭. ಈರೀತಿ ಯಜ್ಞವೇದಿಕೆಯನ್ನು ಸಿದ್ಧಪಡಿಸಿಕೊಂಡು ಸ್ನಾನಮಾಡಿ ಆಚಮನೀಯ ಮಾಡಿದ ಬಳಿಕ ನಾಲ್ಕು ಕಲಶಗಳನ್ನು ನಾಲ್ಕು ದಿಕ್ಕುಗಳಲ್ಲಿ ಇರಿಸಬೇಕು ಆ ಕಲಶಗಳು ಚಿನ್ನ, ಬೆಳ್ಳಿ, ತಾಮ್ರ, ಮಣ್ಣಿನವುಗಳಾಗಿರಬೇಕು ಆ ಕಲಶಗಳಿಗೆ ನೀರು ತುಂಬಿ, ಮೇಲೆ ದಾರ, ಹೂವುಗಳಿಂದ ಅಲಂಕರಣ ಮಾಡಿರಬೇಕು ಆ ಪೂರ್ಣ ಕುಂಭಗಳಿಗೆ ಚಿಗುರು ಹಾಕಿ ಆ ಕಲಶದ ಮೇಲೆ ಫಲವನ್ನಿಡಬೇಕು.

೮ ಆ ಬಳಿಕ ವೇದಿಯ ಪೂರ್ವಭಾಗದಿಂದಾರಂಭಿಸಿ ಪೂರ್ವಾಗ್ರಗಳಾದ ಅತ್ತೀ ಸಮಿತ್ತುಗಳಿಂದ ಎಲ್ಲಾ ಕಡೆಗಳನ್ನೂ ಉಲ್ಲೇಖನ (ಗೆರೆ) ಮಾಡಬೇಕು

೯. ಒಣಗಿದ ಚಕ್ಕೆಗಳನ್ನು ಯಥೇಚ್ಛವಾಗಿಟ್ಟುಕೊಂಡು, ಯಜ್ಞೇಶ್ವರನನ್ನು

**ಮುಖೇನೋಪಧಮೇದಗ್ನಿಂ ಮುಖಾದಗ್ನಿರಜಾಯತ ।**
**ಪರಿಸಮೂಹ್ಯ ಪರ್ಯುಕ್ಷ್ಯ ಪರಿಷಿಚ್ಯ ಪರಿಸ್ತರೇತ್ ॥ ೧೦ ॥**

**ಹುತಾಶನಂ ಬೋಧಯಿತ್ವಾ ಭೂಯಶ್ಚಾವಾಹಯೇದ್ಬುಧಃ ।**
**ವಕ್ಷ್ಯಾಮಿ ಬೋಧನೇ ಮಂತ್ರಂ ತಥಾ ಚಾವಾಹನೇ ನೃಪ ॥ ೧೧ ॥**

**ಉದ್ಬುಧ್ಯಾಗ್ನೇ ಬೋಧಯಂತಿ ದೇವತಾಸ್ತಾಸ್ಸವಾಸವಾಃ ।**
**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ್ಕಂದೋ ವೈಶ್ರವಣೋ ಯಮಃ ॥ ೧೨ ॥**

**ವರುಣೋ ವಾಯುರಾಕಾಶಂ ಚಂದ್ರಾದಿತ್ಯೌ ಪ್ರಭಾಕರೌ ।**
**ಋಷಯಶ್ಚ ಮಹಾಭಾಗಾಸ್ತ್ರೈಲೋಕ್ಯಾಮಲದರ್ಶನಾಃ ॥ ೧೩ ॥**

**ವೇದಾಶ್ಚ ವೇದಮಾತಾ ಚ ಸಾವಿತ್ರೀ ಪಾಪನಾಶಿನೀ ।**
**ಓಷಧ್ಯೋಥ ವಷಟ್ಕಾರೋ ಮಂತ್ರಾಶ್ಚ ವಿವಿಧಾಸ್ತಥಾ ॥ ೧೪ ॥**

---

ಪ್ರತಿಷ್ಠೆಮಾಡಿ ಅಲ್ಲಿ ಚಕ್ಕೆಗಳನ್ನು ತುಂಬಿ ಹತ್ತಿಸಬೇಕು ಅಗ್ನಿಯನ್ನು ಬೀಸಣಿಗೆಯಿಂದಾಗಲಿ, ಮೊರದಿಂದಲಾಗಲಿ, ಬಟ್ಟೆಯಿಂದಾಗಲಿ ಬೀಸಿ ಹತ್ತಿಸಬಾರದು

೧೦ ಬಾಯಿಯಿಂದ ಊದಿಯೇ (ಧಮನಿಯ ಮೂಲಕ) ಯಜ್ಞೇಶ್ವರನನ್ನು ಜ್ವಲನ ಮಾಡಬೇಕು " ಮುಖಾದಿಂದ್ರಶ್ಚಾಗ್ನಿಶ್ಚ " ಎಂದು ವೇದದಲ್ಲಿ ಹೇಳಿರುವುದರಿಂದ ಮುಖದಿಂದಲೇ ಅಗ್ನಿಯನ್ನು । ಹತ್ತಿಸಬೇಕು ಈರೀತಿ ಪ್ರಜ್ವಲಿತಾಗ್ನಿಗೆ ಪರಿಸಮೂಹನ, ಪರ್ಯುಕ್ಷಣ, ಪರಿಷೇಚನಗಳನ್ನು ಮಾಡಿದ ಬಳಿಕ ದರ್ಭೆಗಳಿಂದ ಪರಿಸ್ತರಣ ಹಾಕಬೇಕು

೧೧ ಎಲೈ ವಜ್ರನರಪತಿಯೇ! ಈರೀತಿ ಆದಮೇಲೆ ಹುತಾಶನನನ್ನು ಚೆನ್ನಾಗಿ ಹತ್ತಿಸಿ, ಪುನಃ ಆವಾಹನೆ ಮಾಡಬೇಕು ಬೋಧನ ಆವಾಹನಗಳ ಮಂತ್ರಗಳನ್ನು ಹೇಳುತ್ತೇನೆ, ಕೇಳು

೧೨-೧೫ ಉದ್ಬುಧ್ಯಾಗ್ನೇ ಎಂಬ ಆವಾಹನ ಮಂತ್ರವನ್ನು ಹೇಳಿದೊಡನೆ ಇಂದ್ರಾದಿ ದೇವತೆಗಳೂ, ಬ್ರಹ್ಮ ವಿಷ್ಣು ಮಹೇಶ್ವರರೂ, ಕುಮಾರಸ್ವಾಮಿ, ಕುಬೇರ, ಯಮ, ವರುಣ, ವಾಯು, ಆಕಾಶ, ಚಂದ್ರ, ಸೂರ್ಯರೂ, ಮಹಾನುಭಾವರಾದ ಋಷಿಗಳೂ, ವೇದಗಳೂ, ವೇದಮಾತೆಯಾದ ಸಾವಿತ್ರೀದೇವಿ, ಓಷಧಿಗಳು, ವಷ

ಕಾಲಸ್ಯಾವಯವಾಸ್ಸರ್ವೇ ದಿಶಶ್ಚ ವಿದಿಶಸ್ತಥಾ ।
ಉದ್ಬುದ್ಧ್ಯ ಯಜಮಾನಸ್ಯ ಸರ್ವಾನ್ಕಾಮಾನ್ಪ್ರಯಚ್ಛ ವೈ ॥ ೧೫ ॥

( ಓಂ ) ಆವಾಹಯಾಮ್ಯಹಂ ದೇವಂ ದೇವದೇವಂ ಹುತಾಶನಂ ।
ಜಗತೋಽಸ್ಯ ಸಮುತ್ಪತ್ತಿಸ್ಥಿತಿಸಂಹಾರಕಾರಕಂ ॥ ೧೬ ॥

ವೇದಮೂರ್ತಿಂ ತದಾಧಾರಂ ಸರ್ವದೇವಮುಖಂ ವಿಭುಂ ।
ಪಿಂಗೇಕ್ಷಣಂ ಪಿಂಗಜಟಂ ಧೂಮಕೇತುಂ ವಿಭಾವಸುಂ ॥ ೧೭ ॥

ಶುಕಯಾನಗಮಂ ದೇವಂಸರ್ವಾಭರಣಭೂಷಿತಂ ।
ಸರ್ವಗಂ ವರದಂ ಭಾನುಂ ಜಠರಸ್ಥಂ ಚ ದೇಹಿನಾಂ ॥ ೧೮ ॥

ತೇಜೋಮೂರ್ತಿಂ ದುರಾಧರ್ಷಂ ಸಪ್ತಜಿಹ್ವಂ ಮಹಾಬಲಂ ।
ಸಪ್ತಾರ್ಚಿಷಂ ಸಪ್ತಶಿಖಂ ಚ ಸಮಿತ್ಸಪ್ತಕಮುಚ್ಯತಂ । ॥ ೧೯ ॥

ವಿಷ್ಣೋರಂಶಮನಿರ್ದೇಶ್ಯಂ ಭಾವನಂ ಜಾತವೇದಸಂ ।
ಪಾವನಂ ಪುಷ್ಟಿದಂ ಸೌಮ್ಯಂ ಭಕ್ತಾನಾಂ ಭೂತಿವರ್ಧನಂ ॥ ೨೦ ॥

---

ಟ್ಕಾರವೂ, ವಿವಿಧ ಮಂತ್ರಗಳೂ, ಕಾಲಾವಯವಗಳೂ, ದಿಗ್ವಿದಿಕ್ಕುಗಳೂ ತಮ್ಮ ತಮ್ಮ ಸ್ಥಳಗಳಿಂದ ಎದ್ದು ಯಾಗಸ್ಥಳಕ್ಕೆ ಬರುತ್ತಾರೆ

ಈ ಮಂತ್ರದ ಅರ್ಥವೇನೆಂದರೆ -- ಎಲೈ ದೇವತೆಗಳಿರಾ ! ನೀವೆಲ್ಲರೂ ಈ ಯಜ್ಞಕ್ಕೆ ದಯಮಾಡಿಸಿ ಈ ಯಜಮಾನನ ಸಮಸ್ತ ಕೋರಿಕೆಗಳನ್ನೂ ನೆರವೇರಿಸಿರಿ.

ಆವಾಹನ ಮಂತ್ರಗಳನ್ನು ಇದರ ಕೆಳಗೆ ಬರೆದಿದೆ —(೧೬-೨೨)

೧೬-೨೨ ಈ ಮಂತ್ರಾರ್ಥವೆಲ್ಲವೂ ಯಜ್ಞೇಶ್ವರನ ಸ್ತೋತ್ರರೂಪವಾದುದು. ಎಲೈ ಹುತಾಶನನೇ ! ನಿನ್ನನ್ನು ಈಗ ಈ ಯಜ್ಞವೇದಿಯಲ್ಲಿ ಆವಾಹನೆ ಮಾಡುತ್ತೇನೆ ನೀನು ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳೆಲ್ಲಕ್ಕೂ ಕಾರಣನು ನೀನೇ ವೇದಸ್ವರೂಪನು ವೇದಗಳಿಗೆ ಆಧಾರನೂ ನೀನೇ ಸಕಲ ದೇವತೆಗಳಿಗೂ ಮುಖದಂತಿರುವವನು ನೀನು, ನೀನೇ ಪ್ರಭುವು ನೀನು ಹೊಂಬಣ್ಣದ ಕೂದಲುಗಳಿಂದಲೂ, ಹೊಂಬಣ್ಣದ ಕಣ್ಣುಗಳಿಂದಲೂ ಕೂಡಿರುತ್ತೀಯೆ ನಿನ್ನ ವಾಹನವು ಗಿಣಿ. ನೀನು ಸರ್ವಾಭರಣ ಭೂಷಿತನಾಗಿ ನಿನ್ನ ವಾಹನದ ಮೇಲೆ ಸಂಚರಿಸುತ್ತೀಯೆ ನೀನು ಸಕಲ ದೇಹಿಗಳ ಜಠರ (ಹೊಟ್ಟೆ) ದಲ್ಲೂ ಇದ್ದು ಪ್ರಾಣಿಗಳು ತಿಂದ ಆಹಾರವನ್ನು ಪಂಚಪ್ರಾಣಗಳ ಸಹಾಯದಿಂದ ಜೀರ್ಣಮಾಡಿಸುತ್ತಾ ಇದ್ದೀಯೆ ನೀನು

**ತದ್ದತ್ತಮಾಹುತಿಗಣಂ ಸಂಪ್ರತೀಚ್ಛ ಜಗದ್ಗುರೋ ।**
**ತೇನಭಾವಯ ದೇವೇಶ ಯಥಾಹ್ವಂ ದೇವತಾಗಣಾನ್ ॥ ೨೧ ॥**

**ಯಾಜಕಂ ಯಜಮಾನಂ ಚ ಪುಷ್ಟಂ ವಿಭಜ ಸರ್ವಶಃ ।**
**ಇದಮರ್ಘ್ಯಮಿದಂ ಪಾದ್ಯಂ ಧೂಪಂ ದೀಪಂ ಪ್ರಗೃಹ್ಯತಾಂ ॥ ೨೨ ॥**

**ಏವಮಾವಾಹನಂ ಕೃತ್ವಾ ಪಾದ್ಯಾರ್ಘ್ಯಂ ವಿನಿವೇದಯೇತ್ ।**
**ವೇದ್ಯಾಮೇವ ನ ತೌ ದೇಯೌ ವಹ್ನೌ ಯದುಕುಲೋದ್ವಹ ॥ ೨೩ ॥**

**ಗಂಧಪುಷ್ಪಾದಿಕಂ ದೇಯಂ ಸಕಲಂ ಜಾತವೇದಸಿ ।**
**ಧೂಪಂ ದೀಪಂ ಸನ್ನೈವೇದ್ಯಂ ವೇದ್ಯಾಮೇವ ನಿವೇದಯೇತ್ ॥ ೨೪ ॥**

**ತತಸ್ತು ಪ್ರಸ್ತರೇದ್ವೇದಿಮುಕ್ಷತಾಗ್ರೈಃ ಕುಶೈರ್ದ್ವಿಜ ।**
**ಉಪಮೂಲಾದಧೋಲೂನೈಃ ಪ್ರಾಗಗ್ರೈಃ ಪ್ರಯತಃ ಶುಚಿಃ ॥ ೨೫ ॥**

**ಪೂರ್ವೇಚ ಪ್ರಾಗ್ದಕ್ಷಿಣತಃ ಪಶ್ಚಾಚ್ಚೈವಾಪಸವ್ಯತಃ ।**
**ಉತ್ತರೇಣ ತತಃ ಕುರ್ಯಾತ್ಪ್ರಸ್ತರಸ್ಯ ಸಮಾಪನಂ ॥ ೨೬ ॥**

---

ತೇಜೋಮೂರ್ತಿ ನಿನಗೆ ನಾಲಿಗೆಗಳೇಳು ನೀನು ಸಪ್ತಾರ್ಚಿಯು ವಿಷ್ಣುವಿನ ಅಂಶವೇ ನೀನು ಪಾವನನೂ, ಸೌಮ್ಯನೂ, ಐಶ್ವರ್ಯಪ್ರದನೂ ನೀನೇ ನಿನ್ನಲ್ಲಿ ಸಮರ್ಪಿಸಿದ ಆಹುತಿಗಳನ್ನು ಯಾವ ಯಾವ ದೇವತೆಗಳಿಗೆ ಒಪ್ಪಿಸಬೇಕೋ ಅದನ್ನು ನೀನು ಬಲ್ಲೆ ಯಜಮಾನನೂ, ಪುರೋಹಿತನೂ ಸೇರಿ ನಿನ್ನಲ್ಲಿ ಹೋಮಮಾಡಿದ ಆಹುತಿಗಳನ್ನು ವಿಭಾಗಮಾಡಿ ಅವರವರಿಗೆ ತಲಪಿಸಿ ಯಾಜಕನನ್ನೂ ಯಜಮಾನನನ್ನೂ ಕಾಪಾಡು ಇದೋ ಈ ಅರ್ಘ್ಯ ನಿನಗೆ ಈ ಪಾದ್ಯ ನಿನಗೆ ಧೂಪ ದೀಪಗಳೂ ನಿನಗೇ ಅರ್ಪಿತವಾಗಿವೆ ಸ್ವೀಕರಿಸು ! ಮಹಾನುಭಾವ !!

೨೩ ಹಿಂದಿನ ಮಂತ್ರಗಳಲ್ಲಿ ಹೇಳಿದಂತೆ ಆವಾಹನೆ ಮಾಡಿ ಪಾದ್ಯವನ್ನೂ ಅರ್ಘ್ಯವನ್ನೂ ಸಮರ್ಪಿಸಬೇಕು ಈ ಅರ್ಘ್ಯ ಪಾದ್ಯಗಳನ್ನು ವೇದಿಕೆಯಮೇಲೆ ಮಾತ್ರ ಕೊಡಬೇಕೇ ವಿನಹ ಯಜ್ಞೇಶ್ವರನಲ್ಲಿ ಹಾಕಿಬಿಡಬಾರದು

೨೪. ಗಂಧ, ಹೂವುಗಳನ್ನು ಯಜ್ಞೇಶ್ವರನಿಗೆ ಕೊಡಬೇಕು ಧೂಪ, ದೀಪ, ನೈವೇದ್ಯಗಳನ್ನೆಲ್ಲಾ ವೇದಿಕೆಯ ಮೇಲೆಯೇ ವಿನಹ ಯಜ್ಞೇಶ್ವರನಲ್ಲಿ ಹಾಕಿಬಿಡಬಾರದು

೨೫-೨೯ ಇನ್ನು ಪರಿಸ್ತರಣ ಹಾಕುವ ಕ್ರಮವನ್ನು ಹೇಳಲಾಗುವುದು —

ಮೂಲಚ್ಛಿನ್ನಂ ತು ದಾತವ್ಯಂ ಪ್ರಸ್ತರೇ ಭೂಭೃತಾಂ ವರ ।
ಓಷಧ್ಯಃ ಫಲವಂತ್ಯಶ್ಚ ಪರ್ವವತ್ಯಸ್ತಥೈವ ಚ ॥ ೨೭ ॥

ದರ್ಭಾಭಾವೇ ಪ್ರಶಂಸಂತಿ ತಿಸ್ರಸ್ತತ್ರ ಚ ವರ್ಜಯೇತ್ ।
ರಾಜಸೀರವರೂಕಂ ಚ ಪರಿಬಾಧಮಥೋತ್ಕಟಂ ॥ ೨೮ ॥

ವಿಷ್ಣುರ್ಮನಸಾ ಪೂತೇ ಸ್ತೋ ಮಂತ್ರೇಣಾನೇನ ಸುವ್ರತ ।
ಪಾರ್ಥಂ ಪವಿತ್ರಮುತ್ಸೃಜ್ಯ ತಾಭ್ಯಾಂ ಚ ತದನಂತರಂ ॥ ೨೯ ॥

ದೇವೋವ ಇತ್ಯಥೈತೇನ ಉತ್ಪೂಯಮುದಕಂ ಶುಚಿ ।
ಸ್ರುಕ್ಸ್ರುವಾವಥ ಪಾಲಾಶೌ ಶಮೀನ್ಯಗ್ರೋಧಸಂಭವೌ ॥ ೩೦ ॥

ಉದುಂಬರಮಯೌ ತಾಮ್ರೌ ರೂಪ್ಯರುಕ್ಮಮಯೌ ತಥಾ ।
ಆಜ್ಯಸ್ಥಾಲೀ ಚ ಕರ್ತವ್ಯಾ ತೈಜಸದ್ರವ್ಯಸಂಭವಾ ॥ ೩೧ ॥

---

ಮೊನೆ ಸರಿಯಾಗಿರುವ ದರ್ಭಗಳನ್ನು ತೆಗೆದುಕೊಂಡು ಕೆಳಗಿನಿಂದ ಮೇಲೆ ಬರುವಂತೆ ಪೂರ್ವಾಗ್ರವಾಗಿಯೂ, ತನ್ನ ಬಲದಿಂದ ಎಡಕ್ಕೆ ಬರುವಂತೆ ಉತ್ತರಾಗ್ರವಾಗಿಯೂ ಈ ರೀತಿ ನಾಲ್ಕು ದಿಕ್ಕುಗಳಲ್ಲಿಯೂ ಪರಿಸ್ತರಣವನ್ನು ಹಾಕಬೇಕು ದರ್ಭೆ ಸಿಕ್ಕದೆ ಹೋದರೆ ಸರ್ವಕಾಲದಲ್ಲಿ ಫಲ ಬಿಡುವಂತಹ ಔಷಧಿಗಳ ಹುಲ್ಲನ್ನು ಉಪಯೋಗಿಸ ಬೇಕು ರಾಜಸೀರ, ವರೂಕ, ಪರಿಣಾಧವೆಂಬ ಮತ್ತು ಉತ್ಕಟವೆಂಬ ಧಾನ್ಯಗಳ ಹುಲ್ಲನ್ನು ಉಪಯೋಗಿಸಕೂಡದು ಬಳಿಕ ಉತ್ಪೂತಾರ್ಥವಾಗಿ ಮೊದಲೇ ಪಾತ್ರೆ ಗಳಲ್ಲಿಟ್ಟಿರುವ ಪರಿಶುದ್ಧ ಜಲವನ್ನೂ, ಪವಿತ್ರಕ್ಕಾಗಿ ಇರುವ ದರ್ಭೆಗಳನ್ನೂ ಬಿಟ್ಟು ಬೇರೆ ಎರಡು ದರ್ಭೆಗಳಿಂದ ಈ ಕೆಳಗಿನ ಎರಡು ಮಂತ್ರಗಳಿಂದ ಉತ್ಪವನ ಮಾಡ ಬೇಕು (ಪರ್ಯುಕ್ಷಣ-ಪರಿಸ್ತರಣ-ಅಭ್ಯುಕ್ಷಣ-ಉತ್ಪವನ ಎಂಬ ಹೆಸರುಗಳು ಸ್ಮಾರ್ತ ಕರ್ಮದಲ್ಲಿ ಬರುವುವು ಇವುಗಳನ್ನು ಆಯಾ ಕರ್ಮಗಳನ್ನು ನೋಡಿ ಆ ಕಾಲದಲ್ಲಿ ಅನುಭವದಿಂದ ತಿಳಿಯಬೇಕೇ ಹೊರತು ಇತರರು ಇದನ್ನು ತಿಳಿಯಲಾರರು ಮತ್ತು ಕರ್ಮಭ್ರಷ್ಟರಿಗೆ ಈ ವಿಷಯಗಳೊಂದೂ ತಿಳಿಯುವುದಿಲ್ಲವಾದುದರಿಂದ ಇದು ಸಂಸ್ಕಾ ರಿಗಳ ಮಾತಾಗಿದೆ. ಉತ್ಪವನದ ಎರಡು ಮಂತ್ರಗಳು — ೧. ವಿಷ್ಣುರ್ಮನಸಾ ಪೂತೇ ೨. ಸವಿತುಸ್ತ್ವಾಪುಸುವ ಉತ್ಪುನಾಮ್ಯಚ್ಛಿದ್ರೇಣ ಪವಿತ್ರೇಣ

೩೦-೩೩. ಉದಕವನ್ನು ಉತ್ಪವನ ಮಾಡಿದ ಬಳಿಕ ಸುಕ್‌ಸ್ರುವ (ಹೋಮ ಮಾಡುವ ದರ್ವಿ ಅಥವಾ ಮುತ್ತುಗದೆಲೆ ಮುಂತಾದ್ದು) ಗಳನ್ನು ಸಿದ್ಧಪಡಿಸಿಕೊಳ್ಳ

**ಮಾಹೇಯೀ ವಾಪಿ ಭೂಪಾಲ ನಿತ್ಯಂ ಸರ್ವಾಗ್ನಿಕರ್ಮಸು ।**
**ಹಸ್ತಮಾತ್ರಃ ಸ್ರುವಃ ಕಾರ್ಯೋ ಸ್ರುವಬಾಹುಸಮಂ ತಥಾ ॥ ೩೨ ॥**

**ಅಂಗುಷ್ಠಮಧ್ಯಪ್ರತಿಮಂ ಹೋಮಸ್ಥಾನಂ ಸ್ರುವಸ್ಯ ತು ।**
**ಆಜ್ಯಸ್ಥಾಲ್ಯಾಃ ಪ್ರಮಾಣಂತು ಯಥಾಕಾಮಂತು ಕಾರಯೇತ್ ॥ ೩೩ ॥**

**ಗ್ರಾಮಂ ಪೃಶ್ನಾಪಯೋಸೀತಿ ಮಂತ್ರೇಣಾಜ್ಯಂ ನರಾಧಿಪ ।**
**ಆಜ್ಯಸ್ಥಾಲ್ಯಾಃ ಪಯೋತ್ಪೂತಂ ಪಂಚಾನಾಮಿತಿ ಪಂಚಕಂ ॥ ೩೪ ॥**

**ಪರನ್ಗೃಹ್ಣೀತ ರಾಜೇಂದ್ರ ಅರ್ಜೇತ್ಯಗ್ನಾವಧಿಶ್ರಯೇತ್ ।**
**ಆಜ್ಯಸ್ಯಾಥ ಪವಿತ್ರೇಣ ಕಾರ್ಯಮುತ್ಪ್ಲವನಂ ದ್ವಿಜ ॥ ೩೫ ॥**

**ಅಗ್ನಿರ್ಜಿಹ್ವೇತಿ ಸತತಂ ಹವಿಸ್ಸ್ಯುತ್ಪವನಾಂತರಂ ।**
**ಅಕ್ಷೀಣಂ ತು ನ ಕರ್ತವ್ಯಂ ಸತತಂ ಪಾರ್ಥಿವೋತ್ತಮ ॥ ೩೬ ॥**

---

ಬೇಕು  ಇದು ಮುತ್ತುಗ, ಬನ್ನಿ, ಆಲ, ಅತ್ತಿ ಎಲೆಗಳದ್ದಾದರೂ ಆಗಬಹುದು ಅಥವಾ ತಾಮ್ರ, ಚಿನ್ನ, ಬೆಳ್ಳಿಗಳ ಸೌಟಾದರೂ ಆದೀತು. ಆ ಮೇಲೆ ಆಜ್ಯ (ಹೋಮದ ತುಪ್ಪ) ಪಾತ್ರವನ್ನು ತನ್ನ ಮುಂದೆ ಇಟ್ಟುಕೊಳ್ಳಬೇಕು. ಇದು ಪಾದ ರಸ ಅಥವಾ ಮಣ್ಣಿನಿಂದ ಮಾಡಿದ್ದಾಗಿರಬೇಕು  ಸ್ರುವದ ಅಳತೆ ಅಂಗೈಯಗಲ ಇರಬೇಕು. ಒಂದು ತೋಳಿನ ಉದ್ದ ಸೌಟಾದರೂ ಸರಿಯೇ ! ಸ್ರುವದ ಹೋಮ ಸ್ಥಾನವು ಅಂಗುಷ್ಠ ಮಧ್ಯಗಳ ಬೆರಳು ಅಳತೆಯುಳ್ಳಿರಬೇಕು  ಆಜ್ಯಸ್ಥಾಲಿಯನ್ನು ಅವರವರ ಇಷ್ಟಾನುಸಾರವಾಗಿ ಸಣ್ಣದಾಗಲೀ ದೊಡ್ಡದಾಗಲೀ ಇಟ್ಟುಕೊಳ್ಳಬಹುದು

. ೩೪-೩೭  ಹಿಂದೆ ಉದಕವನ್ನು ಉತ್ಪವನ ಮಾಡಿದಂತೆಯೇ ಆಜ್ಯಸ್ಥಾಲಿ ಯಲ್ಲಿರುವ ತುಪ್ಪವನ್ನೂ ಗ್ರಾಮಂಪೃಶ್ನಾಸಯೋಸಿ ಎಂಬ ಮಂತ್ರದಿಂದ ಬೇರೆ ಎರಡು ದರ್ಭೆಗಳಿಂದ ಉತ್ಪೂತಮಾಡಿ ಬಳಿಕ ಆ ದರ್ಭೆಗಳನ್ನು ಆರ್ಜ ಎಂಬ ಮಂತ್ರದಿಂದ ಅಗ್ನಿಯಲ್ಲಿ ಅಧಿಶ್ರವಣ ಮಾಡಬೇಕು  ಅನಂತರ ಪವಿತ್ರದಿಂದ ಆಜ್ಯೋತ್ಪವನ ಮಾಡಬೇಕು  ಬಳಿಕ ಹೋಮಾರ್ಥವಾಗಿ ಸಿದ್ಧಪಡಿಸಲ್ಪಟ್ಟಿರುವ ಹೋಮ ದ್ರವ್ಯ ವನ್ನು ಅಗ್ನಿರ್ಜಿಹ್ವಾ ಎಂಬ ಮಂತ್ರದಿಂದ ಉತ್ಪವನ (ಪರಿಶುದ್ಧ) ಮಾಡಬೇಕು. ಹವಿಸ್ಸನ್ನು ಕಡಿಮೆ ಮಾಡಕೂಡದು  ಬಳಿಕ ಸ್ರುಕ್ ಸ್ರುವಗಳನ್ನು ಸಂಸ್ಕರಿಸಿ ಪ್ರತ್ಯುಷ್ಟಂ, ಆಯುಃ ಎಂಬ ಮಂತ್ರಗಳಿಂದ ದರ್ಭಾಗ್ರಗಳಿಂದ ಸಮ್ಮಾರ್ಜನ ಮಾಡ ಬೇಕು

**ಶುಭಾಭ್ಯಾಂ ಸ್ರುಕ್ಸ್ರುವೌ ರಾಜನ್ಸ್ರುತ್ಯುಷ್ಟಮಿತಿ ಭಾವಯ ।**
**ಪವಿತ್ರಸ್ಯಾಗ್ರದರ್ಭೇಣ ಆಯುರಿತ್ಯೇವ ಮಾನದ ॥ ೩೭ ॥**

**ಪ್ರತಿಮಾರ್ಷ್ಟಿ ಸ್ರುವಂ ಪಶ್ಚಾಚ್ಚಕ್ಷುರಿತ್ಯೇವ ಪಾರ್ಥಿವ ।**
**ಪ್ರತಿಮಾರ್ಷ್ಟಿ ಸ್ರುವಂ ತಾಂಶ್ಚ ದರ್ಭಾನ್ವಹ್ನಾವಥೋತ್ಸೃಜೇತ್ ॥ ೩೮ ॥**

**ದರ್ಭೋತ್ಸರ್ಗೇ ಪಠೇನ್ಮಂತ್ರಮಿಮಂ ಪಾರ್ಥಿವಸತ್ತಮ ।**
**ದಿವಿ ಶಿಲ್ಪಮವತತಂ ಪೃಥಿವ್ಯಾಃ ಕಕ್ಷಿಭಿಃ ಶ್ರಿತಂ ॥ ೩೯ ॥**

**ತೇನ ಸಹಸ್ರಕಾಂಡೇನ ದ್ವಿಷಂತಂ ತಾಪಯಾಮಸಿ ।**
**ದ್ವಿಷಂತಸ್ತಪ್ಯತಾಂ ಚೋಕ್ತ್ವಾ ಕ್ಷಿಪೇದ್ದರ್ಭಾನ್ಹುತಾಶನೇ ॥ ೪೦ ॥**

**ಇಧ್ಮದ್ವಯಂ ತತೋ ದೇಯಂ ಯಾಜ್ಞೀಯದ್ರುಮಸಂಭವಂ ।**
**ಪಲಾಶಃ ಖದಿರೋ ಬಿಲ್ವಃ ಶಮ್ಯಶ್ವತ್ಥವಟಾಸ್ತಥಾ ॥ ೪೧ ॥**

---

೩೮-೩೯ ಹೀಗೆ ಮಾರ್ಜನೆ ಮಾಡಿದ ಬಳಿಕ ಸ್ರುಕ್‌ಸ್ರುವಗಳಂ ಶುದ್ಧಿ (ಪ್ರತಿಮಾರ್ಷ್ಟಿ) ಮಾಡಿದ ದರ್ಭೆಗಳನ್ನು ಅಗ್ನಿಯಲ್ಲಿ ಹಾಕುವ ಕಾಲದಲ್ಲಿ ಹೇಳಬೇಕಾದ ಮಂತ್ರವನ್ನು ಇಲ್ಲಿ ತಿಳಿಸುತ್ತೇವೆ ಪ್ರತಿಮಾರ್ಷ್ಟಿ ಶಬ್ದಕ್ಕೆ ಮಾರ್ಜನೆ (ಪ್ರೋಕ್ಷಣೆ) ಎಂದು ಹೆಸರು

೩೯-೪೦ ಮೇಲಿನ ಮಂತ್ರಾರ್ಥವೇನೆಂದರೆ — ನನ್ನನ್ನು ಅಕಾರಣವಾಗಿ ದೇವಲೋಕದಲ್ಲಾಗಲೀ ಭೂಲೋಕದಲ್ಲಾಗಲೀ ಯಾರು ದ್ವೇಷಮಾಡಿ ಹಿಂಸೆ ಕೊಡುವರೋ ಅಂತಹವರು ಈ ದರ್ಭೆ ಸುಟ್ಟುಹೋದಂತೆ ಬೆಂಕಿಯಲ್ಲಿ ಬಿದ್ದು ಸಾಯಲಿ ಈ ಮಂತ್ರದಿಂದ ಸಮ್ಮಾರ್ಜಿತ ಕುಶಗಳನ್ನು ಅಗ್ನಿಯಲ್ಲಿ ಹೋಮಮಾಡಿಬಿಡಬೇಕು.

೪೧-೪೨ ಬಳಿಕ ಯಾಜ್ಞೀಯ (ಹೋಮ ಮಾಡಲು ಯೋಗ್ಯವಾದ ಸಮಿತ್ತುಗಳನ್ನು ಕೊಡುವ) ವೃಕ್ಷಸಂಬಂಧವಾದ ಇಧ್ಮದ್ವಯ (ಎರಡು ಸಮಿತ್ತು) ಗಳನ್ನು ಯಜ್ಞೇಶ್ವರನೋಳ್ ಸಮಂತ್ರಕ (ಶಾಖಾ ಪ್ರಯೋಗದಲ್ಲಿ ಹೇಳಿದ ಮಂತ್ರ) ವಾಗಿ ಹೋಮ ಮಾಡಬೇಕು ಯಾಜ್ಞೀಯ ವೃಕ್ಷಗಳು ಹನ್ನೆರಡು ಅವುಗಳಾವುವೆಂದರೆ — ೧ ಮುತ್ತುಗ, ೨ ಕಗ್ಗಲಿ, ೩ ಬಿಲ್ವ, ೪ ಬನ್ನಿ, ೫ ಅರಳಿ, ೬ ಆಲ, ೭ ಅತ್ತಿ, ೮ ಉತ್ತರಣಿ, ೯ ಕಲ್ಲುಹತ್ತಿ, ೧೦ ಅಡಕೆ, ೧೧ ಗಂಧ, ೧೨ ದೇವದಾರು

[ಇಲ್ಲಿ ೧೦ನೇ ಕ್ರಮುಕ ಶಬ್ದಕ್ಕೆ ಅಡಕೆಯೆಂದು ಅರ್ಥ ಬರೆದಿದೇನೆ ಅಡಕೆ ಮರದಲ್ಲಿ ಸಮಿತ್ತು ಸಣ್ಣಸಣ್ಣದಾಗಿ ಇರದ ಉಂಡೇ ಮರವನ್ನು ಸೀಳಿ ಸಮಿತ್ತನ್ನು

**ಉದುಂಬರಮಪಾಮಾರ್ಗಃ ಫಲ್ಗುಶ್ಚ ಕ್ರಮುಕಸ್ತಥಾ ।**
**ಚಂದನಂ ದೇವದಾರುಶ್ಚ ದ್ರುಮಾ ದ್ವಾದಶ ಯಾಜ್ಞಿಯಾಃ ॥ ೪೨ ॥**

**ಚತುರ್ಗೃಹೀತಂ ವಿನ್ಯಸ್ಯ ಸ್ರುಚಿ ಪೂರ್ವಂ ವಿಚಕ್ಷಣಃ ।**
**ಇಧ್ಮದ್ವಯೇ ಪ್ರಜ್ವಲಿತೇ ಸೌಮ್ಯಭಾಗೇ ನರಾಧಿಪ ॥ ೪೩ ॥**

**ಪ್ರಜಾನಾಂಪತಯೇ ತ್ವಾದಾವಾಹುತಿಂ ಮನಸಾ ನ್ಯಸೇತ್ ।**
**ಚತುರ್ಗೃಹೀತೇ ಮೂರ್ಧೇತಿ ದೇಯಾ ದಕ್ಷಿಣತೋ ಭವೇತ್ ॥ ೪೪ ॥**

**ಯುಕ್ತಃ ಪರಸ್ತಾದಿತ್ಯಾದಿ ಪಂಚಕಂ ಜುಹುಯಾತ್ತತಃ ।**
**ಸಂತತೀಶ್ಚ ಜಯಾದ್ಯಾಸ್ತಾಸ್ತಥಾ ರಾಷ್ಟ್ರಭೃತೇ ನೃಪ ॥ ೪೫ ॥**

---

ಮಾಡಬೇಕಾಗುತ್ತೆ  ಕ್ರಮುಕವೆಂದರೆ ಕೆಂಪು ಅರಗಿನಗಿಡ, ಹೂವರಿಸೆ ಗಿಡ, ಅಡಕೆ, ಲೋಧ್ರ, ಭದ್ರಮುಸ್ತ, ಹತ್ತಿ, ಅಶ್ವತ್ಥವೆಂದೂ ವಿವರಿಸಿ ಶಬ್ದಾರ್ಥ ಕಲ್ಪದ್ರುಮದಲ್ಲಿ ಈ ಶ್ಲೋಕವನ್ನು ವಿವರಿಸಿದಾರೆ —

ಕ್ರಮುಕಃ ಪಟ್ಟಿಕಾಲೋಧ್ರೇ ಭದ್ರಮುಸ್ತಕಪೂಗಯೋಃ ।
ಫಲೇಕಾರ್ಪಾಸಿಕಾಯಾಷ್ಚ ಕ್ರಮುಕೋ ಬ್ರಹ್ಮದಾರುಣಿ ॥

ಅಮರದಲ್ಲಿ—'ಕ್ರಮುಕಃ ಪಟ್ಟಿಕಾಖ್ಯಃಸ್ಯಾತ್ । ತೂದಸ್ತುಪೂಗಃ ಕ್ರಮುಕಃ ಘೋಂಟಾತು ಪೂಗಃ' ಮುಂತಾಗಿ ಹೇಳಿದಾರೆ  ಇದೇ ರೀತಿ ಮುಂದೆ ಮುಂದೆ ವಿವಿಧ ವೃಕ್ಷಗಳ ಲತೆಗಳ ಹೆಸರು ಪರಂಪರೆಯಾಗಿ ಬರುತ್ತವೆ  ಅವು ವನ್ಯಗಳಾಗಿರುವುದರಿಂದಲೂ, ಕಂಡು ಕೇಳಿ ಅರಿಯದೆ ಇರುವುದರಿಂದಲೂ ಅವುಗಳನ್ನು ಮೂಲದಲ್ಲಿರುವಂತೆ ಅರ್ಥ ಬರೆದು ಬಿಡುತ್ತೇನೆ  ಪ್ರತಿಯೊಂದಕ್ಕೂ ಕೋಶಾನುಸಾರ ಅರ್ಥ ಬರೆಯುತ್ತ ಹೋದರೆ ಬಹಳ ವಿಸ್ತಾರವಾಗುವುದರಿಂದ ಇಲ್ಲಿ ಈ ರೀತಿ ಸೂಚನೆ ಕೊಡಲಾಗಿದೆ ]

೪೩-೪೭  ಆ ಎರಡು ಸಮಿತ್ತುಗಳೂ ಚೆನ್ನಾಗಿ ಹುತವಾದ ಮೇಲೆ (ಉರಿದ) ಆ ಬಳಿಕ ಆಜ್ಯಹೋಮಗಳನ್ನು ಈ ಕೆಳಗೆ ಕಂಡಂತೆ ಮಾಡಬೇಕು  ಸ್ರುಕ್ (ಹೋಮ ಮಾಡುವ ಸೌಟು) ನಲ್ಲಿ ಮೊದಲು ನಾಲ್ಕಾವರ್ತಿ ತುಪ್ಪವನ್ನು ಹಾಕಿಕೊಂಡು ಅಗ್ನಿಯ ಪೂರ್ವಭಾಗದಲ್ಲಿ "ಪ್ರಜಾಪತಯೆ ಸ್ವಾಹಾ" ಎಂದು ಮನಸ್ಸಿನಲ್ಲಿ ಮಾತ್ರ ಹೇಳಿಕೊಂಡು ಹೋಮ ಮಾಡಬೇಕು  ಘಟ್ಟಿಯಾಗಿ ಮಂತ್ರೋಚ್ಚಾರಣೆ ಮಾಡ

ನಾತ್ರ್ರರ್ಘೌ ಚಾಜ್ಯಭಾಗೌ ಚ ದಾತವ್ಯೌ ಪಾರ್ಥಿವೋತ್ತಮ ।
ಅಥೌದುಂಬರಪತ್ರಾಣಾಂ ವೇದೌ ದಕ್ಷಿಣತೋ ನೃಪ ॥ ೪೬ ॥

ಸಂಚಯೇ ಪದ್ಮಪತ್ರಾಣಾಮಥವಾಽಪಿ ಮಹೀಪತೇ ।
ಆವಾಹನಂ ತು ಕರ್ತವ್ಯಂ ದೇವಸ್ಯ ಪರಮೇಷ್ಠಿನಃ ॥ ೪೭ ॥

ಆವಾಹಯಾಮ್ಯಹಂ ದೇವಂ ಬ್ರಹ್ಮಾಣಂ ಪರಮೇಷ್ಠಿನಂ ।
ಜಗತೋಽಸ್ಯ ಸಮುತ್ಪತ್ತಿಸ್ಥಿತಿಸಂಹಾರಕಾರಕಂ ॥ ೪೮ ॥

ಚತುರ್ವೇದಂ ಚತುರ್ವಕ್ತ್ರಂ ಚಾತುರ್ವರ್ಣ್ಯಪ್ರಭುಂ ಪ್ರಭುಂ ।
ಚತುರಾಶ್ರಮಗೋಪ್ತಾರಂ ವರದಂ ಭೂತಭಾವನಂ ॥ ೪೯ ॥

ಪದ್ಮಯೋನಿಂ ಜಗದ್ಯೋನಿಂ ಯಜ್ಞಯೋನಿಂ ಜಗತ್ಪತಿಂ ।
ಆತ್ಮಯೋನಿಮನಾಧೃಷ್ಯಂ ಯಜ್ಞವಾಹಂ ಜಗತ್ಪತಿಂ ॥ ೫೦ ॥

ಯಜ್ಞೇಶಂ ಯಜ್ಞಮೂರ್ತಿಂ ಚ ತ್ರೈಲೋಕ್ಯಸ್ಯೈಕಕಾರಣಂ ।
ಸರ್ವಗಂ ವರದಂ ಸೌಮ್ಯಂ ಪರಮಂ ಪರಮೇಶ್ವರಂ ॥ ೫೧ ॥

---

ಬಾರದು ಆ ಬಳಿಕ ಇನ್ನು ನಾಲ್ಕಾವರ್ತಿ ಸ್ರುಕ್ಕಿಗೆ ತುಪ್ಪವನ್ನು ಸುರಿದುಕೊಂಡು ದಕ್ಷಿಣಭಾಗದಲ್ಲಿ “ ಮೂರ್ಧಾ ” ಎಂಬ ಮಂತ್ರದಿಂದ ಹೋಮ ಮಾಡಬೇಕು. ಅನಂತರ “ ಯುಕ್ತಃ ಪರಸ್ತಾತ್ ” ಎಂಬ ಮಂತ್ರದಿಂದ ನಾಲ್ಕು ಆಜ್ಯಹೋಮ ವನ್ನು ಮಾಡಬೇಕು ಬಳಿಕ ಜಯಾದಿ ಮಂತ್ರ ಸಮೂಹಗಳನ್ನು ಹೇಳಿಕೊಂಡು ಜಯಾದಿ ಹೋಮವನ್ನು ಮಾಡಬೇಕು ಆ ಮೇಲೆ “ ಇಂದ್ರಾಗ್ನಿಭ್ಯಾಂ ಸ್ವಾಹಾ ” ಎಂದು ಇಂದ್ರ ಅಗ್ನಿಗಳಿಗಾಗಿ ಎರಡು ಹೋಮವನ್ನು ಮಾಡಬೇಕು ಇಷ್ಟು ಹೋಮ ಗಳಾದ ಬಳಿಕ ವೇದಿಕೆಯ ದಕ್ಷಿಣ ಭಾಗದಲ್ಲಿಟ್ಟಿರುವ ಅತ್ತಿ ಎಲೆಗಳಲ್ಲಿಯಾಗಲೀ, ಪದ್ಮಪತ್ರಗಳಲ್ಲಿಯಾಗಲೀ ಬ್ರಹ್ಮನನ್ನು ಆವಾಹನೆ ಮಾಡಬೇಕು

೪೮-೫೨. ಬ್ರಹ್ಮನನ್ನು ಆವಾಹನೆ ಮಾಡುವ ಮಂತ್ರ — ಇದರಲ್ಲಿ ಬ್ರಹ್ಮ ನನ್ನು ಅನೇಕ ವಿಶೇಷಣಗಳಿಂದ ಹೊಗಳಿದೆ ಎಲೈ! ದೇವದೇವೋತ್ತಮನಾದ ಬ್ರಹ್ಮನೇ! ದಯವಿಟ್ಟು ಈ ಹೋಮಕಾಲಕ್ಕೆ ದಯಮಾಡಿಸಬೇಕಯ್ಯ! ನೀನು

**ಭೂತಭವ್ಯಭವಂ ನಾಥಂ ಯೋಗಜ್ಞೇಯಂ ಸನಾತನಂ ।**
**ಆಗಚ್ಛ ಭಗವನ್ಬ್ರಹ್ಮನ್ಯಜಮಾನಸ್ಯ ವೃದ್ಧಯೇ　　　　॥ ೫೨ ॥**

**ಇದಮರ್ಘ್ಯಮಿದಂ ಪಾದ್ಯಂ ಧೂಪಂ ಚೇದಂ ಪ್ರಗೃಹ್ಯತಾಂ ।**
**ಬ್ರಹ್ಮಲಿಂಗಾಂಸ್ತತೋ ಮಂತ್ರಾನ್ಜಪೇದ್ಭಕ್ತ್ಯಾ ಸಮಾಹಿತಃ　　　　॥ ೫೩ ॥**

**ಆಪೋಹಿಷ್ಠೇತಿ ಮಂತ್ರೇಣ ಬ್ರಹ್ಮಣೋಽರ್ಘ್ಯಂ ನಿವೇದಯೇತ್ ॥**
**ಶನ್ನೋದೇವೀತಿ ಪಾದ್ಯಂ ಚ ಪ್ರಯತಃ ಸುಸಮಾಹಿತಃ　　　　॥ ೫೪ ॥**

**ಹಿರಣ್ಯಗರ್ಭೇತಿ ತಥಾ ದದ್ಯಾದಾಚಮನಂ ಬುಧ ।**
**ಧ್ರುವಾ ದ್ಯೌರಿತಿ ಮಂತ್ರೇಣ ಹ್ಯಾಸನಂ ವಿನಿವೇದಯೇತ್　　　　॥ ೫೫ ॥**

**ಗಂಧಂ ಪುಷ್ಪಮಲಂಕಾರಂ ವಸ್ತ್ರಂ ಧೂಪಂ ಸದೀಪಕಂ ।**
**ನೈವೇದ್ಯಂ ಚ ತಥಾ ದೇಯಂ ಸಾವಿತ್ರೇಣನರಾಧಿಪ　　　　॥ ೫೬ ॥**

---

ಅಗತ್ಯವಾಗಿ ಬಂದು ಹೋಮಮಾಡುವ ಯಜಮಾನನಿಗೆ ಶುಭಶ್ರೇಯಸ್ಸನ್ನು ಕೊಟ್ಟು ಕಾಪಾಡಯ್ಯ ! ಎಂದು ಮುಖ್ಯ ತಾತ್ಪರ್ಯ

೫೩ ಎಲೈ ಬ್ರಹ್ಮನೇ ! ಇದೋ ಈ ಪಾದ್ಯವನ್ನೂ, ಈಗ ನಾನು ಕೊಡುವ ಅರ್ಘ್ಯವನ್ನೂ, ಈ ಧೂಪವನ್ನೂ ಪ್ರತಿಗ್ರಹಿಸಿ ಕಾಪಾಡಯ್ಯ ! ಎಂದು ಹೇಳಿ ಬ್ರಹ್ಮ ಲಿಂಗದ ಮಂತ್ರಗಳನ್ನು ಭಕ್ತಿಯಿಂದಲೂ ಶಾಂತಿಯಿಂದಲೂ ಜಪಮಾಡಬೇಕು

೫೪-೫೬ ಅರ್ಘ್ಯಮಂತ್ರ — ಆಪೋಹಿಷ್ಠಾ ಮಯೋಭುವಃ ಮಾತರಃ ಪಾದ್ಯಮಂತ್ರ ,— ಶನ್ನೋದೇವೀರಭಿಷ್ಟಯೆ ಸ್ರವಂತುನಃ ಆಚಮನಕ್ಕೆ ,— ಹಿರಣ್ಯಗರ್ಭಃ ಹವಿಷಾವಿಧೇಯ ಆಸನಕ್ಕೆ,—ಧ್ರುವಾದ್ಯೌ ಧ್ರುವಾಪೃಥಿವೀ ಪಿನಾಮುಯಂ

ಹೀಗೆ ಅನೇಕ ಮಂತ್ರಗಳು ಬರುವುದರಿಂದ ಪೂರ್ಣ ಮಂತ್ರಗಳನ್ನು ಗ್ರಂಥವು ಬಹುವಿಸ್ತಾರವಾದೀತೆಂಬ ಭೀತಿಯಿಂದ ಬರೆಯದೇ ಆದ್ಯಂತವನ್ನು ಮಾತ್ರ ಸೂಚಿಸಿದೇವೆ ಪುರೋಹಿತರು ಹವನ ಸಮಯದಲ್ಲಿ ಮಂತ್ರಗಳನ್ನು ಸಂಪೂರ್ಣವಾಗಿ ಪಠಿಸಿ ಕರ್ಮಲೋಪವಿಲ್ಲದಂತೆ ಮಾಡಿಸಬೇಕು

ಗಂಧ, ಹೂವು, ಅಲಂಕಾರ, ವಸ್ತ್ರ, ಧೂಪ, ದೀಪ, ನೈವೇದ್ಯ, ತಾಂಬೂಲ ಸಮರ್ಪಣೆಗಳನ್ನು ಸವಿತೃದೇವತಾಕ ಮಂತ್ರದಿಂದ (ಪುರುಷಸೂಕ್ತೋಕ್ತ ಮಂತ್ರಗಳಿಂದಾಗಲೀ) ನೆರವೇರಿಸಬೇಕು

**ಪ್ರಾಕ್‌ತಂತ್ರಮೇತದುಕ್ತಂ ತೇ ಮಯಾ ಸರ್ವಾಗ್ನಿಕರ್ಮಸು ।**
**ಪ್ರಾಕ್ತಂತ್ರೇ ತು ಕೃತೇ ಕಾರ್ಯಂ ಹೋಮಮಂತ್ರಮಯಾಸಕಂ ॥ ೫೭ ॥**

**ಏವಂ ಕಾರ್ಯಂ ಮಹೀನಾಥ ಸರ್ವೇಷ್ವೇವಾಗ್ನಿಕರ್ಮಸು ॥ ೫೮ ॥**

**ಹೋಮಸ್ಯ ವಿಹಿತಸ್ಯಾಂತೇ ತಂತ್ರಂ ಕಾರ್ಯಮಥೋತ್ತರಂ ।**
**ಮಹಾಕಲ್ಪಸ್ಯ ಕಲ್ಪಸ್ಯ ತಥಾ ಮನ್ವಂತರಸ್ಯ ಚ ॥ ೫೯ ॥**

**ಯುಗಸ್ಯಾಥ ಸಮಾಯಾಶ್ಚಾಯನಸ್ಯ ಹಿ ತಥೈವಚ ।**
**ಋತೋರ್ಮಾಸಸ್ಯ ಪಕ್ಷಸ್ಯ ಗ್ರಹನಕ್ಷತ್ರಯೋಸ್ತಥಾ ॥ ೬೦ ॥**

**ತಿಥೇಶ್ಚ ಕರಣಸ್ಯಾಥ ಮುಹೂರ್ತಸ್ಯ ಚ ಪಾರ್ಥಿವ ।**
**ವರ್ತಮಾನಸ್ಯ ಸರ್ವಸ್ಯ ದೇಯಸ್ಯಾಧಿಪತಿರ್ಭವೇತ್ ॥ ೬೧ ॥**

---

೫೭-೫೮ ಅಯ್ಯಾ ! ವಜ್ರಮಹೀಪಾಲಕ ! ಇದುವರಿಗೆ ನಾನು ಅಗ್ನಿಹೋಮ ಗಳಲ್ಲಿ ನಡೆಸಬೇಕಾದ ಪೂರ್ವತಂತ್ರಗಳನ್ನು ನಿನಗೆ ತಿಳಿಸಿರುತ್ತೇವೆ ಈ ರೀತಿ ಪ್ರಾಕ್ತಂ ತ್ರಗಳು ಮುಗಿದ ಮೇಲೆ ಕರ್ಮಾಂಗವಾಗಿ ಅನ್ವಾಧಾನದಲ್ಲಿ (ಹೋಮಕ್ಕೆ ಮೊದಲು) ಸಂಕಲ್ಪಿಸಿದ ದೇವತಾ ವೃಂದಗಳ ಮಂತ್ರವನ್ನು ಹೇಳಿ ಹೋಮವನ್ನು ಮುಗಿಸ ಬೇಕು ಹೋಮಗಳು ಮುಗಿದ ಮೇಲೆ ಉತ್ತರ ತಂತ್ರಗಳಾಗಬೇಕು ಅದಕ್ಕೆ ಮೊದಲು ಅಯಾಸಕ ಮಂತ್ರ (ಅಯಾಶ್ಚಾಗ್ನೇಃ ಮುಂತಾದ ಮಂತ್ರ) ಗಳ ಹೋಮ ವನ್ನು ಮಾಡಬೇಕು ಸಕಲ ಅಗ್ನಿ ಮುಖಗಳಲ್ಲಿಯೂ ಇದೇ ಕ್ರಮವೆಂದು ತಿಳಿದು ಕೊಳ್ಳಯ್ಯಾ ! ರಾಜಾಧಿರಾಜ !!

೫೯-೬೧ ಮೇಲೆ ವಿವರಿಸಿದಂತೆ ವಿಹಿತ ಹೋಮಗಳೆಲ್ಲವೂ ಪೂರ್ತಿಯಾದ ಬಳಿಕ ಉತ್ತರ ತಂತ್ರವನ್ನು ಮಾಡಬೇಕು ಮಹಾಕಲ್ಪ, ಕಲ್ಪ, ಮನ್ವಂತರ, ಯುಗ ಸಂವತ್ಸರ, ಅಯನ, ಋತು, ಮಾಸ, ಪಕ್ಷ, ವಾರ, (ಗ್ರಹ), ನಕ್ಷತ್ರಗಳಿಗೂ, ತಿಥಿ, ಕರಣ, ಮುಹೂರ್ತ, ವರ್ತಮಾನ (ಈಗ ನಡೆಯುತ್ತಿರುವ ಕಾಲ) ಕಾಲಗಳೆಲ್ಲಕ್ಕೂ, ಮತ್ತು ಇನ್ನಾರಾರಿಗೆ ಆಹುತಿಗಳನ್ನು ಕೊಡಬೇಕೋ ಅಂತಹ ದೇವಾದಿದೇವತೆಗಳಿಗೂ ಕೂಡ ಹೋಮ (ಆಜ್ಯತಂತ್ರ) ವನ್ನು ಮಾಡಬೇಕು ಬಳಿಕ, ಇಹಗಾವಃ-ಆಯುಂ ಯಜ್ಞಃ-ಆನಃಪ್ರಜಾಃ-ಧೂರ್ತಿಂಚೈಪೋಷ ಧೂರ್ತಿಂಚ-ಇಹಾಭಾಗಂ- ಈ ಮಂತ್ರಗ ಳನ್ನು ಹೇಳಿ ಹೋಮದ್ರವ್ಯವನ್ನು ನಾಲ್ಕು ನಾಲ್ಕುಬಾರಿ ತೆಗೆದುಕೊಂಡು ಸ್ರುವದಲ್ಲಿ

ಇಹ ಗಾವ ಅಯಂ ಯಜ್ಞ ಆನಃ ಪ್ರಜಾಸ್ತಥೈವ ಚ ।
ಧೂರ್ತಿಂ ಚೈಪೋಪಧೂರ್ತಿಂ ಚ ಇಹಾಭಾಗಂ ತಥೈವ ಚ　　॥ ೬೨ ॥

ದೇಯಂ ಚತುರ್ಗೃಹೀತೇನ ಹೋಮದ್ರವ್ಯೇಣ ಪಾರ್ಥಿವ ।
ತ್ವನ್ನೋಅಗ್ನೇ ವರುಣಸ್ಯ ಸತ್ವಂನೋ ಅಗ್ನ ಏವ ಚ　　॥ ೬೩ ॥

ಅಯಾಶ್ಚಾಗ್ನೇಸ್ತಥೈವೇತಿ ತಥಾ ವ್ಯಾಹೃತಯೋ ನೃಪ ।
ತ್ವನ್ನೋಅಗ್ನೇತಿ ಚ ತತೋ ಹೋತವ್ಯಮೃಕ್ತ್ರಯಂ ಪುನಃ　　॥ ೬೪ ॥

ನ್ಯೂನಂ ತತೇತಿ ರಿಕ್ತೇತಿ ನ್ಯೂನೇ ಚೈವಾತಿರಿಕ್ತಕಂ ।
ಸಮಂ ಸಮೇ ತಥಾ ಹುತ್ವಾ ಹೋತವ್ಯಮೃಕ್ತ್ರಯಂ ತತಃ　　॥ ೬೫ ॥

---

ಟ್ಟುಕೊಂಡು ಹೋಮ ಮಾಡಬೇಕು (ಇವೆಲ್ಲವೂ ಅಗ್ನಿ ಭಾಗಾಹುತಿಗಳೆಂದು ತಿಳಿದಿರಬೇಕು --

೧. ತ್ವನ್ನೋ ಅಗ್ನೆ ವರುಣಸ್ಯ ವಿದ್ವಾನ್— ಪ್ರಮುಮುಗ್ಧ್ಯಸ್ಮತ್ ಸ್ವಾಹಾ
೨. ಸತ್ವನ್ನೋಅಗ್ನೇವಮೋಭವೋತೀ — ಸುಹವೋನಏಧಿಸ್ವಾಹಾ
೩. ಅಯಾಶ್ಚಾಗ್ನೇ—ಯಾನೋಧೇಹಿಭೇಷಜಂ ಸ್ವಾಹಾ

ಈ ಮೂರು ಮಂತ್ರಗಳಿಂದ ಹೋಮಮಾಡಿದ ಬಳಿಕ ಸಪ್ತವ್ಯಾಹೃತಿ ಹೋಮಗಳನ್ನು ಮಾಡಬೇಕು (ಪುರುಷಸಮ್ಮಿತೋ-ಯಜ್ಞಃ-ಅತೋದೇವಾ ಅವಂತು-ಇದಂ ವಿಷ್ಣುರ್ವಿಚಕ್ರಮೆ-ಭೂಃಭುವಃ-ಸ್ವಃ-ಭೂರ್ಭುವಸ್ವಃ—ಈ ಏಳು ಮಂತ್ರಗಳಿಗೆ ವ್ಯಾಹೃತಿಗಳೆಂದು ಹೆಸರು ) ಪುನಃ ತ್ವನ್ನೋ ಅಗ್ನೆ ಆರಂಭಿಸಿ ಮೇಲೆ ಹೇಳಿದ ಮೂರು ಋಕ್ಕುಗಳಿಂದ ಹೋಮಮಾಡಬೇಕು.

ಟಿಪ್ಪಣಿ --ಪೂರ್ವತಂತ್ರವನ್ನು ಆಪಸ್ತಂಭ, ಬೋಧಾಯನ ಮಹರ್ಷಿಗಳ ಮತದಂತೆಯೂ ಉತ್ತರ ತಂತ್ರವನ್ನು ಮಾತ್ರ ಮೇಲೆ ಕಂಡ ಋಷಿದ್ವಯಗಳ ಜತೆಗೆ ಆಶ್ವಲಾಯನಾಚಾರ್ಯರ ಮತವನ್ನೂ ಸೇರಿಸಿಕೊಂಡು ಇಲ್ಲಿ ಈ ಪ್ರಯೋಗವನ್ನು ಬರದಿರುವಂತೆ ಖಚಿತವಾಗಿ ಗೊತ್ತಾಗುವುದು ಅಂದರೆ ಋಗ್ವೇದದ ಮಂತ್ರಗಳೂ, ಯಜುರ್ವೇದದ ಮಂತ್ರಗಳೂ ಸಹ ಈ ಪ್ರಯೋಗದಲ್ಲಿ ಹೇಳಲ್ಪಟ್ಟಿರುತ್ತವೆ.

೬೫-೬೮ ಯಜ್ಞ ಮಾಡುವಾಗ ಸಂಭವಿಸಿದ ನ್ಯೂನಾತಿರೇಕ ದೋಷಗಳ ಪರಿಹಾರಾರ್ಥವಾಗಿ ಮೂರು ಋಕ್ಕುಗಳಿಂದ ಹೋಮ ಮಾಡಬೇಕು

ಅನಾಜ್ಞಾತಂ ಯದಾಜ್ಞಾತಂ ಸ್ವಿಷ್ಟಿಶ್ಚಾಪ್ಯಥ ಪಾರ್ಥಿವ ।
ಮನೋಜ್ಯೋತಿಸ್ತಥೈವಾತ್ರ ತ್ರಯಸ್ತ್ರಿಂಶತ್ತಥೈವ ಚ ॥ ೬೬ ॥

ಯನ್ಮೇ ಚ ಮನಸಾ ಚ್ಛಿದ್ರಂ ವಿಶ್ವಕರ್ಮಾ ತಥೈವ ಚ ।
ಅಯಾಶ್ಚಾಗ್ನೇಸ್ತಥಾ ರಾಜನ್ತ್ವನ್ನೋ ಅಗ್ನೇ ತಥೈವ ಚ
ಸತ್ವನ್ನೋ ಅಗ್ನೇ ಇತ್ಯೇವಂ ಹುತ್ವಾ ಪಾರ್ಥಿವಸತ್ತಮ ॥ ೬೭ ॥

ಆಶ್ರಾವಿತೇತಿ ಮಂತ್ರೇಣ ದೇಯಾ ಪೂರ್ಣಾಹುತಿರ್ಭವೇತ್ ॥ ೬೮ ॥

ಇಷ್ಟೋ ಹಿ ಯಜ್ಞೋ ಭೃಗುಭಿರ್ಮಂತ್ರೇಣಾನೇನ ಪಾರ್ಥಿವ ।
ಆಜ್ಯಸ್ಥಾಲೀಂ ಸ್ರುಕ್ಸ್ರುವೌ ಚ ದರ್ಭೈಸ್ತು ಪರಿಮಾರ್ಜಯೇತ್ ॥ ೬೯ ॥

ತಾಂಶ್ಚ ದರ್ಭಾನ್ ಕ್ಷಿಪೇದ್ವಹ್ನೌ ಪ್ರಯತಃ ಸುಸಮಾಹಿತಃ ।
ಪೂರ್ಣಮಿತ್ಯೇವ ಚ ಸ್ರುವಾ ಕಾರ್ಯಂ ಸಂವೀಕ್ಷಣಂ ತತಃ ॥ ೭೦ ॥

---

೧. ಅನಾಜ್ಞಾತಂ ಯದಾಜ್ಞಾತಂ ತ್ವಂಹಿವೇತ್ಥಯಥಾತಥಂಸ್ವಾಹಾ.
೨. ಮನೋಜ್ಯೋತಿರ್ಜುಷತಾ ಇಹಮಾದಯಂತಾಂ ಸ್ವಾಹಾ.
೩. ಯನ್ಮೇಚಮನಸಾ ಸ್ವಾಹಾ.

ಈ ಮೂರು ಹೋಮಗಳಾದ ಮೇಲೆ ಮೂವತ್ತಮೂರು ಹೋಮಗಳನ್ನು ಮಾಡಬೇಕೆಂದು ಹೇಳಿದಾರೆ (ಇದೂ ಪ್ರಾಚೀನಾಚಾರ್ಯರೊಬ್ಬರ ಮತ) — ವಿಶ್ವಕರ್ಮಾವಿಮನಾ ವಿಕೃತಾನಿರೂಪಶಃ, ಈ ಮಂತ್ರದಿಂದೊಂದು ಹೋಮವಾದ ಮೇಲೆ —

೧. ಅಯಾಶ್ಚಾಗ್ನೇ ಧೇಹಿಭೇಷಜಂ ಸ್ವಾಹಾ.
೨. ತ್ವನ್ನೋಅಗ್ನೆವರುಣಸ್ಯ ಪ್ರಮುಮುಗ್ಧ್ಯಸ್ಮತ್.
೩. ಸತ್ವನ್ನೊ ಅಗ್ನೇವಮೊಭವೋತಿ ಸುಹವೋನ ಏಧಿ.

ಎಂಬ ಮೂರು ಮಂತ್ರಗಳಿಂದ ಮೂರು ಹೋಮವನ್ನು ಮಾಡಿ ಇಷ್ಟೆಲ್ಲಾ ಆದ ಮೇಲೆ ಆಶ್ರಾವಿತವೆಂಬ ಮಂತ್ರದಿಂದ ಪೂರ್ಣಾಹುತಿಯನ್ನು ಕೊಡಬೇಕು.

೬೯-೭೦. "ಇಷ್ಟೋಹಿಯಜ್ಞೋಭೃಗುಭಿಃ" ಎಂಬ ಈ ಮಂತ್ರದಿಂದ ಆಜ್ಯಸ್ಥಾಲಿಯನ್ನೂ ದರ್ಭೆಗಳಿಂದ ಸಂಪ್ರೋಕ್ಷಿಸಿ ಸುಕ್ ಸ್ರುವಗಳನ್ನೂ ಅದೇ ಮೇರೆ ಮಾರ್ಜನೆಮಾಡಿದ ಬಳಿಕ ಶಾಂತಿಯಿಂದ ಅಗ್ನಿಯಲ್ಲಿ ಹೋಮ ಮಾಡಿಬಿಡಬೇಕು

**ಯಥಾದಿಶಂ ಮಹೀಪಾಲ ತಥಾ ಕುರ್ಯಾದ್ವಿಮೋಚನಂ ।**
**ತತೋ ವಿಸರ್ಜನಂ ಕಾರ್ಯಂ ಬ್ರಹ್ಮಣಃ ಪರಮೇಷ್ಠಿನಃ ॥ ೭೧ ॥**

**ಭಗವನ್ದೇವದೇವೇಶ ಜಗತಾಮಾರ್ತಿನಾಶನ ।**
**ಪ್ರಜಸ್ವ ಪೂಜಾಮಾದಾಯ ಪುನರಾಗಮನಾಯ ಚ ॥ ೭೨ ॥**

**ಯಜಮಾನಸ್ಯ ಶಾಂತ್ಯರ್ಥಂ ಸರ್ವಸ್ಯ ಜಗತಸ್ತಥಾ ।**
**ಆರೋಗ್ಯಧನಧಾನ್ಯೇನ ಯಜಮಾನಂ ಚ ವರ್ಧಯ ॥ ೭೩ ॥**

**ಹುತಾಶನಸ್ಯ ಕರ್ತವ್ಯಂ ತತೋ ರಾಜನ್ವಿಸರ್ಜನಂ ।**
**ಪ್ರವ್ಯಭುಕ್ತ್ವಂ ವರೇಣ್ಯಸ್ತ್ವಂ ಪ್ರಣತಾರ್ತಿವಿನಾಶನಃ ॥ ೭೪ ॥**

**ಪ್ರಜಸ್ವ ಪೂಜಾಮಾದಾಯ ಪುನರಾಗಮನಾಯ ಚ ।**
**ಶಾಂತ್ಯರ್ಥಂ ಯಜಮಾನಸ್ಯ ರಾಷ್ಟ್ರಸ್ಯ ಚ ವಿವೃದ್ಧಯೇ ॥ ೭೫ ॥**

---

೭೧-೭೩ ಬಳಿಕ ಸ್ರುವೆಯನ್ನು ಕೈಗೆ ತೆಗೆದುಕೊಂಡು ಪೂರ್ಣ ಪಾತ್ರದಲ್ಲಿರುವ ಉದಕದಿಂದ ಎಲ್ಲಾ ದಿಕ್ಕಿಗೂ ಸಂಪ್ರೋಕ್ಷಿಸಬೇಕು ಆ ರೀತಿ ಪ್ರೋಕ್ಷಿಸುವಾಗ ಹೇಳಬೇಕಾದ ಮಂತ್ರವು ಇದು

“ ಪೂರ್ಣಮಸಿ ಪೂರ್ಣಂಮೇಭೂಯಾಃ ಸುಪೂರ್ಣಮಸಿ ಸುಪೂರ್ಣಂಮೇ ಭೂಯಾಃ । ಸದಸಿಸನ್ಮೇಭೂಯಾಃ ಸರ್ವಮಸಿ ಸರ್ವಂಮೇಭೂಯಾಃ ಅಕ್ಷಿತಿರಸಿ ಮಾಮೇಕ್ಷ್ಣಾಃ ”

ಬಳಿಕ ಆವಾಹಿತರಾದ ಸಕಲದೇವತಾಗ್ರಹನಕ್ಷತ್ರಗಳನ್ನೂ ವಿಸರ್ಜಿಸಬೇಕು ಬಳಿಕ ಬ್ರಹ್ಮನನ್ನು ವಿಸರ್ಜಿಸಿ ಸ್ವಸ್ಥಾನಕ್ಕೆ ಹೋಗೆಂದು, “ ಭಗವನ್ದೇವದೇವೇಶ
ಯಜಮಾನಂಚ ವರ್ಧಯ ” ಎಂಬೆರಡು ಶ್ಲೋಕ ಮಂತ್ರಗಳಿಂದ ವಿಸರ್ಜಿಸಬೇಕು

೭೪-೭೫ ಬಳಿಕ ಯಜ್ಞೇಶ್ವರನನ್ನು ವಿಸರ್ಜಿಸಬೇಕು ಅದಕ್ಕೆ ಎರಡು ಮಂತ್ರಗಳು. ಅವನ್ನು ಮೇಲೆ ಬರೆದಿದೆ ‘ ಪ್ರವ್ಯಭುಕ್ತ್ವಂ ಎಂದು ಆರಂಭಿಸಿ ಜಂಸಾಯಚ ವಿಪಾಮತೇ ’ ಎಂಬ ಎರಡು ಶ್ಲೋಕಗಳೇ ಅವು ಈ ರೀತಿ ಯಜ್ಞೇಶ್ವರನನ್ನು ವಿಸರ್ಜಿಸಿ ಪೂರ್ಣ ಪಾತ್ರವನ್ನು ತೆಗೆದುಕೊಂಡು ಸ್ವಸ್ತಿ ಮಂತ್ರಗಳನ್ನು ಉಚ್ಚರಿಸಬೇಕು ಅನಂತರ ಹಿಂದೆ ನಾನು ಹೇಳಿದ ಮೇರೆ ಬ್ರಾಹ್ಮಣರಿಗೆ ದಕ್ಷಿಣೆ

ಗೋಬ್ರಾಹ್ಮಣಹಿತಾರ್ಥಾಯ ಜಯಾಯ ಚ ಮಹೀಪತೇಃ ।
ಪೂರ್ಣಪಾತ್ರಮಥಾದಾಯ ವಾಚ್ಯಂ ಸ್ವಸ್ತ್ಯಯನಂ ತತಃ ॥ ೭೬ ॥

ತತಸ್ತು ದಕ್ಷಿಣಾ ದೇಯಾ ಯಥಾ ಪ್ರೋಕ್ತಾ ಮಯಾ ಪುರಾ ।
ಏತದುತ್ತರತಂತ್ರಂತು ಪ್ರೋಕ್ತಂ ಸರ್ವಾಗ್ನಿಕರ್ಮಣಾಂ ॥ ೭೭ ॥

ವಿಧಾನಮೇತತ್ಕಥಿತಂ ತವಾದ್ಯ
ಸರ್ವಾಗ್ನಿಕರ್ಮಸ್ವನಘೋಪಯೋಗಿ ।
ಅತಃ ಪರಂ ಕಿಂ ಕಥಯಾಮಿ ರಾಜನ್
ತನ್ಮೇ ವದಸ್ವಾಯತಲೋಹಿತಾಕ್ಷ ॥ ೭೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಅಗ್ನಿಕಾರ್ಯೇ ಪ್ರಾಕ್ತಂತ್ರೋತ್ತರ ತಂತ್ರವಿಧಿ
ನಾಮ ದ್ವಿನವತಿತಮೋಽಧ್ಯಾಯಃ

---

ಯನ್ನು ಕೊಡಬೇಕು. ಈ ರೀತಿ ನಾನು ಹೇಳಿದ ಉತ್ತರ ತಂತ್ರ ಕ್ರಮವು ಸಕಲ ವಿಧವಾದ ಅಗ್ನಿಕರ್ಮಗಳಲ್ಲೂ ವಿಧಾಯಕ ವಾದದ್ದಾಗಿದೆ. ಇದನ್ನು ನಿನಗೆ ತಿಳಿಸಿರುತ್ತೇನೆ. ಎಲೈ ವಜ್ರನರಪತಿಯೆ ಮುಂದೆ ನಿನಗೆ ಇನ್ನೇನು ಕೇಳಬೇಕೆಂದು ಇಚ್ಛೆಯಿದೆಯೋ ಅದನ್ನು ಕೇಳೆಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಅಗ್ನಿಕಾರ್ಯ ಕ್ರಮದಲ್ಲಿ ಪೂರ್ವತಂತ್ರ ಉತ್ತರತಂತ್ರ
ಕರ್ಮವೆಂಬ ಹೆಸರಿನ ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಿನವತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ವಿಸ್ತರಾಚ್ಛ್ರೋತುಮಿಚ್ಛಾಮಿ ಗ್ರಹನಕ್ಷತ್ರಪೂಜನಂ ।
ತ್ವತ್ತೋಽಹಂ ಭಾರ್ಗವಶ್ರೇಷ್ಠ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಕಲ್ಪಿತೇ ಮಂಡಲೇ ಸ್ನಾತಃ ಪ್ರಾಕ್ತಂತ್ರೇ ಚ ತಥಾ ಕೃತೇ ।
ಮಂಡಲಸ್ಯ ತು ಶೌಚಾರ್ಥಂ ಪಂಚಗವ್ಯಂ ಪ್ರಕಲ್ಪಯೇತ್ ॥ ೨ ॥

ಪಯಃ ಕಾಂಚನವರ್ಣಾಯಾ ನೀಲಾಯಾಶ್ಚ ತಥಾ ಘೃತಂ ।
ದಧಿ ವೈ ಕೃಷ್ಣವರ್ಣಾಯಾಃ ಶ್ವೇತಾಯಾಶ್ಚೈವ ಗೋಮಯಂ ॥ ೩ ॥

---

### ತೊಂಭತ್ತಮೂರನೆಯ ಅಧ್ಯಾಯವು

೧ ವಜ್ರಮಹಾರಾಜನು ಕೇಳುತ್ತಾನೆ —ಎಲೈ ಮಾರ್ಕಂಡೇಯ ಋಷಿಯ! ಗ್ರಹ, ನಕ್ಷತ್ರಗಳನ್ನು ಪೂಜೆಮಾಡುವ ಕ್ರಮವನ್ನು ವಿಸ್ತಾರವಾಗಿ ತಿಳಿಯಬೇಕೆಂದಾಶೆಯುಂಟಾಗಿದ ಅದನ್ನು ದಯಮಾಡಿ ತಿಳಿಸು

೨ ಎಲ್ಲ ಗ್ರಹನಕ್ಷತ್ರಗಳಿಗೂ ಮಂಡಲವನ್ನು ಬರೆದು ಸ್ನಾನಮಾಡಿ ಸಂಶುದ್ಧವಾಗಿ ಅಗ್ನಿಹೋಮಾರ್ಥವಾದ ಪ್ರಾಕ್ತಂತ್ರಗಳನ್ನೆಲ್ಲಾ ಮುಗಿಸಿದ ಬಳಿಕ ಮಂಡಲ, ಪಾರಿಶುಧ್ಯಕ್ಕೋಸ್ಕರ ಪಂಚಗವ್ಯವನ್ನು ಮಾಡಬೇಕು

೩-೪ ಹಳದಿಬಣ್ಣದ ಹಸುವಿನ ಹಾಲು, ನೀಲೀ ಬಣ್ಣದ ಹಸುವಿನ ತುಪ್ಪ, ಕಪ್ಪು ಹಸುವಿನ ಮೊಸರು, ಬಿಳೀ ಹಸುವಿನ ಸಗಣಿ, ಕೆಂಪು ಬಣ್ಣದ ಹಸುವಿನ ಗಂಜಲ,

ಗೋಮೂತ್ರಂ ತಾಮ್ರವರ್ಣಾಯಾಃ ಪಂಚಗವ್ಯಂ ಪ್ರಕಲ್ಪಯೇತ್ ।
ಅಥೈತಾನಿ ಸಮಸ್ತಾನಿ ಕಪಿಲಾಯಾಸ್ಸಮಾಹರೇತ್ ॥ ೪ ॥

ಗಾಯತ್ರ್ಯಾ ಗೃಹ್ಯ ಗೋಮೂತ್ರಂ ರಥೇ ಅಕ್ಷೇತಿ ಗೋಮಯಂ ।
ಆಪ್ಯಾಯಸ್ವೇತಿ ಚ ಕ್ಷೀರಂ ದಧಿಕ್ರಾವ್ಣೇತಿ ವೈ ದಧಿ ॥ ೫ ॥

ತೇಜೋಸಿ ಶುಕ್ರಮಿತ್ಯಾಜ್ಯಂ ಸಾವಿತ್ರೇಣ ಕುಶೋದಕಂ ।
ಅಘಮರ್ಷಣಮಂತ್ರೇಣ ಸಂಯೋಜ್ಯ ಪ್ರಣವೇನ ತು ॥ ೬ ॥

ಮಂಡಲಾಭ್ಯುಕ್ಷಣಂ ಕಾರ್ಯಂ ಸಾವಿತ್ರ್ಯಾ ತದನಂತರಂ ।
ಪೂರ್ಣಂ ಕ್ಷೀರಾಕ್ಷತೋಪೇತಂ ಸರ್ಷಪಾತಂಡುಲೈರ್ಯುತಂ ॥ ೭ ॥

ಶಂಖೇ ವಾ ರಜತೇ ತಾಮ್ರೇ ಕುರ್ಯಾದರ್ಘ್ಯಂ ವಿಚಕ್ಷಣಃ ।
ರಥೇ ಅಕ್ಷೇತಿ ಮಂತ್ರೇಣ ದ್ರವಿಣೇನ ತಥೈವ ಚ ॥ ೮ ॥

ಪಾದ್ಯಸ್ಯ ಕಲ್ಪನಾ ಕಾರ್ಯಾ ದ್ರುಪದಾಯಾಸ್ತಥೈವ ಚ ।
ಹಿರಣ್ಯವರ್ಣೇತ್ಯಾರಭ್ಯ ಋಕ್ತ್ರಯೇಣ ತಥೈವ ಚ ॥ ೯ ॥

ಈ ಐದನ್ನೂ ಬೆರಸಿ ಪಂಚಗವ್ಯವನ್ನು ಮಾಡಬೇಕು. ಅಥವಾ ಕಪಿಲೆಯ ಹಸುವಿನಿಂದ ಎಲ್ಲವನ್ನೂ ಸಂಗ್ರಹಿಸಿಟ್ಟುಕೊಂಡರೂ ಬಾಧಕವಿಲ್ಲ.

೫-೧೦ ಗಾಯತ್ರೀ ಮಂತ್ರದಿಂದ ಗಂಜಲವನ್ನು 'ರಥೇಕ್ಷ' ಎಂಬ ಮಂತ್ರದಿಂದ ಸಗಣಿಯನ್ನೂ (ಸ್ವಲ್ಪ), 'ಆಪ್ಯಾಯಸ್ವಸಮೇತುತೇ' ಎಂಬ ಮಂತ್ರದಿಂದ ಹಾಲನ್ನೂ, 'ದಧಿಕ್ರಾವ್ಣೋ ಅಕಾರಿಷಂ' ಎಂಬ ಮಂತ್ರದಿಂದ ಮೊಸರನ್ನೂ, 'ಶುಕ್ರಮಸಿ ಜ್ಯೋತಿರಸಿ ತೇಜೋಸಿ' ಎಂಬ ಮಂತ್ರದಿಂದ ತುಪ್ಪವನ್ನೂ, ಸವಿತ್ರ ಮಂತ್ರದಿಂದ ಕುಶೋದಕವನ್ನೂ' ಅಘಮರ್ಷಣ ಮಂತ್ರದಿಂದ ಎಲ್ಲವನ್ನೂ ಸೇರಿಸಿ ಬೆರೆಯಿಸಿ ಪ್ರಣವೋಚ್ಚಾರಣೆ (ಓಂ) ಮಾಡಿ ಆ ಪಂಚಗವ್ಯವನ್ನು ತೆಗೆದುಕೊಂಡು ಮಂಡಲವನ್ನು ಪ್ರೋಕ್ಷಿಸಬೇಕು. ಬಳಿಕ ಸಾವಿತ್ರೀ ಮಂತ್ರದಿಂದ ಕ್ಷೀರಾಕ್ಷತೆ ಸಹಿತವಾದ ಅಕ್ಕಿ ಸಾಸುವೆಗಳನ್ನು ಮಂಡಲದಲ್ಲಿ ಸುತ್ತಲೂ ಹಾಕಬೇಕು. ಬಳಿಕ ಶಂಖದಲ್ಲಾಗಲಿ, ಬೆಳ್ಳಿ ಅಥವಾ ತಾಮ್ರದ ಪಾತ್ರೆಯಲ್ಲಾಗಲಿ ಅರ್ಘ್ಯವನ್ನು ಕೊಡಬೇಕು. ಅಕ್ಷಮಂತ್ರದಿಂದಲೂ 'ದ್ರವಿಣೋದಾದ್ರವಿಣಸಃ' ಎಂಬ ಮಂತ್ರದಿಂದಲೂ ಪಾದ್ಯವನ್ನು ಕೊಡಬೇಕು. 'ಹಿರಣ್ಯವರ್ಣಾಂ' ಎಂದು ಆರಂಭಿಸಿ ನೂರು ಋಕ್ಕುಗ

**ಆಪೋಹಿಷ್ಠೇತಿ ತಿಸೃಭಿಃ ಶನ್ನೋದೇವೀತಿ ಪಾರ್ಥಿವ ।**
**ಜೀವದಾನಂ ತತೋ ದೇಯಂ ಮಂಡಲೇ ನೃಪಪುಂಗವ ॥ ೧೦ ॥**

**ಅರ್ಘ್ಯೋದಕಂ ಪವಿತ್ರೇಣ ತತ್ರ ಮಂತ್ರಃ ಪ್ರಕೀರ್ತಿತಃ ।**
**ಅಗ್ನ ಆಯೂಂಷಿ ಪವಸ ಇತ್ಯೇವಮನುವಾಕಂ ನರಾಧಿಪ ॥ ೧೧ ॥**

**ಜೀವಸ್ಯಾವಾಹನಂ ಕಾರ್ಯಂ ತಂ ಚ ವಕ್ಷ್ಯಾಮ್ಯತಃ ಪರಂ ।**
**ಓಂ—ಆವಾಹಯಾಮ್ಯಹಂ ದೇವಂ ಜೀವಂ ಸರ್ವಗತಂ ವಿಭುಂ ॥ ೧೨ ॥**

**ಪಂಚಧಾಽವಸ್ಥಿತಂ ಭೂಯಃ ಪಂಚಧಾಽವಸ್ಥಿತಂ ಪುನಃ ।**
**ಪಂಚಧಾವಸ್ಥಿತಂ ಭೂಯಃ ಪಂಚಧಾವಸ್ಥಿತಂ ತತಃ ॥ ೧೩ ॥**

**ವಾಯವ್ಯೇನ ತು ಭಾವೇನ ಪಂಚಧಾವಸ್ಥಿತಾಸ್ಸದಾ ।**
**ಆಗ್ನೇಯೇನ ತು ಭಾವೇನ ಪಂಚಧಾವಸ್ಥಿತಸ್ತಥಾ ॥ ೧೪ ॥**

**ಭೂತಾತ್ಮಕೇನ ತು ತಥಾ ಪಂಚಧಾವಸ್ಥಿತಂ ಪ್ರಭುಂ ।**
**ವಾರುಣೇನ ಚ ಭಾವೇನ ಪಂಚಧಾವಸ್ಥಿತಂ ಸದಾ ॥ ೧೫ ॥**

---

ನ್ನು ಹೇಳಿ, 'ಆಪೋಹಿಷ್ಠಾ ಮಯೋಭುವ' ಎಂಬ ಮಂತ್ರಾರಂಭದಿಂದ ಮೂರು ಋಕ್ಕುಗಳನ್ನು ಉಚ್ಚರಿಸಿ, 'ಶನ್ನೋದೇವೀರಭಿಷ್ಟಯೆ' ಎಂಬ ಮಂತ್ರವನ್ನು ಹೇಳಿ ಮಂಡಲವನ್ನು ಚನ್ನಾಗಿ ಪ್ರೋಕ್ಷಿಸಿ ಬಳಿಕ ದೇವತಾಪ್ರತಿಷ್ಠೆಯನ್ನು ಮಾಡಬೇಕು

೧೧-೧೨ ಪವಿತ್ರದಿಂದ ಅರ್ಘ್ಯೋದಕವನ್ನು ಕೊಡಬೇಕಾದ್ದು ಈಗ ಮುಖ್ಯ ಕರ್ತವ್ಯ ಇದಕ್ಕೆ 'ಅಗ್ನ ಆಯೂಂಷಿ' ಎಂಬ ಅನುವಾಕವನ್ನು ಹೇಳಬೇಕು ಅನಂತರ ಮಂಡಲದಲ್ಲಿರುವ ಗುರು (ಬೃಹಸ್ಪತಿ) ಗ್ರಹವನ್ನು ಆವಾಹನೆ ಮಾಡಬೇಕು ಆ ಮಂತ್ರದ ಅರ್ಥವೇನೆಂದರೆ - (೧೨-೧೬)

೧೩-೧೬ ಎಲೈ ಗುರುವೆ ನಿನ್ನನ್ನು ಈ ಮಂಡಲದಲ್ಲಿ ಆವಾಹನೆ ಮಾಡುತ್ತೇನೆ ನೀನು ಯಾರ ಕಣ್ಣಿಗೂ ಕಾಣಿಸಿಕೊಳ್ಳದಂತೆ ಬಂದು ಈ ಮಂಡಲದಲ್ಲಿ ಪೂಜೆಯಾಗುವತನಕ ಇರು ನಿನ್ನ ಮಹಿಮೆಯನ್ನು ಹೊಗಳಲಾಗುವುದಿಲ್ಲ ನೀನು ಪ್ರಾಣಾತ್ಮಕನಾಗಿ ದೇಹಿಗಳ ದೇಹದಲ್ಲಿ ಐದು ವಿಧವಾಗಿ ಇರುತ್ತೀಯೆ ! ಮತ್ತು ಪಂಚಭೂತಾತ್ಮಕನಾಗಿರುವವನೂ ನೀನೇ ಗ್ರಹ ಮಂಡಲದ ಮೊದಲಿನಿಂದ ಎಣಿಸಿದರೂ ನೀನು ಐದನೆಯವನಾಗಿ ನಿಲ್ಲುತ್ತೀಯೆ ನವಗ್ರಹ ಮಂಡಲದ ಕೊನೆಯಿಂದ

ಪಶುಃ ಕಲೌ ನಕರ್ತವ್ಯ ಇತ್ಯಾಹ ಭಗವಾನ್ಭೃಗುಃ ।
ರಥೇ ಅಕ್ಷೇತಿ ಮಂತ್ರೇಣ ದಾತವ್ಯಮನುಲೇಪನಂ ॥ ೨೨ ॥

ವಿಭೂಷಣಂ ಚ ತೇನೈವ ತತಃ ಪರತರಂ ನೃಪ ।
ಯಜ್ಞೋಪವೀತಂ ತು ನವಂ ತಥಾ ಪ್ರತಿಸರಂ ಶುಭಂ ॥ ೨೩ ॥

ವಸ್ತ್ರಂ ಪತಾಕಾಂ ಚ ತಥಾ ಸಾವಿತ್ರೇಣ ನಿವೇದಯೇತ್ ।
ಪುಷ್ಪಂ ಪುಷ್ಪವತೀತ್ಯೇವ ಧೂಪಂ ಧೂರಸಿ ಚಾಪ್ಯಥ ॥ ೨೪ ॥

ಧೂಪಮಂತ್ರಮಿದಂ ಚಾನ್ಯಂ ನಿಬೋಧ ಗದತೋ ಮಮ ।
ವನಸ್ಪತಿರಸೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ॥ ೨೫ ॥

ಆಹ್ವಾನಂ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ ।
ತೇಜೋಽಸಿ ಶುಕ್ರಮಿತ್ಯೇವ ದೀಪಂ ದದ್ಯಾನ್ಮಹೀಪತೇ ॥ ೨೬ ॥

ಹಿರಣ್ಯಗರ್ಭೇತ್ಯಷ್ಟರ್ಚಂ ದೇಯಂ ಸರ್ವಂ ನಿವೇದಯೇತ್ ।
ನಿಬೋಧ ಗದತೋ ಮಂತ್ರಮನ್ನಪಾನನಿವೇದನೇ ॥ ೨೭ ॥

---

ವನ್ನು ಮಾಡಬೇಕು. ಬಳಿಕ 'ರಥೇಅಕ್ಷ' ಮಂತ್ರದಿಂದ ಅನುಲೇಪನ (ಗಂಧ) ವನ್ನರ್ಪಿಸಬೇಕು.

೨೩-೨೭ ಅಲಂಕಾರಗಳನ್ನೂ ಸಹ ಅದೇ ಮಂತ್ರದಿಂದ ಮಾಡಬೇಕು. ಅನಂತರ ಹೊಸ ಜನಿವಾರ, ಗೆಜ್ಜೆ, ವಸ್ತ್ರ, ಧ್ವಜಾದ್ಯಲಂಕಾರಗಳನ್ನು ಸವಿತೃ ಮಂತ್ರದಿಂದ ಮಾಡಬೇಕು. 'ಆಯನೇತೆ ಪುಷ್ಪಿಣೀಃ' ಎಂಬ ಪುಷ್ಪ-ಮಂತ್ರದಿಂದ ಹೂಗಳಿಂದ ಪೂಜಿಸಬೇಕು. ಧೂಪ ಮಂತ್ರವನ್ನು 'ಧೂರಸಿ ಧೂರ್ವಾಮಃ' ಎಂಬ ವೇದ ಮಂತ್ರದಿಂದಾಗಲಿ, 'ವನಸ್ಪತಿರಸೋ ... ಪ್ರತಿಗೃಹ್ಯತಾಂ' ಎಂದು ಮೇಲೆ ಬರೆದ ೨೫ನೇ ಶ್ಲೋಕದಿಂದ) ಆಗಲಿ ಅರ್ಪಿಸಬಹುದು. ದೀಪವನ್ನು 'ಶುಕ್ರಮಸಿ ಸೂರ್ಯಸ್ಯರಶ್ಮಿಭಿಃ' ಎಂಬ ಮಂತ್ರದಿಂದ ತೋರಿಸಬೇಕು. 'ಹಿರಣ್ಯಗರ್ಭಃ' ಎಂದು ಆರಂಭಿಸಿ ಎಂಟು ಋಙ್ಮಂತ್ರಗಳಿಂದ ಏನೇನನ್ನು ಸಮರ್ಪಿಸಬೇಕೋ ಅದನ್ನೆಲ್ಲಾ ಸಮರ್ಪಿಸಬೇಕು. ಇಷ್ಟು ಉಪಚಾರ ಪೂಜಾ ಸಮಂತರದಲ್ಲಿ ಮಹಾನೈವೇದ್ಯ ಪಾನೀಯಗಳನ್ನರ್ಪಿಸುವ ಮಂತ್ರವನ್ನು ವಿವರಿಸುವೆನು, ಕೇಳು, ವಜ್ರ ರಾಜೇಂದ್ರ!

ತುಷ್ಟಿಪುಷ್ಟಿಕರಂ ಹೃದ್ಯಮಾಹಾರಂ ಸರ್ವದೇಹಿನಾಂ ।
ಗೃಹಾಣ ವರದಾಚಿಂತ್ಯ ಪಾನಂ ಭಕ್ತ್ಯಾ ಮಯೋದಿತಂ ॥ ೨೮ ॥

ಪಾನೇನಾನೇನ ಪರಮಾತೃಪ್ತಿರಸ್ತು ತವಾನಘ ।
ತೃಪ್ತಸ್ತರ್ಪಯ ಕಾಮೈಸ್ತು ಯಜಮಾನಂ ನಮೋಽಸ್ತು ತೇ ॥ ೨೯ ॥

ಅನುಕ್ತಮಂತ್ರಂ ಶ್ರುತ್ವಾಽಥ ಗ್ರಹೇಭ್ಯೋ ಯಃ ಪ್ರಯಚ್ಛತಿ ।
ಸಾವಿತ್ರಂ ತಸ್ಯ ನಿರ್ದಿಷ್ಟಂ ಮಂತ್ರಂ ಪಾರ್ಥಿವಸತ್ತಮ ॥ ೩೦ ॥

ತತೋಽಗ್ನಿಹವನಂ ಕೃತ್ವಾ ದತ್ವಾ ರಾಜೇಂದ್ರ ದಕ್ಷಿಣಾಂ ।
ಸಾವಿತ್ರೇಣ ತು ಮಂತ್ರೇಣ ತತಃ ಕಾರ್ಯಂ ವಿಸರ್ಜನಂ ॥ ೩೧ ॥

ಇಮಾಂ ಪೂಜಾಂ ಸಮಾದಾಯ ಮಯಾ ಭಕ್ತ್ಯಾ ನಿವೇದಿತಂ ।
ಪುನರಾಗಮನಾಯೇಹ ವ್ರಜಧ್ವಂ ನಾಕಮುತ್ತಮಂ ॥ ೩೨ ॥

೨೮-೨೯ ಈ ಎರಡು ಶ್ಲೋಕಗಳ ರೂಪವಾದ ಮಂತ್ರಗಳ ಅರ್ಥವು - ಆಹಾರ ಸಮರ್ಪಣೆ (ನೈವೇದ್ಯ), ಪಾನೀಯ ಸಮರ್ಪಣೆಗಳನ್ನು ಕುರಿತು ಹೇಳಲ್ಪಟ್ಟಿರುವುದರಿಂದ ಅರ್ಥ ಅವಶ್ಯಕವಿಲ್ಲ ಎಲೈ ! ಗ್ರಹ ನಕ್ಷತ್ರಗಳಿರಾ ! ನಾನು ಕೊಟ್ಟ ನೈವೇದ್ಯ ಪಾನೀಯಗಳಿಂದ ತೃಪ್ತರಾಗಿ, ಯಜಮಾನನು ಕೇಳಿಕೊಳ್ಳುವ ಇಷ್ಟಾರ್ಥಗಳನ್ನು ಕೊಟ್ಟು ಸಂರಕ್ಷಿಸಿರಿ ನಿಮಗೆಲ್ಲರಿಗೂ ನಮಸ್ಕಾರ ಮಾಡುತ್ತೇನೆ

೩೦ ಗ್ರಹಗಳ ಪೂಜೆಯಲ್ಲಿ ಇಂತಹ ಮಂತ್ರಗಳನ್ನೇ ಹೇಳಬೇಕೆಂದು ನಿರ್ದಿಷ್ಟವಾಗಿ ಹೇಳದಿರುವ ಕಡೆ ಗಾಯತ್ರೀಮಂತ್ರವನ್ನು (ಸವಿತೃಮಂತ್ರ) ಅಲ್ಲಿ ಉಪಯೋಗಿಸಿ ಪೂಜೆಮಾಡಬೇಕು

೩೧ ಅನಂತರ ಸಂಸ್ಕಾರಮಾಡಿದ ಅಗ್ನಿಯಲ್ಲಿ ಹೋಮವನ್ನು ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ನಂತರ ಗಾಯತ್ರೀಮಂತ್ರದಿಂದ ವಿಸರ್ಜನೆಯನ್ನು ಮಾಡಬೇಕು

೩೨ ದೇವತಾವಿಸರ್ಜನಮಾಡುವಾಗ ಈ ಕೆಳಗಿನ ಮಂತ್ರವನ್ನು ಹೇಳಬೇಕು --ಎಲೈ ದೇವತೆಗಳೇ ನಾನು ಭಕ್ತಿಯಿಂದ ಮಾಡಿದ ಈ ಪೂಜೆಯನ್ನು ಸ್ವೀಕರಿಸಿ ಶುಭಕಾರ್ಯಕ್ಕಾಗಿ ನಾನು ಪುನಹ ಆವಾಹನೆ ಮಾಡುವವರೆಗೂ ನಿಮ್ಮ ಸ್ಥಾನವಾದ ಸ್ವರ್ಗಕ್ಕೆ ತೆರಳಿರಿ

ಆಧಯೋ ವ್ಯಾಧಯಶ್ಚೈವ ಪ್ರಶಮಂ ಯಾಂತು ಸರ್ವಶಃ ।
ರಕ್ಷಾ ಚಾಸ್ತು ಶಿವಂ ಚಾಸ್ತು ಯಜಮಾನಸ್ಯ ಸರ್ವಶಃ ॥ ೩೩ ॥

ಗವಾಂ ಶಿವಂ ಚಾಸ್ತು ತಥಾ ದ್ವಿಜಾನಾಂ
ರಾಜ್ಞಾಂ ಶಿವಂ ಚಾಸ್ತು ತಥಾ ಪ್ರಜಾನಾಂ ।
ಆತಂಕಹೀನಂ ಜಗದಸ್ತು ಸರ್ವಂ
ದೋಷಾಃ ಪ್ರಣಾಶಂ ಸಕಲಾಃ ಪ್ರಯಾಂತು ॥ ೩೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಗ್ರಹಪೂಜಾವಿಧಾನಂ ನಾಮ
ತ್ರಿನವತಿತಮೋಽಧ್ಯಾಯಃ

೩೩ ಪೂಜೆಮಾಡುವ ಯಜಮಾನನ ಆಧಿವ್ಯಾಧಿಗಳೂ, ರೋಗಾದ್ಯುಪದ್ರವಗಳೂ ಪರಿಹಾರವಾಗಿ ಎಲ್ಲ ವಿಚಾರದಲ್ಲಿಯೂ ರಕ್ಷಣೆಯೂ ಮಂಗಳವೂ ಲಭಿಸಲಿ

೩೪ ಗೋಬ್ರಾಹ್ಮಣರುಗಳಿಗೂ, ರಾಜರಿಗೂ ಪ್ರಜೆಗಳಿಗೂ ಮಂಗಳವಾಗಲಿ ಸಮಸ್ತ ಲೋಕದ ಜನರ ದೋಷಗಳೂ ಕಷ್ಟಗಳೂ, ಪರಿಹಾರವಾಗಿ ಸುಖಶಾಂತಿಗಳು ನೆಲಸುವಂತಾಗಲಿ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಗ್ರಹಪೂಜಾವಿಧಾನವೆಂಬ ಹೆಸರಿನ ತೊಂಭತ್ತ
ಮೂರನೆಯ ಅಧ್ಯಾಯವು ಮುಗಿದುದು



ಶ್ರೀಃ

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರ್ನವತಿತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಏಕೈಕಸ್ಯೇದಮುಕ್ತಂ ತೇ ವಿಧಾನಂ ದ್ವಿಜ ಪೂಜನೇ ।
ಸರ್ವಗ್ರಹಾಣಾಂ ಯಜನೇ ವಿಧಾನಂ ಮಮ ಕೀರ್ತಯ ॥ ೧ ॥

॥ ಮಾರ್ಕಂಡೇಯ ಉವಾಚ ॥

ಏಕೈಕಸ್ಯೇದಮುಕ್ತಂ ತೇ ವಿಧಾನಂ ರಾಜಸತ್ತಮ ।
ಸರ್ವಗ್ರಹಾಣಾಂ ಯಜನೇ ಮಂಡಲಸ್ಯ ವಿಧಿಂ ಶೃಣು ॥ ೨ ॥

### ತೊಂಭತ್ತನಾಲ್ಕನೆಯ ಅಧ್ಯಾಯವು.

೧ ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ ಎಲೈ ಮಾರ್ಕಂಡೇಯನೇ! ನೀನು ಇದುವರೆವಿಗೆ ಒಂದೊಂದು ಪೂಜೆಯನ್ನು ವಿಧಿಕ್ರಮದಿಂದ ಹೇಳಿದಿಯಷ್ಟೆ ? ಇನ್ನು ಮುಂದೆ ಸಕಲ ಗ್ರಹಗಳನ್ನೂ ಒಟ್ಟಿಗೆ ಪೂಜೆ ಮಾಡುವ ಕ್ರಮವನ್ನು ದಯಮಾಡಿ ತಿಳಿಸಬೇಕು.

೨ ಮಾರ್ಕಂಡೇಯರು ಉತ್ತರ ಹೇಳುತ್ತಾರೆ -- ಎಲೈ ರಾಜನೆ! ಇದುವರೆವಿಗೆ ನಿನ್ನ ಸಂಗಡ ಒಂದೊಂದು ಗ್ರಹದ ಬೇರೆ ಬೇರೆ ಪೂಜಾಕ್ರಮವನ್ನು ಹೇಳಿದನು ಮುಂದೆ ಸರ್ವ ಗ್ರಹಪೂಜಾ ವಿಧಾನವನ್ನು ಹೇಳುವೆನು ಅದಕ್ಕೆ ಮುಂಚೆ ಮಂಡಲ ವಿಧಿಯನ್ನು ಹೇಳುವೆನು, ಕೇಳು

ಆದಾವೇವ ನರವ್ಯಾಘ್ರ ಯಾಗಂ ವಕ್ಷ್ಯಾಮ್ಯತಃ ಪರಂ ।
ಪ್ರಾಗಾಯತಂ ತು ಕರ್ತವ್ಯಮಾದೌ ರೇಖಾದ್ವಯಂ ನೃಪ ॥ ೩ ॥

ತಸ್ಯೋಪರಿ ತಥಾ ಕಾರ್ಯಮಪರಂ ತೂತ್ತರಾಯತಂ ।
ಏವಂ ಕೃತೇ ಯದುತ್ಪನ್ನಂ ಮಧ್ಯೇ ತು ಚತುರಸ್ರಕಂ ॥ ೪ ॥

ತತೋ ಗ್ರಹೇಭ್ಯಃ ಕರ್ತವ್ಯಂ ತಥಾ ರೇಖಾಚತುಷ್ಟಯಂ ।
(ತಚ್ಛ್ರಿಭ್ಯಃ ಪ್ರಕರ್ತವ್ಯಂ ತದಾ ರೇಖಾ ಚತುಷ್ಟಯಂ ।)
ಏವಂ ಕೃತೇ ಸಂಭವತಿ ಭಗಣಂ ದ್ವಾದಶಕ್ಷಯಂ ॥ ೫ ॥

ತ್ರಯೋದಶಂ ತಥಾತಸ್ಯ ಧ್ರುವಸ್ಥಾನಂ ತು ಮಧ್ಯಮಂ ॥ ೬ ॥

ಪ್ರಾಚ್ಯಾಂ ದಿಶಿ ಮಹೀನಾಥ ಮೇಷಂ ತು ಪರಿಕಲ್ಪಯೇತ್ ।
ತದಾದ್ಯಾ ಗಣನಾ ಕಾರ್ಯಾ ಪರಿಶೇಷೇಷು ರಾಶಿಷು ॥ ೭ ॥

ರೇಖಾಭಿಧಾನಂ ದ್ವಿಗುಣಂ ಶೋಭಾರ್ಥಂ ಪರಿಕಲ್ಪಯೇತ್ ।
ರಾಶಿಸ್ಥಾನಾನಿ ಸರ್ವಾಣಿ ರಾಶಿವರ್ಣೇನ ರಂಜಯೇತ್ ॥ ೮ ॥

---

೩-೪ ಮಂಡಲವಿಧಿಗಿಂತ ಮುಂದೆ ಹೋಮಕ್ರಮವನ್ನು ತಿಳಿಸುತ್ತೇನೆ, ಕೇಳು ಹೋಮಸ್ಥಾನದ ಮೇಲೆ ಪಶ್ಚಿಮದಿಂದ ಪೂರ್ವಕ್ಕೆ ತುದಿ ಬರುವಂತೆ ಎರಡು ಗೆರೆಗಳನ್ನು ಎಳೆಯಬೇಕು ಆ ಗೆರೆಗಳೆರಡರ ಮೇಲೆ ಉತ್ತರ ದಿಕ್ಕಿಗೆ ತುದಿ ಬರುವಂತೆ ಮತ್ತೆರಡು ಗೆರೆಗಳನ್ನು ಎಳೆದರೆ ಚತುರಸ್ರಮಂಡಲವು ನಿರ್ಮಿತವಾಗುವುದು

೫-೬ ಅನಂತರ ಗ್ರಹಮಂಡಲಗಳಿಗೋಸ್ಕರ ಪೂರ್ವಾಯತವಾಗಿ ನಾಲ್ಕು, ಉತ್ತರಾಯತವಾಗಿ ನಾಲ್ಕು ಗೆರೆಗಳನ್ನೆಳೆಯುವುದಾದರೆ ಗೆರೆಗಳ ಮಧ್ಯದಲ್ಲಿ ಒಂಭತ್ತು ಮನೆ ಸಿಗುವುವು ಸುತ್ತಲಿನ ೧೨ ತುದಿಗಳಲ್ಲಿ ೧೨ ರಾಶಿಗಳನ್ನು ಬರೆಯಬಹುದು ಈ ಮಂಡಲದ ಮಧ್ಯಭಾಗಕ್ಕೆ ಧ್ರುವಸ್ಥಾನವೆಂದು ಹೆಸರು

೭-೮ ಧ್ರುವಸ್ಥಾನಕ್ಕೆ ೧೩ನೇ ಸ್ಥಾನ (ರಾಶಿ) ಎಂದು ಹೆಸರು ಪೂರ್ವ ದಿಕ್ಕಿನಿಂದಾರಂಭಿಸಿ ಮೇಷಾದಿ ರಾಶಿಗಳನ್ನೆಣಿಸಬೇಕು ಮೇಲಿನ ಕ್ರಮವನ್ನು ನೋಡಿ, ಅದರಂತೆ ಗ್ರಹರಾಶಿ ಮಂಡಲವನ್ನು ಕಲ್ಪಿಸಬೇಕು ನೋಡುವುದಕ್ಕೆ ಮಂಗಳ (ರಂಜಕ) ವಾಗುವಂತೆ ಎರಡೆರಡು ರೇಖೆಗಳನ್ನು (ಜೋಡಿ) ಬರೆದು ಆಯಾಯ ರಾಶಿಗಳನ್ನು ಆಯಾಯ ರಾಶಿಯ ವರ್ಣ (ಬಣ್ಣ) ಗಳಿಂದ ಅಲಂಕರಿಸಬೇಕು

ರಾಶಿವರ್ಣಾನ್ಯಥೋ ವಕ್ಷ್ಯೇ ಯಥಾವದನುಪೂರ್ವಶಃ ।
ಅರುಣಶ್ಚ ಸಿತಶ್ಚೈವ ಹರಿತಃ ಪಾಟಲಸ್ತಥಾ ॥ ೯ ॥

ಆಪಾಂಡುಶ್ಚ ವಿಚಿತ್ರಶ್ಚ ಕೃಷ್ಣಶ್ಚ ಕಪಿಲಸ್ತಥಾ ।
ಪಿಂಗಲಃ ಕರ್ಬುರೋ ಬಭ್ರುರ್ಮಲಿನಶ್ಚ ಯಥಾಕ್ರಮಂ ॥ ೧೦ ॥

ಮೇಷಾದೀನಾಂ ವಿನಿರ್ದಿಷ್ಟಾ ವರ್ಣಾಃ ಪಾರ್ಥಿವಸತ್ತಮ ।
ಆಕಾಶವರ್ಣಂ ಕರ್ತವ್ಯಂ ಧ್ರುವಸ್ಥಾನಂ ತಥೈವ ಚ ॥ ೧೧ ॥

ಧ್ರುವಸ್ಥಾನೇ ಮಹೀನಾಥ ದೇವತಾಸಪ್ತಕಂ ನ್ಯಸೇತ್ ।
ಮಂಡಲೈಶ್ಶುಕ್ಲವರ್ಣೈಸ್ತು ದಿಗ್ವಿಭಾಗಂ ನಿಬೋಧ ಮೇ ॥ ೧೨ ॥

ಧ್ರುವಸ್ಯ ಮಂಡಲಂ ಮಧ್ಯೇ ಪ್ರಾಗ್ಭಾಗೇ ಮಂಡಲತ್ರಯಂ ।
ಮಂಡಲಂ ಗಗನಸ್ಯಾತ್ರ ಭಾಗೇ ಪ್ರಾಗುತ್ತರೇ ಭವೇತ್ ॥ ೧೩ ॥

ಪ್ರಾಗ್ಭಾಗೇ ಚ ತಥಾ ರಾಜನ್ಮಂಡಲಂ ಬ್ರಹ್ಮಣಃ ಸ್ಮೃತಂ ।
ಪ್ರಾಗ್ದಕ್ಷಿಣೇ ತಥಾ ಭಾಗೇ ದಿಶಂ ಪೂರ್ವಾಂ ಪ್ರಕಲ್ಪಯೇತ್ ॥ ೧೪ ॥

ಭಾಗೇ ಚ ನೈರ್ಋತೇ ಕಾರ್ಯಂ ಭುವೋ ಭೂಪಾಲ ಮಂಡಲಂ ।
ಶೇಷಸ್ಯ ಚ ತಥಾ ಕಾರ್ಯಂ ಪ್ರತೀಚ್ಯಾಂ ದಿಶಿ ಮಂಡಲಂ ॥ ೧೫ ॥

---

೯-೧೦ ಅನಂತರ ಆನುಪೂರ್ವಿಯಾಗಿ ಮೇಷಾದಿ ರಾಶಿಗಳ ಬಣ್ಣಗಳನ್ನು ಹೇಳುತ್ತೇನೆ - ಕೆಂಪು, ಬಿಳುಪು, ಹಸರು, ಪಾಟಲ (ಕೆಂಪು ಬಿಳುಪು ಸೇರಿ), ಶುದ್ಧ ಬಿಳುಪು, ಮಿಶ್ರಬಣ್ಣ, ಕಪ್ಪು, ಕಪಿಲ, ಹೊಂಬಣ್ಣ, ನಾನಾ ವಿಚಿತ್ರವರ್ಣ, ಹಳದಿ, ಮಾಸಲು

೧೧-೧೪ ಮೇಷಾದಿ ರಾಶಿಗಳಿಗೆ ಮೇಲೆ ಬರೆದಂತೆ ವರ್ಣಗಳು ಹೇಳಲ್ಪಟ್ಟಿವೆ ಧ್ರುವಸ್ಥಾನಕ್ಕೆ ಆಕಾಶ ವರ್ಣವನ್ನು ರಚಿಸಬೇಕು ಆ ಧ್ರುವ ಸ್ಥಾನದಲ್ಲಿ ಸಪ್ತ ದೇವತೆಗಳನ್ನೂ ಆವಾಹಿಸಬೇಕು ಆ ದೇವತಾ ಮಂಡಲವು ಬಿಳೀಬಣ್ಣದಿಂದ ಬರೆಯಲ್ಪಡಬೇಕು ಆ ಮೇಲೆ ದಿಗ್ವಿಭಾಗವನ್ನು ತಿಳಿಸುತ್ತೇನೆ, ಕೇಳು ಧ್ರುವ ಮಂಡಲದ ಪೂರ್ವದಿಕ್ಕಿನಲ್ಲಿ ಮೂರು ಮಂಡಲಗಳನ್ನು ಬರೆಯಬೇಕು, ಒಂದು ಆಕಾಶ ಮಂಡಲ, ಒಂದು ಬ್ರಹ್ಮಮಂಡಲ, ಒಂದು ಭೂಮಂಡಲ, ಧ್ರುವಮಂಡಲದ ಪಶ್ಚಿಮ

ದಿಗಧಸ್ತಾತ್ತಥಾ ತಸ್ಯ ಮಂಡಲಂ ಪಶ್ಚಿಮೋತ್ತರೇ ।
ಗ್ರಹಶ್ಚಾರವಶಾದ್ರಾಜನ್ಯಸ್ಮಿನ್ರಾಶೌ ವ್ಯವಸ್ಥಿತಃ ॥ ೧೬ ॥

ಮಂಡಲಂ ತಸ್ಯ ಕರ್ತವ್ಯಂ ತಸ್ಮಿನ್ನೇವ ಯಥಾವಿಧಿ ।
ನ್ಯಾಸಂ ಕಾರ್ಯಂ ಗ್ರಹೇಂದ್ರಾಣಾಂ ದೇವತಾಭಿಃ ಸಹಾನಘ ॥ ೧೭ ॥

ಆದಿತ್ಯಾತ್ಸಪ್ತಮೇ ರಾಶೌ ಕೇತೋಃ ಕಾರ್ಯಂ ತು ಮಂಡಲಂ ।
ರಾಶೌ ಸವರ್ಣೇ ತದ್ವರ್ಣಂ ಯಸ್ಯ ಸ್ಯಾನ್ಮಂಡಲಂ ನೃಪ ॥ ೧೮ ॥

ಉತ್ಪಾದ್ಯಃ ಪರಿಧಿಸ್ತಸ್ಯ ರಂಗೇನಾನ್ಯೇನ ಪಾರ್ಥಿವ ।
ಗಂಧಚೂರ್ಣಯುತಾ ರಂಗಾಃ ಕರ್ತವ್ಯಾ ಭೂತಿಮಿಚ್ಛತಾ ॥ ೧೯ ॥

ರಾಶಿಚಕ್ರಂ ಸಮಗ್ರಂ ತು ರೇಖಯಾ ಪರಿವಾರಯೇತ್ ।
ನಕ್ಷತ್ರಾಣಾಂ ತತಃ ಕಾರ್ಯೋ ನ್ಯಾಸಃ ಪಾರ್ಥಿವಸತ್ತಮ ॥ ೨೦ ॥

ರಾಶೌರಾಶೌ ಯಥಾಸ್ಥಾನಂ ರೇಖಯಾ ಪರಿವಾರಿತಂ ।
ರಾಶೌ ರಾಶಾವತೋ ವಕ್ಷ್ಯೇ ನಕ್ಷತ್ರಾಣಾಂ ಸಮಾಶ್ರಯಂ ॥ ೨೧ ॥

---

ದಿಕ್ಕಿನಲ್ಲಿ (ಆವಿ) ಶೇಷ ಮಂಡಲವಿರಬೇಕು  ಬಳಿಕ ಯಾವ ರಾಶಿಯಲ್ಲಿ ಯಾವ ಗ್ರಹವು ಸಂಚರಿಸುತ್ತಿರುವುದೋ ಅದನ್ನು ತಿಳಿದು ಆ ಗ್ರಹ ಮಂಡಲವನ್ನು ಆಯಾಯ ದೇವತೆಗಳೊಡನೆ ನವಗ್ರಹ ಮಂಡಲವನ್ನು ಬರೆಯಬೇಕು  ಸೂರ್ಯನಿಂದ ಏಳನೇ ರಾಶಿಯಲ್ಲಿ ಕೇತು ಮಂಡಲವಿರಬೇಕು

೧೮-೨೧  ಸೂರ್ಯಮಂಡಲದ ಪಕ್ಕದಲ್ಲಿರುವ ಮಂಡಲಕ್ಕೆ ಸಂಧಿಯಿಂದ ಹೆಸರು  ಈ ಪರಿಧಿಯನ್ನು ಬಣ್ಣದಿಂದ ರಚಿಸಬೇಕು  ಗಂಧಚೂರ್ಣದಿಂದ ಮಂಡಲವನ್ನು ತುಂಬಬೇಕು  ಹೀಗ ಮಾಡಿದವರ ಐಶ್ವರ್ಯವು ಹೆಚ್ಚುತ್ತದೆ  ಬಳಿಕ ಎಲ್ಲಾ ರಾಶಿಗಳ ಚಕ್ರವನ್ನೂ ಗೆರೆಗಳಿಂದ ಸುತ್ತಲೂ ಬರೆಯಬೇಕು  ಬಳಿಕ ಅಲ್ಲಲ್ಲಿ ನಕ್ಷತ್ರ ನ್ಯಾಸಗಳನ್ನು ಬರೆಯಬೇಕು  ಪ್ರತಿಯೊಂದು ರಾಶಿಯಲ್ಲೂ ಗೆರೆಯಿಂದ ಸುತ್ತಲ್ಪಟ್ಟ ನಕ್ಷತ್ರಗಳ ಆಶ್ರಯದಲ್ಲಿರುವ ಪ್ರತಿ ರಾಶಿಯನ್ನು ಕ್ರಮವಾಗಿ ವಿವರಿಸುತ್ತೇನೆ ಕೇಳು! ವಜ್ರಮಹಾರಾಜ

ಅಶ್ವಿನೀ ಭರಣೀ ಚೈವ ಕೃತ್ತಿಕಾಂಶಂ ಚತುರ್ಥಕಂ ।
ಮೇಷರಾಶೌ ವಿನಿರ್ದಿಷ್ಟಂ ನಿತ್ಯಂ ಪಾರ್ಥಿವಸತ್ತಮ ॥ ೨೨ ॥

ಪಾದತ್ರಯಂ ಕೃತ್ತಿಕಾನಾಂ ರೋಹಿಣೀ ಸಕಲಾ ತಥಾ ।
ಇಲ್ವಲಾನಾಂ ತಥೈವಾರ್ಧಂ ಜ್ಞೇಯಂ ವೃಷಸಮಾಶ್ರಯಂ ॥ ೨೩ ॥

ಇಲ್ವಲಾರ್ಧಂ ತಥೈವಾರ್ದ್ರಾ ಹ್ಯದಿತ್ಯಾಶ್ಚರಣತ್ರಯಂ ।
ನಿತ್ಯಮೇವ ಸಮುದ್ದಿಷ್ಟಂ ಮಿಥುನಸ್ಯ ಸಮಾಶ್ರಯಂ ॥ ೨೪ ॥

ಪಾದಂ ಪುನರ್ವಸೋಃ ಪುಷ್ಯಂ ಸಾರ್ಪಂ ಕರ್ಕಟಕಾಶ್ರಯಂ ।
ಪಿತ್ರ್ಯಂ ಭಾಗ್ಯಂ ತಥಾರ್ಯಮ್ಣಂ ಪ್ರಥಮಂ ಚರಣಂ ತಥಾ ॥ ೨೫ ॥

ಸಿಂಹರಾಶೌ ವಿನಿರ್ದಿಷ್ಟಂ ನಿತ್ಯಂ ಪಾರ್ಥಿವಸತ್ತಮ ।
ಪಾದತ್ರಯಮಥಾರ್ಯಮ್ಣಂ ಹಸ್ತಚಿತ್ರಾರ್ಧಮೇವ ಚ ॥ ೨೬ ॥

---

೨೨ ಒಂದೊಂದು ರಾಶಿಗೆ ಒಂಭತ್ತೊಂಭತ್ತು ಪಾದಗಳು ಮೇಷ ರಾಶಿಗೆ ಅಶ್ವಿನೀ ನಾಲ್ಕು, ಭರಣೀ ನಾಲ್ಕು, ಕೃತ್ತಿಕೆ ೧ನೆಯ ಪಾದ, ಒಟ್ಟು ಒಂಭತ್ತು ಪಾದಗಳು

೨೩ ವೃಷಭರಾಶಿಗೆ ಕೃತ್ತಿಕೆ ೩ ಪಾದಗಳು, ರೋಹಿಣಿ ೪ ಪಾದ, ಮೃಗಶಿರೆ ೨ ಪಾದ, ಒಟ್ಟು ೯ ಪಾದಗಳು

೨೪ ಮಿಥುನರಾಶಿಗೆ ಮೃಗಶಿರೆ ೩-೪ ಪಾದ, ಆರ್ದ್ರಾ ೪ ಪಾದ, ಪುನರ್ವಸು ೩ ಪಾದಗಳೂ ಸೇರಿ ೯ ಪಾದಗಳಾಯಿತು

೨೫ ಪುನರ್ವಸು ೪ನೇ ಪಾದ, ಪುಷ್ಯ ೪, ಆಶ್ಲೇಷ ೪ ಪಾದಗಳು, ಒಟ್ಟು ೯ ಪಾದಗಳು ಸೇರಿ ಕರ್ಕಾಟಕ ರಾಶಿಯಾಗುತ್ತದೆ ಮಖೆ ೪ ಪಾದ, ಪುಬ್ಬೆ ೪ ಪಾದ ಉತ್ತರೆ ಮೊದಲನೆಯ ಪಾದ, ಒಟ್ಟು ೯ ಪಾದಗಳು ಸೇರಿದರೆ ಸಿಂಹರಾಶಿ

೨೬ ಉತ್ತರಾನಕ್ಷತ್ರ ೩ ಪಾದ, ಹಸ್ತ ೪ ಪಾದ ಪೂರ್ತಿ, ಚಿತ್ತೆ ೨ ಪಾದಗಳು ಒಟ್ಟು ೯ ಪಾದಗಳು ಸೇರಿ ಕನ್ಯಾರಾಶಿಯಾಗುತ್ತದೆ

ಕನ್ಯಾರಾಶೌ ವಿನಿರ್ದಿಷ್ಟಂ ನಿತ್ಯಂ ಪಾರ್ಥಿವಸತ್ತಮ ।
ಚಿತ್ರಾರ್ಧಮಥ ವಾಯವ್ಯಂ ವಿಶಾಖಾಚರಣತ್ರಯಂ ॥ ೨೭ ॥

ತುಲಾರಾಶೌ ವಿನಿರ್ದಿಷ್ಟಂ ಮುನಿಭಿಸ್ತತ್ತ್ವದರ್ಶಿಭಿಃ ।
ವಿಶಾಖಾಚರಣಂ ಮೈತ್ರಂ ಶಾಕ್ರಂ ವೃಶ್ಚಿಕಭೇ ಸ್ಮೃತಂ ॥ ೨೮ ॥

ಮೂಲಮಾಪ್ಯಂ ತಥಾ ಪಾದಂ ವೈಶ್ವದೇವಸ್ಯ ಧನ್ವಿನಿ ।
ಪಾದತ್ರಯಂ ವೈಶ್ವದೇವಾದ್ರಾಜನ್ವೈಷ್ಣವ ಮೇವ ಚ ॥ ೨೯ ॥

ಧನಿಷ್ಠಾರ್ಧಂ ಚ ಮಕರೇ ನಿತ್ಯಮೇವ ಪ್ರಕೀರ್ತಿತಂ ।
ಧನಿಷ್ಠಾರ್ಧಂ ಶತಭಿಷಗಜಪಾಚ್ಚರಣತ್ರಯಂ ॥ ೩೦ ॥

ಕುಂಭರಾಶೌ ವಿನಿರ್ದಿಷ್ಟಂ ಸತತಂ ಪಾರ್ಥಿವೋತ್ತಮ ।
ಪಾದಮಾಜಸ್ಯ ಸಕಲಂ ಚಾಹಿರ್ಬುಧ್ನ್ಯಂ ನರಾಧಿಪ ॥ ೩೧ ॥

ಪೌಷ್ಣಂತು ಕಥಿತಂ ಮೀನೇ ಮುನಿಭಿಸ್ತತ್ತ್ವದರ್ಶಿಭಿಃ ।
ಭಚಕ್ರಪೂಜನೇ ರಾಜನ್ನಕ್ಷತ್ರಸ್ಯ ಪೃಥಕ್ಪೃಥಕ್ ॥ ೩೨ ॥

ರಾಶಿಚಕ್ರಸ್ಯ ಬಾಹ್ಯೇ ತು ಹ್ಯೇಕೈಕಂ ತಾರಕಂ ನ್ಯಸೇತ್ ।
ಪ್ರಾಗುಕ್ತವರ್ಣೈರ್ಭೂಪಾಲ ನ್ಯಾಸಃ ಕಾರ್ಯೋ ಯಥಾವಿಧಿ ॥ ೩೩ ॥

---

೨೭ ಚಿತ್ತ ೩-೪ನೆ ಪಾದ, ಸ್ವಾತಿ ೪ ಪಾದ, ವಿಶಾಖ ೩ ಪಾದ ಸೇರಿ, ಈ ೯ ಪಾದಗಳು ತುಲಾರಾಶಿ ಎನ್ನಿಸಿಕೊಳ್ಳುವುವು.

೨೮-೩೩ ವಿಶಾಖ ೧ ಪಾದ, ಅನೂರಾಧ ೪, ಜ್ಯೇಷ್ಠ ೪ ಪಾದಗಳು ಸೇರಿ ವೃಶ್ಚಿಕರಾಶಿ. ಮೂಲ ೪ ಪಾದ, ಪೂರ್ವಾಷಾಢ ೪ ಪಾದ, ಉತ್ತರಾಷಾಢ ೧ ಪಾದ ಸೇರಿ ಧನುರ್ರಾಶಿ. ಉತ್ತರಾಷಾಢ ೩ ಪಾದ, ಶ್ರವಣ ೪ ಪಾದ, ಧನಿಷ್ಠ ೨ ಪಾದಗಳು ಸೇರಿ ಮಕರರಾಶಿ. ಧನಿಷ್ಠ ೨ ಪಾದ, ಶತಭಿಷ ೪, ಪೂರ್ವಾಭಾದ್ರ ೩ ಪಾದಗಳು ಸೇರಿ ಕುಂಭರಾಶಿ. ಪೂರ್ವಾಭಾದ್ರ ೪ನೆ ಪಾದ, ಉತ್ತರಾಭಾದ್ರ ೪, ರೇವತಿ ೪ ಪಾದಗಳು ಸೇರಿದರೆ ಮೀನರಾಶಿಯಾಗುವುದು. ಒಟ್ಟು ೨೭ ನಕ್ಷತ್ರಗಳಿಗೆ ಒಟ್ಟು ೧೦೮ ಪಾದಗಳು. ಒಂದು ರಾಶಿಗೆ ೯ ಪಾದಗಳು, ಸೇರಿ ಒಂದು ತಾರಾಗ್ರಹ. ಈರೀತಿ ಪಾದಚಕ್ರವನ್ನು ಬರೆದು ಪೂಜಿಸಬೇಕು. ಇದೇ ಭಚಕ್ರಪೂಜೆಯೆನಿಸಿಕೊಳ್ಳುವುದು

**ತಾರಾಚಕ್ರಸ್ಯ ವಿನ್ಯಾಸಂ ರೇಖಯಾ ಪರಿನಾರ್ಯತಂ ।**
**ನಕ್ಷತ್ರದೈವತನ್ಯಾಸಂ ಬಹಿಃ ಕಾರ್ಯಂ ಸಮಂತತಃ ॥ ೩೪ ॥**

**ಯಥಾ ನಕ್ಷತ್ರಸ್ವಾಮಿನಾ ಸ್ಯಾದೃಕ್ಷವರ್ಣೈಃ ಪೃಥಕ್ಪೃಥಕ್ ।**
**ತಸ್ಯಾಪಿ ರೇಖಾ ಕರ್ತವ್ಯಾ ವೃತ್ತಾ ಚಾಪ್ಯಸುಮಂಡಲಂ ॥ ೩೫ ॥**

**ರೇಖಾಬಾಹ್ಯೇನ ವಿನ್ಯಾಸಂ ದಿಗೀಶಾನಾಂ ತು ಕಾರಯೇತ್ ।**
**ದಿಶಶ್ಚ ಪಾರ್ಥಿವಶ್ರೇಷ್ಠ ಯಥಾವದನುಪೂರ್ವಶಃ ॥ ೩೬ ॥**

**ಸ್ವಾಶ್ರಯರ್ಕ್ಷಸಮಂ ವರ್ಣಂ ದಿಗೀಶಾನಾಂ ತು ಕಾರಯೇತ್**
**ಉತ್ತರಾಯಾಂ ಚ ಕರ್ತವ್ಯಂ ಧನದಸ್ಯ ಚ ಮಂಡಲಂ ॥ ೩೭ ॥**

**ರುಕ್ಮವರ್ಣಂ ಪ್ರಯತ್ನೇನ ದಿಶೋ ವರ್ಣಮತಃ ಶೃಣು ।**
**ಉತ್ತರಾ ತು ಭವೇಚ್ಛುಕ್ಲಾ ರಕ್ತಾ ಪ್ರಾಚೀ ಪ್ರಕೀರ್ತಿತಾ ॥ ೩೮ ॥**

ಇದೇ ಮೇರ ಮೇಲೆ ಬರೆದ ಶ್ಲೋಕದಂತೆ ತಾರಾಚಕ್ರವನ್ನು ಬರೆದು ದೈವತಾದಿ ನ್ಯಾಸಗಳನ್ನು ಹೊರಗ ಇರುವಂತೆ ಸುತ್ತಲೂ ಸ್ಥಾಪನೆಮಾಡಬೇಕು.

ಟಿಪ್ಪಣಿ. - ಇದಕ್ಕೆ ನಂಚವಲಾಕ ಚಕ್ರನಂದು ಹೆಸರಿದ ಇದೇ ಮೇರ ಖರ್ಜೂರದ ಹಣ್ಣಿನಂತೆ ಒಂದು ಚಿತ್ರವನ್ನು ಬರದು ನಿರ್ಮಿಸುವ ತಾರಾಚಕ್ರಕ್ಕೆ ಖಾರ್ಜೂರ ಚಕ್ರವೆಂದು ಹಸರಿದೆ ಇದನ್ನು ಕಾಲಾನ್ಮೃತದಲ್ಲಿ ವಿವರಿಸಿರುತ್ತಾರೆ ಇದು ಅಪ್ರಕೃತನಾದ್ದರಿಂದ ಆ ಚಕ್ರವನ್ನು ಬರೆಯಲಿಲ್ಲ

೩೫-೩೭ ನಕ್ಷತ್ರ ಸ್ವಾಮಿಗಳನ್ನು ಆಯಾ ವರ್ಣಗಳಿಂದ ಬೇರೆ ಬೇರೆಯಾಗಿ ಬರೆದ ಮೇಲೆ- -ಇಲ್ಲಿ ಹೇಳಿರುವ ದಿಙ್ಮಂಡಲವನ್ನು ಬರೆದು (ದಿಕ್ಪಾಲಕ ಚಕ್ರ) ಪೂಜಿಸಬೇಕು ಉತ್ತರ ಭಾಗದಲ್ಲಿ ಕುಬೇರಮಂಡಲ ಇದು ಚಿನ್ನದ ಬಣ್ಣದಿಂದ ಬರೆಯಲ್ಪಡಬೇಕು ಪೂರ್ವದಿಕ್ಕು ಕೆಂಪು, ದಕ್ಷಿಣದಿಕ್ಕು ಹಳದಿ, ಪಶ್ಚಿಮದಿಕ್ಕು ಕಪ್ಪು, ಆಗ್ನೇಯದಿಕ್ಕು ತಾಮ್ರವರ್ಣ, ನೈಋತ್ಯದಿಕ್ಕು ನಲಾಶವರ್ಣ, ವಾಯವ್ಯದಿಕ್ಕು ಕಪ್ಪುದಿಲೆ ಹೂವಿನ ಬಣ್ಣ, ಈಶಾನ್ಯ ದಿಕ್ಕು ಬಿಳೀ ಬಣ್ಣ, ಈ ರೀತಿ ಬಣ್ಣಗಳಿಂದ ಅಲಂಕರಿಸಿ ಗೆರೆಗಳಿಂದ ಸುತ್ತುಕಟ್ಟಬೇಕು ಹೀಗೆ ಮುಂದಾಗಿ ಮಂಡಲವನ್ನು ಬರೆದು ಮೇಲೆ ಬರೆದ ವೃತ್ತಾಕಾರದಂತೆ ದಿಕ್ ಚಕ್ರವನ್ನು ಚತುರಶ್ರ ಪ್ರದೇಶಗಳ ತುದಿಗಳಲ್ಲಿ

ದಕ್ಷಿಣಾ ಪೀತವರ್ಣಾ ಸ್ಯಾತ್ಕೃಷ್ಣಾ ಜ್ಞೇಯಾ ಚ ಪಶ್ಚಿಮಾ ।
ಪದ್ಮವರ್ಣಾ ತಥಾ ಜ್ಞೇಯಾ ತಾಮ್ರಾ ಸ್ಯಾತ್ಪೂರ್ವದಕ್ಷಿಣಾ ॥ ೩೯ ॥

ಪಾಲಾಶಾ ಚ ವಿನಿರ್ದಿಷ್ಟಾ ತಥಾ ದಕ್ಷಿಣಪಶ್ಚಿಮಾ ।
ನೀಲೋತ್ಪಲಸವರ್ಣಾ ತು ವಾಯವ್ಯಾ ಪರಿಕೀರ್ತಿತಾ ॥ ೪೦ ॥

ಶುಕ್ಲವರ್ಣಾ ತಥಾ ಜ್ಞೇಯಾ ಚೈಶಾನೀ ತತ್ವದರ್ಶಿಭಿಃ ।
ದಿಙ್ಮಂಡಲಂ ತು ತದ್ವಿದ್ವಾನ್ಲೇಖಯಾ ಪರಿವಾರಯೇತ್ ॥ ೪೧ ॥

ವೃತ್ತಯಾ ವೇಷ್ಟಯೇದ್ವ್ಯತ್ತಾಂ ಲೇಖಯಾ ಚತುರಸ್ರಯಾ ।
ತನ್ಮಧ್ಯಂ ಶಂಖಪದ್ಮಾದ್ಯೈರ್ಮಂಗಲೈರುಪಶೋಭಯೇತ್ ॥ ೪೨ ॥

ಲೇಖಾವಿಧಾನಂ ದ್ವಿಗುಣಂ ಸರ್ವತ್ರೈವ ಪ್ರಕಲ್ಪಯೇತ್ ।
ಮಂಡಲಸ್ಯ ತು ಕೋಣೇಷು ಹ್ಯುದಕುಂಭಾನ್ನವಾನ್ದೃಢಾನ್ ॥ ೪೩ ॥

ಫಲಪಲ್ಲವಸಂಛನ್ನಾನ್ಗಂಧಪುಷ್ಪಾದಿಸಂಯುತಾನ್ ।
ಚತುರೋ ವಿನ್ಯಸೇದ್ವಿದ್ವಾನ್ನಿತ್ಯಮೇವ ವಿಚಕ್ಷಣಃ ॥ ೪೪ ॥

---

ಬರೆದು, ಮಧ್ಯ-ಭಾಗವನ್ನು ಶಂಖಚಕ್ರ ಗದಾಪದ್ಮಗಳಿಂದ ತುಂಬಬೇಕು ಹೆಣ್ಣು ಮಕ್ಕಳು ಇದೇ ಮೇರೆ ರಂಗವಲ್ಲಿಗಳಿಂದ ಚಿತ್ರವಿಚಿತ್ರ ರೇಖೆಗಳನ್ನು ಬರೆಯುವುದನ್ನು ಕಲಿತಿರುತ್ತಾರೆ ಅಕ್ಕಿಹಿಟ್ಟಿನ ರಂಗವಲ್ಲಿಯನ್ನು ಬರೆದರೆ ಅಳಿಸಿಹೋಗುವುದಿಲ್ಲ ಹಾಗೆ ಬರೆದಾದ ಮೇಲೆ ನಾವು ಮೇಲೆ ವಿವರಿಸಿದ ಬಣ್ಣಗಳಿಂದ ಅಲಂಕರಿಸಬೇಕು

೪೨-೪೬. ಜೋಡಿ ಜೋಡಿ ಎರೆಗಳಿಂದ ಮಂಡಲವನ್ನು ನಿರ್ಮಿಸಬೇಕು ಮಂಡಲದ ಮೂಲೆಗಳಲ್ಲೂ ಮಧ್ಯದಲ್ಲೂ ಒಂಭತ್ತು ಪೂರ್ಣ ಕುಂಭ (ಕಲಶ) ಗಳನ್ನಿಡಬೇಕು ಹಣ್ಣು ಚಿಗುರುಗಳನ್ನು ಅವರಲ್ಲಿ ತುಂಬಿ ಗಂಧ ಪುಷ್ಪಾಕ್ಷತೆಗಳನ್ನು ಹಾಕಿರಬೇಕು ಬುದ್ಧಿವಂತನಾದ ವಿದ್ವಾಂಸನು ಯಾವಾಗಲೂ ಇದೇರೀತಿಯಿಂದ ಈ ಪೂಜಾವಿಧಿಯನ್ನು ನಡೆಸಬೇಕು ಗೆರೆಗಳ ಮೇಲೆ ಬಾವುಟಗಳನ್ನಿಡಬೇಕು ಗ್ರಹಗಳಿಗೆಲ್ಲಾ ಒಂದೇ ರೀತಿಯಾದ ಛತ್ರಿಗಳನ್ನಿಡಬೇಕು ಈ ರೀತಿ ಗ್ರಹ-ನಕ್ಷತ್ರ-

ಲೇಖಾಸು ವಿನ್ಯಸೇದ್ರಾಜನ್ಪತಾಕಾಂಶ್ಚ ಧ್ವಜಾನ್ಸ್ತಥಾ ।
ಛತ್ರಾಣಿ ಚ ಸವರ್ಣಾನಿ ಗೃಹೇಂದ್ರಾಣಾಂ ಪೃಥಕ್ಪೃಥಕ್ ॥ ೪೫ ॥

ಸ್ಥಾನಂ ತು ವಿಜ್ಞಾಯ ಯಥಾವದತ್ರ
ಕಾರ್ಯಂ ಯಥಾ ಮಂಡಲಕಪ್ರಮಾಣಂ ॥
ಯಥಾ ಮಹತ್ವಾ ನೃಪ ಮಂಡಲಸ್ಯ
ತಥಾ ತಥಾ ವೃದ್ಧಿಮುಪೈತಿ ಕರ್ತಾ ॥ ೪೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಂಡಲಕಲ್ಪನಂನಾಮ
ಚತುರ್ನವತಿತಮೋಽಧ್ಯಾಯಃ

---

ದಿಗ್ದೇವತಾಸ್ಥಾನಗಳನ್ನು ತಿಳಿದು ಮಂಡಲವನ್ನು ಎಷ್ಟು ಮಹತ್ವದಿಂದ ಯಾವ ಬುದ್ಧಿವಂತನು ರಚಿಸುವನೋ ಅವನು ಅಷ್ಟುಮಟ್ಟಿಗೆ ಅಭಿವೃದ್ಧಿ ಹೊಂದುತ್ತಾನೆಂದು ಮಾರ್ಕಂಡೇಯರು ವಜ್ರನರಪತಿಗೆ ಹೇಳಿದರು

ಇಲ್ಲಿಗೆ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಮಂಡಲ ಕಲ್ಪನೆಯೆಂಬ ಹೆಸರಿನ ತೊಂಭತ್ತನಾಲ್ಕನೆಯ
ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಪಂಚನವತಿತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ಆವಾಹನಾನ್ಯತೋ ವಕ್ಷ್ಯೇ ಸರ್ವೇಷಾಂ ಪಾರ್ಥಿವೋತ್ತಮ ।
ಸರ್ವಸ್ಯಾವಾಹನಸ್ಯಾಂತೋ ಶ್ಲೋಕೋಽಯಂ ಪರಿಕೀರ್ತ್ಯತೇ ॥ ೧ ॥

ಮಂಡಲೇ ಸಂಪ್ರವಿಶ್ಯಾಸ್ಮಿನ್ಮಯಾ ಭಕ್ತ್ಯಾ ನಿವೇದಿತಂ ।
ಇದಮರ್ಘ್ಯ ಮಿದಂ ಪಾದ್ಯಂ ಧೂಪೋಽಯಂ ಪ್ರತಿಗೃಹ್ಯತಾಂ ॥ ೨ ॥

ಧ್ರುವಮಾವಾಹಯಿಷ್ಯಾಮಿ ಸರ್ವಗ್ರಹಗಣೇಶ್ವರಂ ।
ನಿರುದ್ಧಂ ಭ್ರಾಮ್ಯತೇ ಯೇನ ಭಚಕ್ರಂ ವಾತರಜ್ಜುಭಿಃ ॥ ೩ ॥

---

## ತೊಂಭತ್ತೈದನೆಯ ಅಧ್ಯಾಯವು.

೧ ಮಾರ್ಕಂಡೇಯರು ಪುನಃ ವಜ್ರರಾಜನೊಡನೆ ವಿವರಿಸುತ್ತಾರೆ —ಎಲೈ ರಾಜಶ್ರೇಷ್ಠನೇ! ಸಕಲ ದೇವತೆಗಳನ್ನೂ ಆವಾಹನೆ ಮಾಡುವ ಕ್ರಮವನ್ನು ಹೇಳುತ್ತೇನೆ, ಕೇಳು ಎಲ್ಲಾ ಆವಾಹನೆಗಳ ಕೊನೆಯಲ್ಲೂ ಈ ಕೆಳಗೆ ವಿವರಿಸಿದ ಶ್ಲೋಕವನ್ನು ಹೇಳಬೇಕು

೨-೩ ಸರ್ವಗ್ರಹಗಣಗಳಿಗೂ ಧೊರೆಯಾದ ಸೂರ್ಯ (ಧ್ರುವ) ನನ್ನು ಈ ಮಂಡಲದಲ್ಲಿ ಆವಾಹನೆ ಮಾಡುತ್ತೇನೆ ನಕ್ಷತ್ರಚಕ್ರವೆಂಬುದು ವಾಯುವೆಂಬ ಹಗ್ಗಗಳಿಂದ ಬಿಗಿಯಲ್ಪಟ್ಟು ಯಾವ ಸೂರ್ಯನ ಸುತ್ತಲೂ ತಿರುಗುತ್ತಿರುವುದೋ ಅಂತಹ ಧ್ರುವ (ಸೂರ್ಯ) ಮಂಡಲಕ್ಕೆ ಅರ್ಘ್ಯ ಪಾದ್ಯಾಚಮನೀಯಗಳನ್ನೂ ಧೂಪವನ್ನೂ ಸಮರ್ಪಿಸುತ್ತೇನೆ ಸ್ವೀಕರಿಸೈ ಮಹಾನುಭಾವನೇ ॥

ಏಹಿ ಮೇ ಧ್ರುವ ದೇವೇಶ ಕೇಶವಾಚಿಂತ್ಯವಿಕ್ರಮ ।
ಸರ್ವಗ್ರಹಗಣಾಧ್ಯಕ್ಷ ಸರ್ವಲೋಕನಮಸ್ಕೃತ ॥ ೪ ॥

ಆವಾಹಯಿಷ್ಯಾಮ್ಯಾಕಾಶಂ ವಿಮಾನಶತಮಂಡಿತಂ ।
ತೃತೀಯಂ ದೇವದೇವಸ್ಯ ಪದಂ ವಿಷ್ಣೋರ್ಮಹಾತ್ಮನಃ ॥ ೫ ॥

ಏಹಿ ಮೇ ಭಗವನ್ಸ್ವಾಮ್ಯ ನಿರಾಲಂಬ ನಭಸ್ತಲ ।
ಅಪ್ರಮೇಯಾತಿಗಂಭೀರ ನಕ್ಷತ್ರಗ್ರಹಮಂಡಿತ ॥ ೬ ॥

ಆವಾಹಯಾಮ್ಯಹಂ ದೇವಂ ಬ್ರಹ್ಮಾಣಂ ಜಗತಾಂ ಪತಿಂ ।
ಜಗತೋಽಸ್ಯ ಸಮುತ್ಪತ್ತಿಸ್ಥಿತಿಸಂಹಾರಕಾರಕಂ ॥ ೭ ॥

ಏಹಿ ಸರ್ವಪ್ರಜಾಧ್ಯಕ್ಷ ಪದ್ಮಯೋನೇ ಚತುರ್ಮುಖ ।
ವೇದಮೂರ್ತೇ ತದಾಧಾರ ಕಾಲನಿರ್ಮಾಣತತ್ಪರ ॥ ೮ ॥

ಊರ್ಧ್ವಮಾವಾಹಯಿಷ್ಯಾಮಿ ಹ್ಯನಂತಾಂ ಮಹತೀಂ ದಿಶಂ
ಅಪ್ರಮೇಯಾಂ ನಿರಾಲಂಬಾಂ ಚಂದ್ರಸೂರ್ಯಾಂಶು ವರ್ಜಿತಾಂ ॥ ೯ ॥

ಆಗಚ್ಛೇಹ ಮಹಾಭಾಗೇ ಸತತಂ ಸಿದ್ಧಸೇವಿತೇ ।
ಅನಂತೇ ವಿಪುಲೇ ದೇವಿ ನಿರ್ಮಲೇ ಹಿತಕಾರಿಣಿ ॥ ೧೦ ॥

---

೪ ಇದು ಧ್ರುವಮಂಡಲದ ಆವಾಹನ ಮಂತ್ರವು

೫ ಬಳಿಕ ಆಕಾಶವನ್ನಾವಾಹಿಸುವ ಮಂತ್ರವಿದು — ಆಕಾಶವು ನೂರಾರು ವಿಮಾನಗಳಿಂದ ಅಲಂಕೃತವಾಗಿದೆ. ಇದು ಮಹಾವಿಷ್ಣುವಿನ ಮೂರನೇ ಪಾದ ! ಇಂತಹ ವಿಷ್ಣುಪದವನ್ನಾವಾಹಿಸುವೆನು

೬ ಇಂದ್ರನನ್ನು ಆವಾಹಿಸುವ ಮಂತ್ರ

೭-೮ ಬ್ರಹ್ಮನನ್ನು ಆವಾಹಿಸುವ ಮಂತ್ರ

೯ ಊರ್ಧ್ವ (ಮೇಲಿನ) ದಿಕ್ಕನ್ನು ಆವಾಹಿಸುವ ಮಂತ್ರ.

೧೦-೧೨ ಭೂದೇವಿಯ ಆವಾಹನ ಮಂತ್ರ

ಪೃಥ್ವೀಮಾವಾಹಯಿಷ್ಯಾಮಿ ಸರ್ವಸತ್ವಹಿತೇ ರತಾಂ ।
ಧರಾಂ ಭೂಮಿಂ ಕ್ಷಮಾಂ ಕ್ಷೋಣೀಂ ವರದಾಂ ಭೂತಧಾರಿಣೀಂ ॥ ೧೧ ॥

ಏಹಿ ಮೇ ವಸುಧೇ ದೇವಿ ವರಾಹೇಣ ಸಮುದ್ಧೃತೇ ।
ಸರ್ವಬೀಜಧರೇ ಭದ್ರೇ ಸರ್ವಭೂತಾಪಹಾರಿಣಿ ॥ ೧೨ ॥

ಶೇಷಮಾವಾಹಯಿಷ್ಯಾಮಿ ಮಹೀಮಂಡಲಧಾರಿಣಂ ।
ಫಣಾವಲೀರತ್ನಜಾಲಮರೀಚಿವಿಕಸೋಜ್ಜ್ವಲಂ ॥ ೧೩ ॥

ಏಹಿ ಶೇಷ ಮಹಾಭಾಗ ಏಹ್ಯನಂತಾದಿಕೇಶವ ।
ಆಹೇಯಿಾ ತ್ವಂ ತನುಸ್ತಸ್ಯ ವಿಷ್ಣೋರಮಿತತೇಜಸಃ ॥ ೧೪ ॥

ಆವಾಹಯಾಮ್ಯಧಸ್ತಾತ್ತು ದಿಶಂ ಶೇಷೇಣ ಪಾಲಿತಾಂ ।
ನಾಗದೈತ್ಯೋರಗಗಣೈಸ್ಸತತಂ ಚ ನಿಷೇವಿತಾಂ ॥ ೧೫ ॥

ಏಹಿ ಮೇ ರತ್ನಬಾಹುಲ್ಯೇ ನಿತ್ಯಂ ಶೇಷೇಣ ಪಾಲಿತೇ ।
ಗಂಭೀರೇ ವಿಪುಲೇ ಭೀಮೇ ಬಹುಸ್ಥಾನಾಭಿಮಂಡಿತೇ ॥ ೧೬ ॥

ಆವಾಹಯಿಷ್ಯೇ ವರದಂ ದೇವೇಶಂ ಜಾತವೇದಸಂ ।
ವೇದಮೂರ್ತಿಂ ತದಾಧಾರಂ ದೇವದೇವಂ ಹುತಾಶನಂ ॥ ೧೭ ॥

ಏಹ್ಯಗ್ನೇ ಸರ್ವದೇವೇಶ ಸರ್ವದೇವಮುಖಾಚ್ಯುತ ।
ಸರ್ವತ್ರಸ್ಥ ಮಹಾಭಾಗ ಸರ್ವಭೂತಹಿತೇ ರತ ॥ ೧೮ ॥

---

ಈ ಆವಾಹನ ಮಂತ್ರದಲ್ಲಿರುವ ಪದಗಳು ಈ ಗ್ರಂಥದಲ್ಲಿ ಇದುವರೆಗೆ ಅನೇಕ ವೇಳೆ ಬಂದಿರುವುದರಿಂದಲೂ ಪದಗಳು ಸುಲಲಿತವಾಗಿರುವುದರಿಂದಲೂ ಅರ್ಥವನ್ನು ಬರೆಯಲಿಲ್ಲ

೧೩-೧೪ ಆದಿಶೇಷನ ಆವಾಹನ ಮಂತ್ರ

ಟಿಪ್ಪಣಿ — ಅಹಿ ಎಂದರೆ ಸರ್ಪ ಆಹೇಯೀ ಎಂದರೆ ಸರ್ಪದ ದೇಹ

೧೫-೧೬ ಪಾತಾಳ (ಕೆಳಗಿನ) ಲೋಕದ ಆವಾಹನೆ

೧೭-೧೮ ಯಜ್ಞೇಶ್ವರಾವಾಹನ ಮಂತ್ರ

ಆವಾಹಯಿಷ್ಯೇ ವರದಂ ಸಹಸ್ರಾಂಶುಂ ದಿವಾಕರಂ ।
ತೇಜೋಮೂರ್ತಿಂ ದುರಾಧರ್ಷಂ ಭಕ್ತಾನಾಮಭಯಪ್ರದಂ ॥ ೧೯ ॥

ಏಹಿ ದೇವ ಜಗನ್ನಾಥ ಋಕ್ಸಾಮಯಜುಷಾಂಪತೇ ।
ತ್ರೈಲೋಕ್ಯಮಂಡಲದ್ವೀಪ ಸರ್ವವ್ಯಾಧಿವಿನಾಶನ ॥ ೨೦ ॥

ಆವಾಹಯಾಮ್ಯಹಂ ದೇವಮಾದಿತ್ಯಮುದಕೇಶಯಂ ।
ಸ್ನಿಗ್ಧವೈಡೂರ್ಯಸಂಕಾಶಂ ವರುಣಂ ಸುಮಹಾದ್ಯುತಿಂ ॥ ೨೧ ॥

ಏಹಿ ದೇವ ಜಲಾಧ್ಯಕ್ಷ ಯಾದೋಗಣಮಹೇಶ್ವರ ।
ನಾಗದೈತ್ಯೋರಗಗಣೈಸ್ಸತತಂ ಸೇವಿತಾಚ್ಯುತ ॥ ೨೨ ॥
ಆವಾಹಯಾಮ್ಯಹಂ ಚಂದ್ರಂ ಶೀತಾಂಶುಮಮೃತಪ್ರಭಂ ।
ಓಷಧೀಶಂ ದ್ವಿಜಾಧ್ಯಕ್ಷಂ ನಯನಾನಂದಕಾರಕಂ ॥ ೨೩ ॥

ಏಹಿ ಮೇ ಭಗವಂಶ್ಚಂದ್ರ ಏಹಿ ಮೇ ಮೃಗಲಾಂಛನ ।
ಭಕ್ತಾನುಕಂಪಿನ್ಸತತಂ ಸರ್ವನಕ್ಷತ್ರಪೂಜಿತ ॥ ೨೪ ॥

ಸ್ಕಂದಮಾವಾಹಯಿಷ್ಯಾಮಿ ಷಣ್ಮುಖಂ ವರದಂ ಶಿಶುಂ ।
ದೇವ ಸೈನ್ಯಸ್ಯ ಧಿಪತಿಂ ಪಾರ್ವತ್ಯಾನಂದವರ್ಧನಂ ॥ ೨೫ ॥

ಏಹಿ ದೇವತಮಾರಾಧ್ಯ ಮಹಿಷಾಸುರತಸ್ಕರ ।
ಕಾರ್ತಿಕೇಯ ಜಗನ್ನಾಥ ಮಯೂರವರವಾಹನ ॥ ೨೬ ॥

---

೧೯-೨೧ ಸೂರ್ಯಾವಾಹನ ಮಂತ್ರ
೨೧-೨೨ ವರುಣಾವಾಹನ ಮಂತ್ರ
೨೩-೨೪ ಚಂದ್ರಾವಾಹನ ಮಂತ್ರ
ಏಹಿ--ಬಾ ಭಕ್ತಾನುಕಂಪೀ--ಭಕ್ತರಲ್ಲಿ ದಯೆಯುಳ್ಳವನು
೨೫-೨೬ ಸ್ಕಂದಾವಾಹನ (ಷಣ್ಮುಖ) ಮಂತ್ರ

ಟಿಪ್ಪಣಿ — ಮೂಲದಲ್ಲಿ ಮಹಿಷಾಸುರತಸ್ಕರ ಎಂದಿದೆ ಇದು ಇತರ ಪುರಾಣ ಗಳಲ್ಲಿಲ್ಲವೆಂದು ತೋರುತ್ತದೆ ಕುಮಾರಸ್ವಾಮಿಯು ಮಹಿಷಾಸುರನನ್ನು ಸಂಹರಿಸಿದ ಸಂಗತಿಯು ಇದೇ ಖಂಡದ ೨೩೩ನೆಯ ಅಧ್ಯಾಯದಲ್ಲಿ ಬಂದಿರುವುದರಿಂದ ಈ ಖಂಡ ದ ಮುಂದಿನ ಪುಟದಲ್ಲಿ ಬರುವ ಈ ವೃತ್ತಾಂತವನ್ನೋದಿರಿ ಕುಮಾರಸ್ವಾಮಿಯು

ಭೌಮಮಾವಾಹಯಿಷ್ಯಾಮಿ ತೇಜೋಮೂರ್ತಿಂ ದುರಾಸದಂ ।
ರುದ್ರಮೂರ್ತಿಮನಿರ್ದೇಶ್ಯವಕ್ತ್ರಂ ರುಧಿರಸಪ್ರಭಂ ॥ ೨೭ ॥

ಏಹಿ ಮೇ ಭಗವಾನ್ಸೌಮ್ಯ ಅಂಗಾರಕ ಮಹಾಪ್ರಭ ।
ತ್ವಯಿ ಸರ್ವಂ ಸಮಾಯತ್ತಂ ಭೂತಲೇಽಸ್ಮಿನ್ಶುಭಾಶುಭಂ ॥ ೨೮ ॥

ವಿಷ್ಣುಮಾವಾಹಯಿಷ್ಯಾಮಿ ಶಂಖಚಕ್ರಗದಾಧರಂ ।
ಅತಸೀಕುಸುಮಶ್ಯಾಮಂ ಪೀತವಾಸಸಮಚ್ಯುತಂ ॥ ೨೯ ॥

ಏಹಿ ಮೇ ದೇವದೇವೇಶ ಪ್ರಜಾನಿರ್ಮಾಣಕಾರಕ ।
ನಾರಾಯಣ ಸುದುಷ್ಪಾರ ಮಹಾಶಾರ್ಙ್ಗಧನುರ್ಧರ ॥ ೩೦ ॥

ಬುಧಮಾವಾಹಯಿಷ್ಯಾಮಿ ಬೋಧಕಂ ಜಗದೀಶ್ವರಂ ।
ಚಾಂದ್ರ ಗ್ರಹಗಣಾಧ್ಯಕ್ಷಂ ತೇಜೋಮೂರ್ತಿಂ ದುರಾಸದಂ ॥ ೩೧ ॥

ಏಹಿ ಶೀತಾಂಶುಜಾಚಿಂತ್ಯ ಜಗಜ್ಜಿಷ್ಣೋ ಜನಾರ್ದನ ।
ಮಹಾಬಲ ಮಹಾಸತ್ವ ಮಹಾಬಾಹೋ ಮಹಾದ್ಯುತೇ ॥ ೩೨ ॥

ಶಕ್ರಮಾವಾಹಯಿಷ್ಯಾಮಿ ದೇವಂ ಸುರಗಣೇಶ್ವರಂ ।
ವಜ್ರಪಾಣಿಂ ಮಹಾಬಾಹುಂ ಗೋಬ್ರಾಹ್ಮಣಹಿತೇ ರತಂ ॥ ೩೩ ॥

ಏಹಿ ದೇವ ಸಹಸ್ರಾಕ್ಷ ದೇವಾರಿಬಲಸೂದನ ।
ಐರಾವತಸ್ಥ ಧರ್ಮಜ್ಞ ಶಚೀಹೃದಯನಂದನ ॥ ೩೪ ॥

---

ತಾರಕಾಸುರನನ್ನು ಕೊಂದ ವೃತ್ತಾಂತವು ಸುಪ್ರಸಿದ್ಧವಾಗಿದೆಯಾದುದರಿಂದ ಮಹಿಷಾಸುರವಧೆಯಂತಹ ಅಪೂರ್ವ ಚರಿತ್ರೆಗಳು ಈ ಪುಸ್ತಕ ಪುರಾಣದಲ್ಲಿ ಯಥೇಚ್ಛವಾಗಿ ಬರುತ್ತವೆ

೨೭-೨೮　ಅಂಗಾರಕಾವಾಹನ ಮಂತ್ರ

ಭೌಮ--ಭೂಮಿದೇವಿಯ ಮಗ　ರುಧಿರ—ರಕ್ತ (ಕೆಂಪು)

೨೯-೩೦　ವಿಷ್ಣುವಿನ ಆವಾಹನ ಮಂತ್ರ

೩೧-೩೨　ಬುಧಾವಾಹನ ಮಂತ್ರ.

೩೩-೩೪　ಇಂದ್ರಾವಾಹನ ಮಂತ್ರ.

ಜೀವಮಾವಾಹಯಿಷ್ಯಾಮಿ ದೇವೇಶ್ವರಪುರೋಹಿತಂ ।
ಬೃಹಸ್ಪತಿಂ ಬೃಹದ್ವಾಚಂ ವೇದವೇದಾಂಗಪಾರಗಂ ॥ ೩೫ ॥

ಏಹಿ ಜೀವ ಮಹಾಭಾಗ ಜೀವಭೂತ ಮಹೀತಲೇ ।
ಸಸ್ಯವೃದ್ಧಿಸ್ತ್ವನಾಯತ್ತಾ ಸತತಂ ಭೂಮಿವರ್ಧನ ॥ ೩೬ ॥

ದೇವೀಮಾವಾಹಯಿಷ್ಯಾಮಿ ಪಾರ್ವತೀಂ ವರದಾಮುಮಾಂ ।
ಹರಸ್ಯ ದಯಿತಾಂ ಭಾರ್ಯಾಂ ಚಾರ್ವಂಗೀಂ ಭೂತಿವರ್ಧಿನೀಂ ॥ ೩೭ ॥

ಏಹಿ ದೇವಿ ಜಗನ್ನಾಥೇ ಮೇನಾಹೃದಯನಂದಿನಿ ।
ಪವಿತ್ರೇ ವರದೇ ಸೌಮ್ಯೇ ನಿತ್ಯಂ ಭಕ್ತಜನಪ್ರಿಯೇ ॥ ೩೮ ॥

ಶುಕ್ರಮಾವಾಹಯಿಷ್ಯಾಮಿ ಭಾರ್ಗವಂ ಜಗದೀಶ್ವರಂ ।
ನಿತ್ಯಂ ಸರ್ವಜನಾಧ್ಯಕ್ಷಂ ತಪಸಾ ದ್ಯೋತಿತಪ್ರಭಂ ॥ ೩೯ ॥

ಏಹಿ ಶುಕ್ರ ಮಹಾಭಾಗ ಷೋಡಶಾರ್ಚಿರ್ವರಪ್ರದ ।
ಪ್ರಭುಸ್ತ್ವಂ ವರದಾಚಿಂತ್ಯ ವರ್ಷಾವರ್ಷಸ್ಯ ನಿಗ್ರಹೇ ॥ ೪೦ ॥

ಆವಾಹಯಾಮ್ಯಹಂ ದೇವಂ ಪ್ರಜಾಧ್ಯಕ್ಷಮಕಲ್ಮಷಂ ।
ಭಕ್ತಾನುಕಂಪಿನಂ ದೇವಂ ಪ್ರಜಾನಿರ್ಮಾಣಕಾರಕಂ ॥ ೪೧ ॥

ಏಹಿ ದೇವ ಪ್ರಜಾಧ್ಯಕ್ಷ ಪ್ರಜಾನಿರ್ಮಾಣಕಾರಕ ।
ತ್ವಯಿ ದೇವ ಸಮಾಯುಕ್ತಂ ಪ್ರಜಾನಾಮಭವೋದ್ಭವಂ ॥ ೪೨ ॥

---

೩೫-೩೬ ಬೃಹಸ್ಪತ್ಯಾವಾಹನ ಮಂತ್ರ

೩೭-೩೮ ಗೌರ್ಯಾವಾಹನ ಮಂತ್ರ

೩೯-೪೦ ಶುಕ್ರಾವಾಹನ ಮಂತ್ರ

೪೧-೪೨ ಬ್ರಹ್ಮಾವಾಹನ ಮಂತ್ರ

ಏಹಿ ಮೇ ಭಗವನ್ಬ್ರಹ್ಮನ್ಪ್ರಜಾಪತಿಮಹಾದ್ಯುತೇ ।
ಸೌರಿಮಾವಾಹಯಿಷ್ಯಾಮಿ ಶನೈಶ್ಚಾರಿಣಮಚ್ಯುತಂ ॥ ೪೩ ॥

ತಪಸ್ವಿನಮನಾಧೃಷ್ಯಂ ಭಕ್ತಾನಾಮಭಯಪ್ರದಂ ।
ಏಹಿ ತೀಕ್ಷ್ಣಾಂಶುಜಾಚಿಂತ್ಯ ಭಾವಾಭಾವಪ್ರದರ್ಶಕ ॥ ೪೪ ॥

ತ್ವಯಿ ಸರ್ವಂ ಸಮಾಯತ್ತಂ ರಾಜ್ಞಾಂ ಭೂಮೌ ಶುಭಾಶುಭಂ ।
ಆವಾಹಯಾಮ್ಯಹಂ ದೇವಂ ಗಜವಕ್ತ್ರಂ ಗಣೇಶ್ವರಂ ॥ ೪೫ ॥

ವಿಘ್ನೇಶಂ ವಿಘ್ನಹರ್ತಾರಂ ಪಾರ್ವತೀಹೃದಯಪ್ರಿಯಂ ।
ಏಹಿ ದೇವ ಗಣಾಧ್ಯಕ್ಷ ಲಂಬೋದರ ಮಹಾಭುಜ ॥ ೪೬ ॥

ಕಾರ್ಯಸಿದ್ಧಿಃ ಸಮಾಯತ್ತಾ ತ್ವಯಿ ಸರ್ವೇಶ ದೇಹಿನಾಂ ।
ರಾಹುಮಾವಾಹಯಿಷ್ಯಾಮಿ ದೈತ್ಯೇಶಂ ಗ್ರಹತಾಂಗತಂ ॥ ೪೭ ॥

ಕೇಶವಾಪ್ತವರಂ ವೀರಂ ತಪಸಾ ದಗ್ಧಕಿಲ್ಬಿಷಂ ।
ಏಹ್ಯೇಹಿ ದೈತ್ಯಪ್ರವರ ವರದಾಚಿಂತ್ಯವಿಕ್ರಮ ॥ ೪೮ ॥

ತಪೋಮೂರ್ತೇ ದುರಾಧರ್ಷ ವಿಪರೀತಚರಾಂಬರೇ ।
ಆವಾಹಯಾಮ್ಯಹಂ ದೇವಂ ವಿಶ್ವಕರ್ಮಾಣಮಚ್ಯುತಂ ॥ ೪೯ ॥

ಸರ್ವಾಸಾಂ ದೇವತಾನಾಂ ತು ಸದಾಶಿಲ್ಪಪ್ರವರ್ತಕಂ ।
ಏಹಿ ದೇವವರಾಚಿಂತ್ಯ ಸರ್ವಶಿಲ್ಪಪ್ರವರ್ತಕ ॥ ೫೦ ॥

ತ್ವಯಿ ಸರ್ವೈವ ಸರ್ವೇಷಾಂ ಕರ್ಮಣಾಮಾಶ್ರಿತಾ ಗತಿಃ ।
ಕೇತುಮಾವಾಹಯಿಷ್ಯಾಮಿ ಕೇತುಂ ಸರ್ವದಿವೌಕಸಾಂ ॥ ೫೧ ॥

---

೪೩-೪೪ ಶನೈಶ್ಚರಾವಾಹನ ಮಂತ್ರ

೪೫-೪೬ ಗಣಪತ್ಯಾವಾಹನ ಮಂತ್ರ

೪೭-೪೮ ರಾಹ್ವಾವಾಹನ ಮಂತ್ರ

೪೯-೫೦ ವಿಶ್ವಕರ್ಮಾವಾಹನ ಮಂತ್ರ

ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಭಕ್ತಾನಾಮುಭಯಪ್ರದಂ ।
ಧೂಮಕೇತೋ ಇಹಾಭ್ಯೇಹಿ ಹುತಾಶನಸಮಪ್ರಭ ॥ ೫೨ ॥

ಶಿಖಾಕರಾಲವಿಕಟ ಪೂಜಿತಾಘವಿನಾಶನ ।
ವಹ್ನೇರಾವಾಹನಂ ಪ್ರೋಕ್ತಂ ಪೂರ್ವಮೇವ ಮಯಾಽನಘ ॥ ೫೩ ॥

ಆವಾಹಯಿಷ್ಯಾಮಿ ಶುಭಾಂ ಕೃತ್ತಿಕಾಂ ದೇವಪೂಜಿತಾಂ ।
ಏಹಿ ಸಾಧಾರಣೇ ದೇವಿ ಜ್ಯೇಷ್ಠದಕ್ಷಸುತೇ ಶುಭೇ ॥ ೫೪ ॥

ಪ್ರಜಾಪತೇಸ್ತಥಾ ಪ್ರೋಕ್ತಂ ರೋಹಿಣ್ಯಾಃ ಶೃಣು ಪಾರ್ಥಿವ ।
ಆವಾಹಯಾಮಿ ವರದಾಂ ರೋಹಿಣೀಂ ಚಂದ್ರವಲ್ಲಭಾಂ ॥ ೫೫ ॥

ಏಹಿ ರೋಹಿಣಿ ಧರ್ಮಜ್ಞೇ ಧ್ರುವಕರ್ಮಸು ಶೋಭನೇ ।
ಚಂದ್ರಸ್ಯಾವಾಹನಂ ಪ್ರೋಕ್ತಮಿಲ್ವಲಾಯಾ ನಿಬೋಧ ಮೇ ॥ ೫೬ ॥

ಆವಾಹಯಾಮಿ ವರದಾಮಿಲ್ವಲಾಂ ಶಶಿವಲ್ಲಭಾಂ ।
ಏಹಿ ಮೇ ಇಲ್ವಲೇ ದೇವಿ ಮೃದುಕರ್ಮಸು ಶೋಭನೇ ॥ ೫೭ ॥

ರುದ್ರಮಾವಾಹಯಿಷ್ಯಾಮಿ ತ್ರಿನೇತ್ರಂ ಶೂಲಪಾಣಿನಂ ।
ಏಹಿ ಶಂಕರ ಸರ್ವಾತ್ಮನ್ಮಹಾದೇವ ಗಣೇಶ್ವರ ॥ ೫೮ ॥

---

೫೧-೫೨ ಕೇತ್ವಾವಾಹನ ಮಂತ್ರ

೫೩ ಅಗ್ನ್ಯಾವಾಹನವನ್ನು ಹಿಂದೆಯೇ ಹೀಗೆ ಹೇಳಿದೆ

೫೪ ಕೃತ್ತಿಕಾ ನಕ್ಷತ್ರಾವಾಹನ ಮಂತ್ರ

೫೫-೫೬ ರೋಹಿಣೀ ನಕ್ಷತ್ರಾವಾಹನ ಮಂತ್ರ

ಟಿಪ್ಪಣಿ — ಕೃತ್ತಿಕೆ-ರೋಹಿಣಿ ಇವರಿಬ್ಬರೂ ದಕ್ಷಬ್ರಹ್ಮನ ಹೆಣ್ಣುಮಕ್ಕಳಾದ್ದರಿಂದ ಈರೀತಿ ಬರೆದಿದೆ

೫೭ ಮೃಗಶಿರಾ ನಕ್ಷತ್ರ ಆವಾಹನ ಮಂತ್ರ

೫೮ ರುದ್ರಾವಾಹನ ಮಂತ್ರ

ಆದ್ರಾರ್ಮಾವಾಹಯಿಷ್ಯಾಮಿ ನಕ್ಷತ್ರಂ ಬಾಹುಸಂಜ್ಞಿಕಂ ।
ಏಹ್ಯಾದ್ರೇ ಚಾರುಸರ್ವಾಂಗಿ ದಾರುಣೇ ರುದ್ರಸಮ್ಮತೇ ॥ ೫೯ ॥

ಆವಾಹಯಿಷ್ಯಾಮ್ಯದಿತಿಂ ತಪಸಾ ದಗ್ಧಕಿಲ್ಬಿಷಾಂ ।
ಅದಿತ್ಯಾರಣಿ ಧರ್ಮಜ್ಞೇ ಏಹಿ ದೇವಿ ಮಹಾಪ್ರಭೇ ॥ ೬೦ ॥

ಋಕ್ಷಮಾವಾಹಯಿಷ್ಯಾಮಿ ಧರ್ಮಜ್ಞಂ ತು ಪುನರ್ವಸುಂ ।
ಪುನರ್ವಸೋ ಇಹಾಗಚ್ಛ ಚರಕರ್ಮಪ್ರಸಾದಕ ॥ ೬೧ ॥

ಜೀವಸ್ಯಾವಾಹನಂ ಪ್ರೋಕ್ತಂ ಪುಷ್ಯಸ್ಯಾಥ ಪ್ರಚಕ್ಷತೇ ।
ಪುಷ್ಯಮಾವಾಹಯಿಷ್ಯಾಮಿ ನಕ್ಷತ್ರಂ ಕ್ಷಿಪ್ರಸಂಜ್ಞಿಕಂ ॥ ೬೨ ॥

ಏಹಿ ಪುಷ್ಯ ಮಹಾಭಾಗ ಪೋಷಂ ವರ್ಧಯ ಸರ್ವತಃ ।
ಸರ್ಪಾನಾವಾಹಯಿಷ್ಯಾಮಿ ತ್ರೈಲೋಕ್ಯಾಂತರಗೋಚರಾನ್ ॥ ೬೩ ॥

ಆಯಾಂತು ಸರ್ವತಃ ಸರ್ಪಾಃ ಸೌಮ್ಯರೂಪಾಃ ಭವಂತು ಚ ।
ಆವಾಹಯಿಷ್ಯಾಮ್ಯಾಶ್ಲೇಷಾಂ ಭಕ್ತಾನಾಂ ಶ್ರೀವಿವರ್ಧನಾಂ ॥ ೬೪ ॥

ಆಶ್ಲೇಷೇ ತ್ವಮಿಹಾಭ್ಯೇಹಿ ದಾರುಣೇ ವಿಜಯಪ್ರದೇ ।
ಪಿತ್ರ್ನಾವಾಹಯಿಷ್ಯಾಮಿ ಮೂರ್ತ್ಯಮೂರ್ತಿಧರಾನಹಂ ॥ ೬೫ ॥

ಆಯಾಂತು ಪಿತರಶ್ಶೀಘ್ರಂ ಸುಧಾಕವ್ಯಭುಜೋಽವ್ಯಯಾಃ ।
ಮಘಾಮಾವಾಹಯಿಷ್ಯಾಮಿ ಉಗ್ರನಕ್ಷತ್ರಮಂಜಸಾ ॥ ೬೬ ॥

---

೫೯ ಆದ್ರಾ ನಕ್ಷತ್ರಾವಾಹನ ಮಂತ್ರ

೬೦ ಅದಿತ್ಯಾವಾಹನ ಮಂತ್ರ.

೬೧-೬೨ ಪುನರ್ವಸೂ ನಕ್ಷತ್ರಾವಾಹನ ಮಂತ್ರ

೬೨-೬೩ ಪುಷ್ಯನಕ್ಷತ್ರಾವಾಹನ ಮಂತ್ರ

೬೩-೬೪. ಆಶ್ಲೇಷಾ ನಕ್ಷತ್ರ ಆವಾಹನ ಮಂತ್ರ.

೬೫-೬೬ ಮಘಾನಕ್ಷತ್ರ ಆವಾಹನ ಮಂತ್ರ

ಏಹಿ ಮೇ ಸುಭಗೇ ದೇವಿ ಮಘೇ-ಘವಿನಿಷೂದನೇ ।
ಭಗಮಾವಾಹಯಿಷ್ಯಾಮಿ ಪೂರ್ವಫಲ್ಗುಣಸಂಜ್ಞಿತಂ ॥ ೬೭ ॥

ಏಹಿ ಭಾಗ್ಯೇ ಮಹಾಭಾಗೇ ಉಗ್ರಕರ್ಮಪ್ರಸಾದಿಕೇ ।
ಆವಾಹಯಿಷ್ಯಾಮ್ಯರ್ಯಮ್ಣಮಾದಿತ್ಯಂ ತೇಜಸಾಂ ನಿಧಿಂ ॥ ೬೮ ॥

ಅರ್ಯಮಂಸ್ತ್ವಂ ಸಮಭ್ಯೇಹಿ ಭಕ್ತಪಾತಕನಾಶನ ।
ಋಕ್ಷಮಾವಾಹಯಿಷ್ಯಾಮಿ ಚೋತ್ತರಾಫಲ್ಗುನೀಂ ಶುಭಾಂ ॥ ೬೯ ॥

ಏಹಿ ತ್ವಂ ಸುಭಗೇ ದೇವಿ ಧ್ರುವೇಸರ್ವಾಂಗಸುಂದರಿ ।
ಆವಾಹನಂ ಮಯಾಪ್ರೋಕ್ತಂ ಸವಿತುರ್ದೀಪ್ತತೇಜಸಃ ॥ ೭೦ ॥

ಹಸ್ತಮಾವಾಹಯಿಷ್ಯಾಮಿ ಸಾವಿತ್ರಂ ಕ್ಷಿಪ್ರಮಂಜಸಾ ।
ಏಹಿ ಸಾವಿತ್ರ ಧರ್ಮಜ್ಞ ಭಕ್ತಾನಾಂ ಪಾಪನಾಶನ ॥ ೭೧ ॥

ಆವಾಹಯಾಮ್ಯಹಂ ದೇವಂ ತ್ವಷ್ಟಾರಮಮಿತದ್ಯುತಿಂ ।
ಏಹಿ ಮೇ ಭಗವನ್ತ್ವಷ್ಟಃ ಪ್ರಜಾಪಾಲನತತ್ಪರ ॥ ೭೨ ॥

ಚಿತ್ರಾಮಾವಾಹಯಿಷ್ಯಾಮಿ ಚಿತ್ರರೂಪಾಂ ಮನೋಹರಾಂ ।
ಏಹಿ ಮೇ ವರದೇ ಚಿತ್ರೇ ಮೃದುಕರ್ಮಪ್ರಸಾದಿನಿ ॥ ೭೩ ॥

ವಾಯುಮಾವಾಹಯಿಷ್ಯಾಮಿ ಸರ್ವಗಂ ದೀಪ್ತತೇಜಸಂ ।
ದೇವ ವಾಯೋ ತ್ವಮಭ್ಯೇಹಿ ಸರ್ವಭೂತಜಗತ್ಪ್ರಿಯ ॥ ೭೪ ॥

---

೬೭-೬೮. ಪುಬ್ಬಾ (ಪೂರ್ವ ಫಲ್ಗುನಿ) ನಕ್ಷತ್ರಾವಾಹನ ಮಂತ್ರ

೬೯-೭೦ ಉತ್ತರಾ (ಉತ್ತರ ಫಲ್ಗುನಿ) ನಕ್ಷತ್ರಾವಾಹನ ಮಂತ್ರ

೭೧-೭೨ ಹಸ್ತ ನಕ್ಷತ್ರಾವಾಹನ ಮಂತ್ರ

೭೩ ಚಿತ್ತಾನಕ್ಷತ್ರ ಆವಾಹನ ಮಂತ್ರ.

೭೪ ವಾಯ್ವಾವಾಹನ ಮಂತ್ರ

ಸ್ವಾತಿಮಾವಾಹಯಿಷ್ಯಾಮಿ ನಿತ್ಯಮುತ್ತರಮಾರ್ಗಗಾಂ ।
ದೇವಿ ಸ್ವಾತೇ ತ್ವಮಭ್ಯೇಹಿ ಚರಕರ್ಮಸು ಶೋಭನೇ　　॥ ೭೫ ॥

ಆವಾಹಯಿಷ್ಯಾಮೀಂದ್ರಾಗ್ನೀ ಸಹಿತೌ ದೀಪ್ತತೇಜಸೌ ।
ಇಂದ್ರಾಭ್ಯೇಹಿ ಜಗನ್ನಾಥ ಏಹ್ಯಗ್ನೇ ವಿಜಯಪ್ರದ　　॥ ೭೬ ॥

ಋಕ್ಷಮಾವಾಹಯಿಷ್ಯಾಮಿ ವಿಶಾಖಾಂ ದೀಪ್ತತೇಜಸಂ ।
ವಿಶಾಖೇ ತ್ವಮಿಹಾಭ್ಯೇಹಿ ದೇವಿ ಸಾಧಾರಣೇ ಶುಭೇ　　॥ ೭೭ ॥

ಮಿತ್ರಮಾವಾಹಯಿಷ್ಯಾಮಿ ದೇವಂ ದೀಪ್ತಾಂಶುಮೂರ್ಜಿತಂ ।
ಏಹಿ ಮಿತ್ರ ಮಹಾಭಾಗ ಭಕ್ತಾಘಪ್ರಲಯಂಕರ　　॥ ೭೮ ॥

ಋಕ್ಷಮಾವಾಹಯಿಷ್ಯಾಮಿ ಹ್ಯನೂರಾಧಾಂ ವರಪ್ರದಾಂ ।
ಅನೂರಾಧೇ ತ್ವಮಭ್ಯೇಹಿ ಮೃದುಕರ್ಮಸು ಶೋಭನೇ　　॥ ೭೯ ॥

ಶಕ್ರಸ್ಯಾವಾಹನಂ ಪ್ರೋಕ್ತಂ ಜ್ಯೇಷ್ಠಾಯಾಃ ಶೃಣು ಪಾರ್ಥಿವ ।
ಜ್ಯೇಷ್ಠಮಾವಾಹಯಿಷ್ಯಾಮಿ ನಕ್ಷತ್ರಂ ಶಕ್ರದೈವತಂ　　॥ ೮೦ ॥

ಜ್ಯೇಷ್ಠೇ ದೇವಿ ತ್ವಮಭ್ಯೇಹಿ ದಾರುಣೇ ಚಾರುಲೋಚನೇ ।
ದೇವಮಾವಾಹಯಿಷ್ಯಾಮಿ ದೇವಂ ನಿರ್ಋತಿಜಂ ಪ್ರಭುಂ　　॥ ೮೧ ॥

ಏಹಿ ದೇವ ವಿರೂಪಾಕ್ಷ ಮಹಾಬಲ ಪರಾಕ್ರಮ ।
ಮೂಲಮಾವಾಹಯಿಷ್ಯಾಮಿ ನಕ್ಷತ್ರಂ ದಾರುಣಂ ಮಹತ್　　॥ ೮೨ ॥

---

೭೫-೭೬　ಸ್ವಾತೀ ನಕ್ಷತ್ರಾವಾಹನ ಮಂತ್ರ

೭೭-೭೮　ವಿಶಾಖಾ ನಕ್ಷತ್ರಾವಾಹನ ಮಂತ್ರ

೭೯-೮೦　ಅನೂರಾಧಾ ನಕ್ಷತ್ರಾವಾಹನ ಮಂತ್ರ

೮೦-೮೨　ಜ್ಯೇಷ್ಠಾ ನಕ್ಷತ್ರಾವಾಹನ ಮಂತ್ರ

ಟಿಪ್ಪಣಿ — ಜ್ಯೇಷ್ಠಾ ನಕ್ಷತ್ರಕ್ಕೆ ಇಂದ್ರನನ್ನು ಆವಾಹನೆ ಮಾಡಬೇಕು

ಏಹಿ ಮೂಲ ಮಹಾಭಾಗ ಭಕ್ತಾನಾಮಭಯಪ್ರದ ।
ಆಪಸ್ತ್ವಾವಾಹಯಿಷ್ಯಾಮಿ ಸರ್ವಗಾ ವರದಾಃ ಶಿವಾಃ ॥ ೮೩ ॥

ಆಪಸ್ತ್ವಾಯಾಂತು ವರದಾಃ ಪವಿತ್ರಾಃ ಮಂಗಲಾವಹಾಃ ।
ಋಕ್ಷಮಾವಾಹಯಿಷ್ಯಾಮಿ ಪೂರ್ವಾಷಾಢೇತಿಸಂಜ್ಞಿತಂ ॥ ೮೪ ॥

ಏಹಿ ತ್ವಮುಗ್ರೇ ವರದೇ ಚಾಷಾಢೇ ಪೂರ್ವಪೂರ್ವಕೇ ।
ವಿಶ್ವಾನಾವಾಹಯಿಷ್ಯಾಮಿ ದೇವಾನದ್ಭುತತೇಜಸಃ ॥ ೮೫ ॥

ಆಯಾಂತು ವರದಾಃ ಸರ್ವೇ ವಿಶ್ವೇದೇವಾ ಮಹಾಬಲಾಃ ।
ಋಕ್ಷಮಾವಾಹಯಿಷ್ಯಾಮಿ ಉತ್ತರಾಷಾಢಸಂಜ್ಞಿತಂ ॥ ೮೬ ॥

ಏಹಿ ತ್ವಮುತ್ತರಾಷಾಢೇ ಸರ್ವಕರ್ಮಸು ಶೋಭನೇ ।
ಬ್ರಹ್ಮಣ ಆವಾಹನಂ ಪ್ರೋಕ್ತಮಭಿಜಿತಿ ಶೃಣು ಹೇ ಪ್ರಭೋ ॥ ೮೭ ॥

ಋಕ್ಷಮಾವಾಹಯಿಷ್ಯಾಮಿ ಯತ್ತದಭಿಜಿದುಚ್ಯತೇ ।
ಏಹಿ ಧಿಷ್ಣ್ಯವರಿಷ್ಠಾಢ್ಯ ಕ್ಷಿಪ್ರಕರ್ಮಪ್ರಸಾಧಕ ॥ ೮೮ ॥

ವಿಷ್ಣೋರಾವಾಹನಂ ಪ್ರೋಕ್ತಂ ಶ್ರವಣಸ್ಯ ನಿಬೋಧ ಮೇ ।
ಋಕ್ಷಮಾವಾಹಯಿಷ್ಯಾಮಿ ಶ್ರವಣಂ ಸರ್ವಕಾಮದಂ ॥ ೮೯ ॥

ಅಶ್ವತ್ಥ ತ್ವಂ ಸಮಭ್ಯೇಹಿ ಚರಕರ್ಮಪ್ರಸಾಧಕ ।
ವಸೂನಾವಾಹಯಿಷ್ಯಾಮಿ ದೇವಾನಷ್ಟೌ ವರಪ್ರದಾನ್ ॥ ೯೦ ॥

---

೮೨-೮೩ ಮೂಲಾನಕ್ಷತ್ರಾವಾಹನ ಮಂತ್ರ

೮೪-೮೫ ಪೂರ್ವಾಷಾಢಾ ನಕ್ಷತ್ರಾವಾಹನ ಮಂತ್ರ

೮೬-೮೭ ಉತ್ತರಾಷಾಢಾ ನಕ್ಷತ್ರಾವಾಹನ ಮಂತ್ರ

೮೮-೮೯ ಶ್ರವಣ ನಕ್ಷತ್ರಾವಾಹನ ಮಂತ್ರ

ಟಿಪ್ಪಣಿ:—ಶ್ರವಣ ನಕ್ಷತ್ರಕ್ಕೆ ಬ್ರಹ್ಮನನ್ನು ಆವಾಹಿಸಬೇಕು

೯೦-೯೧. ಅಶ್ವತ್ಥಾವಾಹನ ಮಂತ್ರ

ಆಯಾಂತು ವರದಾ ದೇವಾ ವಾಸವಃ ಪಾಪನಾಶನಾಃ ।
ಧನಿಷ್ಠಾಮಾವಾಹಯಿಷ್ಯಾಮಿ ನಕ್ಷತ್ರಂ ರಾಶಿವಲ್ಲಭಂ ॥ ೯೧ ॥

ಧನಿಷ್ಠೇ ತ್ವಮಿಹಾಗಚ್ಛ ಚರಕರ್ಮಪ್ರಸಾಧಕೇ ।
ಆವಾಹನಂ ಮಯಾ ಪ್ರೋಕ್ತಂ ವರುಣಸ್ಯ ಮಹಾತ್ಮನಃ ॥ ೯೨ ॥

ಋಕ್ಷಮಾವಾಹಯಿಷ್ಯಾಮಿ ನಾಮ್ನಾ ಶತಭಿಷಂ ಶುಭಂ
ಆಗಚ್ಛ ತ್ವಂ ಶತಭಿಷೇ ಚರಕರ್ಮಸು ಶೋಭನೇ ॥ ೯೩ ॥

ಅಜೈಕಪಾದಂ ವರದಂ ರುದ್ರಮಾವಾಹಯಾಮ್ಯಹಂ ।
ಅಹಿರ್ಬುಧ್ನ್ಯ ಸಮಭ್ಯೇಹಿ ಜಟಾಜೂಟೋಪಶೋಭಿತ ॥ ೯೪ ॥

ಧ್ರುವಮಾವಾಹಯಿಷ್ಯಾಮಿ ದೇಶೇ ಭಾದ್ರಪದೋತ್ತರೇ ।
ಏಹಿ ತ್ವಂ ಸುಮಹಾಭಾಗೇ ಮಮ ಭಾದ್ರಪದೋತ್ತರೇ ।
ಋಕ್ಷಮಾವಾಹಯಿಷ್ಯಾಮಿ ರೇವತೀಂ ಚಾರುದರ್ಶನಾಂ ॥ ೯೫ ॥

ಏಹಿ ರೇವತಿ ಧರ್ಮಜ್ಞೇ ಮೃದುಕರ್ಮಪ್ರಸಾಧಕೇ ।
ಆವಾಹಯಾಮ್ಯಹಂ ದೇವಂ ಪೂಷಣಂ ಪಾಪನಾಶನಂ ॥ ೯೬ ॥

ಪೂಷನ್ನಮ್ಯಗಿಹಾಭ್ಯೇಹಿ ಸರ್ವಕರ್ಮಪ್ರಸಾದಿಕ ।
ಆವಾಹಯಾಮ್ಯಹಂ ದೇವೌ ನಾಸತ್ಯಾ ಸೂರ್ಯನಂದನೌ ॥ ೯೭ ॥

---

೯೧-೯೨ ಧನಿಷ್ಠಾನಕ್ಷತ್ರಾವಾಹನ ಮಂತ್ರ

ಟಿಪ್ಪಣಿ —ಈ ಆವಾಹನ ಮಂತ್ರದಲ್ಲಿಯೇ ಮಹಾತ್ಮನಾದ ವರುಣನ ಆವಾಹನವೂ ಹೇಳಲ್ಪಟ್ಟಿದೆ

೯೩ ಶತಭಿಷಾ ನಕ್ಷತ್ರ ಆವಾಹನ ಮಂತ್ರ

೯೪ ಪೂರ್ವಾಭಾದ್ರಪದ ನಕ್ಷತ್ರಾವಾಹನ ಮಂತ್ರ

೯೫. ಉತ್ತರಾಭಾದ್ರಪದ ನಕ್ಷತ್ರಾವಾಹನ ಮಂತ್ರ,

೯೬ ರೇವತೀ ನಕ್ಷತ್ರ ಆವಾಹನ ಮಂತ್ರ,

೯೭-೯೮ ಅಶ್ವಿನೀ ನಕ್ಷತ್ರ ಆವಾಹನ ಮಂತ್ರ.

**ಆಗಚ್ಛೇತಾಂ ಮಹಾಭಾಗೌ ವರದಾವಶ್ವಿನಾವುಭೌ ।**
**ಖಮೃಕ್ಷಮಾವಾಹಯಿಷ್ಯಾಮಿ ಚಾಶ್ವಿನೀಂ ಸರ್ವಕಾಮದಂ ॥ ೯೮ ॥**

**ಯಮಸ್ಯಾವಾಹನಂ ಪ್ರೋಕ್ತಂ ಭರಣೀಮಥ ವೈ ಶೃಣು ।**
**ಖಮೃಕ್ಷಮಾವಾಹಯಿಷ್ಯಾಮಿ ಚೋಗ್ರಂ ಭರಣಿಸಂಜ್ಞಕಂ ॥ ೯೯ ॥**

**ಏಹಿ ತ್ವಂ ದೇವಿ ಭರಣಿ ಸುಭಗೇ ಚಾರುದರ್ಶಿನಿ ।**
**ಶಕ್ರಸ್ಯಾವಾಹನಂ ಪ್ರೋಕ್ತಂ ಪೂರ್ವಮೇವ ಮಯಾ ನೃಪ ॥ ೧೦೦ ॥**

**ಪ್ರಾಚೀಮಾವಾಹಯಿಷ್ಯಾಮಿ ಸೂರ್ಯೋದಯ ವಿಭೂಷಿತಾಂ ।**
**ಏಹಿ ತ್ವಂ ವರದೇ ಪೂರ್ವೇ ಶುಭಕರ್ಮಪ್ರಸಾಧಿಕೇ ॥ ೧೦೧ ॥**

**ವಹ್ನೇರಾವಾಹನಂ ಪ್ರೋಕ್ತಂ ಪೂರ್ವಮೇವ ಮಯಾ ತವ ।**
**ದಿಶಮಾವಾಹಯಿಷ್ಯಾಮಿ ವರದಾಂ ಪೂರ್ವದಕ್ಷಿಣಾಂ ॥ ೧೦೨ ॥**

**ವಹ್ನಿಪ್ರಿಯೇ ಸಮಭ್ಯೇಹಿ ವರದೇ ಪೂರ್ವದಕ್ಷಿಣೇ ।**
**ಯಮಸ್ಯಾವಾಹನಂ ಪ್ರೋಕ್ತಂ ಯಾಮ್ಯಾಯಾಶ್ಚ ದಿಶಃ ಶೃಣು ॥ ೧೦೩ ॥**

**ಅಹಮಾವಾಹಯಿಷ್ಯಾಮಿ ದಕ್ಷಿಣಾಂ ದಕ್ಷಿಣಾಂ ದಿಶಂ ।**
**ದಕ್ಷಿಣೇ ತ್ವಂ ಸಮಭ್ಯೇಹಿ ಸರ್ವಕರ್ಮಸು ಶೋಭನೇ ॥ ೧೦೪ ॥**

**ಪೂರ್ವಮಾವಾಹನಂ ಪ್ರೋಕ್ತಂ ವಿರೂಪಾಕ್ಷಸ್ಯ ಧೀಮತಃ ।**
**ದಿಶಮಾವಾಹಯಿಷ್ಯಾಮಿ ಶುಭಾಂ ದಕ್ಷಿಣಪಶ್ಚಿಮಾಂ ॥ ೧೦೫ ॥**

---

೯೯-೧೦೦ ಭರಣಿ (ಯಮ) ನಕ್ಷತ್ರಾವಾಹನ ಮಂತ್ರ

೧೦೦-೧೧೩ ದಿಕ್ಪಾಲಕರ ಆವಾಹನ ಮಂತ್ರಗಳು —

ಸೂರ್ಯೋದಯದಿಂದ ಅಲಂಕೃತವಾದ ಪೂರ್ವ (ಇಂದ್ರ) ದಿಕ್ಕನ್ನು ಆವಾಹಿಸುತ್ತೇನೆ. ಸಕಲ ಸತ್ಕರ್ಮ ಸಾಧಕಳಾದ ಪೂರ್ವದಿಶೆಯೆ! ಬಾ! ಅಗ್ನಿಯ ಆವಾಹನ ಮಂತ್ರವನ್ನು ಮೊದಲೇ ಹೇಳಿರುತ್ತೇನೆ ಈಗ ಆ ಆಗ್ನೇಯ ದಿಕ್ಕನ್ನು ಆವಾಹನೆ ಮಾಡುತ್ತೇನೆ ಆಗ್ನೇಯದಿಕ್ಕೆ ಇಲ್ಲಿ ಬಾ, ದಕ್ಷಿಣದಿಕ್ಕನ್ನು ಯಮದಿಕ್ಕೆಂದು ಕರೆಯುವರು ಅಂಥಾ ದಕ್ಷಿಣದಿಕ್ಕೇ ಇಲ್ಲಿ ಬಾ! ಬಳಿಕ ದಕ್ಷಿಣ ಪಶ್ಚಿಮ ಮಧ್ಯದಲ್ಲಿರುವ ನೈಋತ್ಯ ದಿಕ್ಕನ್ನು ಆವಾಹಿಸುತ್ತೇನೆ ಎಲೈ ಐಶ್ವರ್ಯಪ್ರದಳಾದ ನಿಋತಿ

ಏಹಿ ಮೇ ನೈರ್ಋತೀ ದೇವಿ ಸತತಂ ಭೂತಿವರ್ಧಿನಿ ।
ಆವಾಹನಂ ಮಯಾ ಪ್ರೋಕ್ತಂ ವರುಣಸ್ಯ ಮಹಾತ್ಮನಃ ॥ ೧೦೬ ॥

ದಿಶಮಾವಾಹಯಿಷ್ಯಾಮಿ ವಾರುಣೀಂ ವರುಣೀಂ ಶುಭಾಂ ।
ಆಗಚ್ಛ ಪಶ್ಚಿಮೇ ದೇವಿ ವರದೇ ವರುಣಪ್ರಿಯೇ ॥ ೧೦೭ ॥

ಆವಾಹನಂ ಮಯಾ ಪ್ರೋಕ್ತಂ ವಾಯೋಶ್ಚೈವ ಮಹಾತ್ಮನಃ ।
ಆವಾಹಯಾಮಿ ವಿದಿಶಾಂ ವಾಯುವ್ಯಾಂ ಪಶ್ಚಿಮೋತ್ತರಾಂ ॥ ೧೦೮ ॥

ವರದೇ ತ್ವಂ ಸಮಭ್ಯೇಹಿ ವಾಯುವ್ಯೇ ಪಶ್ಚಿಮೋತ್ತರೇ ।
ಆವಾಹಯಾಮಿ ಧನದಂ ದೇವಂ ವೈಶ್ರವಣಂ ಪ್ರಭುಂ ॥ ೧೦೯ ॥

ರಾಜರಾಜ ಸಮಭ್ಯೇಹಿ ಸರ್ವಯಕ್ಷಧನಾಧಿಪ ।
ದಿಶಮಾವಾಹಯಿಷ್ಯಾಮಿ ಸೌಮ್ಯಂ ಧನದಪಾಲಿತಾಂ ॥ ೧೧೦ ॥

ಉತ್ತರೇ ತ್ವಂ ಸಮಭ್ಯೇಹಿ ಸರ್ವಕರ್ಮಸು ಶೋಭನೇ ।
ದೇವಸ್ಯಾವಾಹನಂ ಪ್ರೋಕ್ತಂ ತ್ರ್ಯಂಬಕಸ್ಯ ಮಹಾತ್ಮನಃ ॥ ೧೧೧ ॥

ದಿಶಮಾವಾಹಯಿಷ್ಯಾಮಿ ಶುಭಾಂ ಪ್ರಾಗುತ್ತರಾಮಹಂ ।
ಏಹಿ ತ್ವಂ ಸುಭಗೇ ದೇವಿ ಸತತಂ ಶಿವಪಾಲಿತೇ ॥ ೧೧೨ ॥

ಸರ್ವಾನಾವಾಹಯಿಷ್ಯಾಮಿ ಪೂರ್ಣಕುಂಭೇಷು ಸಾಗರಾನ್ ।
ರತ್ನಾಧ್ಯಕ್ಷಾಃ ಸಮಾಯಾಂತು ಚತ್ವಾರ ಇಹ ಸಾಗರಾಃ ॥ ೧೧೩ ॥

---

ದಿಗ್ದೇವಿಯೇ! ಇಲ್ಲಿಬಾ! ಬಳಿಕ ವರುಣ (ಪಶ್ಚಿಮ) ದಿಕ್ಕನ್ನು ಆವಾಹನೆ ಮಾಡು ವನು. ವರುಣ ಪ್ರಿಯಳಾದ ಪಶ್ಚಿಮದಿಗಂಗನೆಯೇ! ಇಲ್ಲಿಬಾ! ಆ ಮೇಲೆ ವಾಯುವ್ಯ ದಿಕ್ಕನ್ನು ಆವಾಹನೆ ಮಾಡುತ್ತೇನೆ ಪಶ್ಚಿಮೋತ್ತರ ಮಧ್ಯವರ್ತಿಯಾದ ಎಲೈ ವಾಯು ವ್ಯದಿಕ್ಕೇ? ಇಲ್ಲಿಬಾ! ಬಳಿಕ ಉತ್ತರ ದಿಕ್ಕನ್ನು ಆವಾಹಿಸುತ್ತೇನೆ ಕುಬೇರನಿಂದ ಪರಿಪಾಲಿತಳಾದ ಎಲೈ ಉತ್ತರದಿಕ್ಕೇ ಇಲ್ಲಿಬಾ! ಆ ಬಳಿಕ ಈಶಾನ್ಯ ದಿಕ್ಕನ್ನು ಆವಾ ಹನೆ ಮಾಡುತ್ತೇನೆ. ಪ್ರಾಗುತ್ತರ ಮಧ್ಯವರ್ತಿಯಾದೆಲೈ ಈಶಾನ್ಯದಿಕ್ಕೇ, ಇಲ್ಲಿಬಾ! ಪೂರ್ವದಿಕ್ಕಿನಲ್ಲಿ ನಾನು ಸ್ಥಾಪಿಸಿರುವ ಕಲಶದಲ್ಲಿ ಮೇಲ್ಕಂಡ ದಿಕ್ಕುಗಳನ್ನೂ ಸಕಲ ಸಾಗರಗಳನ್ನೂ ಆವಾಹಿಸುತ್ತೇನೆ ರತ್ನಾಧ್ಯಕ್ಷರಾಗಿರುವ ನಾಲ್ಕು ಸಾಗರಗಳಿರಾ ಇಲ್ಲಿ ದಯಮಾಡಿ ಬನ್ನಿರಿ

ಈಶಾನ್ಯಾಂ ದಿಶಿ ಯಃ ಕುಂಭಃ ಪೂರ್ವಸ್ತಸ್ಯ ತು ಸಾಗರಃ ।
ಆಗ್ನೇಯ್ಯಾಂತು ಸಮಾಯಾತು ದಕ್ಷಿಣೇ ದಕ್ಷಿಣಃ ಶಿವಃ ॥ ೧೧೪ ॥

ಪಶ್ಚಿಮಸ್ತು ಸಮಾಯಾತು ಕುಂಭೇ ದಕ್ಷಿಣಪಶ್ಚಿಮೇ ।
ಉತ್ತರಶ್ಚ ತಥಾಽಭ್ಯೇತು ಕುಂಭೇ ನೈ ಪಶ್ಚಿಮೋತ್ತರೇ ॥ ೧೧೫ ॥

ಆವಾಹಿತಾನಾಂ ಕರ್ತವ್ಯಂ ಭೂಮೌ ಕೃತ್ವಾ ತತಃ ಶಿರಃ ।
ಪ್ರಣಾಮಮಭಿವಾದ್ಯಂ ಚ ತತೋ ಮಂತ್ರಮುದೀರಯೇತ್ ॥ ೧೧೬ ॥

ಭವತಾಂ ಹಿ ಪ್ರಸಾದೇನ ಭವತಾಂ ಪ್ರತಿ ಪೂಜನೈಃ ।
ಪ್ರಯತಿಷ್ಯೇ ಯಥಾಶಕ್ತ್ಯಾ ತನ್ಮೇಽನುಜ್ಞಾತುಮರ್ಹಥ ॥ ೧೧೭ ॥

ಯುಷ್ಮಾಕಂ ಪೂಜನಂ ಕರ್ತುಂ ಕೇನ ಶಕ್ಯಂ ಯಥಾವಿಧಿ ।
ಯುಷ್ಮತ್ಪೂಜಾವಿಹೀನೇನ ಕುತೋ ಲಭ್ಯಂ ಮಹತ್ಪದಂ ॥ ೧೧೮ ॥

ತತಃ ಕರ್ತುಂ ಯಥಾಶಕ್ತ್ಯಾ ಭವತಾಂ ಪ್ರತಿಪೂಜನೇ ।
ವರದಾಃ ಪ್ರಯತಿಷ್ಯಾಮಿ ತನ್ಮೇಽನುಜ್ಞಾತುಮರ್ಹಥ ॥ ೧೧೯ ॥

೧೧೪-೧೨೪ ಈಶಾನ್ಯದಿಕ್ಕಿನ ಕಲಶದಲ್ಲಿ ಪೂರ್ವಸಾಗರವನ್ನು ಆವಾಹಿಸು ವೆನು ಆಗ್ನೇಯದಿಕ್ಕಿನ ಕಲಶದಲ್ಲಿ ದಕ್ಷಿಣಸಾಗರವು ಆವಾಹನೆಯಾಗಲಿ ನೈಋತ್ಯ ದಿಕ್ಕಿನ ಕಲಶದಲ್ಲಿ ಪಶ್ಚಿಮ ಸಮುದ್ರವನ್ನಾವಾಹಿಸುವೆನು ವಾಯುವ್ಯದಿಕ್ ಕಲಶ ದೋಳ್ ಉತ್ತರ ಸಾಗರೋದಕವು ತುಂಬಿಕೊಳ್ಳಲಿ ಈ ರೀತಿ ಸಕಲ ದಿಗ್ದೇವತಾ ಸಾಗರ ಗ್ರಹ ನಕ್ಷತ್ರಾದಿ ವಿವಿಧ ದೇವರ್ಕಳಂ ಕ್ರಮವಾಗಿ ಆವಾಹಿಸಿದ ಬಳಿಕ ತನ್ನ ತಲೆ ನೆಲಕ್ಕೆ ಸೋಕುವಂತೆ ಉದ್ದಕ್ಕೆ ಅಡ್ಡಬೀಳಬೇಕು ಹೀಗೆ ಸಾಷ್ಟಾಂಗ ನಮ ಸ್ಕಾರ ಮಾಡಿಯಾದ ಮೇಲೆ ಪ್ರಾರ್ಥನಾ ಮಂತ್ರವನ್ನು ಹೇಳಬೇಕು

ಆ ಮಂತ್ರದ ಅರ್ಥ — ಸ್ವಾಮಿ ! ಆವಾಹಿತ ದೇವತೆಗಳಿರಾ ! ನಿಮ್ಮ ಪ್ರಸಾ ದದಿಂದಲೂ, ನಿಮ್ಮ ಪೂಜಾವಿಧಾನದಿಂದಲೂ ನಿಮ್ಮನ್ನು ಯಥಾಶಕ್ತಿಯಾಗಿ ತೃಪ್ತಿ ಪಡಿಸಲು ಪ್ರಯತ್ನ ಮಾಡಿದೇನೆ ನಿಮ್ಮನ್ನು ಯಥಾವಿಧಿಯಾಗಿ ಪೂಜೆಮಾಡಲು ಯಾರಿಗೆ ತಾನೇ ಶಕ್ತಿಯಿದೆ ? ಹಾಗೆ ನಿಮ್ಮನ್ನು ಎಂದೂ ಪೂಜಿಸದಿದ್ದವನು ಮಹ ತ್ಪದವಿಯನ್ನು ಹೊಂದುವುದೆಂತು ? ಆದ್ದರಿಂದ ನನ್ನ ಶಕ್ತಿ, ಭಕ್ತಿಯಿದ್ದಷ್ಟಿಗೆ

ಭವತ್ಸ್ವಪೂಜಾವಿಧಾವಸ್ಮಿನ್ಬಹುವಿಘ್ನಂ ಸದೈವ ತು ।
ಸ್ವಾಂಸ್ವಾಂ ದಿಶಮಧಿಷ್ಠಾಯ ದಿಕ್ಪಾಲಾ ದೀಪ್ತತೇಜಸಃ　　॥ ೧೨೦ ॥

ಉತ್ಸಾದಯಂತು ಸಕಲಾನ್ವಿಘ್ನಾನ್ಮೇ ಸಮುಪಸ್ಥಿತಾನ್ ।
ಅಸ್ಮಾದ್ದೇಶಾತ್ಪ್ರಣಶ್ಯಂತು ಯಜ್ಞಘ್ನಾ ಬ್ರಹ್ಮರಾಕ್ಷಸಾಃ　　॥ ೧೨೧ ॥

ವಿನಾಯಕಾ ವಿಘ್ನಕರಾ ಮಹೋಗ್ರಾ
ಯಜ್ಞದ್ವಿಷೋ ಯೇ ಪಿಶಿತಾಶನಾಶ್ಚ ।
ಸಿದ್ಧಾರ್ಥಕೈರ್ವಜ್ರಸಮಾನಕಲ್ಪೈ
ರ್ಮಯಾ ನಿರಸ್ತಾಃ ಸ್ವಗೃಹಂ ಪ್ರಯಾಂತು　　॥ ೧೨೨ ॥

ಏತಾವದುಕ್ತ್ವಾ ವಿಕಿರೇತ ವಿದ್ವಾನ್
ಸಿದ್ಧಾರ್ಥಕಾನ್ದಿಕ್ಷು ತಥಾ ವಿದಿಕ್ಷು ।
ರಕ್ಷೋಹಣಂ ಚಾತ್ರ ತಥೈವ ಮಂತ್ರಂ
ವಕ್ತವ್ಯಮುಚ್ಚೈರ್ದ್ವಿಜಪುಂಗವೇನ　　॥ ೧೨೩ ॥

---

ಮಾತ್ರವೇ ನಿಮ್ಮನ್ನು ಪೂಜಿಸಲು ಪ್ರಯತ್ನ ಮಾಡಿಯಾಯಿತು ಇಷ್ಟಕ್ಕೇ ತಾವು ತೃಪ್ತಿ ಪಟ್ಟುಕೊಂಡು ನನಗಿನ್ನು ಅಪ್ಪಣೆಕೊಡಿರಿ ನಿಮ್ಮ ಪೂಜಾ ವಿಧಾನದಲ್ಲಿ ಬಹಳ ತಿಳುವಳಿಕೆಯುಳ್ಳವರು ಮಾತ್ರವೇ ಕೈಹಾಕಬೇಕು ಎಲೈ ದಿಕ್ಪಾಲಕರುಗಳಿರಾ ! ನಿಮಗೆಲ್ಲರಿಗೂ ನಮಸ್ಕಾರ ! ನಿಮ್ಮ ನಿಮ್ಮ ದಿಕ್ಕುಗಳಿಗೆ ತಾವಿನ್ನು ಪ್ರಯಾಣ ಬೆಳಸ ಬಹುದು ನಿಮ್ಮನ್ನು ಪೂಜೆಮಾಡಿದ ಈ ಕ್ರಮವನ್ನು ಕಂಡೊಡನೆಯೇ ಸಕಲ ವಿಘ್ನಗಳೂ ನಾಶವಾಗಿಹೋಗಲಿ ಯಜ್ಞವಿಘಾತಕರಾದ ರಾಕ್ಷಸರೆಲ್ಲರೂ ಈ ಸ್ಥಳ ದಿಂದ ದೂರ ತೊಲಗಿಹೋಗಲಿ ಇನ್ನು ಏನೇನು ಪ್ರತಿಬಂಧಕಗಳಿವೆಯೋ ಅವೆಲ್ಲವೂ, ಮತ್ತು ಯಜ್ಞದ್ವೇಷಿಗಳೂ, ಮಾಂಸಾಹಾರಿಗಳಾದ ರಾಕ್ಷಸರೂ ಇಲ್ಲಿಂದ ಬಿಟ್ಟು ಓಡಿ ಹೋಗಿ ತಮ್ಮ ತಮ್ಮ ವಾಸಸ್ಥಳಗಳಿಗೆ ಹೋಗಿ ಸೇರಿಕೊಳ್ಳಲಿ , ಎನ್ನುವ ಈ ಮಂತ್ರ ವನ್ನು ಬಾಯಲ್ಲಿ ಹೇಳುತ್ತಾ ವಜ್ರೋಪಮವಾದ ಬಿಳೀಸಾಸುವೆಕಾಳುಗಳನ್ನು ಎಂಟು ದಿಕ್ಕುಗಳಿಗೂ ಮೇಲೆ ಕೆಳಗೆ ಸಹಾ ಎರಚಬೇಕು, ಈ ರೀತಿ ಎರಚಿಯಾದ ಬಳಿಕ ''ರಕ್ಷೋಹಣಂ ವಾಜಿನಮಾಜಿ ಘರ್ಮಿಮಿತ್ರಂ ಪ್ರತಿಷ್ಠಮುಪಯಾಮಿಶರ್ಮ'' ಎಂದು ಆರಂಭ ಮಾಡಿಕೊಂಡು, ರಕ್ಷೋಘ್ನ ಸೂಕ್ತದ (ಮಂತ್ರದ) ಎಲ್ಲಾ ವರ್ಗ ಗಳನ್ನೂ ಘಟ್ಟಿಯಾಗಿ ಹೇಳಬೇಕು

ಸರ್ವಗ್ರಹಾಣಾಂ ಯಜನೇ ಪ್ರದಿಷ್ಟಂ
ಸರ್ವೌಷಧೈಃ ಸ್ನಾನಮುದೀನಸತ್ವ ।
ಬೀಜೈಃ ಸಮಗ್ರೈಶ್ಚ ತಥೈವ ಗಂಧೈಃ
ಮೃದ್ಭಿಶ್ಚ ರತ್ನೈಶ್ಚ ತಥಾ ಜಲೈಶ್ಚ ॥ ೧೨೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗ್ರಹಕ್ಷ್ಯಾವಾಹನಮಂತ್ರಾಧ್ಯಾಯೋನಾಮ
ಪಂಚನವತಿತಮೋಧ್ಯಾಯಃ

---

ಈ ರೀತಿ ಸಮಸ್ತ ಗ್ರಹಪೂಜೆಗೂ ಈ ವಿಧಾನವು ಉಕ್ತವಾಗಿದೆ ಈ ಮೇರ ಸರ್ವೌಷಧಗಳಿಂದಲೂ, ಸಕಲಬೀಜರಸಗಳಿಂದಲೂ, ಸುಗಂಧೋದಕಗಳಿಂದಲೂ, ರತ್ನೋದಕಗಳಿಂದಲೂ ಅಭಿಷೇಕನಂ ಮಾಡಬೇಕು

ಇಲ್ಲಿಗೆ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಗ್ರಹನಕ್ಷತ್ರಾವಾಹನ ಮಂತ್ರಾಧ್ಯಾಯವೆಂಬ ಹೆಸರಿನ
ತೊಂಭತ್ತೈದನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಣ್ಣವತಿತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಸರ್ವೇಷಾಂ ತು ಸಮಾಚಕ್ಷ್ವ ಗಂಧಮಾಲ್ಯಂ ತಥೈವ ಚ ।
ಧೂಪಂ ಬ್ರಹ್ಮನ್ನೈವೇದ್ಯಂ ಪಾನಂ ಚೈವ ಪೃಥಕ್ಪೃಥಕ್ ॥ ೧ ॥

ಹೋಮದ್ರವ್ಯಂ ತಥಾ ಮಂತ್ರಂ ದಕ್ಷಿಣಾಶ್ಚ ಭೃಗೂತ್ತಮ ।
ಏಕಸ್ತ್ವಂ ಸರ್ವವಿದ್ಬ್ರಹ್ಮನ್ಬ್ರಹ್ಮಾ ವಾ ಜಗತಾಂ ಪತಿಃ ॥ ೨ ॥

---

### ತೊಂಭತ್ತಾರನೆಯ ಅಧ್ಯಾಯವು.

೧ ವಜ್ರಮಹಾರಾಜನು ಪುನಃ ಪ್ರಶ್ನೆಮಾಡುತ್ತಾನೆ — ಎಲೈ ಬ್ರಾಹ್ಮಣೋತ್ತಮನೇ! ಇದುವರಿವಿಗೂ ಆವಾಹನ, ಅಭಿಷೇಕವಿಧಿಗಳನ್ನು ಹೇಳಿದೆಯಷ್ಟೆ ? ಇನ್ನು ಮುಂದೆ ಎಲ್ಲಾ ದೇವತೆಗಳಿಗೂ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ತಾಂಬೂಲಗಳನ್ನು ಸಮರ್ಪಿಸುವ ಕ್ರಮವನ್ನು ಬೇರ ಬೇರೆಯಾಗಿ ವಿವರಿಸು

೨ ಎಲೈ ಮಾರ್ಕಂಡೇಯನೇ ! ಸಕಲವನ್ನೂ ತಿಳಿದವನು ನೀನೊಬ್ಬನೇ ಹೊರತು ಅನ್ಯರಾರೂ ಇಲ್ಲ ಅಥವಾ ನಿನ್ನನ್ನು ಜಗತ್ಪತಿಯಾದ ಬ್ರಹ್ಮನೆಂದೇ ಕರೆದರೂ ತಪ್ಪೇನೂ ಇಲ್ಲ ಇಂಥ ಮಹಾತ್ಮನಾದ ನೀನು ಹೋಮದ್ರವ್ಯ ಅದರ ಮಂತ್ರ, ದಕ್ಷಿಣಾದ್ರವ್ಯಗಳ ವಿಸ್ತಾರವನ್ನೆಲ್ಲಾ ದಯಮಾಡಿ ನನ್ನೊಡನೆ ತಿಳಿಸೈ! ಮಹಾನುಭಾವ.

**॥ ಮಾರ್ಕಂಡೇಯ ಉವಾಚ ॥**

**ಧ್ರುವಸ್ಥಾನನಿವಿಷ್ಟಾನಾಂ ದೇವಾನಾಂ ಚ ಮಹೀಪತೇ ।**
**ಸರ್ವಾಸಾಂ ಚಂದನಂ ದೇಯಂ ನಿತ್ಯಮೇವ ಪೃಥಕ್ಪೃಥಕ್ ॥ ೩ ॥**

**ಸೂರ್ಯಾಯ ಕುಂಕುಮಂ ದೇಯಂ ಕರ್ಪೂರಂ ಶಶಿನೇ ತಥಾ ।**
**ಭೌಮಾಯ ಚಂದನಂ ರಕ್ತಂ ಚಾಗುರುಂ ಶಶಿಜಾಯ ಚ ॥ ೪ ॥**

**ಜೀವಾಯ ಚಂದನಂ ದೇಯಂ ಕುಂಕುಮೇನ ವಿಮಿಶ್ರಿತಂ ।**
**ಶುಕ್ರಾಯ ಚಂದನಂ ಶ್ವೇತಂ ಸೌರಾಯ ಚ ಮೃಗೋದ್ಭವಂ ॥ ೫ ॥**

**ಕುಂಕುಮೇನ ಯುತಂ ದದ್ಯಾದ್ದಾನವಾಯ ಮೃಗೋದ್ಭವಂ ।**
**ಅಗುರುಂ ಕುಂಕುಮಂ ಚೋಭೌ ಸುದೇಯೌ ಧೂಮಕೇತವೇ ॥ ೬ ॥**

**ಕುಂಕುಮಂ ಕೃತ್ತಿಕಾನಾಂ ತು ರೋಹಿಣೀನಾಂ ಮೃಗೋದ್ಭವಂ ।**
**ಇಲ್ವಲಾನಾಂ ಚ ಕರ್ಪೂರಂ ರೌದ್ರೇ ನಾಗಮದಂ ತಥಾ ॥ ೭ ॥**

---

೩ ಮಾರ್ಕಂಡೇಯನು ಅದಕ್ಕೆ ಪ್ರತ್ಯುತ್ತರ ಹೇಳುತ್ತಾನೆ – ಧ್ರುವಸ್ಥಾನದಲ್ಲಿ ನಿವಿಷ್ಟರಾದ ದೇವತೆಗಳಿಗೆಲ್ಲಾ ಬೇರ ಬೇರೆಯಾಗಿಯೇ ಗಂಧವನ್ನು ಸಮರ್ಪಿಸಬೇಕು

೪-೭ ಸೂರ್ಯನಿಗೆ ಕುಂಕುಮಗಂಧ, ಚಂದ್ರನಿಗೆ ಪಚ್ಚಕರ್ಪೂರದ ಗಂಧ, ಅಂಗಾರಕನಿಗೆ ಕೆಂಪುಗಂಧ, ಬುಧನಿಗೆ ಅಗುರುಗಂಧ, ಗುರುವಿಗೆ ಚಂದನಗಂಧ, ಇದು ಕುಂಕುಮದಿಂದ ಕಲಸಿರಬೇಕು ಶುಕ್ರನಿಗೆ ಬಿಳೀಗಂಧ, ಶನೈಶ್ಚರನಿಗೆ ಕಸ್ತೂರೀಗಂಧ, ರಾಹುವಿಗೆ ಕುಂಕುಮಕಸ್ತೂರೀಗಂಧ, ಕೇತುವಿಗೆ ಕುಂಕುಮಮಿಶ್ರವಾದ ಅಗರು ಗಂಧ, ಈ ರೀತಿಯಾಗಿ ಬೇರೆ ಬೇರೆ ಗಂಧ ಸಮರ್ಪಣೆಯನ್ನು ಮಾಡಬೇಕು

ಇನ್ನು ಮುಂದೆ ಇಪ್ಪತ್ತೇಳು ನಕ್ಷತ್ರಗಳಿಗೂ ಎಂತೆಂತಹ ಗಂಧಗಳನ್ನರ್ಪಿಸಬೇಕೆಂದು ವಿವರಿಸುತ್ತಾರೆ

೭-೧೮ ಮೊದಲು ನಕ್ಷತ್ರಗಳ ಹೆಸರುಗಳನ್ನು ಬರೆದು ಅವುಗಳಿಗರ್ಪಿಸಬೇಕಾದ ಗಂಧ ದ್ರವ್ಯಗಳ ಹೆಸರನ್ನು ಅದರ ಮುಂದೆ ಗೀಟು ಹಾಕಿ ಬರೆದುಕೊಂಡು ಹೋಗುವೆನು

ಆದಿತ್ಯಸ್ಯ ಪ್ರದಾತವ್ಯಾವುಭೌ ಕುಂಕುಮಚಂದನೌ ।
ಉಶೀರಚಂದನೌ ದೇಯಾವಾಶ್ಲೇಷಾಪೈತ್ರ್ಯಯೋಸ್ತಥಾ ॥ ೮ ॥

ಪ್ರಿಯಂಗುಚಂದನೌ ದೇಯೌ ತಥಾ ಭಾಗ್ಯಸ್ಯ ಪಾರ್ಥಿವ ।
ಅರ್ಯಮ್ಣಶ್ಚ ಪ್ರದಾತವ್ಯೌ ಚಂದನೌ ಶ್ವೇತರಕ್ತಕೌ ॥ ೯ ॥

ಸಾವಿತ್ರಸ್ಯ ಪ್ರದಾತವ್ಯಂ ಕುಂಕುಮಂ ಪೃಥಿವೀಪತೇ ।
ತ್ವಾಷ್ಟ್ರಸ್ಯ ಚಂದನಂ ದೇಯಂ ಕುಂಕುಮಂ ಸಮೃಗೋದ್ಭವಂ ॥ ೧೦ ॥

ಜಾತೀಫಲಯುತಂ ದೇಯಂ ವಾಯವ್ಯಸ್ಯ ಚ ಚಂದನಂ ।
ವಿಶಾಖಾಯಾಃ ಪ್ರದಾತವ್ಯಂ ಕುಂಕುಮಂ ಚಂದನಂ ತಥಾ ॥ ೧೧ ॥

ತುರುಷ್ಕಸಹಿತಂ ದೇಯಂ ತಥಾ ಮೈತ್ರಾಯ ಚಂದನಂ ।
ಜ್ಯೇಷ್ಠಾಯಾಶ್ಚ ಪ್ರದಾತವ್ಯಂ ಚಂದನಂ ಕುಂಕುಮಂ ತಥಾ ॥ ೧೨ ॥

ಮೂಲಾಯ ಶಿಂಶುಪಾಸಾರಂ ತಥಾ ದೇಯಂ ಮೃಗೋದ್ಭವಂ ।
ಆಪ್ಯಾಯ ಕುಷ್ಠಸಂಯುಕ್ತಂ ದಾತವ್ಯಂ ಚಂದನಂ ಭವೇತ್ ॥ ೧೩ ॥

ವೈಶ್ವದೇವಾಯ ಮೃಗಜಂ ಚಂದನಾಗುರುಣೀ ತಥಾ ।
ಬ್ರಾಹ್ಮಾಯ ಚಂದನಂ ದೇಯಂ ವೈಷ್ಣವಾಯಾಗುರುಂ ತಥಾ ॥ ೧೪ ॥

---

ಕೃತ್ತಿಕಾ—ಕೇಸರಿಗಂಧ, ರೋಹಿಣಿ—ಕಸ್ತೂರೀ, ಮೃಗಶಿರಾ—ಪಚ್ಚಕರ್ಪೂರ ಆರ್ದ್ರೆ—ನಾಗಕಸ್ತೂರೀಗಂಧ, ಪುನರ್ವಸು ಪುಷ್ಯಗಳಿಗೆ—ಕೆಂಪಿನ ಗಂಧ, ಆಶ್ಲೇಷ ಮಘೆಗಳಿಗೆ— ಲಾಮಂಚ-ಗಂಧ, ಪುಬ್ಬೆ—ನವಣೇಗಂಧ, ಉತ್ತರೆ—ಚಂದನ, ಹಸ್ತ—ಬಿಳೀಗಂಧ, ಚಿತ್ತೆ—ಕೆಂಪುಗಂಧ, ಸ್ವಾತಿ—ಜಾಜೀಹೂವಿನಿಂದ ತೇದ ಗಂಧ, ವಿಶಾಖಾ—ಕಸ್ತೂರೀ, ಅನೂರಾಧ—ತುರುಷ್ಕಸಹಿತವಾದ ಗಂಧವೆಂದರೆ ಅರಬ್ಬೀ ಸ್ಥಾನ (ತುರು-ಕರ ದೇಶ) ದಲ್ಲಿ ದೊರೆಯುವ ಹಾಲುಮಡ್ಡೀ ಗಂಧ, ಜ್ಯೇಷ್ಠ- ಕೆಂಪು ಗಂಧ, ಮೂಲ—ಶಿಂಶುಪಾಗಂಧ ಮತ್ತು ಕಸ್ತೂರಿ ಪೂರ್ವಾಷಾಢ—ಚಂಗಲಕೋಷ್ಠದ ಚಕ್ಕೆಗಂಧ, ಉತ್ತರಾಷಾಢ—ಕುಂಕುಮ ಕಸ್ತೂರೀ ಗಂಧ, ಶ್ರವಣ—ಚಂದನ, ಧನಿಷ್ಠೆ—ಅಗುರು, ಶತಭಿಷೆ—ಜಾಯಿಕಾಯಿ ಲವಂಗದ ಗಂಧ, ಪೂರ್ವಾಭಾದ್ರೆ—ಪಚ್ಚಕರ್ಪೂರ ಉತ್ತರಾಭಾದ್ರೆ—ರೇವತಿಗಳಿಗೆ, ರಕ್ತಚಂದನ ಅಶ್ವಿನಿಗೆ—ಬಿಳೀ ಗಂಧ, ಭರಣಿ—ಅಗುರು ಮತ್ತು ಕಸ್ತೂರೀ ಗಂಧ

**ಜಾತೀಲವಂಗೌ ದಾತವ್ಯೌ ಸುಪಿಷ್ಟೌ ವಾಸವಾಯ ತೌ ।**
**ವಾರುಣಾಯ ಚ ಕರ್ಪೂರಮಾಜಾಹಿರ್ಬುಧ್ನ್ಯಯೋಸ್ತಥಾ ॥ ೧೫ ॥**

**ಪೌಷ್ಣಾಯ ಚಂದನಂ ರಕ್ತಮಾಶ್ವಿನಾಯ ತಥಾ ಸಿತಂ ।**
**ಯಾಮ್ಯಾಯಾಗುರುಸಂಯುಕ್ತಂ ತಥಾ ದೇಯಂ ಮೃಗೋದ್ಭವಂ ॥ ೧೬ ॥**

**ಸಮಾನದೇವನಕ್ಷತ್ರಂ ಕಥಿತಂ ಚ ತಥಾ ದಿಶಂ ।**
**ಉತ್ತರಾಯಾಸ್ತಥಾ ದೇಯೋ ಚಂದನಾಗುರುಣೀ ಶುಭೇ ॥ ೧೭ ॥**

**ಸಾಗರಾಣಾಂ ಪ್ರದಾತವ್ಯಂ ಸರ್ವೇಷಾಮೇವ ಚಂದನಂ ।**
**ಅಲಾಭೇ ತು ತಥಾ ದೇಯಂ ಸರ್ವೇಷಾಮೇವ ಚಂದನಂ ॥ ೧೮ ॥**

**ಮಾಂಗಲ್ಯಂ ತತ್ಪವಿತ್ರಂ ಚ ದೇವಾನಾಂ ದಯಿತಂ ಚ ತತ್ ।**
**ಧಾರ್ಯಂ ಚ ದೇಯಂ ತದ್ರಾಜಂಸ್ತತ್ರ ಲಕ್ಷ್ಮೀಃ ಪ್ರತಿಷ್ಠಿತಾ ॥ ೧೯ ॥**

**ಯದ್ಯದ್ಗ್ರಹಸ್ಯಾಭಿಹಿತಂ ಮಯೈತ-**
**ದೃಕ್ಷಸ್ಯ ವಾ ಭೂಮಿಪತಿಪ್ರಧಾನ ।**

---

ಇನ್ನು ದಿಕ್ಪಾಲಕರಿಗೆ ಸಮರ್ಪಿಸುವ ಗಂಧಗಳ ಹೆಸರುಗಳನ್ನು ಹೇಳುತ್ತೇನೆ

ಉತ್ತರ ದಿಕ್ಕಿಗೆ—ಅಗುರುಗಂಧ, ಉಳಿದ ಸಕಲ ದಿಕ್ಕುಗಳಿಗೂ ಚತುಸ್ಸಮುದ್ರಗಳಿಗೂ—ಚಂದನ ಗಂಧವಾದರೆ ಸಾಕು. ಮತ್ತು ಮೇಲೆ ವಿವರಿಸಿದ ನಾನಾ ನಕ್ಷತ್ರಗಳಿಗೆ ಉತ್ತಮವಾದ ಬೇರೆ ಬೇರೆ ಗಂಧಗಳು ದೊರಕದೆ ಇದ್ದರೆ ಸಕಲ ದೇವತೆಗಳಿಗೂ ಶ್ರೀಗಂಧವು ಮಾತ್ರ ಸಾಕಾಗುವುದೆಂದು ತಿಳಿಯಬೇಕು

೧೯-೨೦. ದೇವತೆಗಳಿಗೆ ಯಾವುದು ಇಷ್ಟವೋ ಅದೇ ಪರಿಶುದ್ಧವೂ ಮಂಗಳಪ್ರದವೂ, ಆದುದರಿಂದ ಸಾಧ್ಯವಾದಷ್ಟು ಪ್ರಯತ್ನಪಟ್ಟು ಅದನ್ನೇ ಸಮರ್ಪಿಸಬೇಕು. ಅದರಿಂದ ಸಂಪತ್ತುಂಟಾಗುವುದು

ಎಲೈ ವಜ್ರರಾಜನೇ !
ನಾನು ಯಾವ ಯಾವ ಗ್ರಹಗಳಿಗೆ ಯಾವ ಯಾವ ನಕ್ಷತ್ರಗಳಿಗೆ ಯಾವ ಯಾವ ದ್ರವ್ಯವನ್ನು ಹೇಳಿರುತ್ತೇನೋ ಆ ಗ್ರಹ ನಕ್ಷತ್ರಗಳಿಗೂ ಆ ದಿಕ್ಕುಗಳಿಗೂ

ತದ್ದೇವತಾಯಾಶ್ಚ ತದೇವ ದೇಯಂ
ದಿಶಸ್ತಥಾ ನಾತ್ರ ವಿಚಾರಣಾಽಸ್ತಿ　　॥ ೨೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅನುಲೇಪ ಕಥನೋನಾಮ
ಷಣ್ಣವತಿತಮೋಽಧ್ಯಾಯಃ



ಆಯಾಯ ದ್ರವ್ಯಗಳನ್ನೇ ಕೊಡುವುದೊಳ್ಳೆಯದೆಂದು ಮಾರ್ಕಂಡೇಯ ಮಹರ್ಷಿಗಳು ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಅನುಲೇಪನ ಕಥನವೆಂಬ ಹೆಸರಿನ ತೊಂಭತ್ತಾರನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತನವತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಸವರ್ಣಾನಿ ಗ್ರಹರ್ಕ್ಷಾಣಾಂ ದಿಶಾಂ ಚ ಜಗತೀಪತೇ ।
ನಿತ್ಯಂ ದೇಯಾನಿ ವಾಸಾಂಸಿ ಪತಾಕಾಶ್ಚ ವಿಜಾನತಾ ॥ ೧ ॥

ಭೂಷಣಾನಿ ಚ ದೇಯಾನಿ ಕಾಂಚನಾನಿ ಶುಭಾನಿ ಚ ।
ರತ್ನಚಿತ್ರಾಣಿ ರಮ್ಯಾಣಿ ಯಥಾಶಕ್ತ್ಯಾ ನರಾಧಿಪ ॥ ೨ ॥

ಧ್ರುವಸ್ಥಾನನಿವಿಷ್ಟಾನಾಂ ದೇವತಾನಾಂ ಮಹೀಪತೇ ।
ಜಾತೀಪುಷ್ಪಾಣಿ ದೇಯಾನಿ ಸರ್ವೇಷಾಮವಿಶೇಷತಃ ॥ ೩ ॥

### ತೊಂಭತ್ತೇಳನೆಯ ಅಧ್ಯಾಯವು.

೧-೨ ಮಾರ್ಕಂಡೇಯನು ಹೇಳುತ್ತಾನೆ — ಎಲೈ ವಜ್ರನರಪತಿಯೆ! ಗ್ರಹಗಳಿಗೂ ದಿಕ್ಕುಗಳಿಗೂ ಸಮರ್ಪಿಸಬೇಕಾದ ವಸ್ತ್ರ, ಪತಾಕ ಭೂಷಣಾದಿಗಳನ್ನೂ ಸುವರ್ಣ ರತ್ನಾದಿ ಮನೋಹರಾಲಂಕಾರಗಳನ್ನೂ, ಬುದ್ಧಿವಂತನಾದವನು ಯಥಾಶಕ್ತಿಯಾಗಿ ಸಮರ್ಪಿಸಬೇಕು

೩-೪ ಧ್ರುವಸ್ಥಾನದಲ್ಲಿರುವ ಸಕಲ ದೇವತೆಗಳಿಗೂ ಒಟ್ಟಿಗೆ ಯಾವ ಭೇದವನ್ನೂ ಇಡದೆ ಜಾಜೀ ಹೂಗಳಿಂದ ಪೂಜೆ ಮಾಡಬೇಕು

ಸೂರ್ಯನಿಗೆ— ಕೆಂದಾವರೆ ಹೂವು ಚಂದ್ರನಿಗೆ--ಬಿಳೀತಾವರೆ ಹೂವು ಅಂಗಾರಕನಿಗೆ—ಹೊನ್ನೇ ಹೂವು. (ಬಂದೂಕವೆಂದರೆ—ಗುಲಾಬಿಯೆಂದೂ, ಬಂಧುಗೆ

ರಕ್ತಪದ್ಮಾನಿ ಸೂರ್ಯಸ್ಯ ಶ್ವೇತಪದ್ಮಾನಿ ಚೇಂದವೇ ।
ಬಂಧೂಕಾನಿ ಚ ಭೌಮಾಯ ಬುಧಾಯೇಂದೀವರಾಣಿ ಚ　　　॥ ೪ ॥

ಜೀವಾಯ ಯೂಥಿಕಾ ಪೀತಾ ಸಿತಾಯ ಚ ತಥಾ ಸಿತಾ ।
ಬಾಣಪುಷ್ಪಾಣಿ ಸೌರಾಯ ರಾಹವೇ ಪಾಟಲಾನಿ ಚ　　　॥ ೫ ॥

ತಥಾ ದಮನಕಂ ದೇಯಂ ಕೇತವೇ ವಸುಧಾಧಿಪ ।
ಕೃತ್ತಿಕಾಸು ಚ ದೇಯಾನಿ ರಾಜನ್ರಕ್ತೋತ್ಪಲಾನಿ ಚ　　　॥ ೬ ॥

ಚಂಪಕಾನಿ ಚ ರೋಹಿಣ್ಯಾ ಇಲ್ವಲಾಯಾಃ ಸಿತೋತ್ಪಲಂ ।
ಧತ್ತೂರಕಾಣ್ಯಥಾದ್ರಾ೯ಯಾ ಆದಿತ್ಯಸ್ಯ ಚ ಮಲ್ಲಿಕಾ　　　॥ ೭ ॥

ಚಂಪಕಾನ್ಯೇವ ಪುಷ್ಯಸ್ಯ ಜಾತೀ ಸ್ಯಾತ್ಸಾರ್ಪಪಿತ್ರ್ಯಯೋಃ ।
ಭಾಗ್ಯಸ್ಯ ಕಾಂತಾ ದಾತವ್ಯಾ ಅರ್ಯಮ್ಣಶ್ಚ ಸುವರ್ಚಲಾ　　　॥ ೮ ॥

ಸಾವಿತ್ರತ್ವಾಷ್ಟ್ರಯೋರ್ನಿತ್ಯಂ ಬಂಧೂಕಕುಸುಮಾನಿ ಚ
ವಾಯುವ್ಯಸ್ಯ ಚ ದೇಯಾನಿ ಸಿಂಧುವಾರಾಣಿ ಪಾರ್ಥಿವ　　　॥ ೯ ॥

ಐಂದ್ರಾಗ್ನ್ಯಸ್ಯ ಚ ದೇಯಾನಿ ಕುರಂಡಕುಸುಮಾನಿ ಚ ।
ರಕ್ತಾಶೋಕಸ್ಯ ಪುಷ್ಪಾಣಿ ತಥಾ ಮೈತ್ರಸ್ಯ ಪಾರ್ಥಿವ　　　॥ ೧೦ ॥

---

ಹೂವೆಂದೂ ಹೆಸರು ) ಬುಧನಿಗೆ—ತಾವರ ಹೂವು ಗುರುವಿಗ—ಸೇವಂತಿಗೆಹೂವು ಶುಕ್ರನಿಗೆ—ಬಿಳೀ ಶಾವಂತಿಗೆ ಶನಿಮಹಾರಾಜನಿಗೆ—ಬಾಣಪುಷ್ಪ ರಾಹುವಿಗೆ—ಪಾದರೀ ಹೂವು ಕೇತುವಿಗೆ—ದವನದ ಹೂವು. ಈ ರೀತಿ ನವಗ್ರಹಗಳಿಗೂ ಹೂಗಳನ್ನು ಪೂಜಿಸಬೇಕು

೬-೧೪ ಇನ್ನು ಮುಂದೆ ಕೃತ್ತಿಕಾ ನಕ್ಷತ್ರ ಮೊದಲುಗೊಂಡು ಇಪ್ಪತ್ತೇಳು ನಕ್ಷತ್ರ ದೇವತೆಗಳನ್ನೂ ಪೂಜಿಸಬೇಕಾದ ಹೂಗಳ ಹೆಸರುಗಳನ್ನೂ ಬರೆಯಲಾಗುವುದು ಇವುಗಳಲ್ಲಿ ಅನೇಕ ವಿಧ ಪುಷ್ಪಗಳು ವನಜನ್ಯವಾಗಿಯೂ, ಅಪ್ರಸಿದ್ಧವಾಗಿಯೂ ಎಂದೂ ನೋಡದೆ ಕೇಳದೇ ಇರುವ ಹೂವುಗಳಾಗಿವೆ ಅಂತಹ ಹೂವುಗಳ ಎದುರಿಗೆ ? ಈ ಚಿಹ್ನೆಯನ್ನು ಹಾಕಿ ಬರೆಯುತ್ತೇನೆ

**ಚಂಪಕಾನಿ ಚ ಶಾಕ್ರಸ್ಯ ತಥಾ ದೇಯಾನಿ ಭೂಪತೇ ।**
**ಮೂಲಸ್ಯ ಚ ತಥಾ ದೇಯಂ ರಾಜನ್ಕೃಷ್ಣಕುಹೇಟಿಕಂ ॥ ೧೧ ॥**

**ಕಲ್ಹಾರಾಣಿ ತಥಾಽಪ್ಯಸ್ಯ ವೈಶ್ವದೇವಸ್ಯ ಕುಬ್ಜಕಂ ।**
**ಬ್ರಾಹ್ಮಸ್ಯ ಜಾತೀಪುಷ್ಪಾಣಿ ವೈಷ್ಣವಸ್ಯ ಚ ಚಂಪಕಂ ॥ ೧೨ ॥**

**ಪಾಟಲಾ ವಾಸವಸ್ಯಾಪಿ ವಾರುಣಸ್ಯೋತ್ಪಲಾನಿ ತು ।**
**ಅರ್ಕಪುಷ್ಪಾಣ್ಯಥಾಽಪ್ಯಸ್ಯ ತಥಾ ದೇಯಾನಿ ಪಾರ್ಥಿವ ॥ ೧೩ ॥**

**ಆಹಿರ್ಬುಧ್ನ್ಯಸ್ಯ ದೇಯಾನಿ ಧತ್ತೂರಕುಸುಮಾನಿ ಚ ।**
**ಕರವೀರಕಪುಷ್ಪಾಣಿ ತಥಾ ಪೌಷ್ಣಸ್ಯ ಪಾರ್ಥಿವ ॥ ೧೪ ॥**

**ಚೂತಪುಷ್ಪಾಣಿ ದೇಯಾನಿ ಆಶ್ವಿನಸ್ಯ ನರಾಧಿಪ ।**
**ನೀಲೋತ್ಪಲಾನಿ ಯಾಮ್ಯಸ್ಯ ತಥಾ ದೇಯಾನಿ ಭೂಪತೇ ॥ ೧೫ ॥**

**ಸಮಾನವೇಷನಕ್ಷತ್ರಕಥಿತಾನಿ ತಥಾ ದಿಶಾಂ ।**
**ಉತ್ತರಾಯಾಶ್ಚ ದೇಯಾನಿ ನಾಗಪುಷ್ಪಾಣಿ ಪಾರ್ಥಿವ ॥ ೧೬ ॥**

**ಸಾಗರಾಣಾಂ ಚ ದೇಯಾನಿ ಕಮಲಾನಿ ಮಹೀಪತೇ ।**
**ಉಕ್ತಾಲಾಭೇ ಪ್ರದೇಯಾನಿ ಸವರ್ಣಾನಿ ನರಾಧಿಪ ।**
**ಸ್ವಕಾಲಜಾನಿ ಪುಷ್ಪಾಣಿ ಸರ್ವೇಷಾಮವಿಶೇಷತಃ ॥ ೧೭ ॥**

---

ಕೃತ್ತಿಕೆ—ಕನ್ನೈದಿಲೆ, ರೋಹಿಣಿ—ಸಂಪಿಗೆ, ಮೃಗಶಿರೆ—ಬಿಳೀ ತಾವರೆ, ಆರ್ದ್ರೆ—ದತ್ತೂರಿ, ಪುನರ್ವಸು—ಮಲ್ಲಿಗೆ, ಪುಷ್ಯ—, ಆಶ್ಲೇಷ—ಮಖೆಗಳಿಗೆ—ಜಾಜೀ, ಪುಬ್ಬೆ—ನಂದಿ ಬಟ್ಟಲು, ಉತ್ತರೆ—ಸುವರ್ಚಲ? ಹಸ್ತ—ಚಿತ್ತೆಗಳಿಗೆ—ಗುಲಾಬಿ ಹೂವು, ಸ್ವಾತಿಗೆ—ಸುಗಂಧರಾಜ, ಸ್ವಾತಿ—ವಿಶಾಖಗಳಿಗೆ—ಕುರಂಟ, (ಗೋರಂಟೆ ಹೂವು), ಅನೂರಾಧೆ ಮತ್ತು ಜ್ಯೇಷ್ಠಗಳಿಗೆ—ನಂಪಿಗೆ ಹೂವು, ಮೂಲ-ಕರೀ ಗೋರಂಟೆ? ಪೂರ್ವಾಷಾಢ—ಕಲ್ಹಾರ, ಉತ್ತರಾಷಾಢ—ಜಾಜೀ, ಶ್ರವಣ—ಸಂಪಿಗೆ, ಧನಿಷ್ಠೆ—ಪಾದರಿ, ಶತಭಿಷೆ—ಕೆಂದಾವರೆ, । ಪೂರ್ವಾಭಾದ್ರ—ಎಕ್ಕದಹೂವು ಉತ್ತರಾಭಾದ್ರೆ—ದತ್ತೂರೀ ಹೂವು ರೇವತಿಗೆ—ಕಣಗಲೆ ಹೂವು

೧೫-೧೯ ಅಶ್ವಿನಿಗೆ—ಮಾವಿನ ಹೂವು ಭರಣಿಗೆ—ಕನ್ನೈದಿಲೆ. ಇನ್ನು ದಿಕ್ಕುಗಳಿಗೆ—ಉತ್ತರ ದಿಕ್ಕಿಗೆ—ನಾಗಕೇಸರೀ ಹೂವು ಸಾಗರಗಳಿಗೆ—ಕಮಲ

**ಯದ್ಯದ್ಗ್ರಹಸ್ಯಾಭಿಹಿತಂ ಮಯಾऽತ್ರ**
**ಋಕ್ಷಸ್ಯ ವಾ ಭೂಮಿಪತಿಪ್ರಧಾನ ।**
**ತದ್ದೇವತಾಯಾಶ್ಚ ತಥೈವ ದೇಯಂ ।**
**ದಿಶಸ್ತಥಾ ನಾತ್ರ ವಿಚಾರಣಾऽಸ್ತಿ     ॥ ೧೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಗ್ರಹರ್ಕ್ಷವಿಶೇಷಪುಷ್ಪದೇಯಾದೇಯಾಧ್ಯಾಯೋನಾಮ ಸಪ್ತನವತಿತಮೋಽಧ್ಯಾಯಃ**

— —

---

ಮೇಲೆ ಹೇಳಲ್ಪಟ್ಟ ಹೂಗಳು ಸಿಕ್ಕದಿದ್ದರೆ ಆಯಾ ಕಾಲದಲ್ಲಿ ದೊರೆಯುವ ಹೂವುಗಳನ್ನು ಪೂಜಿಸಿದರೆ ಸಾಕು ಮಹಾರಾಜ !

ನಾನು ಹೇಳಿದ ಈ ರಹಸ್ಯವನ್ನು ತಿಳಿದು ಪೂಜೆ ಮಾಡಬೇಕೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಗ್ರಹನಕ್ಷತ್ರ ವಿಶೇಷ ಪುಷ್ಪ ದೇಯಾದೇಯವೆಂಬ ಹೆಸರಿನ ತೊಂಭತ್ತೇಳನೆಯ ಅಧ್ಯಾಯವು ಮುಗಿದುದ



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಅಷ್ಟನವತಿತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಧ್ರುವಸ್ಥಾನನಿವಿಷ್ಟಾನಾಂ ದೇವತಾನಾಂ ಮಹೀಪತೇ ।
ಗುಗ್ಗುಲುಂ ಘೃತಸಂಯುಕ್ತಂ ಧೂಪಂ ದದ್ಯಾದ್ವಿಚಕ್ಷಣಃ ॥ ೧ ॥

ಧೂಪಂ ತ್ವಗುರುರರ್ಕಾಯ ನಮೇರುಂ ಚ ತಥೇಂದವೇ ।
ಭೌಮಾಯ ಗುಗ್ಗುಲುಂ ದದ್ಯಾತ್ಸರ್ಜಂ ದದ್ಯಾದ್ಬುಧಾಯ ಚ ॥ ೨ ॥

ಶಿಲಾಜತು ತು ಜೀವಾಯ ದಾತವ್ಯಂ ಪಾರ್ಥಿವೋತ್ತಮ ।
ಶ್ರೀವಾಸಕಂ ತು ಶುಕ್ರಾಯ ನಖಂ ಸೌರಾಯ ಪಾರ್ಥಿವ ।
ಮದಶ್ಚ ರಾಹವೇ ದೇಯೋ ಕೇತವೇ ಚ ವಸಾ ತಥಾ ॥ ೩ ॥

## ತೊಂಭತ್ತೆಂಟನೆಯ ಅಧ್ಯಾಯವು

೧-೪ ಮಾರ್ಕಂಡೇಯನು ಹೇಳುತ್ತಾನೆ—ಇನ್ನು ಮುಂದೆ ಧ್ರುವಸ್ಥಾನ ನಿವಿಷ್ಟದೇವತೆಗಳೆಲ್ಲರಿಗೂ ಎಂತೆಂತಹ ಧೂಪವನ್ನು ಸಮರ್ಪಿಸಬೇಕೆಂಬ ಸಂಗತಿ ಯನ್ನು ತಿಳಿಸಲಾಗುವುದು ಒಟ್ಟಿಗೇ ಎಲ್ಲಾ ಗ್ರಹಗಳಿಗೂ ಗುಗ್ಗುಲು ಘೃತಯುಕ್ತ (ದಶಾಂಗ) ವಾದ ಧೂಪವನ್ನಾಘ್ರಾಣಮಾಡಿಸಿದರೇ ಸಾಕಾದಾಗ್ಯೂ ಬೇರೆ ಬೇರೆ ಉಕ್ತ ವಾದ ಧೂಪಗಳನ್ನು ತಿಳಿಸುವನು

ಸೂರ್ಯನಿಗೆ--ಅಗುರುಧೂಪ, ಚಂದ್ರನಿಗೆ—ಸುರಗೀ ಗಂಧದಧೂಪ, ಅಂಗಾರಕ ನಿಗೆ—ಗುಗ್ಗುಲು, ಬುಧನಿಗೆ—ಸರ್ಜಧೂಪ (ಯಕ್ಷಧೂಪವೆಂದೂ ಹೆಸರು) ಗುರು ವಿಗೆ--ಶಿಲಾಜತುಧೂಪ, ಶುಕ್ರನಿಗೆ--ಸಾಪ್ರಾಣ, (ಶ್ರೀವಾಸವೃಕ್ಷಧೂಪ) ಶನೈಶ್ಚರ

**ಕೃತ್ತಿಕಾನಾಂ ಘೃತಂ ದೇಯಂ ರೋಹಿಣೀನಾಂ ಚ ಚಂದನಂ ।**
**ಇಲ್ವಲಾನಾಂ ಚ ಕರ್ಪೂರಮಾದ್ರಾರ್ಯಾಂ ಚ ನಖಂ ತಥಾ ॥ ೪ ॥**

**ಪುನರ್ವಸೋಶ್ಚಾಪ್ಯಗುರುಂ ಪುಷ್ಯಸ್ಯ ಚ ತಥಾಕ್ಷತಂ ।**
**ಶ್ರೀವಾಸಕಂ ಚ ಸಾರ್ಪಸ್ಯ ಪೈತ್ರ್ಯಸ್ಯ ಚ ತಥಾ ಘೃತಂ ॥ ೫ ॥**

**ಪ್ರಿಯಂಗುಂ ಮಧುನಾ ಯುಕ್ತಂ ಭಾಗ್ಯಸ್ಯ ಸಘೃತಂ ಭವೇತ್ ।**
**ಘೃತೇನ ಮಧುನಾ ಯುಕ್ತಮಾರ್ಯಮ್ಣಸ್ಯ ಶತಾವರೀಂ ॥ ೬ ॥**

**ಕುಂದುರುಂ ಚೈವ ಹಸ್ತಾಯ ತ್ವಾಷ್ಟ್ರಾಯ ಚ ಫಲಂ ಭವೇತ್ ।**
**ವಾಯುವ್ಯಾಯ ಚ ಕರ್ಪೂರಮೈಂದ್ರಾಗ್ನ್ಯಾಯ ಮಿಸಿರ್ಭವೇತ್ ॥ ೭ ॥**

**ಮೈತ್ರಾಯ ಕುಂಕುಮಂ ದೇಯಂ ಶಾಕ್ರಾಯ ಮೃಗಜಂ ಭವೇತ್ ।**
**ಶಾಟೀಮೂಲಂ ಚ ಮೂಲಾಯ ಆಪ್ಯಾಯ ನಲದಂ ತಥಾ ॥ ೮ ॥**

---

ನಿಗೆ -ನಯಿಸಾಮಕ ಗಂಧಧೂಪ, ರಾಹುವಿಗೆ -ಕಸ್ತೂರೀಧೂಪ, (ಮದೋರೇತಸಿ ಕಸ್ತೂರ್ಯಾಂ ಎಂದು ಶಬ್ದಾರ್ಥ ಕಲ್ಪದ್ರುಮದಲ್ಲಿದೆ) ಕೇತುವಿಗೆ—ವನಾಧೂಪ ಈ ರೀತಿ ಗ್ರಹಗಳಿಗೆ ಧೂಪವನ್ನಾಘ್ರಾಣಿಸಿದ ನನುನಂತರದೊಳ್ ನಕ್ಷತ್ರಗಳಿಗೆ ಉಕ್ತ ನಾದ ಧೂಪಗಳ ನಾಮಗಳನ್ನು ವಿವರಿಸುವೆನು

೫-೭ ಕೃತ್ತಿಕೆಗೆ -ತುಪ್ಪದಧೂಪ, ರೋಹಿಣಿ ಗಂಧಪಹುಡಿ, ಮೃಗಶಿರೆಗೆ-ಕರ್ಪೂರ, ಆದ್ರೆಗೆ –ನಖವೆಂಬಧೂಪ, ಪುನರ್ವಸುವಿಗೆ -ಅಗುರುಧೂಪ, ಪುಷ್ಯಕ್ಕೆ ಅಕ್ಷತ, ಆಶ್ಲೇಷೆಗೆ—ಶ್ರೀವಾಸ (ವೃಕ್ಷಧೂಪ—ಸಾಂಬ್ರಾಣಿ), ಮಖೆಗೆ—ತುಪ್ಪದ ಧೂಪ, ಪುಬ್ಬೆಗೆ—ತುಪ್ಪಸಹಿತನಾದ ನವಣೇಗಂಧ, ಉತ್ತರೆಗೆ—ಜೇನುತುಪ್ಪ, ತುಪ್ಪದಹೊಗೆ, ಹಸ್ತಕ್ಕೆ—ಶತಾವರೀಧೂಪ ಮತ್ತು ಕುಂದುರುಧೂಪ— ಅಂದರೆ " ಕುಂದುರುಷ್ಕೋ ಕುಂದುರುಷ್ಕ ಮೋವಕಃ ಕಟುಕಶ್ಚನಃ ॥ "—ಅಂದರೆ ಕುಂದು ರುಷ್ಕವೆಂಬ ಹೆಸರಿನ ಗಂದಿಗೆ-ಅಂಕೋಲೇಗಿಡದ ಬೇರೆಂದೂ ಹೇಳುವರು ಚಿತ್ತೆಗೆ – ಮಾಂಸದಧೂಪ, ಸ್ವಾತಿಗೆ—ಕರ್ಪೂರದಹೊಗೆ, ವಿಶಾಖೆಗೆ --ಜಟಾಮಾಂಸೀಹೊಗೆ

೮-೧೧ ಅನೂರಾಧೆಗೆ —ಕುಂಕುಮಕೇಸರಿ, ಜ್ಯೇಷ್ಠೆಗೆ — - ಕಸ್ತೂರೀಗಂಧ ಧೂಪ, ಮೂಲಾನಕ್ಷತ್ರಕ್ಕೆ— ಬಟ್ಟೆಯನ್ನು ತುಪ್ಪದಲ್ಲಿ ನೆನೆಸಿ ಅದರ ಗಂಧಧೂಪ,

**ಗುಗ್ಗುಲುಂ ವೈಶ್ವದೇವಾಯ ಬ್ರಾಹ್ಮಾಯ ಘೃತಚಂದನೇ ।**
**ವೈಷ್ಣವಾಯಾಗುರುಂ ದದ್ಯಾದ್ವಾಸವಾಯ ತಥಾ ಪಲಂ ॥ ೯ ॥**

**ವಾರುಣಾಯ ತಥೋಶೀರಮಾಜಾಯ ಚ ಪಲಂ ಭವೇತ್ ।**
**ಅಹಿರ್ಬುಧ್ನ್ಯಾಯ ದಾತವ್ಯಂ ದೇವದಾರುಂ ನರಾಧಿಪ ॥ ೧೦ ॥**

**ಕಂಕೋಲಕಾನಿ ಪೌಷ್ಣಾಯ ಆಶ್ವಿನಾಯ ಚ ಚಂದನಂ ।**
**ಯಾಮ್ಯಾಯ ಗುಗ್ಗುಲುರ್ದೇಯಃ ಸತತಂ ಭೂತಿಮಿಚ್ಛತಾ ॥ ೧೧ ॥**

**ಕರ್ಪೂರಂ ಕುಂಕುಮಂ ಚೈವ ಚಂದನಂ ಮೃಗಜಂ ತಥಾ ।**
**ತುರುಷ್ಕಮಗುರುಂ ಕಾಂತಾಂ ಗುಗ್ಗುಲುಂ ಚ ಕ್ರಮಾದ್ದಿಶಾಂ ॥ ೧೨ ॥**

**ಪ್ರಾಚ್ಯಾದೀನಾಂ ಮಹೀನಾಥ ಸಾಗರಾಣಾಂ ಚ ಚಂದನಂ ।**
**ಸರ್ವಾಭಾವೇ ಚ ದಾತವ್ಯಾಃ ಸರ್ವೇಷಾಮೇವ ಗುಗ್ಗುಲುಂ ॥ ೧೩ ॥**

**ವನಸ್ಪತಿರಸೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।**
**ಆಘ್ರೇಯಃ ಸರ್ವದೇವಾನಾಂ ಗುಗ್ಗುಲುಪ್ರವರಃ ಶುಭಃ ॥ ೧೪ ॥**

ಪೂರ್ವಾಷಾಢಕ್ಕೆ- ನಲವಧೂಪ, ಉತ್ತರಾಷಾಢ—ಗುಗ್ಗುಲು, ಶ್ರವಣ- ತುಪ್ಪದ ಧೂಪ, ಧನಿಷ್ಠ—ಅಗುರು, ಶತಭಿಷಗ—ಲಾಮಂಚಧೂಪ, ಪೂರ್ವಾಭಾದ್ರೆ—ಮಾಂಸಗಂಧ, ಉತ್ತರಾಭಾದ್ರ— ದೇವದಾರುಧೂಪ, ರೇವತಿ—ತಂಕೋಲಕಧೂಪ, ಅಶ್ವಿನಿ—ಚಂದನಧೂಪ, ಭರಣಿ—ಗುಗ್ಗುಲುಧೂಪ ಈ ಮೇರೆ ನಕ್ಷತ್ರಗಳಿಗೆ ಧೂಪವನ್ನು ಸಮರ್ಪಿಸುವವರು ಐಶ್ವರ್ಯವನ್ನು ಹೊಂದುತ್ತಾರೆ

೧೨-೧೪ ಇಂದ್ರಾದ್ಯಷ್ಟ ದಿಕ್ಪಾಲಕರಿಗೆ ಕ್ರಮವಾಗಿ-ಕರ್ಪೂರ-ಕೇಸರಿ, ಚಂದನಗಂಧ-ಕಸ್ತೂರಿ-ಹಾಲುಮಡ್ಡಿ-ನಾಸ್ತ್ರಾಣ-ಅಗುರು—ಗುಗ್ಗುಲುಧೂಪಗಳನ್ನು ಸಮರ್ಪಿಸಬೇಕು. ಈ ಮೇ ಲೆಹೇಳಿದ ಧೂಪಗಳು- ಸಿಕ್ಕದೇಹೋದರೆ ಗುಗ್ಗುಲುಧೂಪವೊಂದೇ ಸಾಕಾಗುವುದು ಇದಕ್ಕೆ ಮಂತ್ರವೇನೆಂದರೆ—೧೪ನೇ ಶ್ಲೋಕ ಮಂತ್ರವನ್ನೇ ವನಸ್ಪತಿರಸೋ ಶುಭಃ ॥ ಎಂಬುದನ್ನು ಹೇಳಿ ಧೂಪಮಾಘ್ರಾಪಯಾಮಿ ಎಂದು ಧೂಪವಂ ಸಮರ್ಪಿಸಬೇಕು

ದೀಪಶ್ಚಾಜ್ಯೇನ ದಾತವ್ಯಃ ಸರ್ವೇಷಾಮವಿಶೇಷತಃ ।
ತೈಲೇನ ವಾ ಮಹೀನಾಥ ವಸಾದ್ಯೇನ ವಿವರ್ಜಯೇತ್ ॥ ೧೫ ॥

ಯದ್ಯದ್ಗ್ರಹಸ್ಯಾಭಿಹಿತಂ ಮಯಾತ್ರ
ಋಕ್ಷಸ್ಯ ವಾ ಭೂಮಿಪತಿಪ್ರಧಾನ ।
ತದ್ದೇವತಾಯಾಶ್ಚ ತಥೈವ ದೇಯಂ
ದಿಶಾಂ ತಥಾ ನಾತ್ರ ವಿಚಾರಮಸ್ತಿ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗ್ರಹರ್ಕ್ಷಧೂಪದೀಪೋನಾಮಾಷ್ಟ
ನವತಿತಮೋಽಧ್ಯಾಯಃ

---

೧೫-೧೬ ದೀಪದಾರತಿಯನ್ನು ತುಪ್ಪದಲ್ಲಿ ನೆನೆಸಿದ ಬತ್ತಿಗಳಿಂದಾಗಲೀ ಎಣ್ಣೆಯಲ್ಲಿ ನೆನೆಸಿದ ಮಂಗಳಾರತಿಯ ಬತ್ತಿಗಳಿಂದಾಗಲೀ ಮಾಡಬೇಕು ಸರ್ವಗ್ರಹ ನಕ್ಷತ್ರಗಳಿಗೂ ಒಂದೇ ತರಹ ದೀಪವಾದರೆ ಸರಿ ಈ ದೀಪಾರ್ತಿಗೆ ವಿಶೇಷ ಆಧ್ಯತೆಯೇನೂ ಬೇಕಿಲ್ಲ ಅಯ್ಯ ! ವಜ್ರಮಹಾರಾಜನೆ ! ನಾನು ಇದುವರೆಗೆ ಯಾವ ಯಾವ ಗ್ರಹಗಳಿಗೆ ಯಾವ ಯಾವ ನಕ್ಷತ್ರಗಳಿಗೆ ಏನೇನು ದ್ರವ್ಯವನ್ನು ತಿಳಿಸಿದೇನೋ ಆಯಾಯ ದೇವತೆಗಳಿಗೂ ಆಯಾಯ ದಿಕ್ಕುಗಳಿಗೂ ಅವೇ ದ್ರವ್ಯವನ್ನು ಸಮರ್ಪಿಸಬೇಕೆಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಗ್ರಹನಕ್ಷತ್ರ ಧೂಪವೆಂಬ ಹೆಸರಿನ ತೊಂಭತ್ತೆಂಟನೆಯ
ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ನವನವತಿತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಧ್ರುವಸ್ಥಾನನಿವಿಷ್ಟಾನಾಂ ದೇವತಾನಾಂ ನರಾಧಿಪ ।
ದಧ್ಯೋದನಂ ಪಾಯಸಂ ಚ ಪ್ರತ್ಯೇಕಂ ವಿನಿವೇದಯೇತ್ ॥ ೧ ॥

ಗುಡೌದನಂ ಗುಡಾಪೂಪಾಃ ಫಲಾನಿ ಗುಡಪಾಯಸಂ ।
ನಿವೇದನಂ ತು ಸೂರ್ಯಾಯ ಧಾನ್ಯಲಾಜೇ ಮಧೂತ್ಕಟೇ ॥ ೨ ॥

ಸರ್ಪಿರ್ದಧ್ಯೋದನಂ ಚೈವ ಫಲಾನಿ ವಿವಿಧಾನಿ ಚ ।
ಮೋದಕಾನಿ ಚ ಮುಕ್ತಾನಿ ಪಾಯಸಂ ಶಶಿನಸ್ತಥಾ ॥ ೩ ॥

---

### ತೊಂಭತ್ತೊಂಭತ್ತನೇ ಅಧ್ಯಾಯವು..

೧ ಮಾರ್ಕಂಡೇಯಋಷಿಗಳು ಹೇಳುತ್ತಾರೆ —ಧ್ರುವಸ್ಥಾನದಲ್ಲಿರುವ ಸಕಲ ದೇವತೆಗಳಿಗೂ ಬೇರೆ ಬೇರೆಯಾಗಿ ಮೊಸರನ್ನವನ್ನೂ ಪಾಯಸವನ್ನೂ ನೈವೇದ್ಯ ಮಾಡಬೇಕು

೨-೩. ಸೂರ್ಯನಿಗೆ ಕಾಯನ್ನ (ಬೆಲ್ಲದನ್ನವೆಂದೂ ಹೇಳುವರು) ಎರೆಯಪ್ಪ (ಕಜ್ಜಾಯ) ಬೆಲ್ಲದ ಪಾಯಸ, ಮತ್ತು ಹಣ್ಣುಗಳನ್ನು ನಿವೇದನ ಮಾಡಬೇಕು ಮತ್ತು ಧಾನ್ಯಸಹಿತವಾಗಿ ಅದನ್ನು ಕೊಡಬೇಕು. ಚಂದ್ರನಿಗೆ-ತುಪ್ಪದನ್ನ-ಮೊಸರನ್ನ-ಹಣ್ಣುಹಂಪಲು ಕಡಬು, ಪಾಯಸಗಳನ್ನು ನಿವೇದನ ಮಾಡಬೇಕು.

ಗುಡೌದನಂ ಗುಡಾಪೂಪಾ ಯಾವಕಂ ಗುಡಪಾಯಸಂ ।
ಕೃಸರಂ ಚ ತಥಾ ದೇಯಂ ಭೂಮಿಪುತ್ರಾಯ ಪಾರ್ಥಿವ || ೪ ||

ಕ್ಷೀರೌದನಂ ಸಸರ್ಪಿಷ್ಕಂ ಕ್ಷೀರವೃಕ್ಷಫಲಾನಿ ಚ ।
ಕ್ಷೀರಿಣ್ಯಶ್ಚ ತಥೌಷಧ್ಯೋ ಸೋಮಪುತ್ರಾಯ ದಾಪಯೇತ್ || ೫ ||

ಶಿಂಬಿಧಾನ್ಯವಿಕಾರಾಣಿ ಬಿಲ್ವಾನ್ಯಾಮಲಕಾನಿ ಚ ।
ಘೃತೌದನಂ ಚ ಜೀವಾಯ ದಾತವ್ಯಂ ಭೂತಿಮಿಚ್ಛತಾ || ೬ ||

ದಧ್ಯೋದನಂ ಪಾಯಸಂ ಚ ಮಧುನಾ ಸರ್ಪಿಷಾ ಯುತಂ ।
ಉತ್ಕಾರಿಕಂ ಮೋದಕಾಂಶ್ಚ ಭಾರ್ಗವಾಯ ನಿವೇದಯೇತ್ || ೭ ||

ಮಾಷೌದನಂ ಸಸರ್ಪಿಷ್ಕಂ ಕೃಸರಂ ದಧಿ ಯಾವಕಂ ।
ನಿವೇದಯೇತ್ತು ಸೌರಾಯ ಕುಲತ್ಥಂ ಚಣಕೈಃ ಸಹ || ೮ ||

ಪ್ಲಕ್ಷಂ ದಧಿತ್ಥಂ ಚ ತಥಾ ಪಲಲಂ ಚೈವ ರಾಹವೇ ।
ಮಾಷೌದನಂ ತಥಾ ದೇಯಂ ಯವಾಪೂಪಾಂಸ್ತಥೈವ ಚ || ೯ ||

ತಿಲ್ಲೋಪಿಕಾಸ್ತಥಾ ಮತ್ಸ್ಯಾಃ ಕೇತವೇ ಕೃಸರಂ ತಥಾ ।
ವಸಾಸರ್ಪೀಂಷಿ ಚ ತಥಾ ದೇಯಾನಿ ಮನುಜೇಶ್ವರ || ೧೦ ||

---

೪-೮ ಕಾಯನ್ನ—ಎಣ್ಣೋರಿಗೆ, ಹಲಸಂದೆ ಬೆಲ್ಲಹಾಕಿದ ಪಾಯಸ ಎಳ್ಳು ಹುಡಿ ಅನ್ನಗಳನ್ನೂ ಅಂಗಾರಕನಿಗೆ ನೈವೇದ್ಯ ಮಾಡಬೇಕು ಹಾಲನ್ನ-ತುಪ್ಪಾನ್ನ, ಹಾಲುಬರುವ ಓಷಧಲತೆಗಳನ್ನು ಬುಧನಿಗೆ ನಿವೇದಿಸಬೇಕು ಬಿಲ್ವಪತ್ರೆ—ನೆಲ್ಲೀ ಕಾಯಿ, ತುಪ್ಪಾನ್ನಗಳನ್ನು ಗುರುವಿಗೂ, ಮೊಸರನ್ನ, ಜೇನುತುಪ್ಪ, ತುಪ್ಪಬೆರಸಿದ ಪಾಯಸ ಕಡುಬುಗಳನ್ನು ಶುಕ್ರನಿಗೂ, ಉದ್ದಿನಹುಡಿ-ಎಳ್ಳುಹುಡಿ ಬೆರೆದ ತುಪ್ಪಾನ್ನ ವನ್ನೂ-ಹುರುಳಿ ಕಡಲೆಗಳನ್ನೂ ಶನೈಶ್ಚರನಿಗೂ ನೈವೇದ್ಯ ಮಾಡಬೇಕು.

೯-೧೦ ರಾಹುವಿಗೆ ಉದ್ದಿನ ಹುಡಿಅನ್ನ ಅಥವಾ ಮಾಂಸದನ್ನ, ಚಕ್ಕಿಭಕ್ಷ್ಯದ ನಿವೇದನೆ, ಕೇತುವಿಗೆ-ಮೀನು-ಎಳ್ಳುಹುಡಿ-ತುಪ್ಪದಭಕ್ಷ್ಯಗಳನ್ನೂ ನಿವೇದಿಸಬೇಕು

**ಮಧುಲಾಜೇ ಕೃತ್ತಿಕಾನಾಂ ಕುಲ್ಮಾಷಂ ದಧಿಸರ್ಪಿಷೀ ।**
**ರೋಹಿಣೀನಾಂ ಚ ಬೀಜಾನಿ ದಧಿಪಿಷ್ಟವೃಷಾಣಿ ಚ ॥ ೧೧ ॥**

**ದಧ್ಯೋದಕಂ ಚೇಲ್ವಲಾನಾಂ ಮೃಗಮಾಂಸಂ ತಥೈವ ಚ ।**
**ರುಧಿರಂ ಕೃಸರಂ ಚೋಭೌ ರೌದ್ರಸ್ಯ ವಿನಿವೇದಯೇತ್ ॥ ೧೨ ॥**

**ಪುನರ್ವಸೋಃ ಪ್ರದಾತವ್ಯಂ ಪಲಲಂ ಸವಿಲಾಯನಂ ।**
**ಪಾಯಸಂ ಚ ಸರ್ಸರ್ಪಿಷ್ಕಂ ತಿಷ್ಯಾಯ ವಿನಿವೇದಯೇತ್ ॥ ೧೩ ॥**

**ಪಿಷ್ಟಸರ್ಪಾಣಿ ಸಾರ್ಪಸ್ಯ ಕ್ಷೌದ್ರಂ ದಧಿಯುತಂ ತಥಾ**
**ತಿಲೌದನಂ ಸಪಲಲಂ ಪೈತ್ರ್ಯಸ್ಯ ವಿನಿವೇದಯೇತ್ ॥ ೧೪ ॥**

**ಷಷ್ಟಿಕಾನ್ನಂ ಚ ಭಾಗ್ಯಸ್ಯ ಮಧುಸರ್ಪೀಂಷಿ ಚಾಪ್ಯಥ ।**
**ಆರ್ಯಮ್ಣಾಯ ತಿಲಾಪೂಪಾನ್ಷಷ್ಟಿಕಾನ್ನಂ ತಥೈವ ಚ ॥ ೧೫ ॥**

**ಪ್ರಿಯಂಗುತಂಡುಲೈಃ ಸಿದ್ಧಂ ಸಾವಿತ್ರಾಯ ಚ ಪಾಯಸಂ ।**
**ತ್ವಾಷ್ಟ್ರಸ್ಯ ಚೈವ ಪೀಯೂಷಂ ದ್ವಿಜಾ ಚಿತ್ರಾಂಡಜಾಸ್ತಥಾ ॥ ೧೬ ॥**

**ವಾಯವ್ಯಸ್ಯ ಚ ಫಲ್ಗೂನಿ ಮೂಲಕಾನಿ ಶುಭಾನಿ ಚ ।**
**ಕುಲಿತ್ಥಾನಿ ವಿಶಾಖಾಸು ಯವಾಪೂಪಾಸ್ತಥೈವ ಚ ॥ ೧೭ ॥**

೧೧-೨೦ ಕೃತ್ತಿಕಾನಕ್ಷತ್ರಕ್ಕೆ ಜೇನುತುಪ್ಪ ಕಲಸಿದ ಅರಳು ಹಲಸಂದೆಯು (ಸ್ವಾದ್ಯಾವಕಸ್ತು ಕುಲ್ಮಾಷಃ—ಯಾವಕ-ಕುಲ್ಮಾಷ ಈ ಎರಡೂ ಒಂದೇ ಅರ್ಥ) ಉಸಲಿ ರೋಹಿಣಿಗೆ-ಬೀಜಗಳು, ನೆಲಗಡಲೆ ಮುಂತಾದ್ದು ಹೆಸರು ಮೊಸರಿನಿಂದ ಕಲಿಸಿದ ಹಿಟ್ಟಿನಪ ಇಷ್ಟ ಮೃಗಶಿರೆಗೆ-ಮೊಸರು, ಮಜ್ಜಿಗೆ, ಜಿಂಕೆಮಾಂಸ, ಆರಿದ್ರೆಗೆ-ರಕ್ತ-ಎಳ್ಳುಹುಡಿ ಪುನರ್ವಸುವಿಗೆ-ಮಾಂಸ ಪುಷ್ಯಕ್ಕೆ-ತುಪ್ಪದ ಪಾಯಸ ಆಶ್ಲೇಷೆಗೆ-ಜೇನುತುಪ್ಪ ಮೊಸರು ಮಖೆಗೆ-ಮಾಂಸ ಎಳ್ಳುಕಲಸಿದ ಅನ್ನ ಪುಬ್ಬೆಗೆ-ಜೇನುತುಪ್ಪ ತುಪ್ಪಕಲಸಿದ ಅನ್ನ ಉತ್ತರೆಗೆ-ಚಿಗಳಿ-ಎಳ್ಳುಹುಡಿಅನ್ನ, ಹಸ್ತನಕ್ಷತ್ರಕ್ಕೆ-ನವಣೆಅಕ್ಕಿ ಅನ್ನ, ಪಾಯಸ. ಚಿತ್ತೆಗೆ-ಚಿತ್ರಾನ್ನ ಸ್ವಾತಿಗೆ-ಗೆಡ್ಡೆಗೆಣಸುಗಳ ಅನ್ನ ಮೂಲಕವೆಂದರೆ ಮೂಲಂಗಿಗೂ ಹೆಸರು ಮೂಲಂಗೀ ಅನ್ನ ಇಷ್ಟವಿರಬಹುದು. ವಿಶಾಖೆಗೆ-ಹುರುಳಿಹುಡಿ ಕಲಸಿದ ಅನ್ನ ಮತ್ತು ಉಂಡಲಿಗೆ (ಯವಾ

ಕುಲತ್ಥಭಕ್ತಂ ಮಿತ್ರಾಯ ದಧಿಕ್ಷೌದ್ರಾನ್ವಿತಂ ತಥಾ ।
ಘೃತೌದನಂ ಚ ಶಾಕ್ರಾಯ ಫಲಾನಿ ವಿವಿಧಾನಿ ಚ　　॥ ೧೮ ॥

ಮೂಲಾನಿ ಚ ವಿಚಿತ್ರಾಣಿ ತಥಾ ಮೂಲಫಲಾನಿ ಚ ।
ಆಪ್ಯಸ್ಯ ಸಕ್ತವೋ ದೇಯಾ ಮಧುಮಿಶ್ರೋದಕೈಃ ಸಹ　　॥ ೧೯ ॥

ಸಕ್ತವೋ ವೈಶ್ವದೇವಾಯ ಮಧುಲಾಜೇ ತಥೈವ ಚ ।
ಬ್ರಾಹ್ಮಾಯ ಪಾಯಸಂ ದೇಯಂ ಸಗುಡಂ ಭೂತಿಮಿಚ್ಛತಾ　　॥ ೨೦ ॥

ದಧ್ಯೋದನಂ ಪಾಯಸಂ ಚ ವೈಷ್ಣವಾಯ ನಿವೇದಯೇತ್ ।
ಘೃತೋದಕಂ ಚ ಶಾಖಾನಿ ವಾಸವಾಯ ನಿವೇದಯೇತ್　　॥ ೨೧ ॥

ವೈಷ್ಟಂ ಬಿಡಾಲಂ ಶಾಕಾಂಶ್ಚ ವಾರುಣಾಯ ತಥಾ ದಧಿ ।
ಆದಾಯ ಮಾಂಸಮಾಜಂ ತು ವ್ಯಾಘ್ರಂ ಪಿಷ್ಟಕೃತಂ ದಧಿ　　॥ ೨೨ ॥

ಆಹಿರ್ಬುಧ್ನ್ಯಾಯ ಮಾಂಸಾನಿ ತಥೈವ ಚ ರಸೌದನಂ ।
ಪೌಷ್ಣಾಯ ಸಕ್ತವೋ ಮಾಷಾ ಮಾಷಯುಕ್ತಾಶ್ಚ ಸಕ್ತವಃ　　॥ ೨೩ ॥

ಅಶ್ವಂ ಪಿಷ್ಟಕೃತಂ ಮಾಷಾನ್ಯಾವಕಂ ಚ ತಥಾ ದಧಿ ।
ಆಶ್ವಿನಸ್ಯಾಥ ಯಾಮಸ್ಯ ತಂಡುಲಾನಿ ತಿಲಾನಿ ಚ　　॥ ೨೪ ॥

---

ಪೂಷ) ಜ್ಯೇಷ್ಠೆಗೆ-ಹುರಳಿಉಸಲಿ ಇದಕ್ಕೆ ಮೊಸರು ಜೇನುತುಪ್ಪಸಹಿತ ಕಲಸಿ ನೈವೇದ್ಯ ಮಾಡಬೇಕು ಮೂಲಾನಕ್ಷತ್ರಕ್ಕೆ-ವಿವಿಧ ಗೆಡ್ಡೆ ಗೆಣಸುಗಳನ್ನು ಪಕ್ವ ಮಾಡಿ ನೈವೇದ್ಯ ಮಾಡಬೇಕು ಪೂರ್ವಾಷಾಢಾನಕ್ಷತ್ರಕ್ಕೆ-ಜೇನುತುಪ್ಪ ಮಿಶ್ರವಾದ ನೀರಿನಿಂದ ಕಲಿಸಿದ ಸಕ್ತು ಅಂದರೆ ಅಕ್ಕಿಹಿಟ್ಟು (ದಧಿಸಕ್ತು ಮಧುಸಕ್ತು ಇತ್ಯಾದಿ) ಶ್ರವಣನಕ್ಷತ್ರಕ್ಕೆ-ಮಧು ಲಾಜ ಸಕ್ತು ಅರಳು ಜೇನುತುಪ್ಪದಿಂದ ಕಲಿಸಿದ ಅಕ್ಕಿ ಹಿಟ್ಟು ಧನಿಷ್ಠೆಗೆ-ಬೆಲ್ಲದ ಪಾಯಸದ ನೈವೇದ್ಯ

೨೧-೨೫ ಶತಭಿಷೆಗೆ-ಮೊಸರನ್ನ ಪಾಯಸ, ಪೂರ್ವಾಭಾದ್ರಪದಗೆ-ತುಪ್ಪಾನ್ನ ವಿವಿಧ ಶಾಕಗಳು ಉತ್ತರಾಭಾದ್ರಪದೆಗೆ-ಮೊಸರು, ಆಡಿನ ಮಾಂಸ ರೇವತಿಗೆ-- ವಿವಿಧ ಪಕ್ವರಸಾನ್ನ ಅಶ್ವಿನಿಗೆ-ಉದ್ದಿನ ಹಿಟ್ಟಿನ ಅನ್ನ, ಮೊಸರು ಭರಣಿಗೆ-ಅಕ್ಕಿ

ರಾಜನ್ಸ್ವೈಷ್ಟಾಶ್ಚ ಪಶವೋ ಮಾಂಸಂ ಪಕ್ವಾಮಕಂ ತಥಾ ।
ಪಾಯಸಂ ಸಘೃತಂ ಕ್ಷೌದ್ರಂ ಪೂರ್ವಸ್ಯಾಂ ವಿನಿವೇದಯೇತ್ ॥ ೨೫ ॥

ಆಗ್ನೇಯ್ಯಾಂ ದಿಶಿ ರಾಜೇಂದ್ರ ಕೃಸರಂ ಕ್ಷೀರಮಿಶ್ರಿತಂ ।
ದಕ್ಷಿಣಸ್ಯಾಂ ಚ ದಾತವ್ಯಂ ಕೃಸರಂ ತೈಲಮಿಶ್ರಿತಂ ॥ ೨೬ ॥

ನೈಋರ್ತ್ಯಾಂ ಚ ಪ್ರದಾತವ್ಯಂ ಕೃಸರಂ ಮತ್ಸ್ಯಸಂಯುತಂ ।
ಕುಲ್ಮಾಷಾಂಶ್ಚೈವ ಮತ್ಸ್ಯಾಂಶ್ಚ ಪಶ್ಚಿಮಸ್ಯಾಂ ನಿವೇದಯೇತ್ ॥ ೨೭ ॥

ವಾಯವ್ಯಾಯಾಶ್ಚ ಮತ್ಸ್ಯಾನಿ ತಥಾ ಕ್ಷೀರೋದನಾನಿ ಚ ।
ಐಶಾನ್ಯಾಯಾಃ ಪ್ರದಾತವ್ಯಾ ಘೃತಕ್ಷೀರೋದನಾವುಭೌ ॥ ೨೮ ॥

ಮೋದಕೋಲ್ಲೋಪಿಕಾಮಿಶ್ರಾಃ ಸಾಗರಾಣಾಂ ಬಲಿರ್ಭವೇತ್ ॥ ೨೯ ॥

ಯದ್ಯದ್ಗ್ರಹಸ್ಯಾಭಿಹಿತಂ ಮಯಾತ್ರ
ಋಕ್ಷಸ್ಯ ವಾ ಭೂಮಿಪತಿಪ್ರಧಾನ ।

---

ಎಳ್ಳುಹುಡಿ ಅನ್ನ ಈ ರೀತಿ ನಕ್ಷತ್ರಗಳಿಗೆ ನಿವೇದನೆಯಾದ ಮೇಲೆ ದಿಕ್ಕುಗಳ ನೈವೇದ್ಯವನ್ನು ಹೇಳುತ್ತಾರೆ ಪೂರ್ವದಿಕ್ಕಿಗೆ-ಪಾಯಸ-ತುಪ್ಪ-ಜೇನುತುಪ್ಪವನ್ನು ನೈವೇದ್ಯಮಾಡಬೇಕು

೨೬-೨೦ ಆಗ್ನೇಯದಿಕ್ಕಿಗೆ ಹಾಲುಬೆರಸಿದ ಎಳ್ಳು ಬೆಲ್ಲದಹುಡಿ ದಕ್ಷಿಣಕ್ಕೆ-ಎಣ್ಣೆ, ಎಳ್ಳುಬೆರಸಿದ ಕೃಸರ ನೈಋತ್ಯಕ್ಕೆ-ಎಳ್ಳುಹುಡಿ ಮೀನು, ಪಶ್ಚಿಮಕ್ಕೆ-ಹಲಸಂದೆಅನ್ನ, ಮೀನು ವಾಯುವ್ಯಕ್ಕೆ-ಹಾಲನ್ನ, ಮೀನು. ಉತ್ತರಕ್ಕೂ ಈಶಾನ್ಯಕ್ಕೂ-ತುಪ್ಪ, ಮೊಸರಿನಿಂದ ಕಲಸಿದ ಅನ್ನ

ಸಕಲ ಸಾಗರಗಳಿಗೂ--ಕಡಬು ಕಾಯಿಹಾಲುಗಳ ನೈವೇದ್ಯವಾಗಬೇಕು ಎಲೈ ಥೊರೆಯೇ! ಯಾವ ಯಾವ ದೇವತೆಗಳಿಗೆ ಏನೇನು ನೈವೇದ್ಯವನ್ನು ಹೇಳಿ

ತದ್ದೇವತಾಯಾಶ್ಚ ತದೇವ ದೇಯಂ
ದಿಶಸ್ತಥಾ ನಾತ್ರ ವಿಚಾರಣಾಽಸ್ತಿ　　　　॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗೃಹರ್ಕ್ಷನೈವೇದ್ಯದೇಯಾದೇಯವಿಧಿರ್ನಾಮ
ನವನವತಿತಮೋಽಧ್ಯಾಯಃ

---

ದೆಯೋ ಅದರಂತೆ ಮಾಡಬೇಕಯ್ಯಾ! ರಾಜೇಂದ್ರ ಎಂದು ಮಾರ್ಕಡೇಯರು ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಗ್ರಹನಕ್ಷತ್ರ ನೈವೇದ್ಯದೇಯಾದೇಯ ವಿಧಿಯೆಂಬ ಹೆಸರಿನ
ತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು



ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

### || ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಧ್ರುವಸ್ಥಾನನಿವಿಷ್ಟಾನಾಂ ದೇವತಾನಾಂ ಪೃಥಕ್ಪೃಥಕ್ ।
ಪಾನಾಯ ದಾಪಯೇತ್ ಕ್ಷೀರಂ ಪ್ರೀತಯೇ ವಾಂತರಾತ್ಮನಃ ।
ಗಂಧೋದಕಂ ತಥಾರ್ಕಾಯ ಪಯಃ ಸೋಮಾಯ ಕೀರ್ತಿತಂ || ೧ ||

ಭೂಮಿಪುತ್ರಾಯ ಖರ್ಜೂರಂ ಮಾರ್ದ್ವೀಕಂ ಶಶಿಜಾಯ ಚ ।
ಜೀವಾಯ ಚ ತಥಾ ತಕ್ರಂ ಶುಕ್ರಾಯೇಕ್ಷುರಸಂ ತಥಾ || ೨ ||

ಮಾಂಸಪಾನಂ ತು ಸೌರಾಯ ರಾಹೋರ್ಮೀನರಸಂ ತಥಾ ।
ಛಾಗಂ ಪಯಃ ಪ್ರದಾತವ್ಯಂ ಕೇತವೇ ಮನುಜೇಶ್ವರ || ೩ ||

### ನೂರನೆಯ ಅಧ್ಯಾಯವು

೧ ಮಾರ್ಕಂಡೇಯರು ಹೇಳುತ್ತಾರೆ — ಧ್ರುವಸ್ಥಾನದಲ್ಲಿರುವ ಸಕಲ ದೇವತೆಗಳಿಗೂ ಬೇರೆ ಬೇರೆಯಾಗಿ ಪಾನೀಯಾರ್ಥವಾಗಿ ಕ್ಷೀರವನ್ನು ಸಮರ್ಪಿಸಬೇಕು ಅಥವಾ ಈ ಪಾನೀಯವು ಅಂತರಾತ್ಮನಿಗೆ ತೃಪ್ತಿಯನ್ನುಂಟುಮಾಡಿದರೂ ಸರಿ

೨-೩ ಸೂರ್ಯನಿಗೆ ಗಂಧೋದಕವನ್ನೂ, ಚಂದ್ರನಿಗೆ ಹಾಲನ್ನೂ, ಅಂಗಾರಕನಿಗೆ ಖರ್ಜೂರರಸವನ್ನೂ, ಬುಧನಿಗೆ ದ್ರಾಕ್ಷಾರಸವನ್ನೂ, ಗುರುವಿಗೆ ಮಜ್ಜಿಗೆಯನ್ನೂ, ಶುಕ್ರನಿಗೆ ಕಬ್ಬಿನ ರಸವನ್ನೂ, ಶನಿಮಹಾರಾಜನಿಗೆ ಮಾಂಸ ರಸವನ್ನೂ, ರಾಹುವಿಗೆ ಮೀನರಸವನ್ನೂ, ಕೇತುವಿಗೆ ಆಡಿನ ಹಾಲನ್ನೂ ಪಾನೀಯಾರ್ಥವಾಗಿ ಕೊಡಬೇಕು

ಇನ್ನು ೨೭ ನಕ್ಷತ್ರಗಳಿಗೂ ಇಷ್ಟಕರವಾದ ಪಾನೀಯಗಳಾವುವೆಂದರೆ —

ಗಂಧೋದಕಂ ಕೃತ್ತಿಕಾನಾಂ ರೋಹಿಣೀನಾಂ ಸುವೀರಕಂ ।
ಇಲ್ವಲಾನಾಂ ಪಯಃ ಪ್ರೋಕ್ತಂ ರೌದ್ರೇಃ ಖಾರ್ಜೂರಮಾಸವಂ ॥ ೪ ॥

ಆದಿತ್ಯಾಯ ತಥಾ ಗೌಡಂ ಕ್ಷೀರಂ ತಿಷ್ಯಾಯ ದಾಪಯೇತ್ ।
ಕ್ಷೀರಮೇವ ಚ ಸಾರ್ಪಾಯ ತಥಾ ಪಿತ್ರ್ಯಾಯ ಯಾದವ ॥ ೫ ॥

ಗಂಧೋದಕಂ ಚ ಭಾಗ್ಯಾಯ ತಥಾರ್ಯಮ್ಣಾಯ ಕೀರ್ತಿತಂ ।
ಸಾವಿತ್ರಾಯ ತಥಾಯುಸ್ತು ತ್ವಾಷ್ಟ್ರಾಯ ಚ ತಥಾ ಪಯಃ ॥ ೬ ॥

ವಾಯವ್ಯಾಯ ಚ ಮಾರ್ದ್ವೀಕಮೈಂದ್ರಾಗ್ನ್ಯಾಯ ಚ ಕಾಂಚಿಕಂ ।
ಮಿತ್ರಾಯ ತಕ್ರಂ ದೇಯಂ ಚ ಶಾಕ್ರಾಯ ದಧಿ ದಾಪಯೇತ್ ॥ ೭ ॥

ನಾರಿಕೇಲಾಂಬು ಮೂಲಾಯ ತಥಾಪ್ಯಾಯ ಮಧೂದಕಂ ।
ಖರ್ಜೂರಂ ವೈಶ್ವದೇವಾಯ ಬ್ರಾಹ್ಮಾಯ ಸಲಿಲಂ ಹಿತಂ ॥ ೮ ॥

ಆಮ್ರೈಃ ಪಾನಂ ವೈಷ್ಣವಾಯ ಜಂಬುಭಿರ್ವಾಸವಾಯ ಚ ।
ವಾರುಣಾಯ ಮಧೂಕೈಶ್ಚ ರಸಮಾಜಸ್ಯ ಪಾರ್ಥಿವ ॥ ೯ ॥

ಆಹಿರ್ಬುಧ್ನ್ಯಸ್ಯ ಚ ತಥಾ ರಸಮೇವ ಭವೇನ್ನೃಪ ।
ಪೌಷ್ಣಾಯ ಚ ಭವೇಚ್ಛಾಗಂ ಚಾಶ್ವಿನಾಯ ಚ ಮಾಹಿಷಂ ।
ಯಾಮ್ಯಾಯ ಚ ತಥಾ ದೇಯಂ ಸ್ವಚ್ಛಂ ಮಾಂಸರಸಂ ತಥಾ ॥ ೧೦ ॥

೪-೧೦ ಕೃತ್ತಿಕೆ-ಗಂಧೋದಕ ರೋಹಿಣೀ-ಬಸಿದ ಗಂಜಿ ಮೃಗಶಿರೆ-ಹಾಲು ಆರ್ದ್ರೆ-ಖರ್ಜೂರರಸ ಪುನರ್ವಸು-ಬೆಲ್ಲದಪಾಕ ಪುಷ್ಯ-ಹಾಲು ಆಶ್ಲೇಷೆಗೂ-ಹಾಲು ಮಘಾನಕ್ಷತ್ರಕ್ಕೂ-ಹಾಲು ಪುಬ್ಬ-ಗಂಧೋದಕ ಉತ್ತರೆಗೂ ಅದೇ ಹಸ್ತ-ಲೋಹರಸ ಚಿತ್ತ-ಹಾಲು ಸ್ವಾತಿ-ದ್ರಾಕ್ಷಾರಸ ವಿಶಾಖ-ಬಸಿದಗಂಜಿ ಅನೂರಾಧಗೆ-ಮಜ್ಜಿಗೆ ಜ್ಯೇಷ್ಠ-ಮೊಸರು ಮೂಲ-ಎಳನೀರು ಪೂರ್ವಾಷಾಢ-ಜೇನುತುಪ್ಪದ ಪಾನಕ ಉತ್ತರಾಷಾಢ-ಖರ್ಜೂರರಸ ಶ್ರವಣ-ಹಿತವಾದ ಸಿಹಿನೀರು ಧನಿಷ್ಠ-ಹುಣಸೇ ಹಣ್ಣಿನರಸದ ಪಾನಕ ಶತಭಿಷ-ನಿಂಬೇಹಣ್ಣಿನ ಪಾನಕ ಪೂರ್ವಾಭಾದ್ರೆ-ಆಡಿನ ಹಾಲು ಉತ್ತರಾಭಾದ್ರಪದಕ್ಕೂ ಸಹ ಅದೇ ರೇವತಿಗೂ-ಅದೇ ಅಶ್ವಿನಿಗೆ-ಎಮ್ಮೆ ಮಜ್ಜಿಗೆ ಭರಣಿಗೆ-ಮಾಂಸರಸ

ಸಮಾನದೇವನಕ್ಷತ್ರಂ ಕಥಿತಂ ಚ ತಥಾ ದಿಶಾಂ ।
ಉತ್ತರಾಯೈ ಪ್ರದಾತವ್ಯಂ ತಥಾ ಕ್ಷೀರಂ ನರಾಧಿಪ ॥ ೧೧ ॥

ಸಾಗರಾಣಾಂ ಚ ಸರ್ವೇಷಾಂ ಸತತಂ ಭೂತಿಮಿಚ್ಛತಾ ॥ ೧೨ ॥

ಯದ್ಯದ್ಗ್ರಹಸ್ಯಾಭಿಹಿತಂ ಮಯಾತ್ರ
ಋಕ್ಷಸ್ಯ ವಾ ಭೂಮಿಪತಿಪ್ರಧಾನ ।
ತದ್ದೇವತಾಯಾಶ್ಚ ತಥೈವ ದೇಯಂ
ದಿಶಸ್ತಥಾ ನಾತ್ರ ವಿಚಾರಣಾಸ್ತಿ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರತಿಗ್ರಹರ್ಕ್ಷದೇಯಾದೇಯಪಾನೋನಾಮ
ಶತತಮೋಽಧ್ಯಾಯಃ

---

ಉತ್ತರಾದಿ ಚತುರ್ದಿಕ್ಕುಗಳಿಗೂ-ಹಾಲು ಸಾಗರಗಳಿಗೂ-ಹಾಲು ಎಲೈ ವಜ್ರ ಮಹಾರಾಜನೇ ! ಯಾವ ಯಾವ ಗ್ರಹಗಳಿಗೂ ನಕ್ಷತ್ರಗಳಿಗೂ ಯಾವ ಯಾವ ಪಾನೀಯಗಳು ಹೇಳಲ್ಪಟ್ಟಿವೆಯೋ ಅವುಗಳಿಗೆಲ್ಲಾ ಅವುಗಳನ್ನೇ ಸಾಧ್ಯವಾದಷ್ಟು ಪ್ರಯತ್ನಮಾಡಿ ಸಮರ್ಪಿಸಬೇಕೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದ ಪ್ರತಿಗ್ರಹನಕ್ಷತ್ರದೇಯಾದೇಯಪಾನವೆಂಬ ಹೆಸರಿನ
ಒಂದುನೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಏಕೋತ್ತರಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಧ್ರುವಸ್ಥಾನನಿವಿಷ್ಟಾನಾಂ ದೇವತಾನಾಂ ಮಹೀಪತೇ ।
ಘೃತಾಕ್ತೈರಕ್ಷತೈಃ ಹೋಮಃ ಕಾರ್ಯಶ್ಚ ಸತಿಲೈರ್ಭವೇತ್ ॥ ೧ ॥

ಅರ್ಕಃ ಪಲಾಶಃ ಖದಿರಶ್ಚಾಪಾಮಾರ್ಗೋಽಥ ಪಿಪ್ಪಲಃ ।
ಉದುಂಬರಶ್ಶಮೀದೂರ್ವಾಃ ಕುಶಾಶ್ಚೇತಿ ಯಥಾಕ್ರಮಂ ॥ ೨ ॥

ಸಮಿದರ್ಥಂ ಪ್ರಶಸ್ಯಂತೇ ಸೂರ್ಯಾದೀನಾಂ ನರಾಧಿಪ ।
ಹೋತವ್ಯಾಸ್ಸಮಿಧಶ್ಚೈವ ಘೃತಾಕ್ತಾ ಮನುಜೇಶ್ವರ ॥ ೩ ॥

## ಒಂದುನೂರೊಂದನೆಯ ಅಧ್ಯಾಯವು.

೧ ಮಾರ್ಕಂಡೇಯರು ಹೇಳುತ್ತಾರೆ—ಧ್ರುವಸ್ಥಾನದೊಳ್ ನಿಷಣ್ಣರಾದ ಸಕಲ ದೇವತೆಗಳಿಗೂ ತುಪ್ಪದಿಂದ ನೆನಸಿದ ತಿಲಸಹಿತವಾದ ಅಕ್ಷತೆಗಳಿಂದ ಹೋಮ ಮಾಡಬೇಕಾದುದು ವಿಹಿತವಾಗಿದೆ ಕೇಳೈ ರಾಜೇಂದ್ರನೇ !

೨-೩ ಸೂರ್ಯನೇ ಮೊದಲಾದ ನವಗ್ರಹಗಳಿಗೆ ಕ್ರಮವಾಗಿ ಎಕ್ಕ-ಮುತ್ತುಗ-ಉತ್ತರಣೆ-ಕಗ್ಗಲಿ-ಅತ್ತಿ-ಅರಳಿ-ಬನ್ನಿ-ಹುಲ್ಲುಗರಿಕೆ-ದರ್ಭೆ ಇವುಗಳ ಸಮಿತ್ತುಗಳನ್ನು ತಂದು ತುಪ್ಪದಲ್ಲಿ ಅದ್ದಿ ಸಮಂತ್ರಕವಾಗಿ ಹೋಮ ಮಾಡಬೇಕು ಕೇಳಯ್ಯಾ, ನರಪತಿಯೇ

ತಥಾ ಪ್ರಾದೇಶಮಾತ್ರಾಶ್ಚ ಪ್ರಾಗಗ್ರಾ ನಿತ್ಯಮೇವ ಚ ।
ಊರ್ಧ್ವಶುಷ್ಕಾಃ ಸಪತ್ರಾಶ್ಚ ನಿತ್ವಚಶ್ಚ ವಿವರ್ಜಯೇತ್ ॥ ೪ ॥

ಕೃತ್ತಿಕಾನಾಂ ಘೃತೇನಾಕ್ತೋ ಹೋಮಃ ಪಾರ್ಥಿವಸತ್ತಮ ।
ರೋಹಿಣೀನಾಂ ತಥಾ ಬೀಜೈರಿಲ್ಬಿಲಾನಾಂ ಚ ಪಾಯಸೈಃ ॥ ೫ ॥

ಮಾಕ್ಷಿಕೈಶ್ಚ ತಥಾದ್ರ್ರಾಯಾಮಾದಿತ್ಯಸ್ಯ ಚ ತಂಡುಲೈಃ ।
ಪುಷ್ಯಸ್ಯ ಪಾಯಸೇನಾಪಿ ಸಾರ್ಪಸ್ಯ ಚ ತಥೌಷಧೈಃ ॥ ೬ ॥

ತಿಲೈಃ ಸತಂಡುಲೈರ್ಹೋಮಃ ತಥಾ ಪೈತ್ರಸ್ಯ ಕೀರ್ತಿತಃ ।
ಪ್ರಿಯಂಗುಭಿಶ್ಚ ಭಾಗ್ಯಸ್ಯ ಚಾರ್ಯಮ್ಣಸ್ಯ ತಥಾಽಕ್ಷತೈಃ ॥ ೭ ॥

ಸಾವಿತ್ರಸ್ಯ ತಥಾ ದಧ್ನಾ ಚಿತ್ರಾಯಾಃ ಪಾಯಸೇನ ಚ ।
ವಾಯವ್ಯಸ್ಯಾಕ್ಷತೈಃ ಕಾರ್ಯಾಃ ಸಘೃತೈರ್ಮನುಜೇಶ್ವರ ॥ ೮ ॥

ಐಂದ್ರಾಗ್ನಸ್ಯ ಸದಾ ಕಾರ್ಯೋ ಯಾವಕೇನ ತಥೈವ ಚ ।
ಮಸೂರೈಶ್ಚೈವ ಮೈತ್ರಸ್ಯ ಶಾಕ್ರಸ್ಯ ಚಣಕೇನ ತು ॥ ೯ ॥

---

೪ ಹೋಮಕ್ಕೆ ಉಪಯೋಗಿಸುವ ಸಮಿತ್ತುಗಳೆಲ್ಲವೂ ಯಾವಾಗಲೂ ಪೂರ್ವಾಗ್ರವಾಗಿಯೇ ಹೋಮ ಮಾಡಲ್ಪಡಬೇಕು ಸಮಿತ್ತುಗಳು ಚೆನ್ನಾಗಿ ಒಣಗಿರಬೇಕು ಎಲೆಗಳಿರಕೂಡದು ತೊಗಟೆಗಳಿರಕೂಡದು ಪ್ರತಿಯೊಂದೂ ಒಂದು ಚೋಟಿಗಿಂತ ಉದ್ದವಾಗಿರಬಾರದು

೫-೧೯ ಕೃತ್ತಿಕಾದಿಯಾಗಿ ಇಪ್ಪತ್ತೇಳು ನಕ್ಷತ್ರಗಳಿಗೂ ಹೋಮದ್ರವ್ಯಗಳೇನೆಂಬುದನ್ನು ಈಗ ವಿವರಿಸಲಾಗುವುದು —ಪ್ರತಿಯೊಂದು ಹೋಮದ್ರವ್ಯವನ್ನೂ ತುಪ್ಪದಲ್ಲಿ ಅದ್ದಿ ಹೋಮ ಮಾಡಬೇಕಾದುದು ಮುಖ್ಯವು. ಕೃತ್ತಿಕೆಗೆ-ತುಪ್ಪ, ರೋಹಿಣಿಗೆ-ಬೀಜಗಳಿಂದ ಹೋಮವು ಮೃಗಶಿರೆ-ಪಾಯಸ, ಆರ್ದ್ರ-ಜೇನುತುಪ್ಪ, ಪುನರ್ವಸು-ಅಕ್ಕಿ ಪುಷ್ಯ-ಪಾಯಸ, ಆಶ್ಲೇಷೆ-ಓಷಧಿರಸ, ಮಖೆ-ತಿಲಾಕ್ಷತ, ಪುಬ್ಬೆಗೂ ಸಹ ಅದೇ ಹೋಮ ಉತ್ತರೆಗೆ-ನವಣೆ, ಹಸ್ತ-ಅಕ್ಷತೆ ಮೊಸರೂ ಸಹ ಚಿತ್ರೆ-ಪಾಯಸ, ಸ್ವಾತಿಗೆ-ತುಪ್ಪದಿಂದ ಕಲಸಿದ ಅಕ್ಷತೆ, ವಿಶಾಖೆ-ತಡುಗುಣಿ ಅನೂರಾಧ-ನವಣೆ, ಜ್ಯೇಷ್ಠೆ-ಕಡಲೆ, ಮೂಲ-ಓಷಧಿರಸ ಪೂರ್ವಾಷಾಢ-ಭತ್ತ. ಉತ್ತರಾಷಾಢ-ಫಲಸಂಧೆ, ಶ್ರವಣ-ಅಕ್ಕಿಸಹಿತವಾದ ರತ್ನ ಧನಿಷ್ಠೆ-ಆಲದ ಮತ್ತು ಅತ್ತಿಯ ಹಣ್ಣು

ಮೂಲಸ್ಯೌಷಧಿಭಿಃ ಕಾರ್ಯಸ್ತಥೈವಾಪ್ಯಸ್ಯ ಶಾಲಿಭಿಃ ।
ವೈಶ್ವದೇವಸ್ಯ ಪಯಸಾ ತಥಾ ಬ್ರಾಹ್ಮಸ್ಯ ಪಾಯಸೈಃ ॥ ೧೦ ॥

ಮಣಿಭಿಸ್ತಂಡುಲೋಪೇತೈಃ ಶ್ರವಣಸ್ಯ ವಿಧೀಯತೇ ।
ನ್ಯಗ್ರೋಧೋದುಂಬರಫಲೈರ್ವಾಸವಸ್ಯ ವಿಧೀಯತೇ ॥ ೧೧ ॥

ವಾರುಣಸ್ಯೋದಕೈಃ ಪುಷ್ಪೈಸ್ತಥಾ ಚೈವಾಕ್ಷತೈಶ್ಶುಭೈಃ ।
ಆಜಸ್ಯಾಜ್ಯೇನ ಮಧುನಾ ದಧ್ನಾ ಚ ನೃಪಸತ್ತಮ ॥ ೧೨ ॥

ವ್ರೀಹಿಭಿಶ್ಚ ತಥಾ ಕಾರ್ಯಾಶ್ಚಾಹಿರ್ಬುಧ್ನ್ಯಸ್ಯ ಪಾರ್ಥಿವ ।
ಫಲೈಶ್ಚ ಸಾಕ್ಷತೈಃ ಕಾರ್ಯಸ್ತಥಾ ಪೌಷ್ಣಸ್ಯ ಪಾರ್ಥಿವ ॥ ೧೩ ॥

ಕ್ಷೀರವೃಕ್ಷಸಮಿದ್ಭಿಶ್ಚ ಆಶ್ವಿನಸ್ಯ ವಿಧೀಯತೇ ।
ಯಾಮ್ಯಸ್ಯ ಮಧುಸಂಯುಕ್ತೈಸ್ತಿಲೈಃ ಪಾರ್ಥಿವಸತ್ತಮ ॥ ೧೪ ॥

ಆಜ್ಯಂ ತಿಲಾಶ್ಚ ತೈಲಂ ಚ ಕೃಸರಂ ಮಧು ಪಾಯಸಂ ।
ದಧಿ ಕ್ಷೀರಂ ಘೃತಂ ಕ್ಷೌದ್ರಂ ಪ್ರಾಚ್ಯಾದೀನಾಂ ಯಥಾಕ್ರಮಂ ॥ ೧೫ ॥

ಸಾಗರಾಣಾಂ ಚ ಪಯಸಾ ಹೋಮಃ ಕಾರ್ಯಃ ಪೃಥಕ್ಪೃಥಕ್ ।
ಉಕ್ತಾಲಾಭೇ ಚ ಸರ್ವೇಷಾಂ ಹೋಮಃ ಕಾರ್ಯಸ್ತಿಲಾಕ್ಷತೈಃ ॥ ೧೬ ॥

---

ಗಳು ಪೂರ್ವಾಭಾದ್ರ-ಪುಷ್ಪೋದಕ ಮತ್ತು ಮಂತ್ರಾಕ್ಷತೆ, ಉತ್ತರಾಭಾದ್ರ-ತುಪ್ಪ, ಜೇನುತುಪ್ಪ, ಮೊಸರು ಮಿಶ್ರಮಾಡಿ ಹೋಮ, ರೇವತಿ-ಭತ್ತ, ಅಶ್ವಿನೀ-ಫಲಾಕ್ಷತ ಮತ್ತು ಸಮಿತ್ ಕ್ಷೀರ, ಭರಣಿಗೆ-ಜೇನುತುಪ್ಪದಿಂದ ಕಲಸಿದ ಎಳ್ಳು, ಈರೀತಿ ಇಪ್ಪತ್ತೇಳು ನಕ್ಷತ್ರಗಳಿಗೆ ಹೋಮ ಜರಗಿದ ಬಳಿಕ ಪೂರ್ವಾದಿ ದಿಕ್ಕುಗಳಿಗೆ ಈ ಕೆಳಗೆ ಕಂಡ ದ್ರವ್ಯದಿಂದ ಹೋಮವನ್ನು ಮಾಡಬೇಕು ತುಪ್ಪ-ಎಳ್ಳು-ಎಣ್ಣೆ-ಚಿಗಳಿ-ಜೇನುತುಪ್ಪ-ಪಾಯಸ-ಮೊಸರು-ಹಾಲು-ತುಪ್ಪ-ಸಾಗರಗಳಿಗೆ ಹಾಲಿನಿಂದ ಹೋಮ ಮಾಡಬೇಕು ಮೇಲೆ ಹೇಳಿದಂತೆ ಉಕ್ತದ್ರವ್ಯಗಳು ದೊರೆಯದೇಹೋದರೆ ತಿಲಾಕ್ಷತೆಗಳಿಂದಲೇ ಎಲ್ಲ ದೇವತೆಗಳಿಗೂ ಹೋಮವನ್ನು ಮಾಡಬಹುದು ಮೊದಲು ಹೇಳಿದಂತೆ ಹೋಮ ದ್ರವ್ಯಗಳನ್ನು ತುಪ್ಪದಲ್ಲಿ ಅದ್ದಿಕೊಂಡು ಹೋಮ ಮಾಡುವುದನ್ನು ಮರೆಯಬಾರದು ಜಿಪುಣತನ ಮಾಡದೆ ಧಾರಾಳವಾಗಿ ಹೋಮ ಮಾಡಬೇಕು ಮೇಲೆ ಹೇಳಿದಂತೆ ಯಾವ ಯಾವ ದೇವತೆಗಳಿಗೆ ಯಾವ ಯಾವ ಹೋಮ ದ್ರವ್ಯಗಳನ್ನು

ಸಭ್ಯೈತ್ಯೈಃ ಪಾರ್ಥಿವಶ್ರೇಷ್ಠ ದ್ರವ್ಯಶಾರ್ಯಂ ವಿವರ್ಜಯೇತ್ ।
ಪ್ರಭೋಃ ಪ್ರಥಮಕಲ್ಪಸ್ಯ ಯೋಽನುಕಲ್ಪೇತ ವರ್ತತೇ ॥ ೧೭ ॥

ನ ಸಾಂಪರಾಯಿಕಂ ತಸ್ಯ ಭವತೀಹ ಸುದುರ್ಮತೇಃ ॥ ೧೮ ॥

ಯದ್ಯದ್ಗ್ರಹಸ್ಯಾಭಿಹಿತಂ ಮಯಾಽತ್ರ
ಋಕ್ಷಸ್ಯ ವಾ ಭೂಮಿಪತಿಪ್ರಧಾನ ।
ತದ್ದೇವತಾಯಾಶ್ಚ ತಥೈವ ದೇಯಂ
ದಿಶಸ್ತಥಾ ನಾತ್ರ ವಿಚಾರಣಾಸ್ತಿ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹೋಮದ್ರವ್ಯವಿಭಾಗೋನಾಮೈಕೋತ್ತರ
ಶತತಮೋಽಧ್ಯಾಯಃ

---

ವಿಧಿಸಿದೆಯೋ ಅವುಗಳನ್ನೇ ಸಂಪಾದಿಸಿ ಹೋಮ ಮಾಡುವುದೇ ಶ್ರೇಷ್ಠವಯ್ಯ! ಹೀಗೆಂಬದಾಗಿ ಮಾರ್ಕಂಡೇಯ ಮಹಾಮುನಿಗಳು ವಜ್ರಮಹಾರಾಜನಿಗೆ ನಿರೂಪಿಸಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಹೋಮದ್ರವ್ಯ ವಿಭಾಗವೆಂಬ ಹೆಸರಿನ
ಒಂದುನೂರೊಂದನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಧ್ರುವಾ ದ್ಯೌರಿತಿ ಮಂತ್ರೇಣ ಹೋಮಃ ಕಾರ್ಯೋ ಧ್ರುವಸ್ಯ ಚ ।
ಊರ್ಧ್ವೋ ಅಧರ ಇತ್ಯೇವ ಧ್ರುವಾಯಾಶ್ಚ ದಿಶೋ ಭವೇತ್ ॥ ೧ ॥

ಬ್ರಹ್ಮಜಜ್ಞಾನಮಿತ್ಯೇಷ ಬ್ರಹ್ಮಣಃ ಪರಿಕೀರ್ತಿತಃ ।
ದ್ಯೌಸ್ತ್ವಾ ಇತಿ ಚ ಮಂತ್ರೇಣ ದಿವಃ ಕಾರ್ಯೋ ಮಹೀಪತೇ ॥ ೨ ॥

ಪೃಥಿವೀ ದಿವಿ ಚೇತ್ಯೇವ ಪೃಥಿವ್ಯಾಃ ಪರಿಕೀರ್ತಿತಃ ।
ಪ್ರಣವೇನ ಚ ಶೇಷಸ್ಯ ಚಾಧಸ್ತಾಚ್ಚ ತಥಾ ದಿಶಃ ॥ ೩ ॥

---

### ಒಂದುನೂರ ಎರಡನೆಯ ಅಧ್ಯಾಯವು

೧ ಮಾರ್ಕಂಡೇಯನು ಹೇಳುತ್ತಾನೆ — ಧ್ರುವಸ್ಥಾನ (ದಿಕ್ಕಿ) ಕ್ಕೆ ಧ್ರುವಾ ದ್ಯೌರ್ಧ್ರುವಾಪೃಥಿವೀಧ್ರುವಾಸಃ ಪರ್ವತಾಇಮೇ । ಧ್ರುವಂವಿಶ್ವಮಿದಂ ಜಗದ್ಧ್ರುವೋ ರಾಜಾವಿಶಾಮಯಂ ॥ ಎಂಬ ಮಂತ್ರದಿಂದ ಹೋಮ ಮಾಡಬೇಕು. ಧ್ರುವದಿಕ್ಕಿಂ ಪಸೆ ಮೇಲೆ ಮತ್ತು ಕೆಳಗೆ (ಆಕಾಶ-ಪಾತಾಳ) ಎಂದು ತಿಳಿದುಕೊಳ್ಳಬೇಕು

೨ ಬ್ರಹ್ಮನಿಗೆ ಬ್ರಹ್ಮಜಜ್ಞಾನಂ ಪ್ರಥಮಂಪುರಸ್ತಾತ್ ಎಂಬ ಮಂತ್ರದಿಂದ ಲೂ ಅಂತರಿಕ್ಷಕ್ಕೆ ದ್ಯೌಸ್ತ್ವಾಪ್ಪದದಾತು ಎಂಬ ಮಂತ್ರದಿಂದಲೂ ಹೋಮ ಮಾಡಬೇಕು

೩-೬ ಭೂಮಿಗೆ ಪೃಥಿವೀದಿವಿಚ ಎಂಬ ಮಂತ್ರದಿಂದ ಹೋಮಮಾಡಬೇಕು ಶೇಷ-ಪಾತಾಳ-ದಿಕ್ಕುಗಳಿಗೆ ಪ್ರಣವ (ಓಂ) ಮಂತ್ರದಿಂದ ಹೋಮ ಮಾಡಬೇಕು

ಅಗ್ನಿಮೂರ್ಧೇತಿ ಮಂತ್ರೋಽಯಮಗ್ನಯೇ ಪರಿಕೀರ್ತಿತಃ ।
ಉದುತ್ತಮಂ ವರುಣಪಾಶಂ ಮಂತ್ರೋಽಯಂ ವರುಣಸ್ಯ ತು ॥ ೪ ॥

ಪ್ರಣವಶ್ಚ ಕುಮಾರಸ್ಯ ತದ್ವಿಷ್ಣೋರ್ವಿಷ್ಣವೇ ಭವೇತ್ ।
ತ್ರಾತಾರಮಿಂದ್ರಂ ಶಕ್ರಸ್ಯ ದೇವ್ಯಾಶ್ಚ ಪ್ರಣವೋ ಭವೇತ್ ॥ ೫ ॥

ಪ್ರಜಾಪತೇ ನ ತ್ವದೇತಾ ಮಂತ್ರೋಽಯಂ ಸ್ಯಾತ್ಪ್ರಜಾಪತೇಃ ।
ವಿನಾಯಕಾಯ ಪ್ರಣವೋ ವಿಶ್ವಕರ್ಮೇತಿ ಚಾಪ್ಯಥ ॥ ೬ ॥

ಮಂತ್ರಶ್ಚ ಕಥಿತೋ ರಾಜನ್ಸತತಂ ವಿಶ್ವಕರ್ಮಣಃ ।
ಆಕೃಷ್ಣೇತಿ ಚ ಮಂತ್ರೋಽಯಮಾದಿತ್ಯಸ್ಯ ಪ್ರಕೀರ್ತಿತಃ ॥ ೭ ॥

ಇಮಂ ದೇವೇತಿ ಸೋಮಸ್ಯ ಅಗ್ನಿಮೂರ್ಧಾ ಕುಜಸ್ಯ ತು ।
ಉದ್ಬುಧ್ಯಧ್ವಂ ಬುಧಸ್ಯಾಪಿ ಮಂತ್ರಃ ಪ್ರೋಕ್ತೋ ನರೇಶ್ವರ ॥ ೮ ॥

ಬೃಹಸ್ಪತೇ ಅತಿ ಯದರ್ಯೋ ಮಂತ್ರ ಉಕ್ತೋ ಬೃಹಸ್ಪತೇಃ ।
ಅನ್ನಾತ್ಪರಿಸ್ರುತೇತ್ಯೇವಂ ಮಂತ್ರಃ ಶುಕ್ರಸ್ಯ ಕೀರ್ತಿತಃ ॥ ೯ ॥

---

ಅಗ್ನಿಗೆ, ಅಗ್ನಿರ್ಮೂರ್ಧಾದಿವಃ ಕಕುತ್ ಎಂಬ ಮಂತ್ರದಿಂದ ಹೋಮವಾಗಬೇಕು ವರುಣನಿಗೆ, ಉದುತ್ತಮಂ ವರುಣಪಾಶಮಸ್ಮತ್ ಎನ್ನುವ ಮಂತ್ರ, ಕುಮಾರಸ್ವಾಮಿಗೆ ಪ್ರಣವಮಂತ್ರ. ಮಹಾ ವಿಷ್ಣುವಿಗೆ ತದ್ವಿಷ್ಣೋಃ ಪರಮಂಪದಂ ಎಂಬ ಮಂತ್ರ, ಇಂದ್ರನಿಗೆ ತ್ರಾತಾರಮಿಂದ್ರ ಮವಿತಾರಮಿಂದ್ರಂ ಎಂಬುವ ಮಂತ್ರ. ಗೌರಿಗೆ ಪ್ರಣವ ಮಂತ್ರವು ಪ್ರಜಾಪತಿ (ಬ್ರಹ್ಮನಿ) ಗೆ, ಪ್ರಜಾಪತೇನತ್ವ ದೇತಾನ್ಯನ್ಯೋ ಎನ್ನುವ ಮಂತ್ರ ವಿನಾಯಕನಿಗೆ ಪ್ರಣವದಿಂದಲೂ ವಿಶ್ವಕರ್ಮವಿಮನಾ ಆದ್ವಿಹಾಯ ಎಂಬ ಮಂತ್ರದಿಂದ ವಿಶ್ವಕರ್ಮನಿಗೂ

೭-೧೦ ಅಗ್ನಿಹೋಮದಲ್ಲಿ ವಿಶ್ವಕರ್ಮಾ ಎಂಬುವ ಮಂತ್ರವನ್ನು ಹಿಂದೆ ಬರದಂತೆ ವಿಶ್ವಕರ್ಮನಿಗೆ ಉಪಯೋಗಿಸಬೇಕು ಸೂರ್ಯನಿಗ ಆಕೃಷ್ಣೇನ ರಜಸಾ ವರ್ತಮಾನೋ ಎಂಬ ಮಂತ್ರ ಚಂದ್ರನಿಗೆ ಇಮಂದೇವೇತಿ ಎಂಬ ಮಂತ್ರ ಅಗ್ನಿರ್ಮೂರ್ಧಾದಿವಃಕಕುತ್ ಎಂಬ ಮಂತ್ರ ಕುಜನಿಗೆ ಉದ್ಬುಧ್ಯಧ್ವಂ ಸಮನಸಸ್ಸಖಾಯಃ ಎಂಬ ಮಂತ್ರವು ಬುಧನಿಗೆ ಬೃಹಸ್ಪತೇ ಅತಿಯದರ್ಯೋ ಅರ್ಹಾತ್ ಎಂಬ ಮಂತ್ರವು ಬೃಹಸ್ಪತಿಗೆ, ಶುಕ್ರನಿಗೆ ಅನ್ನಾತ್ಪರಿಸ್ರುತಃ ಎಂಬ ಮಂತ್ರ. ಶನ್ನೋದೇವೀ

ಶನ್ನೋದೇವೀತಿ ಸೌರಸ್ಯ ಕಾಂಡಾತ್ಕಾಂಡೇತಿ ರಾಹವೇ ।
ಕೇತುಂ ಕೃಣ್ವನ್ನಿತಿ ತ ಥಾಮಂತ್ರ ಉಕ್ತಶ್ಚ ಕೇತವೇ　　॥ ೧೦ ॥

ಅಗ್ನಿರ್ಮೂರ್ಧಾ ಕೃತ್ತಿಕಾನಾಂ ರೋಹಿಣೀನಾಂ ಪ್ರಜಾಪತೇ ।
ಮಧ್ವನ್ರಾತೇತಿ ಮಂತ್ರೋಽಯಮಿಲ್ವಲಾನಾಂ ಪ್ರಕೀರ್ತಿತಃ　　॥ ೧೧ ॥

ಮೃಡನೋ ರುದ್ರಮಾದ್ರಾಯಾಃ ಸುತ್ರಾಮಾಣಂ ಪುನರ್ವಸೋಃ ।
ತವ ಶ್ರಿಯೇತಿ ಪುಷ್ಯಸ್ಯ ಹೋಮಮಂತ್ರೋ ವಿಧೀಯತೇ　　॥ ೧೨ ॥

ನಮೋಽಸ್ತು ಸರ್ಪೇಭ್ಯಶ್ಚೇತಿ ಮಂತ್ರಃ ಸಾರ್ಪಸ್ಯ ಕೀರ್ತಿತಃ ।
ಅಹಂ ಪಿತೄನಿತಿ ತಥಾ ಮಂತ್ರಃ ಪಿತ್ರ್ಯಸ್ಯ ಕೀರ್ತಿತಃ　　॥ ೧೩ ॥

ಸದಾಸುಗೇತಿ ಭಾಗ್ಯಸ್ಯ ತಥಾ ಮಂತ್ರಃ ಪ್ರಕೀರ್ತಿತಃ ।
ಏತೇ ಅರ್ಯಮನ್ನಿತ್ಯೇವಮಾರ್ಯಮ್ಣಸ್ಯ ಚ ನಿರ್ದಿಶೇತ್　　॥ ೧೪ ॥

ಸಾವಿತ್ರಸ್ಯ ಚ ಸಾವಿತ್ರೀ ತ್ವಾಷ್ಟ್ರಸ್ಯ ಯ ಇಮೇ ತಥಾ ।
ವಾಯುರಗ್ನೇತಿ ಚ ತಥಾ ವಾಯವ್ಯಸ್ಯ ನರಾಧಿಪ　　॥ ೧೫ ॥

ಇಂದ್ರಾಗ್ನೀ ರೋಚನೇತ್ಯೇವಮಿಂದ್ರಾಗ್ನಸ್ಯ ಪ್ರಕೀರ್ತಿತಃ　　॥ ೧೬ ॥

ಮಿತ್ರೋಜನೇತಿ ಮೈತ್ರಸ್ಯ ಹೋಮಮಂತ್ರಃ ಪ್ರಕೀರ್ತಿತಃ ।
ಇಂದ್ರಃ ಸುತ್ರಾಮ ಇತಿ ಚ ಶಾಕ್ರಸ್ಯ ವಸುಧಾಧಿಪ　　॥ ೧೭ ॥

---

ರಭಿಷ್ಟಯೇ ಎನ್ನುವ ಮಂತ್ರವು ಶನೈಶ್ಚರನಿಗೆ ಕಾಂಡಾತ್ಕಾಂಡಾತ್ಪ್ರರೋಹಂತಿ ಎಂಬ ಮಂತ್ರ ರಾಹುವಿಗ, ಕೇತುಂಕೃಣ್ವನ್ನಕೇತವೇ ಪೇಶೋಮರ್ಯಾ ಅಪೇಶಸೇ ಎನ್ನುವ ಮಂತ್ರದಿಂದ ಕೇತುಗ್ರಹಕ್ಕೆ ಹೋಮ ಮಾಡಬೇಕು ಇನ್ನು ನಕ್ಷತ್ರಹೋಮ ಮಂತ್ರ ಗಳನ್ನು ಹೇಳಿಕೊಂಡು ಬರುತ್ತೇವೆ

೧೧-೨೩ ೧೧ನೇ ಶ್ಲೋಕದಿಂದ ೨೩ ಶ್ಲೋಕಪೂರ್ತಿಯಾಗಿರುವ ೧೩ ಶ್ಲೋಕ ಗಳೆಲ್ಲವೂ ಪ್ರತಿಯೊಂದು ನಕ್ಷತ್ರವನ್ನೂ ಮತ್ತು ಆಯಾ ನಕ್ಷತ್ರದೇವತಾ ಹೋಮ ಮಂತ್ರಗಳನ್ನೂ ವಿವರಿಸಿವೆ ಶಾಂತಿಮಾಡಿಕೊಳ್ಳುವವರು, ತಮ್ಮ ತಮ್ಮ ಪುರೋ ಹಿತರ ಮುಖದಿಂದ ಆಯಾ ಮಂತ್ರಗಳನ್ನು ಪೂರ್ತಿಯಾಗಿ ಹೇಳಿಸಿಕೊಂಡು ಹೋಮ

ಯಂತೇ ದೇವೀತಿ ನಿರ್ಋತಿಂ ಮೂಲಸ್ಯ ಚ ತಥಾ ಭವೇತ್ ।
ಶನ್ನ ಆಪಸ್ತ್ವಥಾಪ್ಯಸ್ಯ ಹೋಮಮಂತ್ರಃ ಪ್ರಕೀರ್ತಿತಃ ॥ ೧೮ ॥

ವಿಶ್ವೇದೇವೀತಿ ವೈಶ್ವಸ್ಯ ತಥಾ ಚ ವಸುಧಾಧಿಪ ।
ಬ್ರಹ್ಮಯಜ್ಞಾನಮಿತ್ಯೇವಂ ತಥಾ ಬ್ರಾಹ್ಮಸ್ಯ ನಿರ್ದಿಶೇತ್ ॥ ೧೯ ॥

ವಷಟ್ತೇ ವಿಷ್ಣ ಇತ್ಯೇವಂ ವೈಷ್ಣವಸ್ಯ ತಥಾ ಭವೇತ್ ।
ಆನೋ ಗ್ರಹಾ ಭವತ್ಯೇವಂ ವಾಸವಸ್ಯ ಪ್ರಕೀರ್ತಿತಃ ॥ ೨೦ ॥

ಇಮಂ ಮೇ ವರುಣೇತ್ಯೇವಂ ವಾರುಣಸ್ಯ ತಥಾ ಭವೇತ್ ।
ಉಪಪ್ರಾಗೇತಿಮಂತ್ರೇಣ ಹೋಮಮಾಜಸ್ಯ ಕಾರಯೇತ್ ॥ ೨೧ ॥

ಮಂತ್ರಶ್ಚಾಹಿರಿವೇತ್ಯೇವಮಾಹಿರ್ಬುಧ್ನ್ಯಸ್ಯ ಕೀರ್ತಿತಃ ।
ಪ್ರಯಾದಮಿತಿ ಮಂತ್ರೇಣ ಅಶ್ವಿನಸ್ಯ ಪ್ರಕೀರ್ತಿತಃ ॥ ೨೨ ॥

ಯಮೋ ದಾಧಾರ ಪೃಥಿವೀಂ ತಥಾ ಯಾಮ್ಯಸ್ಯ ಕೀರ್ತಿತಂ ।
ನಕ್ಷತ್ರದೇವತಾ ಹೋಮೇ ಮಂತ್ರಾ ಏತೇ ಪ್ರಕೀರ್ತಿತಾಃ ॥ ೨೩ ॥

ನಕ್ಷತ್ರದೇವತಾ ತುಲ್ಯಾ ದಿಗೀಶಾನಾಂ ತಥೈವ ಚ ।
ಪ್ರಣವೇನ ದಿಶಃ ಕಾರ್ಯಸ್ತಥಾ ವೈಶ್ರವಣಸ್ಯ ಚ ॥ ೨೪ ॥

ಸಾಗರಾಣಾಂ ಚ ರಾಜೇಂದ್ರ ಪೃಥಗೇವಂ ವಿಜಾನತಾ ।
ಏಕಚಕ್ರೇತಿ ವಾ ದ್ವ್ಯರ್ಚಂ ಗ್ರಹಾಣಾಂ ಚ ನರಾಧಿಪ ॥ ೨೫ ॥

ಸಮಾಗ್ನೇತಿ ತಥಾ ದ್ವ್ಯರ್ಚಂ ನಕ್ಷತ್ರಾಣಾಂ ವಿಧೀಯತೇ ॥ ೨೬ ॥

---

ಮಾಡಬೇಕು. ಪ್ರತಿಯೊಂದು ಮಂತ್ರವನ್ನೂ ಇಲ್ಲಿ ಪೂರ್ಣವಾಗಿ ಕೊಡುವುದು, ಗ್ರಂಥ ವಿಸ್ತಾರಕಾರಣವಾಗುವುದಂದರಿತು ೨೭ ನಕ್ಷತ್ರ ಹೋಮಮಂತ್ರಗಳ ಕೆಳಗೂ ಗೀಟನ್ನು ಮಾತ್ರ ಹಾಕಿರುತ್ತೇನೆ' ವಾಚಕರು ಗ್ರಹಿಸಿ ಮಂತ್ರಗಳನ್ನು ಉಪಯೋಗಿಸಿಕೊಳ್ಳಲಿ

೨೪-೨೬ ನಕ್ಷತ್ರದೇವತೆಗಳಂತೆಯೇ ದಿಗಧಿಪತಿಗಳಿಗೂ ಕುಬೇರನಿಗೂ ಪ್ರಣವದಿಂದ ಹೋಮ ಮಾಡಬೇಕು ಸಾಗರಗಳಿಗೂ ಇದರಂತೆಯೇ ಮಾಡಬೇಕು.

ಏತಾವದುಕ್ತೋ ನೃಪವರ್ಯ ತುಭ್ಯಂ
ಹೋಮಾಶ್ರಯೋ ಮಂತ್ರಗಣೋ ಗ್ರಹಾಣಾಂ ।
ಹುತೇನ ಯೇನಾನಘಮಾನವಾನಾಂ
ಕಾಮಾನಭೀಷ್ಟಾನ್ಪ್ರದಿಶಂತಿ ಲೋಕೇ                    ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹೋಮಮಂತ್ರಾಧ್ಯಾಯೋನಾಮ ದ್ವ್ಯಧಿಕ
ಶತತಮೋಽಧ್ಯಾಯಃ

ಏಕಚಕ್ರವೆಂಬ ಎರಡು ಋಕ್ಕುಗಳಿಂದ ಗ್ರಹಗಳಿಗೂ ಸಮಾಗ್ನೇತಿಯೆಂಬ ಎರಡು ಋಕ್ಕುಗಳಿಂದ ನಕ್ಷತ್ರಗಳಿಗೂ ಹೋಮ ಮಾಡಬೇಕು ಎಲೈ ವಜ್ರರಾಜನೇ ! ನಿನಗೆ ಹೋಮಾಶ್ರಯ ಮಂತ್ರಗಳನ್ನು ಇದುವರೆಗೆ ಹೇಳಿರುತ್ತೇನೆ ಯಾವ ಪುಣ್ಯಾತ್ಮರು ಈರೀತಿ ಹೋಮ ಮಾಡುವರೋ ಅವರು ಸಕಲ ಇಷ್ಟಾರ್ಥಗಳನ್ನೂ ಹೊಂದುವರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಹೋಮಮಂತ್ರಾಧ್ಯಾಯವೆಂಬ ಹೆಸರಿನ ಒಂದುನೂರೆರಡನೇ
ಅಧ್ಯಾಯವು ಮುಗಿದುದು



॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಧ್ರುವಸ್ಥಾನನಿವಿಷ್ಟಾನಾಂ ದೇವತಾನಾಂ ಪೃಥಕ್ಪೃಥಕ್ ।**
**ದಕ್ಷಿಣಾರ್ಥೇ ಪ್ರದಾತವ್ಯಂ ಸರ್ವೇಷಾಮೇವ ಕಾಂಚನಮ್ ॥ ೧ ॥**

**ರಕ್ತಾಂ ವತ್ಸಯುತಾಂ ಧೇನುಂ ದದ್ಯಾದರ್ಕಾಯ ಪಾರ್ಥಿವ ।**
**ಶಂಖಂ ದದ್ಯಾನ್ನರೇಂದ್ರೇಣ ದಕ್ಷಿಣಾರ್ಥಂ ನಿಶಾಭೃತಃ ॥ ೨ ॥**

**ರಕ್ತವರ್ಣೋಹ್ಯನಡ್ವಾಂಶ್ಚ ದಾತವ್ಯಃ ಕ್ಷಿತಿಜಸ್ಯ ತು ।**
**ಕಾಂಚನೀಂ ಸ್ವಾಂ ಪ್ರತಿಕೃತಿಂ ಬಾಲಕ್ರೀಡನಕಾನಿ ಚ ॥ ೩ ॥**

---

**ಒಂದುನೂರ ಮೂರನೇ ಅಧ್ಯಾಯವು.**

೧. ಮಾರ್ಕಂಡೇಯನು ಹೇಳುತ್ತಾನೆ —ಧ್ರುವಸ್ಥಾನದಲ್ಲಿ ವಾಸವಾಗಿರುವ ಸಕಲ ದೇವತೆಗಳ ಪ್ರೀತಿಗೂ ದಕ್ಷಿಣೆಗಾಗಿ ಚಿನ್ನದ ನಾಣ್ಯಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.

೨-೬ ಯಾವ ಯಾವ ಗ್ರಹಕ್ಕೆ ಪ್ರೀತಿಯಾಗಿ ಎಂತೆಂತಹ ದಕ್ಷಿಣೆಗಳನ್ನು ಕೊಡಬೇಕೆಂಬುದನ್ನು ಮುಂದೆ ಹೇಳುತ್ತೇವೆ ಸೂರ್ಯನ ಪ್ರೀತಿಯಾಗಿ ಕೆಂಪು ಬಣ್ಣದ ಕರೆಯುವ ಹಸುವನ್ನು ಕರುವಿನ ಸಹಿತವಾಗಿ ದಾನ (ದಕ್ಷಿಣೆ) ಕೊಡಬೇಕು ಚಂದ್ರಗ್ರಹ ಪ್ರೀತಿಯಾಗಲೆಂದು ಶಂಖವನ್ನು ದಾನಮಾಡಬೇಕು ಅಂಗಾರಕನಿಗೆ ಪ್ರೀತಿಯಾಗಲೆಂದು ಕೆಂಪುಬಣ್ಣದ ಎತ್ತನ್ನು ದಾನಮಾಡಬೇಕು ಬುಧಗ್ರಹ ಪ್ರೀತಿ

**ಬುಧಾಯ ರಾಜನ್ದೇಯಾನಿ ದಕ್ಷಿಣಾರ್ಥೇ ವಿಶೇಷತಃ ।**
**ಕ್ಷೌಮಂ ದುಕೂಲಂ ಕಾರ್ಪಾಸವಾಸಾಂಸಿ ಗುರವೇ ತಥಾ ॥ ೪ ॥**

**ಸಿತವರ್ಣಂ ಚ ತುರಗಂ ಭಾರ್ಗವಾಯ ಪ್ರದಾಪಯೇತ್ ।**
**ಕೃಷ್ಣಾಂ ಧೇನುಂ ಸವತ್ಸಾಂ ಚ ದದ್ಯಾತ್ಸೂರ್ಯಸುತಾಯ ವೈ ॥ ೫ ॥**

**ಉಷ್ಣೀಷಂ ಲೋಹದಂಡಶ್ಚ ದಾತವ್ಯೋ ನೃಪ ರಾಹವೇ ।**
**ಛಾಗಶ್ಚ ಕೇತವೇ ದೇಯಂ ಕುತಪಂ ಚ ನರಾಧಿಪ ॥ ೬ ॥**

**ಕೃತ್ತಿಕಾನಾಂ ತು ಕನಕಂ ದಾತವ್ಯಂ ಭೂತಿಮಿಚ್ಛತಾ ।**
**ಸರ್ವಬೀಜಾನಿ ದೇಯಾನಿ ರೋಹಿಣೀನಾಂ ತಥೈವ ಚ ॥ ೭ ॥**

**ದೋಗ್ಧ್ರೀಂ ಧೇನುಂಚೇಲ್ವಲಾನಾಮನಡ್ವಾಹಂ ಚ ರಾಹವೇ ।**
**ಆದಿತ್ಯಾಯ ಶುಭಂ ವಸ್ತ್ರಂ ಪುಷ್ಯಾಯ ಕನಕಂ ಘೃತಂ ॥ ೮ ॥**

**ಸಾರ್ಪಾಯ ವೃಷಭಂ ದದ್ಯಾದ್ರುಕ್ಮಶೃಂಗಂ ಮಹೀಪತೇ ।**
**ಪಿತ್ರ್ಯಸ್ಯ ಚ ತಿಲಾನ್ದದ್ಯಾದ್ವಾಯವ್ಯಸ್ಯ ಚ ಚಾಮರಂ ॥ ೯ ॥**

---

ಗಾಗಿ ತನ್ನ ಪ್ರತಿಮೆಯನ್ನು ಚಿಕ್ಕದಾಗಿ ಮಾಡಿಸಿ ದಕ್ಷಿಣೆಗೆ ಒದಲಾಗಿ ದಾನಮಾಡ ಬೇಕು ಆ ಪ್ರತಿಮೆಯು ಮಕ್ಕಳ ಆಟದ ಬೊಂಬೆಯಷ್ಟು ಪ್ರಮಾಣವಾಗಿದ್ದರೂ ಸರಿ ಬೃಹಸ್ಪತಿಗ್ರಹ ಪ್ರೀತಿಗಾಗಿ ಒಂದು ಜತೆ ರೇಷ್ಮೆ ಮುಗುಟವನ್ನಾಗಲೀ ರೇಷ್ಮೆ ಪಂಚೆಯ ನ್ನಾಗಲೀ ದಾನ ಮಾಡಬೇಕು ಶುಕ್ರಗ್ರಹ ಪ್ರೀತಿಗಾಗಿ ಒಂದು ಬಿಳೀಕುದುರೆಯನ್ನು ದಾನ ಮಾಡಬೇಕು ಶನಿಗ್ರಹಕ್ಕೆ ಪ್ರೀತಿಯಾಗಲೆಂದು ಕರು ಸಹಿತನಾದ ಕರೆಯುವ ಕಪ್ಪು ಹಸುವನ್ನು ದಾನ ಕೊಡಬೇಕು ರಾಹುವಿಗೆ ಪ್ರೀತಿಯಾಗಬೇಕಾದರೆ ಒಂದು ರುಮಾಲು ಒಂದು ಕಬ್ಬಿಣದ ಬೆತ್ತವನ್ನು ದಾನ ಮಾಡಬೇಕು ಕೇತುವಿಗೆ ಪ್ರೀತಿ ಯಾಗಬೇಕಾದರೆ ಒಂದು ಆಡನ್ನು ದಾನ ಕೊಡಬೇಕು ಇನ್ನುಮುಂದೆ ನಕ್ಷತ್ರಗಳಿಗೆ ಪ್ರೀತಿಯಾಗಬೇಕಾದರೆ ಯಾವ ಯಾವ ದಕ್ಷಿಣೆಗಳನ್ನು ಕೊಡಬೇಕೆಂಬ ಸಂಗತಿ ಯನ್ನು ಹೇಳುತ್ತೇವೆ ಕೃತ್ತಿಕಾನಕ್ಷತ್ರದ ಪ್ರೀತಿಗಾಗಿ ಚಿನ್ನದ ನಾಣ್ಯವನ್ನು ಕೊಡ ಬೇಕು

೭-೧೬ ರೋಹಿಣೀ ನಕ್ಷತ್ರಕ್ಕೆ ಸಕಲವಿಧಬೀಜಗಳನ್ನೂ ದಾನ ಮಾಡಬೇಕು ಮೃಗಶಿರೆಗೆ-ಕರೆಯುವ ಹಸು ಆರ್ದ್ರೆಗೆ-ಎತ್ತು ಪುನರ್ವಸುವಿಗೆ-ಧೋತ್ರ ಪುಷ್ಯಕ್ಕೆ-

ಭಾಗ್ಯಸ್ಯ ದೇಯಾ ಗಂಧಾಶ್ಚ ಆರ್ಯಮ್ಣಸ್ಯ ಚ ಕಾಂಚನಂ ।
ಹಸ್ತಸ್ಯ ಕುಂಜರಂ ದದ್ಯಾತ್ಕನಕಂ ವಾ ಮಹೀಪತೇ ॥ ೧೦ ॥

ತ್ವಾಷ್ಟ್ರಸ್ಯ ವೃಷಭಂ ದದ್ಯಾದೈಂದ್ರಾಗ್ನಸ್ಯ ನರಾಧಿಪ ।
ವಸ್ತ್ರಾಣಿ ಚೈವ ಮೈತ್ರಸ್ಯ ಶಾಕ್ರಸ್ಯ ಕನಕಂ ತಥಾ ॥ ೧೧ ॥

ದದ್ಯಾನ್ಮೂಲಸ್ಯ ಮೂಲಾನಿ ಫಲಾನಿ ವಿವಿಧಾನಿ ಚ ।
ಆಪ್ಯಸ್ಯ ದಧಿಪಾತ್ರಾಣಿ ಶಕಟಂ ವಾಸವಸ್ಯ ಚ ॥ ೧೨ ॥

ತಥಾ ಚಂದನಕಾಷ್ಠಂ ಚ ವಾರುಣಸ್ಯ ಪ್ರದಾಪಯೇತ್ ।
ಆಜಮಾಜಸ್ಯ ದಾತವ್ಯಮಾಹಿರ್ಬುಧ್ನ್ಯಸ್ಯ ಚೌದನಂ ॥ ೧೩ ॥

ಧೇನುಂ ಪೌಷ್ಣಸ್ಯ ತುರಗಮಾಶ್ವಿನಸ್ಯ ತಥೈವ ಚ ।
ತಿಲಧೇನುಂ ಚ ಯಾಮ್ಯಸ್ಯ ದದ್ಯಾತ್ಪಾಪಪನುತ್ತಯೇ ॥ ೧೪ ॥

ಕುಂಜರಂ ಚ ತಥೈವೋಷ್ಟ್ರಂ ರಥಂ ಶಕಟಮೇವ ಚ ।
ಹಯಮಶ್ವತರಂ ಚೈವ ನರಯಾನಂ ಚ ಪಾರ್ಥಿವ ॥ ೧೫ ॥

ಪ್ರಾಚ್ಯಾದೀನಾಂ ಕ್ರಮಾದ್ದದ್ಯಾದ್ದಕ್ಷಿಣಾಂ ಚ ನರಾಧಿಪ ।
ಸಾಗರಾಣಾಂ ಚ ದಾತವ್ಯಂ ಕನಕಂ ಭೂರಿದಕ್ಷಿಣಂ ॥ ೧೬ ॥

---

ಚಿನ್ನ, ತುಪ್ಪ ಆಶ್ಲೇಷಗೆ-ಉಳುವ ಎತ್ತು ಆ ಎತ್ತಿನ ಕೊಂಬಿಗೆ ಚಿನ್ನದ ಮುಸು ಕನ್ನು ಹಾಕಿರಬೇಕು ಮಖೆಗೆ-ಎಳ್ಳುರಾಶಿ ಪುಬ್ಬೆಗೆ-ಚಾಮರ ಉತ್ತರೆಗೆ-ಗಂಧ ಹಸ್ತಕ್ಕೆ-ಚಿನ್ನ ಅಥವಾ ಚಿನ್ನದ ಚಿಕ್ಕ ಆನೆ ಚಿತ್ತೆಗೆ-ಎತ್ತು ಸ್ವಾತಿಗೆ-ವಸ್ತ್ರದಜತೆ. ವಿಶಾಖೆಗೆ ಮತ್ತು ಅನೂರಾಧಾ ಜ್ಯೇಷ್ಠ ನಕ್ಷತ್ರಗಳಿಗೂ ಸಹ ಚಿನ್ನದ ನಾಣ್ಯಗಳು. ಮೂಲಾ ನಕ್ಷತ್ರಕ್ಕೆ-ಭೂಮಿಯೊಳಗೆ ಬೆಳೆಯುವ ಗೆಡ್ಡೆಗಣಸು ಹಣ್ಣುಗಳು ಸಹ ಪೂರ್ವಾಷಾಢೆಗೆ-ಮೊಸರುಹಾಕುವ ಪಾತ್ರೆಗಳು ಉತ್ತರಾಷಾಢ ನಕ್ಷತ್ರಕ್ಕೆ- ಬಂಡಿ ಶ್ರವಣಕ್ಕೆ-ಗಂಧದಚೆಕ್ಕೆ ಮುಂದೆ ಧನಿಷ್ಠಾ-ಶತಭಿಷಾ ಮುಂತಾದ ಐದು ನಕ್ಷತ್ರಗ ಳಿಗೂ ಕ್ರಮವಾಗಿ ಆಡು, ಅನ್ನ, ಹಸು, ಕುದುರೆ, ಹಸುವಿನ ಆಕಾರದ ಎಳ್ಳುರಾಶಿ ಆನೆ, ಒಂಟೆ, ಬಂಡಿ, ಕುದುರೆ, ಹೇಸರಕತ್ತೆ, ಒಬ್ಬ ಬಂಡಿ ಎಳೆದುಕೊಂಡು ಹೋಗುವ ಮನುಷ್ಯ ಈರೀತಿ ದಾನ ಕೊಡಬೇಕು ಆ ಬಳಿಕ ಪ್ರಾಗಾದಿ ದಿಕ್ಕುಗಳಿಗೂ ಸಾಗರ ಸರಿದಾದಿಗಳಿಗೂ ಭೂರಿದಕ್ಷಿಣಾರೂಪವಾಗಿ ಚಿನ್ನದ ನಾಣ್ಯಗಳನ್ನು ಸರ್ವರಿಗೂ ಹಂಚಬೇಕು.

ನಕ್ಷತ್ರಾಣಾಂ ಗ್ರಹಾಣಾಂ ಚ ದಿಶಾಂ ಚ ಮನುಜೇಶ್ವರ ।
ಯದುಕ್ತಮತ್ರ ತದ್ದೇಯಂ ದೇವತಾನಾಂ ಪೃಥಕ್ಪೃಥಕ್ ॥ ೧೭ ॥

ಉಕ್ತಾಭಾವೇ ಚ ದಾತವ್ಯಾ ಧೇನುಃ ಪಾರ್ಥಿವಸತ್ತಮ ।
ಪ್ರತ್ಯೇಕಸ್ಯ ಮಹಾಭಾಗ ಶುಭಾ ಕಾಂಸ್ಯೋಪದೋಹನಾ ॥ ೧೮ ॥

ದೋಗ್ಧ್ರೀ ಸವತ್ಸಾ ಶೀಲಾಢ್ಯಾ ವಸ್ತ್ರರತ್ನೋಪಶೋಭಿತಾ ।
ರುಕ್ಮಶೃಂಗೈಃ ಖುರೈ ರೌಪ್ಯೈರ್ಮುಕ್ತಾಲಾಂಗೂಲಭೂಷಿತಾ ॥ ೧೯ ॥

ತತೋ ವಿಸರ್ಜನಂ ಕಾರ್ಯಂ ಪೂರ್ವೋಕ್ತವಿಧಿನಾ ನೃಪ ।
ದಧಿಕ್ಷೀರಘೃತಪ್ರಾಯಂ ತಥಾ ತ್ರಿಮಧುರಾನ್ವಿತಂ ॥ ೨೦ ॥

ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ಪ್ರತ್ಯೇಕಸ್ಯ ನರಾಧಿಪ ।
ಯಥಾಶಕ್ತ್ಯಾ ಮಹಾರಾಜ ತೇಷಾಂ ದದ್ಯಾಚ್ಚ ದಕ್ಷಿಣಾಂ ।
ಪ್ರಯತಸ್ತಾಂಶ್ಚ ಯಾಚೇತ ಪೂಜಿತಾರ್ಥಪ್ರೀಣನಂ ಬುಧಃ ॥ ೨೧ ॥

---

೧೭-೨೨ ಎಲೈ ಮಾನವೇಂದ್ರನಾದ ವಜ್ರಚಕ್ರವರ್ತಿಯೇ ಕೇಳು —ನಕ್ಷತ್ರಗಳಿಗೂ ಗ್ರಹಗಳಿಗೂ ದಿಕ್ಕುಗಳೇ ಮುಂತಾದ ಸಕಲ ದೇವತೆಗಳಿಗೂ ಬೇರೆ ಬೇರೆಯಾಗಿ ಏನೇನನ್ನು ಕೊಡಬೇಕೆಂದು ಇದುವರೆಗೆ ಹೇಳಿದೆನೋ ಅವುಗಳನ್ನೇ ಕೊಡಬೇಕು

ಒಂದುವೇಳೆ ನಾನು ಹೇಳಿದ ಪದಾರ್ಥಗಳಲ್ಲಿ ಸಕಾಲಕ್ಕೆ ಯಾವುದಾದರೂ ಒದಗದೆ ಹೋದರೆ ಗೋದಾನ ಮಾಡಿದರೆ ಸಾಕು ಈರೀತಿ ಮಾಡುವ ಗೋದಾನವೂ ಬೇರೆ ಬೇರೆಯಾಗಿಯೇ ಇರಬೇಕೇ ಹೊರ್ತು ಒಟ್ಟಿಗೆ ಒಂದೇ ಗೋದಾನ ಮಾಡಿದರೆ ಸಾಲದು ಈ ಗೋದಾನದ ಲಕ್ಷಣವನ್ನು ಹೇಳುವೆನು, ಕೇಳು ಪ್ರತಿ ಗೋವಿನ ಜತೆಯಲ್ಲಿಯೂ ಹಾಲು ಕರೆಯುವುದಕ್ಕಾಗಿ ಕಂಚಿನ ಚಂಬನ್ನು ಕೊಡಬೇಕು ದಾನ ಕೊಡುವ ಹಸು ಬಹು ಸಾಧುವಾಗಿರಬೇಕು ಒದೆಯಬಾರದು ಹಾಯಬಾರದು ಗೋವಿಗೆ ವಸ್ತ್ರಗಳಿಂದಲೂ ರತ್ನಾಭರಣಗಳಿಂದಲೂ ಅಲಂಕಾರ ಮಾಡಿರಬೇಕು ಕೊಂಬುಗಳಿಗೆ ಚಿನ್ನದ ಪೊಗಸು ಹಾಕಿರಬೇಕು ಗೊರಸುಗಳಿಗೆ ಬೆಳ್ಳಿಯ ಪೊಗಸು ಹಾಕಿರಬೇಕು ಬಾಲಕ್ಕೆ ಮುತ್ತಿನ ಝಲ್ಲರಿಯನ್ನು ಕಟ್ಟಿರಬೇಕು ಈರೀತಿ ಗೋದಾನವು ಕ್ರಮವಾಗಿ ಆದ ನಂತರ ಎಲ್ಲ ದೇವತೆಗಳನ್ನೂ ವಿಸರ್ಜನೆ ಮಾಡಿ ಯಥಾ

ಏತಾವದುಕ್ತಂ ತವ ಶಾಂತಿಕರ್ಮ
ಸಮಸ್ತಪಾಪಪ್ರಶಮಾಯ ರಾಜನ್ ।
ಕರ್ತವ್ಯಮೇತತ್ಪ್ರಯತೇನ ಶಕ್ತ್ಯಾ
ನ ವಿತ್ತಶಾಠ್ಯೇನ ನ ಮಾಯಯಾ ಚ ॥ ೨೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ದಕ್ಷಿಣಾಧ್ಯಾಯೋನಾಮ ತ್ರ್ಯಧಿಕಶತತಮೋಽಧ್ಯಾಯಃ

---

ಸ್ಥಾನಕ್ಕೆ ಕಳಿಸಿಕೊಡಬೇಕು ಬಳಿಕ ಬ್ರಾಹ್ಮಣರಿಗೆ ಸಮಾರಾಧನೆ ಮಾಡಬೇಕು ಹಾಲು ಮೊಸರು ತುಪ್ಪಗಳನ್ನು ಯಥೇಚ್ಛವಾಗಿ ಬಡಿಸಬೇಕು ಊಟವಾದ ಮೇಲೆ ಕೈತುಂಬಾ ದಕ್ಷಿಣೆಕೊಟ್ಟು ಅವರ ಆಶೀರ್ವಾದವನ್ನು ಯಾಚಿಸಬೇಕು ಎಲೈ ವಜ್ರ ಮಹಾರಾಜನೇ! ರಾಜಯೋಗ್ಯವಾದ ಗ್ರಹನಕ್ಷತ್ರ ಶಾಂತಿಕರ್ಮಕ್ರಮವನ್ನು ನಿನಗೆ ತಿಳಿಸಿದೇನೆ ಈರೀತಿ ಮಾಡಿದರೆ ಪಾಪಲೇಶವೂ ಉಳಿಯುವುದಿಲ್ಲವೆಂದು ತಿಳಿದು ಕೋ ಅಜ್ಞಾನದಿಂದ ಜಿಪುಣತನಮಾತ್ರ ಮಾಡಬಾರದು ಧಾರಾಳ ಮನಸ್ಸಿನಿಂದ ಮಾಡಬೇಕೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ದಕ್ಷಿಣಾಧ್ಯಾಯವೆಂಬ ಹೆಸರಿನ ಒಂದುನೂರು ಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

ಅಥ

# ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಏವಂ ಶಾಂತ್ಯವಸಾನೇ ತು ಯಜಮಾನಸ್ಯ ಯಾಜಕಃ ।
ಹೃದಿ ವಿನ್ಯಸ್ಯ ದರ್ಭಾಗ್ರಾಂಸ್ಥಿತಾನ್ಸ್ವೇ ದಕ್ಷಿಣೇ ಕರೇ ॥ ೧ ॥

ಕುರ್ಯಾತ್ಪ್ರತಿಸರಾಬಂಧಂ ತನ್ಮೇ ನಿಗದತಃ ಶೃಣು ।
ಬದ್ಧಪ್ರತಿಸರಸ್ಯಾಸ್ಯ ಸರ್ವೇ ನಶ್ಯಂತು ರಾಕ್ಷಸಾಃ ॥ ೨ ॥

ಧ್ರುವಸ್ತ್ವಾಮೂರ್ಧ್ವತಃ ಪಾತು ಪೂರ್ವತಃ ಪಾತು ಭಾಸ್ಕರಃ ।
ಭೌಮೋ ದಕ್ಷಿಣತಃ ಪಾತು ಪಶ್ಚಾತ್ಪಾತು ಶನೈಶ್ಚರಃ ॥ ೩ ॥

---

## ಒಂದುನೂರ ನಾಲ್ಕನೆಯ ಅಧ್ಯಾಯವು.

೧ ಮಾರ್ಕಂಡೇಯರು ಹೇಳುತ್ತಾರೆ —ಈ ರೀತಿಯಾಗಿ ಶಾಂತಿಕರ್ಮಗಳ ನ್ನೆಲ್ಲಾ ಮಾಡಿಸಿದ ಮೇಲೆ ಪುರೋಹಿತನು ಯಜಮಾನನ ಹೃದಯದಲ್ಲಿ ದರ್ಭಾಗ್ರ ಹಳು ನೋಕುವಂತೆ ತನ್ನ ಬಲಗೈಯ್ಯಲ್ಲಿ ದರ್ಭೆಗಳ ಮೂಲವನ್ನು ಹಿಡಿದು ಯಜ ಮಾನನಿಗೆ ಕಂಕಣ (ರಕ್ಷಾಬಂಧನ) ವನ್ನು ಕಟ್ಟಿ ಅವನನ್ನು ಆಶೀರ್ವದಿಸಬೇಕು ಆ ಕ್ರಮವನ್ನು ಈಗ ಹೇಳುತ್ತೇನೆ, ಕೇಳು

೨-೧೨ ಈ ಪ್ರತಿಸರ (ಶಾಂತಿಕಂಕಣ) ವನ್ನು ಕಟ್ಟಿಕೊಂಡು ಇಲ್ಲಿ ಕುಳಿತಿರುವ ಈ ಯಜಮಾನನ ಶತ್ರುಗಳೆಲ್ಲರೂ ನಾಶಹೊಂದಲಿ ಎಲೈ ಯಜಮಾನನೇ ! ನಿನ್ನನ್ನು ಧ್ರುವನು ಮೇಲುಭಾಗದಲ್ಲಿ ಪಾಪಾಡಲಿ ಪೂರ್ವದಿಕ್ಕಿನಲ್ಲಿ ಸೂರ್ಯನು ಕಾಪಾಡಲಿ

**ಉತ್ತರೇಣ ಬುಧಃ ಪಾತು ಕೇತುಃ ಪಾತು ತಥಾಹ್ಯಧಃ ।**
**ಪೂರ್ವದಕ್ಷಿಣತಃ ಶುಕ್ರೋ ದಕ್ಷಿಣಾಪರತಸ್ತಮಃ ॥ ೪ ॥**

**ಪಶ್ಚಿಮೋತ್ತರತಶ್ಚಂದ್ರೋ ಜೀವಃ ಪ್ರಾಗುತ್ತರೇಣ ತು ।**
**ಉಕ್ತಸಂಧಿಷು ಸರ್ವಾಣಿ ನಕ್ಷತ್ರಾಣಿ ತವಾನಘ ॥ ೫ ॥**

**ಸ್ವಾಂಸ್ವಾಂ ದಿಶಮಧಿಷ್ಠಾಯ ತವ ನಿತ್ಯಂ ದಿಗೀಶ್ವರಾಃ ।**
**ರಕ್ಷಂತು ಸರ್ವದುಷ್ಟೇಭ್ಯಃ ಶಕ್ರವಹ್ನಿಪುರೋಗಮಾಃ ॥ ೬ ॥**

**ಶಾತ್ರವಾಣಾಂ ಚ ಚೋರಾಣಾಂ ವ್ಯಾಧೀನಾಂ ಪಾತಕಸ್ಯ ಚ ।**
**ಅಮಂಗಲಾನಾಂ ಘೋರಾಣಾಮರಿಷ್ಟಾನಾಂ ತಥೈವ ಚ ॥ ೭ ॥**

**ದುಸ್ಸ್ವಪ್ನಾನಾಂ ಚ ಘೋರಾಣಾಂ ಚಿಂತಿತಾನಾಂ ತಥಾ ಮೃಷಾ ।**
**ವಜ್ರೇಣ ನಾಶನಂ ಶಕ್ರಃ ಕರೋತು ಬಲಸೂದನಃ ॥ ೮ ॥**

**ದಂಡೇನ ನಾಶನಂ ನಿತ್ಯಂ ವಿದಧಾತು ಯಮೋಂತಕಃ ।**
**ಪಾಶೇನ ವರುಣೋ ದೇವೋ ಗದಯಾ ಚ ಧನೇಶ್ವರಃ ॥ ೯ ॥**

**ಗ್ರಹಸನ್ನಾಹಸನ್ನದ್ಧೋ ಗ್ರಹಪಂಜರಮಧ್ಯಗಃ ।**
**ಅದೃಶ್ಯಃ ಸರ್ವಭೂತಾನಾಂ ಸರ್ವದುಃಖವಿವರ್ಜಿತಃ ॥ ೧೦ ॥**

---

ಕುಜನು ದಕ್ಷಿಣ ದಿಕ್ಕಿನಲ್ಲಿ ಸಂರಕ್ಷಿಸಲಿ ಶನೈಶ್ಚರನು ಪಶ್ಚಿಮ ದಿಕ್ಕಿನಲ್ಲಿ ಸಲಹಲಿ ಉತ್ತರ ದಿಕ್ಕಿನಲ್ಲಿ ಬುಧನೂ, ಕೆಳಭಾಗದಲ್ಲಿ ಕೇತುವೂ, ಆಗ್ನೇಯಭಾಗದಲ್ಲಿ ಶುಕ್ರನೂ, ನೈಋತ್ಯದಲ್ಲಿ ರಾಹುವೂ, ವಾಯುವ್ಯದಲ್ಲಿ ಚಂದ್ರನೂ, ಈಶಾನ್ಯದಲ್ಲಿ ಗುರುವೂ, ಎಲ್ಲಾ ಸಂಧಿಗಳಲ್ಲೂ ಎಲ್ಲಾ ನಕ್ಷತ್ರಗಳೂ ಆಯಾಯ ದಿಗೀಶ್ವರರು ತಮ್ಮ ತಮ್ಮ ದಿಕ್ಕುಗಳಲ್ಲೂ ಸಹ ಸಕಲ ದುಷ್ಟಬಾಧೆಗಳನ್ನೂ ಪರಿಹರಿಸಿ ಕಾಪಾಡಲಿ ಇಂದ್ರಾಗ್ನಿಯೇ ಮುಂತಾದವರು, ಶತ್ರುಗಳು,-ಕಳ್ಳರು,-ರೋಗಗಳು,-ಪಾಪಗಳು, ಅಪಶಕುನಗಳು, ಘೋರವಿಪತ್ತುಗಳು, ದುಸ್ಸ್ವಪ್ನಗಳು, ಸುಳ್ಳು ಚಿಂತೆಗಳೇ ಮುಂತಾದುವುಗಳಿಂದ ಕಾಪಾಡಲಿ ಇಂದ್ರನು ತನ್ನ ವಜ್ರಾಯುಧವನ್ನು ಹಿಡಿದುಕೊಂಡು ಶತ್ರುಗಳನ್ನು ಸಂಹರಿಸಲಿ ಯಮನು ತನ್ನ ಕಾಲದಂಡವನ್ನು ಹಿಡಿದು ನಿಂತುಕೊಂಡು ಶತ್ರುಗಳನ್ನು ಸದೆ ಬಡಿಯಲಿ ವರುಣನು ಪಾಶಾಯುಧವನ್ನು ಧರಿಸಿ, ಕುಬೇರನು ಗದೆಯನ್ನು ಧರಿಸಿ ಯಜಮಾನನನ್ನು ಕಾಪಾಡಲಿ ಎಲೈ ಯಜಮಾನನೇ ! ನೀನು ಹೆದರ

**ಸರ್ವವ್ಯಾಧಿವಿಹೀನಶ್ಚ ಕಾಲ ಕರ್ಮವಿವರ್ಜಿತಃ ।**
**ತಥಾ ತ್ವಂ ಭವ ದೀರ್ಘಾಯುರ್ಗ್ರಹೇಂದ್ರಾಣಾಂ ಪ್ರಸಾದತಃ　　॥ ೧೧ ॥**

**ರಕ್ಷಂತು ತೇ ದೇವಗಣಾಃ ಸಮಗ್ರಾ**
**ಧರ್ಮೇ ಮತಿಂ ಚಾಪಿ ಸದಾ ದಿಶಂತು ।**
**ನಾಶಂ ತಥಾ ಶತ್ರುಗಣಸ್ಯ ಚೋಗ್ರಂ**
**ಭೋಗಾನ್ಮನೋಜ್ಞಾನ್ವಿಪುಲಾಂಚ ಲಕ್ಷ್ಮೀಂ　　॥ ೧೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಾಂತ್ಯವಸಾನೇ ಪ್ರತಿಸರಬಂಧಾಶೀರ್ವಾದೋ ನಾಮ ಚತುರಧಿಕಶತತಮೋಽಧ್ಯಾಯಃ**

ಬೇಡ ಗ್ರಹಗಳೆಂಬ ಸಂಜರದ ಮಧ್ಯದಲ್ಲಿ ನೀನಿದ್ದುಕೊಂಡು ಯಾವ ಪ್ರಾಣಿಗಳ ಕಣ್ಣಿಗೂ ಕಾಣಿಸಿಕೊಳ್ಳದೇ ಸಕಲ ದುಃಖದಿಂದಲೂ ಬಿಡುಗಡೆಹೊಂದಿ ಯಾವ ರೋಗವೂ ಇಲ್ಲದ ಕಾಲಮೃತ್ಯುವನ್ನೂ ಸಹ ಗೆದ್ದು ದೀರ್ಘಾಯುಸ್ಸಂತನಾಗಿ ಬಾಳು ಗ್ರಹಗಳೂ, ಸಕಲ ದೇವತೆಗಳೂ ನಿನ್ನನ್ನು ಸಂರಕ್ಷಿಸಲಿ ನೀನು ಧರ್ಮಿಷ್ಠನಾಗಿ ಬದುಕು ನಿನ್ನ ಭಯಂಕರ ಶತ್ರುಗಳೆಲ್ಲರೂ ಹಾಳಾಗಿಹೋಗಲಿ ನಿನಗೆ ಬೇಕಾದ ಭೋಗಭಾಗ್ಯಗಳೂ, ಐಶ್ವರ್ಯವೂ ಸಂಪತ್ತೂ ಹೆಚ್ಚು ಹೆಚ್ಚಾಗಿ ಪ್ರಾಪ್ತವಾಗಲಿ ಇದೇ ಆಶೀರ್ವಾದಮಂತ್ರ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಶಾಂತಿಯಾದ ಮೇಲೆ ಪ್ರತಿಸರ ಬಂಧಾಶೀರ್ವಾದವೆಂಬ ಹೆಸರಿನ ಒಂದುನೂರನಾಲ್ಕನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಾಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಹವಿಷ್ಯಾಶೀ ತತಸ್ತಿಷ್ಠೇದ್ಬ್ರಹ್ಮಚಾರೀ ಚ ತಾಂ ನಿಶಾಂ ।
ಗ್ರಹಶಾಂತಿರಿಯಂ ಪ್ರೋಕ್ತಾ ಮಯಾ ಕಲ್ಮಷನಾಶಿನೀ ॥ ೧ ॥

ಅನಾವೃಷ್ಟ್ಯಾಂ ಪ್ರಯೋಕ್ತವ್ಯಾ ವೃಷ್ಟಿಕಾಮೇನ ಭೂಭುಜಾ ।
ಅತಿವೃಷ್ಟ್ಯಾಂ ಪ್ರಯೋಕ್ತವ್ಯಾ ವೃಷ್ಟಿಂ ಶಮಯತಾ ತಥಾ ॥ ೨ ॥

ಯಾತ್ರಾಕಾಲೇ ತಥಾ ಕಾರ್ಯಾ ರಿಪೂಣಾಂ ಕ್ಷಯಮಿಚ್ಛತಾ ।
ರಣಕಾಲೇ ತಥಾ ಕಾರ್ಯಾ ಸಂಗ್ರಾಮೇ ಜಯಮಿಚ್ಛತಾ ॥ ೩ ॥

### ಒಂದುನೂರೈದನೆಯ ಅಧ್ಯಾಯವು.

೧ ಮಾರ್ಕಂಡೇಯರು ಹೇಳುತ್ತಾರೆ – ಯಜಮಾನನು ಶಾಂತಿಯಾದ ಬಳಿಕ ಹವಿಸ್ಸನ್ನು ಮಾತ್ರ ತಿಂದುಕೊಂಡು ಬ್ರಹ್ಮಚರ್ಯದಿಂದ ಆ ರಾತ್ರಿಯನ್ನು ಕಳೆಯಬೇಕು ಎಲೈ ವಜ್ರರಾಜನೇ ! ಈ ರೀತಿಯಾಗಿ ಸಕಲ ಪಾಪಪರಿಹಾರಕವಾದ ಗ್ರಹಶಾಂತಿ ಕ್ರಮವು ನನ್ನಿಂದ ಹೇಳಲ್ಪಟ್ಟಿದೆ

೨-೪. ಈ ಗ್ರಹಶಾಂತಿಯನ್ನು ಅನಾವೃಷ್ಟಿಯು ಪ್ರಾಪ್ತವಾದಾಗಲೆಲ್ಲಾ ಮಳೆ ಬರಲೆಂದು ಮಾಡಿಸಬೇಕು ವಿಪರೀತ ಮಳೆ ಹುಯ್ದು ನಷ್ಟ ಸಂಭವಿಸಿದಾಗಲೂ ವೃಷ್ಟಿಶಮನಕ್ಕಾಗಿ ಮಾಡಿಸಬೇಕು ದಿಗ್ವಿಜಯಕ್ಕೆ ಹೊರಟಾಗ ಶತ್ರುನಾಶಕ್ಕಾಗಿ ಮಾಡಬೇಕು ಯುದ್ಧ ನಡೆಯುತ್ತಿರುವಾಗ ಜಯವಾಗಲೆಂದು ಮಾಡಿಸ

**ಕರ್ತವ್ಯಾ ಚಾಭಿಚಾರಾರ್ಥಂ ಶತ್ರೂಣಾಂ ಮನುಜೇಶ್ವರ ।**
**ಪುಷ್ಟಿಕಾಮೈರ್ನರೈಃ ಕಾರ್ಯಾ ವಿದ್ಯಾಕಾಮೈಸ್ತಥೈವ ಚ ॥ ೪ ॥**

**ಲಾಭಾರ್ಥಂ ಚ ತಥಾ ವೈಶ್ಯೈಃ ಶೂದ್ರೈರ್ಧರ್ಮಫಲೇಪ್ಸುಭಿಃ ।**
**ರಾಜ್ಯಕಾಮೇನ ಕರ್ತವ್ಯಾ ರಾಜಪುತ್ರೇಣ ಪಾರ್ಥಿವ ॥ ೫ ॥**

**ತಥಾ ಬಂಧನಮೋಕ್ಷಾರ್ಥಂ ಬದ್ಧೇನ ಚ ಮಹೀಪತೇ ।**
**ಸ್ಥಾನಚ್ಯುತೇನ ಕರ್ತವ್ಯಾ ಸ್ಥಾನಲಬ್ಧಿಮಭೀಪ್ಸತಾ ॥ ೬ ॥**

**ವ್ಯಾಧಿತೇನ ಚ ಕರ್ತವ್ಯಾ ವ್ಯಾಧೇಃ ಪ್ರಶಮಮಿಚ್ಛತಾ ।**
**ಮಾರಕೇ ಚ ತಥಾ ಕಾರ್ಯಾ ಮಾರಕಕ್ಷಯಮಿಚ್ಛತಾ ॥ ೭ ॥**

**ಪರಾಭಿಚಾರಶಂಕಾಯಾಂ ಗ್ರಹಶಾಂತಿಂ ಪ್ರಯೋಜಯೇತ್ ।**
**ದಿವ್ಯಾಂತರಿಕ್ಷಭೌಮಾನಾಮುತ್ಪಾತಾನಾಂ ತಥೋದ್ಭವೇ ॥ ೮ ॥**

---

ಬೇಕು ಶತ್ರುಗಳು ನಾಶವಾಗಲೆಂದು ಅಭಿಚಾರಕ್ಕಾಗಿ ಮಾಡಿಸಬೇಕು ಪುಷ್ಟಿಯನ್ನು ಹೊಂದುವವರೂ, ವಿದ್ಯಾವಂತರಾಗಬೇಕೆನ್ನುವವರೂ ಈ ಗ್ರಹಶಾಂತಿಯನ್ನು ಮಾಡಬೇಕು.

೫-೧೭ ಈ ಗ್ರಹಶಾಂತಿ ಕರ್ಮವನ್ನು ಲಾಭವನ್ನು ಸಂಪಾದಿಸಲಾಶೆಯುಳ್ಳ ವೈಶ್ಯರೆಲ್ಲರೂ ಅವಶ್ಯವಾಗಿ ಮಾಡಬೇಕು ಧರ್ಮಫಲವನ್ನು ಹೊಂದಲಾಶೆಯುಳ್ಳ ಶೂದ್ರರು ಇದನ್ನು ಬ್ರಾಹ್ಮಣನ ಮೂಲಕವಾಗಿ ಮಾಡಿಸಬೇಕು ರಾಜ್ಯವನ್ನು ಸಂಪಾದಿಸಲಾಶೆಯುಳ್ಳ ರಾಜಪುತ್ರನು ಇದನ್ನು ಅವಶ್ಯವಾಗಿ ಮಾಡಬೇಕು ಎಲೈ ವಜ್ರರಾಜನೆ ಕೇಳು, ಯಾವನಾದರೂ ಗ್ರಹಚಾರವಶಾತ್ತಾಗಿ ಬಂಧನದ (ಜೈಲಿನ) ಲ್ಲಿದ್ದರೆ ಈ ಗ್ರಹಶಾಂತಿಯನ್ನು ಮಾಡಿಸಬೇಕು ಹಾಗೆ ಮಾಡಿದರೆ ಬಂಧನದಿಂದ ಬಿಡುಗಡೆಯಾಗುತ್ತಾನೆ ಸ್ಥಾನಭ್ರಷ್ಟನಾದವನು ಮಾಡಿದರೆ ಸ್ವಸ್ಥಾನ ಲಾಭವಾಗುತ್ತದೆ ಖಾಯಿಲೆ ಬಿದ್ದವನು ಈ ಗ್ರಹನಕ್ಷತ್ರ ದೇವತೆಗಳಲ್ಲಿ ಅನನ್ಯಭಕ್ತಿಯಿಂದ ಈ ಮಹಾತ್ಮರ ಗುಣವರ್ಣನೆಯನ್ನು ಲೇಖನಮೂಲಕ ಪ್ರಕಟಿಸಿದರೂ ಅಥವಾ ಅನುಕೂಲವಿದ್ದಂತೆ ಯಥಾಶಕ್ತಿಯಾಗಿ ಶಾಂತಿಕರ್ಮವನ್ನು ನಡೆಸಿದರೂ ಖಾಯಿಲೆಯು ಗುಣ (ವಾಸಿ) ವಾಗಿ ಅತ್ಯಾಶ್ಚರ್ಯಕರವಾದ ಆರೋಗ್ಯಭಾಗ್ಯವುಂಟಾಗುತ್ತದೆ ಯಾವನಾದರೂ ತನ್ನ ಮೇಲೆ ಮಾರಕ ಕ್ರಿಯೆಯನ್ನು ಮಾಡಿರುವನೆಂದು ಗೊತ್ತಾದರೆ ಅದರ ನಿವೃತ್ತಿಗಾಗಿ

ಗ್ರಹಾಧೀನಾ ನರೇಂದ್ರಾಣಾಮುಚ್ಛ್ರಾಯಾಃ ಪತನಾನಿ ಚ ।
ಭಾವಾಭಾವೌ ಚ ಜಗತಾಂ ಗ್ರಹಾಯತ್ತೌ ನರಾಧಿಪ ॥ ೯ ॥

ಬ್ರಹ್ಮಣೈಷಾಂ ವರೋ ದತ್ತಃ ಪೂಜಿತಾಃ ಪೂಜಯಿಷ್ಯಥ ।
ತಸ್ಮಾತ್ಸರ್ವಪ್ರಯತ್ನೇನ ನೃಣಾಂ ಪೂಜ್ಯತಮಾ ಗ್ರಹಾಃ ॥ ೧೦ ॥

ಗುರುಭಕ್ತಸ್ಯ ದಾಂತಸ್ಯ ಧರ್ಮಾರ್ಜಿತಧನಸ್ಯ ಚ ।
ಪೂಗ್ರಜಸ್ಯ ಗ್ರಹೇಂದ್ರಾಣಾಂ ಸದಾ ಸಾನುಗ್ರಹಾ ಗ್ರಹಾಃ ॥ ೧೧ ॥

ಮಾನವಸ್ಯಾಸ್ವತಂತ್ರಸ್ಯ ಗೋಬ್ರಾಹ್ಮಣಹಿತಸ್ಯ ಚ ।
ಮಾಂಸಭಕ್ಷಣಹೀನಸ್ಯ ಸದಾ ಸಾನುಗ್ರಹಾ ಗ್ರಹಾಃ ॥ ೧೨ ॥

---

ಈ ಹೋಮ ಮಾಡಿ ಸಂಕಲ್ಪಿಸಿದರೆ ಆ ಶತ್ರುವು ನಾಶವಾಗಿ ಹೋಗುತ್ತಾನೆ ಯಾರಾದರೂ ತನ್ನ ಮೇಲೆ ಮಾಟ ಮಾಡಿಸಿರುವರೆಂದು ಸಂದೇಹ ಬಂದರೆ ಈ ಶಾಂತಿಯನ್ನು ಮಾಡಿಸಬೇಕು ಆ ಕೂಡಲೇ ಮಾಟಕಾಟಗಳೆಲ್ಲವೂ ಮಾಯವಾಗಿ ಹೋಗುವುವು ಆಕಾಶದಲ್ಲಾಗಲೀ ಭೂಮಿಯಲ್ಲಾಗಲೀ ಉತ್ಪಾತಗಳೇನಾದರೂ ಕಂಡುಬಂದಾಗ ಈ ಗ್ರಹಶಾಂತಿಯನ್ನು ಮಾಡಬೇಕು ಸಕಲ ರಾಜರ ಉನ್ನತಿಯೂ ಅವನತಿಯೂ ಗ್ರಹಗಳ ಅಧೀನದಲ್ಲಿರುವುದರಿಂದಲೂ ಸಕಲ ಪ್ರಪಂಚದ ಉತ್ಪತ್ತಿ ನಾಶಗಳೂ ಸಹ ನವಗ್ರಹಗಳ ಅಧೀನದಲ್ಲಿರುವುದರಿಂದಲೂ ಈ ಮಹಾತ್ಮರಾದ ನವಗ್ರಹಗಳನ್ನು ಪೂಜೆ ಮಾಡಿ ಪ್ರಾರ್ಥನೆ ಮಾಡಿದರೆ ಸಕಲ ಕಷ್ಟಗಳೂ ಪರಿಹಾರವಾಗುವುವೆಂದು ಬ್ರಹ್ಮನೇ ವರವನ್ನು ಕೊಟ್ಟಿದ್ದಾನೆ ಆದ್ದರಿಂದ ಸಕಲ ಪ್ರಯತ್ನಗಳನ್ನೂ ಮಾಡಿ ಸಕಲ ಮನುಷ್ಯರೂ ತಮ್ಮ ತಮ್ಮ ಶ್ರೇಯಸ್ಸಿಗಾಗಿ ಈ ಗ್ರಹಾರಾಧನೆಯನ್ನು ಮಾಡಬೇಕು ಯಾರು ಗುರುವಿನಲ್ಲಿ ಭಕ್ತಿಯಿಟ್ಟಿರುವರೋ ಇಂದ್ರಿಯವನ್ನಾರು ಗೆದ್ದಿರುವರೋ ಧರ್ಮದಿಂದ ದ್ರವ್ಯವನ್ನಾರು ಸಂಪಾದಿಸುವರೋ ಗ್ರಹಗಳಲ್ಲಿ ಯಾರು ಭಕ್ತಿಯಿಂದ ನಡೆದುಕೊಳ್ಳುವರೋ ಅಂಥವರ ವಿಷಯದಲ್ಲಿ ಸಕಲ ಗ್ರಹಗಳೂ ಅನುಕೂಲರಾಗಿ ಒಳ್ಳೆಯದನ್ನು ಮಾಡುತ್ತಾರೆ ಗೋ-ಬ್ರಾಹ್ಮಣರ ವಿಷಯದಲ್ಲಿ ಹಿತವನ್ನು ಮಾಡುತ್ತಾ ಸ್ವತಂತ್ರವಿಲ್ಲದ ಗ್ರಹಾಧೀನರಾದ ಮನುಷ್ಯರಿಗೂ ಮಾಂಸಾಹಾರಮಾಡದೆ ಇರುವ ಮನುಷ್ಯರಿಗೂ ಗ್ರಹಗಳು ಒಳ್ಳೆಯದನ್ನು ಮಾಡುತ್ತಾರೆ ಮುಖ್ಯವಾಗಿ ಮತ್ತೊಂದು ವಿಷಯವನ್ನು ಇದನ್ನೋದುವ ಸಕಲ ಮನುಷ್ಯರೂ ಜ್ಞಾಪಕದಲ್ಲಿಟ್ಟಿರಬೇಕು. ಅದೇ

**ಯೇ ಭಕ್ತಾಃ ಪುಂಡರೀಕಾಕ್ಷಂ ದೇವದೇವಂ ಜನಾರ್ದನಂ ।**
**ನಾಸ್ತಿ ತೇಷಾಂ ಜಗತ್ಯಸ್ಮಿನ್ದೋಷೋ ಗ್ರಹಕೃತೋ ನೃಣಾಂ ॥ ೧೩ ॥**

**ಯಥಾ ಬಾಣಪ್ರಹಾರಾಣಾಂ ಕವಚಂ ವಾರಣಂ ಭವೇತ್ ।**
**ತಥಾ ದೈವೋಪಘಾತಾನಾಂ ಶಾಂತಿರ್ಭವತಿ ವಾರಣಂ ॥ ೧೪ ॥**

**ಗ್ರಹಯಾಗವಿಧಿಂ ಸಮ್ಯಗ್ಯಶ್ಚಾಧೀತೇ ನರಾಧಿಪ ।**
**ಗ್ರಹಪಾಪಕೃತಂ ಚೈವ ತಸ್ಯಾಪಿ ನ ಭವಿಷ್ಯತಿ ॥ ೧೫ ॥**

**ಅತೀವ ವಿಸ್ತರೇಣೇಯಂ ಗ್ರಹಶಾಂತಿರುದಾಹೃತಾ ।**
**ಧನ್ಯಾ ಯಶಸ್ಯಾ ಚಾಯುಷ್ಯಾ ಸರ್ವಕಿಲ್ಬಿಷನಾಶಿನೀ ॥ ೧೬ ॥**

---

ನಂತರ — ಅಪಾರ ಪುಣ್ಯಾತ್ಮರು ಭಕ್ತಿಯಿಂದ ಪುಂಡರೀಕಾಕ್ಷನಾದ ಮಹಾ ವಿಷ್ಣುವನ್ನು ಅನನ್ಯಗತಿಯೆಂದು ನಂಬಿ ಸರ್ವದಾ ಧ್ಯಾನಿಸುತ್ತಿರುವರೋ ಆ ಪರಮಭಕ್ತರಿಗ ಪಾತ್ರ ಯಾವ ಗ್ರಹಗಳೂ ಏನೂ ಕೇಡನ್ನುಂಟುಮಾಡಲಾರವು ಈ ಮಾತನ್ನು ಅಧ್ಯಾತ್ಮರಾಮಾಯಣದಲ್ಲಿ ಈ ರೀತಿ ಹೇಳಿದಾರೆ — ರಾಮಏವ ಪರಂಬ್ರಹ್ಮ ತಸ್ಮಿಂಸ್ತುಷ್ಟೇ ಖಿಲಾತ್ಮನಿ। ದೇವಾಶ್ಚ ಸರ್ವೇತುಷ್ಯಂತಿ ಗ್ರಹಾಸ್ಸರ್ವೇ ಮಹರ್ಷಯಃ॥ ಅಂದರೆ ಪರಮಾತ್ಮನಾದ ರಾಮರೂಪೀ ಮಹಾ ವಿಷ್ಣುವು ತೃಪ್ತನಾದರೆ ಸಕಲ ದೇವತೆಗಳೂ ಸಕಲ ಗ್ರಹಗಳೂ ಸಕಲ ಮಹರ್ಷಿಗಳೂ ತೃಪ್ತರಾಗುತ್ತಾರ ಯಾರು ಯುದ್ಧರಂಗದಲ್ಲಿ ಲೋಹಕವಚವನ್ನು ತೊಟ್ಟು ನಿಲ್ಲುವರೋ ಅಂಥವರಿಗೆ ಎಷ್ಟೇ ಬಾಣಗಳ ಏಟು ಬಂದು ಬೀಳಲಿ, ಅವರಿಗೆ ಏನೂ ಆಗದ ಇರುವಂತೆ, ಅದೃಷ್ಟಹೀನರು ಈ ಗ್ರಹಗಶಾಂತಿಯನ್ನು ಮಾಡಿದರೆ ಕವಚವು ಬಾಣವೇಟನ್ನು ತಡೆಯುವಂತೆ ಗ್ರಹಶಾಂತಿ ಕವಚವು ಯಾವ ಏಟನ್ನೂ ಹಿಂತಿರುಗಿಸುತ್ತದ ಅಂದರೆ ಯಾವ ಕಷ್ಟವೂ ಇವನಿಗೆ ಪ್ರಾಪ್ತವಾಗುವುದಿಲ್ಲವೆಂದು ತಿಳಿಯಬೇಕು ಅಥವಾ ಇದಾವುದನ್ನು ಮಾಡದೇ ಹೋದಾಗ್ಯೂ ಯಾವ ಮನುಷ್ಯನು ತನ್ನ ಜನ್ಮದಲ್ಲಿ ಒಂದಾವರ್ತಿಯಾದರೂ ಭಕ್ತಿಯಿಂದ ಈ ಗ್ರಹಯಜ್ಞ (ಪೂಜಾ) ವಿಧಿಯನ್ನು ಓದಿ (ಪಾರಾಯಣ) ಮಾಡುವನೋ ಅಂತಹವನನ್ನು ಗ್ರಹಗಳು ಕಷ್ಟವಿಲ್ಲದೆ ಕಾಪಾಡುವುವು ಈಗ ಹೇಳಿದ ಈ ಗ್ರಹಶಾಂತಿ ಕ್ರಮವು ಬಹಳ ವಿಸ್ತಾರವಾದ ಹೇಳಲ್ಪಟ್ಟಿದೆ ಈ ಕ್ರಮವು ಮನುಷ್ಯನನ್ನು ಧನ್ಯನನ್ನಾಗಿ ಮಾಡುವುದು ಯಶಸ್ಸನ್ನೂ ಆಯಸ್ಸನ್ನೂ ಹೆಚ್ಚಿಸಿ ಸಕಲ ಪಾಪಗಳನ್ನೂ ನಿವಾರಣೆ ಮಾಡುವುದು ಚೆನ್ನಾಗಿ ಯಾರು ಇದನ್ನು ಪ್ರಯೋಗಮಾಡಿ ಗ್ರಹಾರ್ಚನೆಯಂ

ಪ್ರಯುಂಜತಃ ಸಮ್ಯಗಿಮಾಂ ನರೇಂದ್ರ
ನ ಜಾತು ಲೋಕೇ ಭಯಮಸ್ತಿ ಕಿಂಚಿತ್ ।
ಆರೋಗ್ಯಮಾಸಾದ್ಯ ಚಿರಂ ಚ ಜೀವೇತ್
ಪ್ರಾಪ್ನೋತಿ ಲಕ್ಷ್ಮೀಂ ಸಕಲಾಂಶ್ಚ ಭೋಗಾನ್ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗ್ರಹಶಾಂತಿಫಲವರ್ಣನೋನಾಮ
ಪಂಚಾಧಿಕಶತತಮೋಽಧ್ಯಾಯಃ

---

ಮಾಡುವರೋ ಅವರಿಗೆ ಈ ಭೂಲೋಕದಲ್ಲಿ ಖಂಡಿತವಾಗಿ ಯಾವಾಗಲೂ ಯಾವ ಭಯವೂ ಸಂಭವಿಸುವುದಿಲ್ಲ ಅಂತಹ ಗ್ರಹ ಭಕ್ತರು ಆರೋಗ್ಯವಂತರಾಗಿ ದೀರ್ಘಾಯುಷ್ಮಂತರಾಗಿ ಜೀವಿಸುತ್ತಾರೆ ಮತ್ತು ಅಷ್ಟೈಶ್ವರ್ಯಸಂಪನ್ನರಾಗಿ ಸಕಲ ವಿಧವಾದ ಭೋಗಗಳನ್ನು ಅನುಭವಿಸುತ್ತಾರೆ ಈ ರೀತಿ ಮಾರ್ಕಂಡೇಯರು ವಜ್ರನರಪತಿಗೆ ನಿರೂಪಿಸಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಗ್ರಹಶಾಂತಿ ಫಲವರ್ಣನೆಯೆಂಬ ಹೆಸರಿನ
ಒಂದುನೂರೈದನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಡುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಧ್ರುವಸ್ಯಾಹಂ ದ್ವಿಜಶ್ರೇಷ್ಠ ಬ್ರಾಹ್ಮಣಾನಾಂ ಪೃಥಕ್ಪೃಥಕ್ ।
ಸಂಭವಂ ಶ್ರೋತುಮಿಚ್ಛಾಮಿ ನಕ್ಷತ್ರಾಣಾಂ ಚ ಮಾನದ ॥ ೧ ॥

॥ ಮಾರ್ಕಂಡೇಯ ಉವಾಚ ॥

ಬ್ರಹ್ಮಣಾ ಸೃಷ್ಟಿಕಾಮೇನ ಪೂರ್ವಮೇವ ನರಾಧಿಪ ।
ಆದಿತ್ಯಸ್ತಮಸಾಂ ಹಂತಾ ತೇಜಸಾಂ ಗೋಲಕಃ ಕೃತ॥ ॥ ೨ ॥

## ಒಂದುನೂರಾರನೆಯ ಅಧ್ಯಾಯವು.

೧ ವಜ್ರಮಹಾರಾಜನು ಪುನಃ ಪ್ರಶ್ನೆಮಾಡುತ್ತಾನೆ — ಎಲೈ ಮಾರ್ಕಂಡೇಯ ಮಹರ್ಷಿಯೇ ! ಧ್ರುವಮಂಡಲದ ಮತ್ತು ಬ್ರಾಹ್ಮಣರ ಹಾಗೂ ನಕ್ಷತ್ರಗಳ ಉತ್ಪತ್ತಿ ಹೇಗಾಯಿತೆಂಬುದನ್ನು ಕೇಳಬೇಕೆಂದು ಆಶಿಸುತ್ತೇನೆ

೨. ಅದಕ್ಕೆ ಮಾರ್ಕಂಡೇಯ ಮಹರ್ಷಿಗಳು ಉತ್ತರವನ್ನು ಹೇಳುತ್ತಾರೆ - - ಎಲೈ ಧೊರೆಯೇ ! ಕೇಳು ಪೂರ್ವದಲ್ಲಿ ಜಗತ್ತನ್ನು ಸೃಷ್ಟಿಮಾಡಲು ಆರಂಭಿಸಿದ ಬ್ರಹ್ಮನಿಂದ ಸೂರ್ಯನು ಮೊದಲು ಸೃಷ್ಟಿಮಾಡಲ್ಪಟ್ಟನು ಈ ಸೂರ್ಯನಿಗೆ ತಮೋನಾಶಕ (ಕತ್ತಲೆ ಹೋಗಲಾಡಿಸುವವ) ನೆಂದೂ ತೇಜೋಮಂಡಲ (ಗೋಳಕ) ನೆಂದೂ ಹೆಸರು ಬಂದಿದ

**ತಮೋಮಯೋ ಗೋಲಕಶ್ಚ ರಾಹುಸ್ತೇನ ತಥಾ ಕೃತಃ ।**
**ಅಮ್ಮಯಾನಿ ತಥಾನ್ಯಾನಿ ಗೋಲಕಾನಿ ನರಾಧಿಪ ॥ ೩ ॥**

**ಕೃತಾನಿ ತೇನ ಧರ್ಮಜ್ಞ ಗ್ರಹರ್ಕ್ಷಾಣಾಂ ಪೃಥಕ್ಪೃಥಕ್ ।**
**ಧ್ರುವಸ್ಥಾನನಿವಿಷ್ಟಾಶ್ಚ ತಾರಕಾಶ್ಚ ಚತುರ್ದಶ ॥ ೪ ॥**

**ತೇಷಾಂ ನಾಮವಿಭಾಗಂ ಮೇ ಗದತಃ ಶೃಣು ಪಾರ್ಥಿವ ।**
**ಉತ್ತಾನಪಾದಸ್ತಸ್ಯಾಥ ವಿಜ್ಞೇಯಃ ಸೋತ್ತರೋ ಹನುಃ ॥ ೫ ॥**

**ಯಜ್ಞೋಧರಸ್ತು ವಿಜ್ಞೇಯೋ ಧರ್ಮೋ ಮೂರ್ಧಾನಮಾಶ್ರಿತಃ ।**
**ಹೃದಿ ನಾರಾಯಣಃ ಸಾಧ್ಯಾವಶ್ವಿನೌ ಪೂರ್ವಪಾದಯೋಃ ॥ ೬ ॥**

**ವರುಣಶ್ಚಾರ್ಯಮಾ ತಸ್ಯ ಪಶ್ಚಿಮೇ ಚೈವ ಸಕ್ಥಿನೀ ।**
**ಶಿಶ್ನಃ ಸಂವತ್ಸರಸ್ತಸ್ಯ ಮಿತ್ರೋಽಪಾನಂ ಸಮಾಶ್ರಿತಃ ॥ ೭ ॥**

---

೩-೪ ತಮೋಮಂಡಲ (ಕತ್ತಲೆರಾಶಿ) ದಿಂದ ರಾಹುವು ನಿರ್ಮಾಣ ಮಾಡಲ್ಪಟ್ಟನು ಅದಕ್ಕಾಗಿ ಈಗಲೂ ರಾಹುವಿಗೆ ತಮನೆಂಬ ಹೆಸರು ರೂಢಿಯಾಗಿ ಇದ್ದೇ ಇದೆ, ತಮಸ್ತುರಾಹುಃ-ಸ್ವರ್ಭಾನು-ಸ್ಸೈಂಹಿಕೇಯೋ ಎಂದು ಅಮರದಲ್ಲಿ ಹೇಳಿದೆ ಈ ತಮ ನಿರ್ಮಾಣಾನಂತರ ಇನ್ನು ಕೆಲವು ನೀರಿನ ಉಂಡೆ (ಅಮ್ಮಯಗೋಳಕ) ಗಳ್ಳ ಬೇರೆಬೇರೆಯಾಗಿ ನಿರ್ಮಿತವಾದುವು ಇವೇ ಗ್ರಹನಕ್ಷತ್ರ ಮಂಡಲಗಳು ಈ ರೀತಿ ನಿರ್ಮಿತವಾದ ಸಕಲ ಗ್ರಹತಾರಕಾಗೋಳಕಗಳೂ ಸಹ ಧ್ರುವಮಂಡಲದ ಜತೆಗೆ ಸೇರಿಸಲ್ಪಟ್ಟವು ಈ ಧ್ರುವಸ್ಥಾನದಲ್ಲಿ ಮೊದಲು ನಿಂತ ಹದಿನಾಲ್ಕು ತಾರಕೆಗಳ ವಿಚಾರವನ್ನೀಗ ಹೇಳುತ್ತೇನೆ

೫-೭ ಅವುಗಳ ನಾಮ ವಿಭಾಗಗಳನ್ನು ನಿನ್ನೊಡನೆ ಹೇಳುವೆನು ಕೇಳು ಈ ಧ್ರುವ ಮಂಡಲಕ್ಕೆ ಉತ್ತಾನಪಾದನನ್ನು ಉತ್ತರಪಕ್ಷ (ಹನು) ವೆಂದೂ (ಕೆನ್ನೆ) ಯಜ್ಞನನ್ನು ಅಧರಪಕ್ಷ (ಬಲಗೆನ್ನೆ) ವೆಂದೂ ಹೇಳುವರು ಧರ್ಮವು ಶಿರೋಭಾಗದಲ್ಲಿರುವುದು ಹೃದಯ ಪ್ರದೇಶದಲ್ಲಿ ನಾರಾಯಣನೂ ಪೂರ್ವಪಾದಗಳಲ್ಲಿ ಅಶ್ವಿನೀ ದೇವತೆಗಳೂ, ಪಶ್ಚಿಮಪಾದಗಳಲ್ಲಿ ವರುಣನೂ, ಅರ್ಯಮಾ ದೇವತೆಯೂ ಇರುವರು ಇವೆರಡೂ ತೊಡೆಯ ಭಾಗಗಳೆಂದು ತಿಳಿಯಬೇಕು ಸಂವತ್ಸರಕ್ಕೆ ಧ್ರುವ ಮಂಡಲದ ಶಿಶ್ನ (ಜನನೇಂದ್ರಿಯ) ವೆಂದು ಹೇಳುವರು ಸೂರ್ಯನು

ಪುಚ್ಛೇಽಗ್ನಿಶ್ಚ ಮಹೇಂದ್ರಶ್ಚ ಮಾರೀಚಃ ಕಶ್ಯಪೋ ಧ್ರುವಃ ।
ಧ್ರುವಸ್ಥಾಸ್ನುರ್ಗ್ರಹರ್ಕ್ಷಾಣಾಮ್ಮೇಢ್ರೀಭೂತಃ ಪ್ರಕೀರ್ತಿತಃ ॥ ೮ ॥

ಧ್ರುವೇಣ ಭ್ರಾಮ್ಯತೇ ಸರ್ವಮಾಯತ್ತಂ ತ್ರಿದಿವಂ ಧ್ರುವೇ ।
ಧ್ರುವೋ ಹಿ ಭಗವಾನ್ವಿಷ್ಣುಃ ಕಾಲೋ ಲೋಕಪ್ರಕಾಲನಃ ॥ ೯ ॥

ಶಿಂಶುಮಾರನಿಬದ್ಧಾನಾಂ ತಾರಕಾಣಾಂ ಪೃಥಕ್ಪೃಥಕ್ ।
ನಾಮಧೇಯಾನಿ ವಿಜ್ಞಾಯ ದೃಷ್ಟ್ವಾ ಚ ವಿಮಲೇಂಬರೇ ॥ ೧೦ ॥

ಆಯುರಭ್ಯಧಿಕಂ ಜೀವೇದ್ವರ್ಷಾಣಿ ತು ಚತುರ್ದಶ ।
ಅಹೋರಾತ್ರಕೃತಾತ್ಪಾಪಾತ್ತತ್ಕ್ಷಣಾದೇವ ಮುಚ್ಯತೇ ॥ ೧೧ ॥

ಅಮ್ಮಯಾನಾಂ ಗ್ರಹರ್ಕ್ಷಾಣಾಂ ಮೂರ್ಚ್ಛಿತಾಃ ಸೂರ್ಯರಶ್ಮಯಃ ।
ಜನಯಂತಿ ಪ್ರಕಾಶತ್ವಂ ನಾತ್ರ ಕಾರ್ಯಾ ವಿಚಾರಣಾ ॥ ೧೨ ॥

ಸ್ಫಾಟಿಕಾನಿ ವಿಮಾನಾನಿ ತಥಾ ಸುಕೃತಿನಾಂ ನೃಪ ।
ನಾಕೇ ತಾರಕಬದ್ಧಾನಿ ಅಮ್ಮಯಾನೀವ ಯಾದವ ॥ ೧೩ ॥

---

ಅಪಾನದೇಶದಲ್ಲಿರುವನು ಅಗ್ನಿಯೂ, ಇಂದ್ರನೂ ಪುಚ್ಛದೇಶದಲ್ಲಿರುವರು ಮಾರೀಚರೂ ಕಶ್ಯಪರೂ ಧ್ರುವಮಂಡಲದಲ್ಲಿರುವವರಾಗಿ ಗ್ರಹ ನಕ್ಷತ್ರಗಳ ಮೇಢ್ರ (ರಹಸ್ಯಸ್ಥಾನ, ಇಂದ್ರಿಯ) ಪ್ರಾಯರಾಗಿರುವರೆಂದು ಅರಿಯಬೇಕು ಈ ರೀತಿಯಾಗಿ ಇವರೆಲ್ಲರೂ ಆಕಾಶದಲ್ಲಿದ್ದುಕೊಂಡು ಧ್ರುವಮಂಡಲದ ಸುತ್ತಲೂ ತಿರುಗುತ್ತಾ ಆ ಧ್ರುವಮಂಡಲಾಧೀನರಾಗಿರುವರು ಧ್ರುವನೇ ಮಹಾವಿಷ್ಣುವು ಲೋಕವನ್ನಾಕ್ರಮಿಸಿರುವವನೇ ಕಾಲ (ಯಮ) ನು

೧೦-೧೩ ಶಿಂಶುಮಾರ ಚಕ್ರದಿಂದ ಕಟ್ಟಲ್ಪಟ್ಟು ಅಂತರಿಕ್ಷದಲ್ಲಿ ಪ್ರಕಾಶಮಾನವಾಗಿ ಕಂಗೊಳಿಸುತ್ತಿರುವ ನಕ್ಷತ್ರಗಳ ಹೆಸರುಗಳನ್ನು ಯಾರು ನೋಡಿ ತಿಳಿದುಕೊಳ್ಳುವರೋ ಅವರು ತಮ್ಮ ಆಯುಃಪ್ರಮಾಣಕ್ಕಿಂತ ಇನ್ನೂ ಹದಿನಾಲ್ಕು ವರ್ಷ ಹೆಚ್ಚಾಗಿ ಬದುಕುವರು ಮತ್ತು ಅಂಥವರು ಅಹೋರಾತ್ರಿಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆ ಹೊಂದುವರು ಈ ರೀತಿ ನೀರಿನ ಉಂಡೆಗಳಂತಿರುವ ಗ್ರಹನಕ್ಷತ್ರಗಳು ಸೂರ್ಯ ರಶ್ಮಿಯಿಂದ ಘಟ್ಟಿಯಾಗಿ ಮಾಡಲ್ಪಟ್ಟು ಮಹಾ ಪ್ರಕಾಶಮಾನವಾಗಿ ಕಾಣಬರುವುವೆಂದು ತಿಳಿದುಕೋ ಇವರಂತೆ ಜಲಮಯವಾದ ಸ್ಫಟಿಕಮಣಿಯಂತೆ ಪ್ರಕಾಶಿಸುವ ವಿಮಾನಗಳು ಪುಣ್ಯವಂತರಿಗೆಳಿಗೋಸ್ಕರವಾಗಿ ಆಕಾಶದಲ್ಲಿ ನಕ್ಷತ್ರಗಳಿಂದ ಬಿಗಿಯಲ್ಪಟ್ಟು ಕಂಗೊಳಿಸುತ್ತಿರುತ್ತವೆ

ಗ್ರಹರ್ಕ್ಷಾಣಿ ಸಮಸ್ತಾನಿ ಧ್ರುವಶ್ಚ ಭಗವಾಂಸ್ತಥಾ ।
ಕಲ್ಪಸ್ಥಾಯೀನಿ ರಾಜೇಂದ್ರ ನಾತ್ರ ಕಾರ್ಯಾ ವಿಚಾರಣಾ ॥ ೧೪ ॥

ತೇಷಾಂ ತದಭಿಮಾನಿನ್ಯೋ ದೇವತಾ ಯದುನಂದನ ।
ಮನ್ವಂತರಾದೌ ಜಾಯಂತೇ ನ ಭವಂತಿ ಪುನಃಪುನಃ ॥ ೧೫ ॥

ಔತ್ತಾನಪಾದಿರ್ಧರ್ಮಾತ್ಮಾ ಧ್ರುವಸ್ತೇಷ್ವಪಿ ಯಾದವ ।
ಸ್ವಾಯಂಭುವೇಽಂತರೇ ಜಾತಸ್ತಿಷ್ಠತ್ಯಾಭೂತಸಂಪ್ಲವಂ ॥ ೧೬ ॥

ತಸ್ಯ ತೇ ಜನ್ಮ ವಕ್ಷ್ಯಾಮಿ ಸರ್ವಕಲ್ಮಷನಾಶನಂ ।
ಪೂರ್ವಂ ಬ್ರಹ್ಮಾ ಮಹೀಪಾಲ ಸಿಸೃಕ್ಷುರ್ವಿವಿಧಾಃ ಪ್ರಜಾಃ ॥ ೧೭ ॥

ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್ ।
ಅರ್ಧೇನ ನಾರೀ ತಸ್ಯಾಸೀದ್ವಿರಾಜಮಸೃಜತ್ಪ್ರಭುಃ ॥ ೧೮ ॥

---

೧೪ ಎಲೈ ವಜ್ರರಾಜೇಂದ್ರನೇ! ಸಕಲ ಗ್ರಹಗಳೂ ನಕ್ಷತ್ರಗಳೂ ಭಗವಾನ್ ಧ್ರುವ ನಾರಾಯಣನೂ ಸಹ ಕಲ್ಪಾಂತ್ಯದವರಿಗೂ ಇರತಕ್ಕವರೆಂಬ ವಿಷಯದಲ್ಲಿ ಸ್ವಲ್ಪವೂ ಸಂದೇಹ ಪಡಕೂಡದು

೧೫ ಮೇಲೆ ವಿವರಿಸಿದ ಗ್ರಹಾಭಿಮಾನಿ ದೇವತೆಗಳೂ ಸಹ ಮನ್ವಂತರಾದಿಯಲ್ಲಿ ಹುಟ್ಟುವುವೇ ಹೊರ್ತು ಆಗಿಂದಾಗ್ಯೆ ಹುಟ್ಟಿ ನಾಶವಾಗತಕ್ಕವುಗಳಲ್ಲ

೧೬ ಆ ಯೆಲ್ಲಾ ದೇವತೆಗಳೊಳಗೆ ಸುಪ್ರಸಿದ್ಧನಾದ ಧ್ರುವರು ಉತ್ತಾನಪಾದರಾಜನ ಮಗನಾಗಿ ಜನಿಸಿ ಸ್ವಯಂಭುವ ಮನ್ವಂತರದಲ್ಲಿ ಕಂಗೊಳಿಸಿದನು ಆತನು ಸಕಲ ಚರಾಚರ ಪ್ರಪಂಚವಿರುವ ತನಕ ಜೀವಿಸಿರುವನು.

೧೭-೧೮ ಸಕಲ ಪಾಪಪರಿಹಾರಕವಾದ ಧ್ರುವಮಹಾರಾಜನ ಜನ್ಮವೃತ್ತಾಂತವನ್ನು ಹೇಳುತ್ತೇನೆ ಕೇಳಯ್ಯ ವಜ್ರಮಹಾರಾಜ! ಪೂರ್ವದಲ್ಲಿ ಬ್ರಹ್ಮನು ವಿವಿಧವಾದ ಪ್ರಜೆಗಳನ್ನು ನಿರ್ಮಾಣಮಾಡಲು ಆರಂಭಿಸಿದ ಕಾಲವಲ್ಲಿ ತನ್ನ ದೇಹವನ್ನು ಅರ್ಧಭಾಗ ಮಾಡಿಕೊಂಡು ಗಂಡಸಾದನು ಆ ಬಳಿಕ ಇನ್ನರ್ಧ ದೇಹಕ್ಕೆ ಒಂದು ನಾರೀ ಶರೀರವನ್ನು ನಿರ್ಮಾಣ ಮಾಡಿದನು ಆ ಬಳಿಕ ವಿರಾಟ್ಪುರುಷನನ್ನು ನಿರ್ಮಾಣ ಮಾಡಿದನು

**ವಿರಾಡಸೃಜತ್ಪುರುಷಂ ಪುರುಷೋ ಮನುರುಚ್ಯತೇ ।**
**ಯಸ್ಯೈಕಸಪ್ತತಿಗುಣಂ ಮನ್ವಂತರಮಿಹೋಚ್ಯತೇ ॥ ೧೯ ॥**

**ಪ್ರಿಯವ್ರತೋತ್ತಾನಪಾದೌ ಮನೋಃ ಪುತ್ರಾವುಭೌ ಸ್ಮೃತೌ ।**
**ಕ್ಷತ್ರಪ್ರವರ್ತಕೌ ತೌ ತು ಪೂರ್ವೇ ಮನ್ವಂತರೇ ಸ್ಮೃತೌ ॥ ೨೦ ॥**

**ಉತ್ತಾನಪಾದಪುತ್ರಸ್ತು ಧ್ರುವೋ ವಿಷ್ಣುಃ ಪ್ರಕೀರ್ತಿತಃ ।**
**ನಿಬದ್ಧೋ ಭ್ರಾಮ್ಯತೇ ಯತ್ರ ಮರುತಾಂ ಜ್ಯೋತಿಷಾಂ ಗಣಃ ॥ ೨೧ ॥**

**ಸಪ್ತರ್ಷಿಮಂಡಲಂ ನಿತ್ಯಂ ತಸ್ಯಾಧಸ್ತಾತ್ಪ್ರಕೀರ್ತಿತಂ ।**
**ಮರೀಚಿಶ್ಚ ವಸಿಷ್ಠಶ್ಚ ಅಂಗಿರಾಶ್ಚಾತ್ರಿರೇವ ಚ ॥ ೨೨ ॥**

---

೧೯ ಆ ರೀತಿ ನಿರ್ಮಿತನಾದ ಆ ವಿರಾಟ್ಪುರುಷನನ್ನು ಮನುವೆಂದು ಹೇಳು ತ್ತಾರೆ ಆ ಮನುವಿಗೆ ಎಪ್ಪತ್ತೊಂದು ಗುಣಗಳು ಆ ಗುಣಗಳು ಮನ್ವಂತರವೆಂದು ಕರಯಲ್ಪಡುತ್ತವೆ

೨೦ ಆ ಮನುವಿಗೆ ಪ್ರಿಯವ್ರತನೆಂದೂ ಉತ್ತಾನಪಾದನೆಂದೂ ಇಬ್ಬರು ಮಕ್ಕಳಿದ್ದರು ಅವರಿಬ್ಬರೂ ಕ್ಷತ್ರಿಯ ಧರ್ಮಪ್ರವರ್ತಕರಾಗಿ ಹಿಂದಿನ ಮನ್ವಂತರ ದಲ್ಲಿ ಪ್ರಸನ್ನರಾಗಿದ್ದರು

೨೧ ಅವರ ಪೈಕಿ ಉತ್ತಾನಪಾದ ಮಹಾರಾಜನ ಮಗನೇ ಸಾಕ್ಷಾದ್ವಿಷ್ಣು ವಿನ ಅವತಾರವಾದ ಧ್ರುವಚಕ್ರವರ್ತಿಯೆಂದು ಪ್ರಸಿದ್ಧನಾದನು ಅವನೇ ಈಗ ತನ್ನ ತಪೋಬಲದಿಂದ ಆಕಾಶದಲ್ಲಿ ಧ್ರುವಮಂಡಲ (ನಕ್ಷತ್ರ) ರೂಪನಾಗಿ ಪ್ರಕಾಶಿಸು ತ್ತಿರುವನು ಮರುದ್ಗಣಗಳೂ ತಾರಾಗಣಗಳೂ ಸಹ ಈ ಮಂಡಲದ ಸುತ್ತಲೂ ಸುತ್ತುತ್ತಿರುವುವು

೨೨-೨೩ ಆ ಧ್ರುವಮಂಡಲದ ಕೆಳಗೆ ಪ್ರತಿದಿನವೂ ಸಪ್ತರ್ಷಿ ಮಂಡಲವು ಕಂಗೊಳಿಸುತ್ತಿರುವುದು ಆ ಸಪ್ತರ್ಷಿಗಳ ಹೆಸರನ್ನು ಹೇಳುತ್ತೇನೆ, ಕೇಳು ಮರೀಚಿ ವಸಿಷ್ಠ-ಅಂಗೀರಸ-ಅತ್ರಿ-ಪುಲಸ್ತ್ಯ-ಪುಲಹ-ಕ್ರತು ಈ ಏಳು ಋಷಿಗಳ ಗುಂಪಿಗೆ ಸಪ್ತರ್ಷಿ ಮಂಡಲವೆಂದು ಹೆಸರು ಪ್ರಸಿದ್ಧವಾಗಿದೆ ಇವರಲ್ಲಿ ಎರಡನೆಯವರಾದ ವಸಿಷ್ಠ ಮಹರ್ಷಿಗಳ ಹೆಂಡತಿ ಪರಮ ಸಾಧ್ವಿಯೆನಿಸಿದ ಅರುಂಧತೀ ದೇವಿಯು

ಪುಲಸ್ತ್ಯಃ ಪುಲಹಶ್ಚೈವ ಕ್ರತುಸ್ಸಪ್ತರ್ಷಯೋಽಮಲಾಃ ।
ವಸಿಷ್ಠಮಾಶ್ರಿತಾ ಸಾಧ್ವೀ ತೇಷಾಮ್ಮಧ್ಯಾದರುಂಧತೀ ॥ ೨೩ ॥

ತಸ್ಯಾಧಸ್ತಾದ್ಭಚಕ್ರಂ ಚ ತಸ್ಯಾಧಸ್ತಾಚ್ಛನೈಶ್ಚರಃ ।
ತಸ್ಯಾಧಸ್ತಾತ್ತಥಾ ಜೀವಸ್ತಸ್ಯಾಧಸ್ತಾತ್ಕುಜಃ ಸ್ಮೃತಃ ॥ ೨೪ ॥

ತಸ್ಯಾಧಸ್ತಾದ್ದಿನೇಶಶ್ಚ ತಸ್ಯಾಧಸ್ತಾಚ್ಚ ಭಾರ್ಗವಃ ।
ತಸ್ಯಾಧಸ್ತಾದ್ಬುಧಃ ಪ್ರೋಕ್ತಸ್ತಸ್ಯಾಧಸ್ತಾಚ್ಚ ಚಂದ್ರಮಾಃ ॥ ೨೫ ॥

ಪ್ರಾಗ್ದಕ್ಷಿಣಗತಿಶ್ಚೈವ ಜ್ಯೋತಿಷಾಂ ಚಕ್ರಮುಚ್ಯತೇ ।
ಸರ್ವೇ ಗ್ರಹಾಃ ಪ್ರಾಗ್ಗತಯಸ್ತುಲ್ಯವೇಗಾಃ ಪ್ರಕೀರ್ತಿತಾಃ ॥ ೨೬ ॥

ಶ್ರೀಘ್ರತ್ವೇನೋಪಚರ್ಯಂತೆ ಯಥಾ ಸನ್ನಂ ಮಹೀಪತೇ ।
ಯಥಾ ಯಥಾ ವಿಶಿಷ್ಟಾಶ್ಚ ತಥಾ ಮಂದಾಃ ಪ್ರಕೀರ್ತಿತಾಃ ॥ ೨೭ ॥

ವಸಿಷ್ಠ ನಕ್ಷತ್ರದ ಹತ್ತಿರವೇ ದೃಶ್ಯಾದೃಶ್ಯವಾಗಿ ಕಾಣುತ್ತಿರುತ್ತಾಳೆ (ಈ ಸೂಕ್ಷ್ಮ ನಕ್ಷತ್ರವನ್ನು ನವದಂಪತಿಗಳನ್ನು ನೋಡುವ ಸಂಪ್ರದಾಯವಿದೆ ತಿಳುವಳಿಕೆ ಪಾಲದ ಆ ದಂಪತಿಗಳನ್ನು ಕುರಿತು ಆಕಾಶದ ಕಡೆಗೆ ತೋರಿಸುತ್ತಾ ಪುರೋಹಿತರು ಧ್ರುವನನ್ನೂ ಅರುಂಧತಿಯನ್ನೂ ನೋಡೆಂದು ಆಕಾಶದ ಕಡೆ ಬೆಟ್ಟುಬಟ್ಟು ತೋರಿಸುವ ರೂಢಿಯನ್ನು ಎಲ್ಲರೂ ತಿಳಿದೇ ಇರುವರು

೨೪-೨೭ ಈ ಅರುಂಧತೀ ನಕ್ಷತ್ರದ ಕೆಳಗಡೆ ನಕ್ಷತ್ರ ಚಕ್ರವು ಕಾಣುತ್ತದೆ. ನಕ್ಷತ್ರಚಕ್ರದ ಕೆಳಗೆ ಶನೈಶ್ಚರ ಗ್ರಹವಿದೆ ಅದರ ಕೆಳಗೆ ಗುರು ಅದರ ಕೆಳಗೆ ಅಂಗಾರಕ ಅದರ ಕೆಳಗೆ ಸೂರ್ಯ ಅದರ ಕೆಳಗೆ ಶುಕ್ರ ಅದರ ಕೆಳಗಡೆ ಬುಧ ಅದರ ಕೆಳಗೆ ಚಂದ್ರ ಈ ಜ್ಯೋತಿಶ್ಚಕ್ರಗಳು ಪೂರ್ವದಿಂದ ದಕ್ಷಿಣದ ಕಡೆಗೆ ಸುತ್ತುತ್ತಿರುತ್ತವೆ ಸಕಲ ಗ್ರಹಗಳೂ ಪೂರ್ವ ದಿಗ್ಗತಿಯಾಗಿಯೂ ಸಮಾನ ವೇಗದಿಂದಲೂ ಸಂಚರಿಸತಕ್ಕ ಶಕ್ತಿಯುಳ್ಳವುಗಳು ಈ ರೀತಿ ವೇಗವಾಗಿ ಸುತ್ತುವ ಕಾಲದಲ್ಲಿ ಒಂದರ ಸಮೀಪಕ್ಕೆ ಮತ್ತೊಂದು ಬಂದುಬಿಟ್ಟರೆ ಆದಿ ಆ ಆಸನ್ನ ಗ್ರಹಗಳು ಮಂದಗತಿಯಾಗಿ ಬಿಡುತ್ತವೆ

ತೇಷಾಂ ತೇ ಸಂಭವಂ ವಕ್ಷ್ಯೇ ಪ್ರಾಪ್ತೇ ವೈವಸ್ವತೇಂತರೇ ।
ತೇಷಾಂ ಜನನಸಾಹಸ್ರೈರತೀತೈಃ ಕಿಂ ಪ್ರಯೋಜನಂ　　॥ ೨೭ ॥

ಅನಾದಿನಿಧನಃ ಶ್ರೀಮಾನ್ವಿಷ್ಣುರ್ನಾರಾಯಣಃ ಪ್ರಭುಃ ।
ಸ ಏವ ದೇವಕಾರ್ಯಾರ್ಥಂ ಭೂತ್ವಾ ದ್ವಾದಶಧಾ ಪುರಾ　　॥ ೨೮ ॥

ಅದಿತೇರ್ಜನಯಾಮಾಸ ಹ್ಯಾತ್ಮಾನಂ ಕಶ್ಯಪಾತ್ಪ್ರಭುಃ ।
ತೇಷಾಂ ತು ಮಧ್ಯಾತ್ಸವಿತಾ ಆದಿತ್ಯಸ್ಯ ಚ ದೇವತಾ　　॥ ೩೦ ॥

ಪ್ರೋಕ್ತಂ ತೇ ಸವಿತುರ್ಜನ್ಮ ಶೃಣು ಚಂದ್ರಮಸಸ್ತತಃ ।
ದಶಭ್ಯಶ್ಚ ದಿಶಾಭ್ಯಶ್ಚ ತಥಾತ್ರೇಃ ಸುಮಹಾತ್ಮನಃ　　॥ ೩೧ ॥

ವಿಷ್ಣುರೇವಾಭವದ್ರಾಜನ್ಪುತ್ರಃ ಸ ಮೃಗಲಾಂಛನಃ ।
ದಾಕ್ಷಾಯಣೀ ವಸೋರ್ನಾಮ ಪತ್ನೀ ಧರ್ಮಸ್ಯ ವಿಶ್ರುತಾ　　॥ ೩೨ ॥

---

೨೮-೩೦ (ಈಗ ಗ್ರಹಗಳು ಉತ್ಪತ್ತಿಯಾದ ಕ್ರಮವನ್ನು ಹೇಳುತ್ತಾರೆ) ಮೊದಲು ನಿನಗೆ ಗ್ರಹಗಳು ಹುಟ್ಟಿದ ಬಗೆಯನ್ನು ಹೇಳುತ್ತೇನೆ ಕೇಳಯ್ಯಾ, ವಜ್ರರಾಜ ವೈವಸ್ವತ ಮನ್ವಂತರದಲ್ಲಿ ನಾವಿರಾರು ಜನ್ಮಗಳನ್ನು ಕಳೆದುಕೊಂಡು ಹುಟ್ಟಿ ಹುಟ್ಟಿ ತೊಳಲಿದ ಕಥೆಯನ್ನು ಕೇಳಿ ಪ್ರಯೋಜನವಿಲ್ಲ ಮುಖ್ಯವಾದ ಸಂಗತಿಯನ್ನು ಮಾತ್ರವೇ ಕೇಳು ಆದಿ ಮಧ್ಯಾಂತರಹಿತನಾದ ಸಾಕ್ಷಾನ್ಮಹಾವಿಷ್ಣುವು ದೇವತೆಗಳ ಕೆಲಸಕ್ಕೋಸ್ಕರವಾಗಿಯೇ ಹನ್ನೆರಡು ಭಾಗವಾಗಿ ಅವತರಿಸಿದನು ಆ ಮಹಾಮಹಿಮನು ಅದಿತಿದೇವಿಯಲ್ಲಿ ಕಶ್ಯಪರಿಂದ ಮೊದಲು ಉತ್ಪನ್ನನಾಗಿ ಆದಿತ್ಯನೆಂದು ಪ್ರಸಿದ್ಧನಾಗಿ ಜ್ಯೋತಿರ್ಗಣಾಧಿಪತಿಯಾದನು

॥ ಚಂದ್ರನ ಉತ್ಪತ್ತಿಯು ॥

೩೧-೩೨ ನಿನಗೆ ಈಗ ಸೂರ್ಯನ ಜನ್ಮ ಪ್ರಕರಣವನ್ನು ಹೇಳಿದೆನಷ್ಟೆ, ಇನ್ನು ಮುಂದೆ ಚಂದ್ರನು ಹುಟ್ಟಿದ ಬಗೆಯನ್ನು ವಿವರಿಸುತ್ತೇನೆ ಕೇಳು ಮಹಾತ್ಮನಾದ ಅತ್ರಿಮಹರ್ಷಿಯಿಂದ ಹತ್ತು ದಿಕ್ಕುಗಳಿಂದಲೂ ಮಹಾ ವಿಷ್ಣುವು ಜಿಂಕೆಯ ಗುರುತನ್ನು ಧರಿಸಿ ಮಗನಾಗಿ ಹುಟ್ಟಿ ಬಂದುದರಿಂದ ಶಶಾಂಕನೆಂದು ಒಂದು ಹೆಸರಾಯಿತು ಧರ್ಮನೆಂಬ ಹೆಸರಿನ ಒಬ್ಬ ವಸುವಿನ ಹೆಂಡತಿ ದಾಕ್ಷಾಯಣಿ ಎಂಬಾಕೆಯು ವಸುಗಳ ಮಧ್ಯದಲ್ಲಿ ಒಬ್ಬ ಧರ್ಮಜ್ಞನಾದ ಮಗನನ್ನು ಜನ್ಮಕ್ಕೆ ತಂದಳು. ಅವನಿಗೆ

**ಜನಯಾಮಾಸ ಧರ್ಮಜ್ಞಂ ವಸುಮಧ್ಯೇ ನಿಶಾಕರಂ ।**
**ಶ್ರೀಸಹಾಯಸ್ತಥಾ ಜಾತಃ ಸೋಮಶ್ಚಾಮೃತಮಂಥನಾತ್ ॥ ೩೩ ॥**

**ಪ್ರಾಕಾಮ್ಯೇನ ಶಶಾಂಕಸ್ಯ ಜನ್ಮ ತೇಭಿಹಿತಂ ತ್ರಿಧಾ ।**
**ಅತಃ ಪರಂ ಪ್ರವಕ್ಷ್ಯಾಮಿ ತವ ಭೌಮಸ್ಯ ಸಂಭವಂ ॥ ೩೪ ॥**

**ಆಸೀದ್ದೈತ್ಯೋ ಹಿರಣ್ಯಾಕ್ಷೋ ಮಹಾಬಲ ಪರಾಕ್ರಮಃ ।**
**ಸ ವೈ ಕನ್ಯಾಮಜನಯದ್ವಿಕೇಶೀಂ ನಾಮ ನಾಮತಃ ॥ ೩೫ ॥**

**ಸಾ ಲೇಭೇ ತಪಸಾ ಕೇಶಾಂಸ್ತಾಂ ವೈ ಸ್ಥಾಣುರಕಾಮಯತ್ ।**
**ತಸ್ಯಾಂ ಮೈಥುನಸಕ್ತಸ್ಯ ದೇವೇಶಸ್ಯ ಪಿನಾಕಿನಃ ॥ ೩೬ ॥**

**ವಹ್ನಿಸಂಭವಭೀತೇನ ಕೃತೋ ವಿಘ್ನೋ ಹ್ಯಥಾಗ್ನಿನಾ ।**
**ಪ್ರವಿಷ್ಟಂ ಮೈಥುನಾಗಾರಂ ವಹ್ನಿಂ ದೃಷ್ಟ್ವತಸ್ತದಾ ॥ ೩೭ ॥**

---

ನಿಶಾಕರನೆಂದು ಹೆಸರಾಯಿತು ಅಮೃತಮಥನ ಕಾಲದಲ್ಲಿ ಮಹಾಲಕ್ಷ್ಮಿ ಹುಟ್ಟಿದೊಡನೆ ಸೋಮನೆಂಬ ಮಹಾತ್ಮನು ಹುಟ್ಟಿದನು ಅಮೃತಾಂಶೂದ್ಭವನಾದ್ದರಿಂದಲೇ ಚಂದ್ರನಿಗೆ ಅಮೃತ ಕಿರಣನೆಂಬ ಹಸರೂ ಸಹ ಬಂದಿದೆ ಈ ರೀತಿ ಚಂದ್ರನ ಜನ್ಮವು ಮೂರು ವಿಧವಾಗಿದೆಯೆಂದು ತಿಳದುಕೋ (ಇವರೆಲ್ಲರೂ ಬೇರೆ ಬೇರ ಅಲ್ಲ ಒಬ್ಬನೆಂದೇ ತಿಳಿಯಬೇಕು )

## ಅಂಗಾರಕ (ಮಂಗಳ-ಕುಜ) ಉತ್ಪತ್ತಿ

೩೪-೪೨ ಇನ್ನು ಅಂಗಾರಕ ಗ್ರಹದ ಉತ್ಪತ್ತಿ ಚರಿತ್ರೆಯನ್ನು ಹೇಳುತ್ತೇನೆ, ಕೇಳು ಪೂರ್ವದಲ್ಲಿ ಮಹಾಬಲ ಪರಾಕ್ರಮಶಾಲಿಯಾದ ಹಿರಣ್ಯಾಕ್ಷನೆಂಬ ರಾಕ್ಷಸ ನಿದ್ದನು ಆತನಿಗೆ ವಿಕೇಶಿಯೆಂಬ ಮಗಳೊಬ್ಬಳಿದ್ದಳು ಅವಳು ಮಹಾ ತಪಸ್ಸಿನಿಂದ ದೇವರನ್ನು ಮೆಚ್ಚಿಸಿ ಕೇಶಾನಾಮಕ ವರವ ಸುಂದರಿಯನ್ನು ಪಡೆದಳು ಆ ಚಲುವೆಯ ಚಲುವಿಕೆಗೆ ಪರಮೇಶ್ವರನೇ ಮೋಹಿತನಾಗಿ ಹೋದನು ಬಳಿಕ ಆ ಸ್ಥಾಣುವು ಅವಳೊಡನೆ ಸಂಭೋಗ ಮಾಡಬೇಕೆಂದು ಪ್ರಯತ್ನಮಾಡಿದನು ಯಜ್ಞೇಶ್ವರನಿಗೆ ಈ ವೃತ್ತಾಂತ ತಿಳಿದು ಇವರಿಬ್ಬರ ಸಂಭೋಗದಿಂದ ಇನ್ನೊಬ್ಬ ಅಗ್ನಿಪುರುಷನು ಉತ್ಪನ್ನನಾದರೆ ತನ್ನ ಪ್ರಾಶಸ್ತ್ಯವು ಕಮ್ಮಿಯಾಗಿ ಹೋಗುವುದೆಂಬ ಸಂದೇಹದಿಂದ ಅವರ ಸಂಭೋಗಕ್ಕೆ ವಿಘ್ನವನ್ನುಂಟುಮಾಡಬೇಕೆಂಬ ಆಲೋಚನೆಯಿಂದ

**ಕ್ರೋಧಾಯಾಸೋದ್ಭವಃ ಸ್ವೇದೋ ಹರಸ್ಯ ಸಮುಪದ್ಯತ ।**
**ಅನನಸ್ವೇದಜೋ ಬಿಂದುರ್ದೇವಸ್ಯಾಮಿತ್ರಘಾತಿನಃ ॥ ೩೮ ॥**

**ತಸ್ಯಾಃ ಪಪಾತ ವದನೇ ಸಾ ಪಪೌ ತತ್ಪ್ರಯತ್ನತಃ ।**
**ಅಂತವತ್ನ್ಯಥ ತೇನಾಸೀನ್ನ ಶಶಾಕ ಚ ತೇಜಸಾ ॥ ೩೯ ॥**

**ಮೋಹಿತಾ ತಸ್ಯ ಬಾಲಸ್ಯ ಗರ್ಭಂ ಧಾರಯಿತುಂ ತದಾ ।**
**ಉತ್ಸಸರ್ಜಾಥ ತಂ ಗರ್ಭಂ ದೀಪ್ತಾನಲಸಮದ್ಯುತಿಂ ॥ ೪೦ ॥**

**ತಂ ದಧಾರ ಮಹೀಪಾಲ ಧರಾ ದೇವೀಸ್ವರೂಪಿಣೀ ।**
**ಸಂಸ್ಕಾರಮಕರೋಚ್ಚಾಸ್ಯ ಸ್ವಯಮೇವ ಚ ಕಶ್ಯಪಃ ॥ ೪೧ ॥**

**ಅಂಗಾರನಿಕಟಸ್ಥತ್ವಾತ್ನಾಮ್ನಾ ಚಾಂಗಾರಕಃ ಕೃತಃ ।**
**ಉಕ್ತಂ ತೇ ಜನ್ಮ ಭೌಮಸ್ಯ ಬುಧಸ್ಯಾತಃ ಪರಂ ಶೃಣು ॥ ೪೨ ॥**

---

ಕೂಡಿದವನಾಗಿ ಅವರಿಬ್ಬರೂ ಸಂಭೋಗಮಾಡುವ ಸ್ಥಳಕ್ಕೆ ಮುಂಚಿತವಾಗಿ ಹೋಗಿ ಅಲ್ಲಿ ಮರೆಯಾಗಿ ಕುಳಿತುಕೊಂಡನು ಬೆಂಕಿಯು ಕುಳಿತುಕೊಂಡರೆ ಅದರ ಧಗೆ ಗೊತ್ತಾಗುವುದಿಲ್ಲವೇ ? ಸಂಭೋಗ ಮಾಡಲಾರಂಭ ಮಾಡಿದೊಡನೆಯೇ ಈಶ್ವರನ ಕಣ್ಣಿಗೆ ಅಗ್ನಿಯು ಗೋಚರನಾದನು ಬೆಂಕಿಯನ್ನು ಕಂಡೊಡನೆಯೇ ಈಶ್ವರನಿಗೆ ಮಹಾ ಕೋಪ ಬಂದಿತು ಆ ಕೋಪದಿಂದ ವಿಪರೀತ ಆಯಾಸವುಂಟಾಗಿ ಮುಖದಲ್ಲಿ ವಿಪರೀತ ಬೆವರುಂಟಾಯಿತು ಆ ರೀತಿ ಬೆವರು ಹುಟ್ಟಿ ಕೆಳಕ್ಕೆ ಹರಿಯಲಾರಂಭಿಸಿದಾಗ ಆ ಬೆವರೆಲ್ಲವೂ ಕೆಳಗ ಮಲಗಿದ್ದ ಆ ಕೇಶಾಸುಂದರಿಯ ಬಾಯಿಯೊಳಕ್ಕೆ ಬಿದ್ದಿತು ಆ ಬೆವರನ್ನು ಅವಳು ನುಂಗಿಬಿಟ್ಟಳು ಆ ಕೂಡಲೇ ಅವಳು ಗರ್ಭವತಿಯಾಗಿ ಮಹಾ ತೇಜಶ್ಶಾಲಿಯಾದ ಬಾಲಕನನ್ನು ಗರ್ಭದಲ್ಲಿ ಧರಿಸಿದಳು ಆದರೆ ಆತೇಜಃ ಪಿಂಡವನ್ನು ಅವಳು ಗರ್ಭದಲ್ಲಿ ಧರಿಸಲು ಶಕ್ತಳಾಗಲಿಲ್ಲ ಆಗ ಆ ಗರ್ಭವನ್ನು ಭೂಮಿಯಲ್ಲಿ ವಿಸರ್ಜಿಸಿಬಿಟ್ಟಳು ಆ ಗರ್ಭವು ಬೆಂಕಿಯ ಉಂಡೆಯಂತೆ ಧಗಧಗನೆ ಹೊಳೆಯುತ್ತಿತ್ತು ಆ ಉರಿಯುವ ಕೊಳ್ಳಿಯಂತಿದ್ದ ಆ ಗರ್ಭವನ್ನು ಧರಾ (ಭೂಮಿ) ದೇವಿಯು ತನ್ನ ಗರ್ಭದಲ್ಲಿ ಮುಚ್ಚಿ ಕಾಪಾಡಿದಳು ಅದರಿಂದ ಉತ್ಪತ್ತಿಯಾದ ಗಂಡುಮಗುವಿಗೆ ಕಶ್ಯಪರು ಜಾತಕರ್ಮಾದಿಸಕಲಸಂಸ್ಕಾರಗಳನ್ನೂ ಮಾಡಿದರು ಆ ಗರ್ಭವು ಹುಟ್ಟಿದಾಗಲೂ ಬೆಳೆವಾಗಲೂ ಅಂಗಾರ (ಕೆಂಡ) ದಂತೆಯೇ ಹೊಳೆ ಹೊಳೆಯುತ್ತಿದ್ದುದರಿಂದ ಅದಕ್ಕೆ ಅಂಗಾರಕನೆಂಬ ಹೆಸರೇ ಪ್ರಸಿದ್ಧಿಯಾಯಿತು ಇದೇ ಅಂಗಾರಕನ ಕಥೆ ಇನ್ನು ಮುಂದೆ ಬುಧನು ಹುಟ್ಟಿದ ಬಗೆಯನ್ನು ಹೇಳುವೆನು ಕೇಳು

**ಕಶ್ಯಪಸ್ಯ ಧನುರ್ನಾಮ ಪತ್ನೀ ತ್ರೈಲೋಕ್ಯವಿಶ್ರುತಾ ।**
**ಜನಯಾಮಾಸ ತನಯಂ ರಜೋನಾಮೇತಿ ವಿಶ್ರುತಂ ॥ ೪೩ ॥**

**ಸೋಽಕಾಮಯತ ವೈ ಕನ್ಯಾಂ ವರುಣಸ್ಯ ಮಹಾತ್ಮನಃ ।**
**ವಾರುಣೀಮಿತಿ ವಿಖ್ಯಾತಾಂ ತ್ರೈಲೋಕ್ಯಸ್ಯೈಕಸುಂದರೀಂ ॥ ೪೪ ॥**

**ತತಸ್ತಪಶ್ಚ ತೇಜಶ್ಚ ಬಲಂ ವೀರ್ಯಂ ತಥೈವ ಚ ।**
**ಶುಲ್ಕಾರ್ಥಂ ಸ ದದೌ ತಸ್ಯೈ ತಾನಾದಾಯ ವರಾಂಗನಾ ॥ ೪೫ ॥**

**ಅಪ್ಸು ಲೀನಾ ತದಾ ಜಾತಾ ತಪಸೋಗ್ರೇಣ ದಾನವಃ ।**
**ತಾಮಪ್ಸು ಲೀನಾಂ ವಿಜ್ಞಾಯ ಪ್ರವಿವೇಶೋದಕಂ ತದಾ ॥ ೪೬ ॥**

**ತಸ್ಯಾಃ ಸ್ಪರ್ಶೇ ಪಲಂಭೇನ ದ್ರವೀಭೂತಃ ಸ ದಾನವಃ ।**
**ದ್ರವತಾಂ ಸಮನುಪ್ರಾಪ್ತಾಂ ತಾಂ ವಿಜ್ಞಾಯ ನಿಶಾಕರಃ ॥ ೪೭ ॥**

**ಮಮಂಥ ಸಹಸಾ ತೋಯಂ ಪುತ್ರಾರ್ಥೀ ಮನುಜೇಶ್ವರ ।**
**ಮಥ್ಯಮಾನೇ ಜಲೇ ತೇನ ತದಾ ಸೋಮೇನ ಪಾರ್ಥಿವ । ॥ ೪೮ ॥**

---

### ಬುಧನ ಚರಿತ್ರೆ

೪೩-೫೧ ಕಶ್ಯಪಋಷಿಗಳಿಗೆ ತ್ರಿಲೋಕ ಪ್ರಸಿದ್ಧಳಾದ ದನುವೆಂಬ ಹೆಂಡತಿ ಇದ್ದಳು ಆಕೆಗೆ ರಜನೆಂಬ ಮಗನಿದ್ದನು ಆ ರಜನು ಪ್ರಾಯಸಮರ್ಥನಾದಾಗ ವರುಣನ ಮಗಳಾದ ವಾರುಣೀ ಎಂಬ ಕನ್ಯೆಯನ್ನು ನೋಡಿ ಅವಳ ಅಪರಿಮಿತ ಸೌಂದರ್ಯಕ್ಕೆ ಮೋಹಿತನಾಗಿ ಆಕೆಯನ್ನು ಮದುವೆ ಮಾಡಿಕೊಳ್ಳಬೇಕೆಂದು ಆಶೆಪಟ್ಟನು ಆಗ ವಾರುಣಿಯು ರಜನ ತಪಸ್ಸು-ತೇಜಸ್ಸು ಬಲ ವೀರ್ಯಗಳನ್ನು ಶುಲ್ಕವಾಗಿ ನನಗೆ ಕೊಟ್ಟರೆ ಅವನನ್ನು ಮದುವೆ ಮಾಡಿಕೊಳ್ಳುವುದಾಗಿ ತಿಳಿಸಿದಳು ಅದರಂತೆ ರಜನು ವಾರುಣಿಗೆ ಎಲ್ಲವನ್ನೂ ಕೊಟ್ಟುಬಿಟ್ಟನು ಆ ಕೂಡಲೇ ಆ ವಾರುಣಿಯು ಅವುಗಳೆಲ್ಲವನ್ನೂ ತೆಗೆದುಕೊಂಡು ತಂದೆಯ ಮನೆಗೆ (ನೀರಿನಲ್ಲಿ ಅಡಗಿ) ಹೊರಟುಹೋದಳು. ಈ ಸಂಗತಿಯು ದನುವಿನ ಮಗನಾದ ಈ ದಾನವನಿಗೆ ತಿಳಿಯದೆ ಉಗ್ರವಾದ ತಪಸ್ಸು ಮಾಡಲಾಗಿ ಆಕೆಯಿರುವ ಜಾಗವು ಗೊತ್ತಾಯಿತು. ಆಗ ದಾನವನು ನೀರಿನಲ್ಲಿ ಅಡಗಿಕೊಂಡಿದ್ದ ಆಕೆಯನ್ನು ಹೊಂದಬೇಕೆಂದು ಉದಕದೊಳಕ್ಕೆ ಪ್ರವೇಶಿಸಿದನು ಮತ್ತು ಆಕೆಯನ್ನು ಸ್ಪರ್ಶಮಾಡಿದನು ಆ ಕೂಡಲೇ ಆ ದಾನವನು ಕರಗಿ ನೀರಾಗಿ

**ವಿವೇಶ ತೇಜಸಿ ಪಯೋ ವಿಷ್ಣುಃದೇವನಮಸ್ಕೃತಃ ।**
**ತತಃ ಕುಮಾರಸ್ಸಂಜಾತೋ ಬುಧಸ್ತು ಗ್ರಹಬೋಧನಃ ॥ ೪೯ ॥**

**ತದ್ದಧಾರ ತದಾ ತಾರಾ ಗುರುಪತ್ನೀ ಯಶಸ್ವಿನೀ ।**
**ಯದಾ ಧಾರಯಿತುಂ ಶಕ್ತಾ ನ ಬಾಲಂ ತೇಜಸಾನ್ವಿತಂ ॥ ೫೦ ॥**

**ದಾಕ್ಷಾಯಣೀ ಚೋತ್ಸಸರ್ಜ ಚಂದ್ರಪತ್ನೀ ಸುತಂ ತದಾ ।**
**ಏವಂ ಜನ್ಮ ಬುಧಸ್ಯೋಕ್ತಂ ಜೀವಸ್ಯಾತಃ ಪರಂ ಶೃಣು ॥ ೫೧ ॥**

**ಸುರೂಪಾ ನಾಮ ದುಹಿತಾ ಮಾರೀಚೇಸ್ತು ಪ್ರಜಾಪತೇಃ ।**
**ದತ್ತಾ ತ್ವಂಗಿರಸೇ ಸಾ ತು ರೂಪಯೌವನಶಾಲಿನೀ ॥ ೫೨ ॥**

**ತಸ್ಯಾಂ ಸ ಜನಯಾಮಾಸ ದೇವಾಚಾರ್ಯಂ ಬೃಹಸ್ಪತಿಃ ।**
**ಬೃಹದ್ವಾಚಂ ಮಹಾಬುದ್ಧಿಂ ವೇದವೇದಾಂಗಪಾರಗಂ ॥ ೫೩ ॥**

---

ಗೋದನು　ಈ ರೀತಿ ವಾರುಣಿಯು ತಾನೂ ಜಲಮಯಳಾಗಿ ದಾನವನನ್ನು ಜಲಮಯನನ್ನಾಗಿ ಮಾಡಿದುದನ್ನು ತಿಳಿದು ಚಂದ್ರನು ಪುತ್ರಾರ್ಥಿಯಾಗಿ ಆ ಜಲವನ್ನು ಚೆನ್ನಾಗಿ ಕಡೆದನು. ಈ ರೀತಿ ಜಲಮಥನವನ್ನು ಚಂದ್ರನು ಮಾಡುತ್ತಿರಲಾಗಿ ಸಾಕ್ಷಾನ್ಮಹಾ ವಿಷ್ಣುವೇ ಆ ಜಲದ ತೇಜಸ್ಸಿನಲ್ಲಿ ಪ್ರವೇಶ ಮಾಡಿದನು　ಆಗ ಒಂದು ಗಂಡು ಮಗುವು ಆ ತೇಜಸ್ಸಿನಿಂದ ಉತ್ಪನ್ನವಾಯಿತು　ಅದೇ ಬುಧಗ್ರಹವು　ಆಗ ಆ ಮಗುವನ್ನು ಗುರುಪತ್ನಿಯಾದ ತಾರೆಯು ಕಾಪಾಡಿದಳು　ಚಂದ್ರಪತ್ನಿಯಾದ ದಾಕ್ಷಾಯಣಿಯು ಮಹಾ ತೇಜಸ್ವಿಯಾದ ಆ ಬಾಲಕನನ್ನು ಕಾಪಾಡಲು ಅಸಮರ್ಥಳಾದ್ದರಿಂದ ಗುರುಪತ್ನಿಯು ತಾನು ಕಾಪಾಡಿದಳು　ಈ ರೀತಿಯಾಗಿ ಬುಧನು ಉತ್ಪತ್ತಿಯಾದನೆಂದು ತಿಳಿದುಕೋ　ಇನ್ನು ಗುರುವಿನ ಚರಿತ್ರೆಯನ್ನು ಹೇಳುವೆನು ಕೇಳು

ಬೃಹಸ್ಪತಿಗ್ರಹದ ಚರಿತ್ರೆ

೫೨-೫೩　ಮರೀಚಿ ಬ್ರಹ್ಮನಿಗೆ ಸುರೂಪಾ ಎಂಬ ಮಗಳಿದ್ದಳು　ಆಕೆಯನ್ನು ಆಂಗೀರಸ ಋಷಿಗಳು ಮದುವೆಯಾದರು　ರೂಪ ಯೌವನ ಶಾಲಿನಿಯಾದ ಆ ಸುರೂಪಾಸಾಧ್ವಿಯ ಹೊಟ್ಟೆಯಲ್ಲಿ ಆಂಗಿರಸರಿಂದ ಹುಟ್ಟಿದ ಮಗನೇ ಬೃಹಸ್ಪತಿಯು ಈತನು ತನ್ನ ವಿದ್ಯಾಪ್ರತಿಭೆಯಿಂದ ದೇವತೆಗಳಿಗೂ ಗುರುವಾದ ಸಂಗತಿ ಲೋಕಪ್ರಸಿದ್ಧವಾಗಿಯೇ ಇದೆ　ಈ ಬೃಹದ್ವಾಕ್ಕುಳ್ಳ ಮಹಾ ಬುದ್ಧಿಶಾಲಿಯಾದ ವೇದವೇದಾಂಗ ಪಾರಂಗತನಾದ ಗುರುವಿನ ಸಂಗತಿಯೇ ಇದು　ಇನ್ನು ಶುಕ್ರನ ಕಥೆಯನ್ನು ಕೇಳು

**ಉಕ್ತಂ ತೇ ಜನ್ಮ ಜೀವಸ್ಯ ಶುಕ್ರಸ್ಯಾತಃ ಪರಂ ಶೃಣು ।**
**ಉಷಾ ನಾಮ ತಥಾ ಕನ್ಯಾ ಹಿರಣ್ಯಕಶಿಪೋಸ್ಸುತಾ ॥ ೫೪ ॥**

**ಭೃಗುಪತ್ನೀ ವಿಶಾಲಾಕ್ಷೀ ಸರ್ವಲೋಕೈಕಸುಂದರೀ ।**
**ಜನಯಾಮಾಸ ಧರ್ಮಜ್ಞಂ ಖ್ಯಾತವೌಶನಸಂ ಪ್ರಭುಂ ॥ ೫೫ ॥**

**ಸ ಜಹಾರಾಥ ಯೋಗಾತ್ಮಾ ಧನಂ ವೈಶ್ರವಣಸ್ಯ ತು ।**
**ಹೃತೇ ವಿತ್ತೇ ತು ಯಕ್ಷೇಶೋ ಜಗಾಮ ಶರಣಂ ಹರಂ ॥ ೫೬ ॥**

**ತತಃ ಕ್ರುದ್ಧೋ ಮಹಾದೇವೋ ಭಾರ್ಗವಂ ಹಂತುಮುದ್ಯತಃ ।**
**ಭಾರ್ಗವೋಽಪಿ ಚ ಯೋಗೇನ ಪ್ರವಿವೇಶ ಹರಂ ತದಾ ॥ ೫೭ ॥**

**ಹರೋದರಸ್ಥಸ್ತುಷ್ಟಾವ ದೇವೀಂ ಪರ್ವತನಂದಿನೀಂ ।**
**ತಯೋಕ್ತಸ್ತಂ ತು ತತ್ಯಾಜ ತದಾ ಶಿಶ್ನೇನ ಶಂಕರಃ ॥ ೫೮ ॥**

---

ಶುಕ್ರಗ್ರಹದ ವೃತ್ತಾಂತ

೫೪-೫೯ ಹಿರಣ್ಯಕಶ್ಯಪನಿಗೆ (ಕಶಿಪು) ಉಷಾ ಎಂಬ ಮಗಳಿದ್ದಳು ಸರ್ವಲೋಕೈಕ ಸುಂದರಿಯಾದ ಆವಿಶಾಲಾಕ್ಷಿಯು ಭೃಗು ಮಹರ್ಷಿಗಳನ್ನು ಲಗ್ನವಾಗಿ ಅವರಿಂದ ಮಹಾ ಪ್ರಖ್ಯಾತನಾದ ಶುಕ್ರನನ್ನು ಮಗನನ್ನಾಗಿ ಪಡೆದಳು ಆ ಮಹಾ ಯೋಗಿಯಾದ ಶುಕ್ರನು ಕುಬೇರನ ಭಂಡಾರಕ್ಕೆ ನುಗ್ಗಿ ಅವನಲ್ಲಿದ್ದ 'ಹಣವನ್ನೆಲ್ಲಾ ಅಪಹರಿಸಿಬಿಟ್ಟನು ತನ್ನ ಹಣವನ್ನೆಲ್ಲವನ್ನೂ ಕಳದುಕೊಂಡ ಕುಬೇರನು ಚಿಂತಾ ಕ್ರಾಂತನಾಗಿ ಈಶ್ವರನನ್ನು ಮರೆಹೊಕ್ಕನು ಶರಣಾಗತವತ್ಸಲನಾದ ಮಹಾದೇವನು ಶುಕ್ರನು ಮಾಡಿದ ಈ ಕೆಲಸಕ್ಕೆ ಬಹಳವಾಗಿ ಕೋಪಿಸಿಕೊಂಡು ಶುಕ್ರನನ್ನು ಸಂಹರಿಸಿಯೇ ಬಿಡಬೇಕೆಂದು ನಿರ್ಧರಿಸಿದನು ಆಗ ಈ ವೃತ್ತಾಂತವನ್ನು ತಿಳಿದ ಯೋಗಾಚಾರ್ಯನಾದ ಶುಕ್ರಾಚಾರ್ಯನು ತನ್ನ ಯೋಗಬಲದಿಂದ ಈಶ್ವರನ ಹೊಟ್ಟೆಯಲ್ಲಿ ಹೋಗಿ ಹೊಕ್ಕನು. ಆ ರೀತಿ ಹೊಟ್ಟಯಲ್ಲೇ ಕುಳಿತು ಜಗನ್ಮಾತೆಯಾದ ಪಾರ್ವತಿಯನ್ನು ತನ್ನನ್ನು ಕಾಪಾಡುವಂತೆ ಪ್ರಾರ್ಥಿಸಿಕೊಂಡನು ಆ ಲೋಕಮಾತೆಯು ಅವನ ಮೊರೆಯನ್ನು ಕೇಳಿ ಅವನನ್ನು ಬದುಕಿಸಿಕೊಡಬೇಕೆಂದು ಪರಮೇಶ್ವರನನ್ನು ಪ್ರಾರ್ಥಿಸಿದಳು. ಆಗ ಹೆಂಡತಿಯ ಮಾತನ್ನು ಮನ್ನಿಸಿ ಪರಮೇಶ್ವರನು ಆ ಶುಕ್ರನನ್ನು ತನ್ನ ಶಿಶ್ನ (ಪ್ರಧಾನೇಂದ್ರಿಯ) ದಿಂದ ಈಚೆಗೆ ಬಿಟ್ಟನು ಶಿಶ್ನದಿಂದ ಹೊರಕ್ಕೆ ಬರುವ

**ಶುಕ್ರಸ್ತು ನಾಮ ಚೈವಾಸ್ಯ ತದಾ ಚಕ್ರೇ ಜಗದ್ಗುರುಃ ।**
**ಧನೇಶತ್ವಂ ದದೌ ಚಾಸ್ಯ ಧನೇಶೇನ ಸಹಾನಘ ॥ ೫೯ ॥**

**ಮೈತ್ರ್ಯಂ ಚಾಸ್ಯ ಧನೇಶೇನ ತದಾ ಚಕ್ರೇ ತ್ರಿಲೋಚನಃ ।**
**ಶನೈಶ್ಚರಸ್ಯ ವಕ್ಷ್ಯಾಮಿ ಜನ್ಮಾತಸ್ತೇ ನರೇಶ್ವರ ॥ ೬೦**

**ಬ್ರಹ್ಮಣೋ ಮಾನಸಃ ಪುತ್ರಸ್ತ್ವಷ್ಟಾನಾಮ ಪ್ರಜಾಪತಿಃ ।**
**ಸಂಜ್ಞಾಂ ತು ಜನಯಾಮಾಸ ಕನ್ಯಾಂ ತ್ರೈಲೋಕ್ಯಸುಂದರೀಂ ॥ ೬೧ ॥**

**ತಾಂ ದದೌ ಸವಿತುಃ ಪತ್ನೀಂ ತಸ್ಯಾಂ ಸೂರ್ಯೋ ಮಹಾತಪಾಃ ।**
**ಜನಯಾಮಾಸ ಧರ್ಮಜ್ಞಂ ಮನುಂ ವೈವಸ್ವತಂ ಪ್ರಭುಂ ॥ ೬೨ ॥**

**ಯಮಂ ಚ ಯಮುನಾಂ ಚೈವ ತ್ರೈಲೋಕ್ಯೈಕಪಾಲಿನೀಂ ।**
**ತೇಷು ಜಾತೇಷು ಪುತ್ರೇಷು ಸಂಜ್ಞಾ ಸಾ ಚಾರುಲೋಚನಾ ॥ ೬೩ ॥**

---

ವೀರ್ಯಕ್ಕೆ ಅಂದಿನಿಂದ ಶುಕ್ರವೆಂದು ಹೆಸರಾಯಿತು (ಶುಕ್ರಂ-ತೇಜೋ-ರೇತಸೀಚ ಬೀಜ-ವೀರ್ಯ-ಇಂದ್ರಿಯ ಇವೆಲ್ಲಾ ಒಂದೇ ಪದಗಳು) ಆಗ ಪರಮೇಶ್ವರನು ಶುಕ್ರನ ಮೇಲಿನ ಪ್ರೇಮದಿಂದ ಧನೇಶ (ಕುಬೇರ) ನೊಡನೆ ಶುಕ್ರನಿಗೂ ಧನೇಶತ್ವದಲ್ಲಿ ಭಾಗವನ್ನು ಕೊಟ್ಟನು ಮತ್ತು ಕುಬೇರನಿಗೂ ಶುಕ್ರನಿಗೂ ಸ್ನೇಹ ಮಾಡಿಸಿದನು

## ಶನೈಶ್ಚರನ ಚರಿತ್ರೆ

೬೦-೬೮　ಇನ್ನು ಮುಂದೆ ಶನೈಶ್ಚರನ ಚರಿತ್ರೆಯನ್ನು ಹೇಳುತ್ತೇನೆ ಕೇಳಯ್ಯಾ ರಾಜ ! ಬ್ರಹ್ಮನಿಗೆ ತ್ವಷ್ಟ್ರುಬ್ರಹ್ಮನೆಂಬ ಮಾನಸ ಪುತ್ರನೊಬ್ಬನಿದ್ದನು ಅವನಿಗೆ ತ್ರಿಲೋಕ ಸುಂದರಿಯಾದ ಸಂಜ್ಞೆಯೆಂಬ ಮಗಳಿದ್ದಳು ಆ ಮಗಳನ್ನು ತ್ವಷ್ಟ್ರುವು ಸೂರ್ಯನಿಗೆ ಮದುವೆ ಮಾಡಿಕೊಟ್ಟನು ತೇಜಶ್ಶಾಲಿಯಾದ ಸೂರ್ಯನು ಆಕೆಯ ಹೊಟ್ಟೆಯಲ್ಲಿ ವೈವಸ್ವತಮನುವನ್ನೂ ಯಮನನ್ನೂ ತ್ರಿಲೋಕಪಾವನೆಯೆನಿಸಿದ ಯಮುನಾ ದೇವಿಯನ್ನೂ ಪಡೆದನು ಈ ರೀತಿ ಎರಡು ಗಂಡು ಮಕ್ಕಳನ್ನೂ ಒಬ್ಬಳು ಹೆಣ್ಣು ಮಗಳನ್ನೂ ಪಡೆದ ಬಳಿಕ ತನ್ನ ಗಂಡನ ಮಹಾ ತೇಜಸ್ಸನ್ನು ಸಹಿಸಿಕೊಂಡು ಅವನ ಜತೆಯಲ್ಲಿರಲು ಸಹಿಸಲಾರದ ಸಂಜ್ಞಾದೇವಿಯು ತನ್ನ ಛಾಯೆ (ನೆರಳು) ಯನ್ನು ಕರೆದು ಈ ಮಾತನ್ನು ಹೇಳಿದಳು ಎಲೈ ಛಾಯೆಯೇ ! ನೀನು ನನ್ನಂತೆಯೇ ರೂಪವನ್ನು ಧರಿಸಿ ಕೊಂಚವೂ ವಿಕಾರವನ್ನು ತೋರ್ಪಡಿಸಿಕೊಳ್ಳದೆ ಸೂರ್ಯನ

ಭರ್ತುಸ್ತೇಜೋಽತಿದುರ್ಧರ್ಷಮಸಹಂತೀ ವರಾಂಗನಾ ।
ಸಾ ತು ಚ್ಛಾಯಾಂ ಸಮಾಹೂಯ ಇದಂ ವಚನಮಬ್ರವೀತ್ ॥ ೬೪ ॥

ಮದ್ರೂಪೇಣ ತ್ವಯಾ ಭದ್ರೇ ವರ್ತವ್ಯಮವಿಕಾರಯಾ ।
ಪಾಲನೀಯೌ ಚ ಮೇ ಪುತ್ರೌ ತ್ವಯೇಮೌ ದುಹಿತಾ ಚ ಮೇ ॥ ೬೫ ॥

ಏವಮುಕ್ತ್ವಾ ಯಯೌ ದೇವೀ ಪಿತರಂ ವರವರ್ಣಿನೀ ।
ಪಿತ್ರಾ ನಿರಸ್ತಾ ಭರ್ತಾರಂ ಗಚ್ಛಗಚ್ಛೇತಿ ಭಾಷಿತಾ ॥ ೬೬ ॥

ಉತ್ತರಾಂಸ್ತು ಕುರೂಗತ್ವಾವಡವಾರೂಪಧಾರಿಣೀ ।
ಚಚಾರ ಶಾದ್ವಲಾಂಚ್ಛುಭ್ರಾನ್ಸ್ವನೇಷೂಪವನೇಷು ಚ ॥ ೬೭ ॥

ಛಾಯಾಯಾಂ ಚ ತಥಾರ್ಕೋಽಪಿ ಸಂಜ್ಞೇಯಮಿತಿ ಚಿಂತಯನ್ ।
ದ್ವೌ ಪುತ್ರೌ ಜನಯಾಮಾಸ ಸಾವರ್ಣಂ ತು ಶನೈಶ್ಚರಂ ॥ ೬೮ ॥

॥ ವಜ್ರ ಉವಾಚ ॥

ಕಥಂ ತಾಮಾಪ್ತವಾನ್ಸಂಜ್ಞಾಂ ಭೂಯ ಏವ ದಿವಾಕರಃ ।
ಏತನ್ಮೇ ಸಂಶಯಂ ಬ್ರೂಹಿ ಭೃಗುವಂಶವಿವರ್ಧನ ॥ ೬೯ ॥

---

ಜತೆಯಲ್ಲಿ ಸಂಸಾರ ಮಾಡಿಕೊಂಡು ನನ್ನಿಬ್ಬರು ಗಂಡು ಮಕ್ಕಳನ್ನೂ ಒಬ್ಬ ಹೆಣ್ಣು ಮಗಳನ್ನೂ ಕಾಪಾಡಿಕೊಂಡಿರು ನಾನು ನನ್ನ ತಂದೆಯ ಮನೆಗೆ ಹೋಗುತ್ತೇನೆಂದು ಹೇಳಿ ತ್ವಷ್ಟೃಬ್ರಹ್ಮನ ಮನೆಗೆ ಹೊರಟುಹೋದಳು ಮಗಳು ಏಕಾಏಕಿ ಬಂದು ದನ್ನು ನೋಡಿ ತಂದಯು ಅವಳನ್ನು ತನ್ನ ಮನೆಗೆ ಬಂದುದಕ್ಕಾಗಿ ಆಕ್ಷೇಪಿಸಿ ಹೊರಟು ಹೋಗೆಂದು ಅಟ್ಟಿಬಿಟ್ಟನು ಆಗ ಅವಳು ತಂದೆಯಿಂದ ತಿರಸ್ಕೃತಳಾಗಿ ಗಂಡನ ಮನೆಗೆ ಪುನಃ ಹೋಗುವುದಕ್ಕೆ ಮುಖವಿಲ್ಲದ ಉತ್ತರ ಕುರುದೇಶಕ್ಕೆ ಹೋಗಿ ಅಲ್ಲಿ ಹಣ್ಣುಕುದುರೆಯ ರೂಪವನ್ನು ಧರಿಸಿ ಹುಲ್ಲುಗಾವಲುಗಳನ್ನು ಹುಡುಕಿ ಹುಡುಕಿ ಹೊಟ್ಟೆ ತುಂಬಿಕೊಂಡು ಸಂಚರಿಸಲಾರಂಭಿಸಿದಳು ಇತ್ತಕಡೆ ಸೂರ್ಯನು ಛಾಯೆಯ ಸ್ವರೂಪವನ್ನು ಕಂಡುಹಿಡಿಯಲಾರದೆ ಇವಳು ಸಂಜ್ಞಾದೇವಿಯೆಂದೇ ತಿಳಿದುಕೊಂಡು ಅವಳ ಜತೆಯಲ್ಲಿ ಸಂಸಾರ ಮಾಡಿಕೊಂಡಿದ್ದನು ಛಾಯಾದೇವಿಯ ಹೊಟ್ಟೆಯಲ್ಲಿ ಸೂರ್ಯನಿಂದ ಸಾವರ್ಣ ಮತ್ತು ಶನೈಶ್ಚರನೆಂಬ ಇಬ್ಬರು ಗಂಡುಮಕ್ಕಳು ಹುಟ್ಟಿದರು

೬೯ ವಜ್ರಮಹಾರಾಜನು ಮಧ್ಯೆ ಬಾಯಿಹಾಕಿ ಪ್ರಶ್ನೆ ಮಾಡುತ್ತಾನೆ.-- ಭೃಗುವಂಶೋತ್ಪನ್ನಾದೆಲೈ ಮಾರ್ಕಂಡೇಯನೇ ! ಸೂರ್ಯನು ಪುನಃ ಸಂಜ್ಞಾದೇವಿಯನ್ನು ಹೊಂದಿದನೋ ಇಲ್ಲವೋ ನನಗೆ ಸಂಶಯವಾಗಿದೆ ಆ ವಿಚಾರವನ್ನು ಮೊದಲು ಹೇಳು

॥ ಮಾರ್ಕಂಡೇಯ ಉವಾಚ ॥

ಪುತ್ರಯೋಃ ಸೂತಪುತ್ರಾಂಸ್ತು ಯಥಾ ಛಾಯಾಽನುವರ್ತತೇ ।
ನ ತಥಾ ವರ್ತತೇ ದೇವೀ ಸಂಜ್ಞಾಸೂಕ್ತೇಷು ಭಾಮಿನೀ ॥ ೭೦ ॥

ತತಃ ಕದಾಚಿತ್ತಾಂ ಕ್ರುದ್ಧಃ ಸಂತತರ್ಜ ತದಾ ಯಮಃ ।
ತಂ ಶಶಾಪ ತದಾ ಚ್ಛಾಯಾ ಪಾದಸ್ತೇ ಪತತಾಮಯಂ ॥ ೭೧ ॥

ಯಮಃ ಶಶಂಸ ತತ್ಸರ್ವಂ ಪಿತುಃ ಪರಬಲಾರ್ದನಃ ।
ಶ್ರುತ್ವಾ ಯಮಸ್ಯ ವಚನಂ ಯಮಂ ಪ್ರೋವಾಚ ಭಾಸ್ಕರಃ ॥ ೭೨ ॥

ಕೃಮಯೋ ಮಾಂಸಮಾದಾಯ ತಥಾ ಯಾಸ್ಯಂತಿ ಭೂತಲಂ ।
ಏವಂ ಶಾಮ್ಯೇಚ್ಛ ಶಾಪಸ್ತೇ ತ್ವಂ ಚ ತ್ರಾತೋ ಭವಿಷ್ಯಸಿ ॥ ೭೩ ॥

---

೭೦ ಮಾರ್ಕಂಡೇಯ ಋಷಿಗಳು ವಜ್ರನಿಗೆ ಹೇಳುತ್ತಾರೆ— ಛಾಯಾ ದೇವಿಯು ತನ್ನ ಹೊಟ್ಟೆಯಲ್ಲಿ ಇಬ್ಬರು ಗಂಡು ಮಕ್ಕಳಾದ ಮೇಲೆ ಅವರ ವಿಷಯ ವಲ್ಲಿ ಎಷ್ಟು ಪ್ರೇಮವನ್ನು ತೋರಿಸುತ್ತಿದ್ದಳೋ ಅಷ್ಟುಮಟ್ಟಿನ ಪ್ರೇಮವನ್ನು ಸಂಜ್ಞಾ ದೇವಿಯ ಮಕ್ಕಳ ವಿಷಯದಲ್ಲಿ ತೋರಿಸುತ್ತಿರಲಿಲ್ಲ

೭೧ ಒಂದುದಿನ ಯಮನು ತನ್ನನ್ನು ಸರಿಯಾಗಿ ಉಪಚರಿಸಲಿಲ್ಲವೆಂಬ ಕೋಪದಿಂದ ಛಾಯೆಯನ್ನು ಬಹಳವಾಗಿ ಬೈದುಬಿಟ್ಟನು ಛಾಯೆಗೆ ಯಮನ ಮೇಲೆ ಸಿಟ್ಟುಬಂದು ನಿನ್ನ ಕಾಲುಗಳು ಬಿದ್ದು ಹೋಗಲೆಂದು ಶಾಪ ಕೊಟ್ಟುಬಿಟ್ಟಳು

೭೨, ಯಮನು ಛಾಯೆಯು ಮಾಡಿದ ಈ ಕೆಲಸವನ್ನು ತನ್ನ ತಂದೆಯಾದ ಸೂರ್ಯನಿಗೆ ತಿಳಿಸಿದನು ಆಗ ಸೂರ್ಯನು ಯಮನನ್ನು ಕುರಿತು ಈ ಮಾತನ್ನು ಹೇಳಿದನು

೭೩ ಕ್ರಿಮಿ (ಹುಳು) ಗಳು ನಿನ್ನ ಮಾಂಸವನ್ನು ತೆಗೆದುಕೊಂಡು ಭೂಲೋಕಕ್ಕೆ ಹೋಗುತ್ತವೆ ಕ್ರಮೇಣ ನಿನ್ನ ಶಾಪವು ಕ್ರಿಮಿ ರೂಪದಲ್ಲಿ ಶಾಂತವಾಗಿ ನೀನು ಶಾಪಮುಕ್ತನಾಗುತ್ತೀಯೆ

ಏತಚ್ಛ್ರುತ್ವಾ ಪಿತುರ್ವಾಕ್ಯಂ ಚಕಾರ ಸುಮಹತ್ತಪಃ ।
ಆರಾಧಯಾಮಾಸ ತದಾ ದೇವದೇವಂ ಜನಾರ್ದನಂ ॥ ೭೪ ॥

ತಸ್ಮಾತ್ಪ್ರಲೇಭೇ ಧರ್ಮಾತ್ಮಾ ಧರ್ಮರಾಜತ್ವಮಂಜಸಾ ।
ಸೂರ್ಯೋಽಪ್ಯವಿಂದಂಸ್ತತ್ತ್ವೇನ ಪುತ್ರಶಾಪಸ್ಯ ಕಾರಣಂ ॥ ೭೫ ॥

ಕ್ರೋಧಾವಿಷ್ಟಸ್ತದಾ ಛಾಯಾಂ ಪಪ್ರಚ್ಛಾಮಿತ್ರಘಾತನಃ ।
ಶಶಂಸ ತಸ್ಯ ಸಾ ಸರ್ವಂ ಯಥಾವೃತ್ತಮನಿಂದಿತಾ ॥ ೭೬ ॥

ಶ್ರುತ್ವಾ ತು ವಚನಂ ತಸ್ಯಾಸ್ತ್ವಷ್ಟುರ್ವೇಶ್ಮಾಗಮದ್ರವಿಃ ।
ನ ದದರ್ಶ ಚ ತತ್ರಸ್ಥಾಂ ತಾಂ ಭಾರ್ಯಾಂ ಶುಭಚಾರಿಣೀಂ ॥ ೭೭ ॥

ತ್ವಷ್ಟ್ರಾ ಚಾಶಂಸಿತಂ ತಸ್ಯ ಬಡವಾರೂಪಧಾರಿಣೀ ।
ಅಸಹಂತೀ ತು ತೇಜಸ್ತೇ ಕುರೂನಾವಸತೇ ಶುಭಾ ॥ ೭೮ ॥

ಭ್ರಮಿಮಾವೇಶ್ಯ ದೇವೇಶಂ ತ್ವಷ್ಟಾಽಸಿ ಜಗತಾಂ ಪತಿಂ ।
ತೇಜಸಃ ಶಾಂತನಂ ಚಕ್ರೇ ದೇವಸ್ಯ ಸವಿತುಸ್ತದಾ ॥ ೭೯ ॥

೭೪ ಈ ರೀತಿ ಹೇಳಿದ ತಂದೆಯ ಮಾತನ್ನು ಕೇಳಿ ಯಮನು ಮಹಾವಿಷ್ಣುವನ್ನು ಕುರಿತು ಘೋರ ತಪಸ್ಸನ್ನು ಮಾಡಿದನು ಆ ತಪಸ್ಸಿನಿಂದ ಯಮನು ಬಹು ಕ್ಷಿಪ್ರದಲ್ಲಿ ಧರ್ಮರಾಜತ್ವವನ್ನು ಹೊಂದಿದನು

೭೫-೭೬ ಸೂರ್ಯನು ಒಂದು ದಿನ ಜ್ಞಾನದೃಷ್ಟಿಯಿಂದ ನೋಡಲಾಗಿ ಪುತ್ರನ ಶಾಪಕಾರಣವು ಗೊತ್ತಾಯಿತು ಆ ಕೂಡಲೇ ಆ ವೀರನು ಬಹಳ ಕೋಪಗೊಂಡವನಾಗಿ ಛಾಯೆಯನ್ನು ಕುರಿತು ನಿಜಸ್ಥಿತಿಯೇನೆಂದು ಕೇಳಲು ಅವಳು ಮೊದಲಿನಿಂದ ಕೊನೇವರಿಗೆ ನಡೆದುದನ್ನೆಲ್ಲಾ ಸ್ವಲ್ಪವೂ ಬಿಡದ ಹೇಳಿಬಿಟ್ಟಳು

೭೭-೭೮. ಛಾಯೆಯ ಮಾತನ್ನು ಕೇಳಿದೊಡನೆಯೇ ಸೂರ್ಯನು ತ್ವಷ್ಟೃಬ್ರಹ್ಮನ ಮನೆಗೆ ಬಂದು ನೋಡಿದನು ಅಲ್ಲಿ ಸಂಜ್ಞೆಯು ಇರಲಿಲ್ಲ ಮಹಾಸಾಧ್ವಿಯಾದ ತನ್ನ ಹೆಂದತಿಯು ಎಲ್ಲಿಂದು ತ್ವಷ್ಟೃವನ್ನು ಕೇಳಲು ಅವನು ಆಕೆಯು ನಿನ್ನ ತೇಜಸ್ಸನ್ನು ತಡೆಯಲಾರದೆ ವಡವಾರೂಪ (ಹೆಣ್ಣುಕುದುರೆಯರೂಪ) ವನ್ನು ಧರಿಸಿ ಉತ್ತರಕುರುದೇಶದಲ್ಲಿ ವಾಸಮಾಡುತ್ತಲಿದ್ದಾಳೆ ಹೀಗಂದು ಹೇಳಿದನು

೭೯-೮೧. ಮತ್ತು ತ್ವಷ್ಟೃವು, ಜಗತ್ಪತಿಯಾದ ಸೂರ್ಯನು ಹೆಂಡತಿಯ ವಿರಹದಿಂದ ಭ್ರಮೆ ಹೊಂದಿರುವನೆಂದು ತಿಳಿದವನಾಗಿ ಸೂರ್ಯನ ಪ್ರಖರ ಕಿರಣಗಳನ್ನು

ಕೀರ್ಣೇ ತೇಜಸಿ ತದ್ರೂಪಂ ಭೃಶಂ ಕಾಂತತರಂ ಸ್ಥಿತಂ ।
ಶೀರ್ಣೇನ ತೇಜಸಾ ಚಕ್ರಂ ತ್ವಷ್ಟಾ ಚಕ್ರೇ ಜಗದ್ಗುರೋಃ ॥ ೮೦ ॥

ಸುದರ್ಶನಮಿತಿ ಖ್ಯಾತಂ ದೇವಸ್ಯ ಹರಿಮೇಧಸಃ ।
ಕಾಂತರೂಪಸ್ತು ಸವಿತಾ ಹಯರೂಪಧರಸ್ತದಾ ॥ ೮೧ ॥

ಉತ್ತರಾಂಸ್ತು ಕುರೂನ್ಗತ್ವಾ ವಡವಾರೂಪಧಾರಿಣೀಂ ।
ಸ್ವಾಂ ದದರ್ಶ ತದಾ ಭಾರ್ಯಾಂ ಶೀತಲದ್ರವಸಂಯುತಾಂ ॥ ೮೨ ॥

ಮೈಥುನಾರ್ಥೀ ತು ತಾಂ ದೇವೋ ಜಗಾಮ ತ್ವರಿತಸ್ತದಾ ।
ವೇಗವಂತಂ ತು ಸಂಪ್ರಾಪ್ತಂ ದೃಷ್ಟ್ವಾ ತುರಗಮುತ್ತಮಂ ॥ ೮೩ ॥

ವ್ಯಚೇಷ್ಟತ ಚ ಸಾ ದೇವೀ ಪರಪುಂಸೋಪಶಂಕಯಾ ।
ಮುಖೇ ಚ ಭಾವಯಾಮಾಸ ತಾಂ ಸೂರ್ಯೋ ದೀಪ್ತದೀಧಿತಿಃ ॥ ೮೪ ॥

---

ಸ್ವಲ್ಪ ಶಾಂತವಾಗುವಂತೆ ಮಾಡಿದನು ಆಗ ಸೂರ್ಯನು ಶಾಂತಕಿರಣನಾಗಿ ಮನೋಹರನಾಗಿ ಕಂಡನು ಆಗ ಆ ಪ್ರಖರ ಕಿರಣಗಳನ್ನು ಒಟ್ಟುಗೂಡಿಸಿ ಒಂದು ಚಕ್ರಾಯುಧವನ್ನಾಗಿ ಮಾಡಿ ನರವಾತ್ಮನಾದ ಮಹಾ ವಿಷ್ಣುವಿಗೆ ಸಮರ್ಪಿಸಿದನು ಆ ಚಕ್ರಕ್ಕೆ ಸುದರ್ಶನವೆಂದು ಹೆಸರಾಯಿತು ಆಗ ಮನೋಹರ ರೂಪವನ್ನು ಧರಿಸಿದ ಸೂರ್ಯನು ಕುದುರೆಯ ಆಕಾರವನ್ನು ತಾಳಿದನು

೮೨-೮೭ ಈ ರೀತಿ ಗಂಡು ಕುದುರೆಯಾಗಿ ಸೂರ್ಯನು ಉತ್ತರ ಕುರು ದೇಶಕ್ಕೆ ಹೋಗಿ ಅಲ್ಲಿ ವಡಬಾ (ಹೆಣ್ಣುಕುದುರೆ) ರೂಪವನ್ನು ಧರಿಸಿದ್ದ ತನ್ನ ಹೆಂಡತಿಯಾದ ಸಂಜ್ಞೆಯನ್ನು ನೋಡಿದನು. ಟಿಪ್ಪಣಿ ಬಡಬಾ ಬಾಡಬಂಗಣೆ ಎಂದು ಅಮರದಲ್ಲಿದ ವಾಮೀ-ಅಶ್ವಾ-ಬಡಬಾ ಈ ಮೂರು ಪದಗಳಿಗೂ ಹೆಣ್ಣು ಕುದುರೆಯೆಂದು ಹೆಸರು ವಡಬಾ ಎಂದರೆ ಕಾಡುಗಿಚ್ಚಿಗೂ ಹೆಸರು ಆದರೆ ಇಲ್ಲಿ ವಡಬಾ ಶಬ್ದಕ್ಕೆ ಹೆಣ್ಣು ಕುದುರೆಯೆಂದೇ ಅರ್ಥ ಮಾಡಿಕೊಳ್ಳಬೇಕು ಅಲ್ಲಿ ತನ್ನ ಹೆಂಡತಿಯು ಗರಿಕೆ ಹುಲ್ಲನ್ನು ಮೇಯುತ್ತಾ ವಿಹರಿಸುತ್ತಿದ್ದುದನ್ನು ನೋಡಿ ಮೋಹಗೊಂಡವನಾಗಿ ಬೇಗಬೇಗ ಅದರ ಹತ್ತಿರಕ್ಕೆ ಹೋಗಿ ಸಂಭೋಗ (ರತಿಕ್ರೀಡೆ) ಮಾಡಬೇಕೆಂದು ಆತುರಪಟ್ಟನು ಈ ರೀತಿ ಬೇಗಬೇಗ ತನ್ನ ಬಳಿಗೆ ಬಂದ ಗಂಡು ಕುದುರೆಯನ್ನು ನೋಡಿ ಸಂಜ್ಞೆ (ವಡಬೆ) ಯು ಇವನು ಪರಪುರುಷನೆಂಬ ಶಂಕೆಯಿಂದ

ತಸ್ಯಾ ನಾಸಾಪುಟೌ ಪೂರ್ಣೌ ತದಾ ಶುಕ್ರೇಣ ಪಾರ್ಥಿವ ।
ತಥಾ ತಸ್ಯಾಸ್ತದಾ ಜಾತೌನಾಸತ್ಯಾವಶ್ವಿನಾವುಭೌ ॥ ೮೫ ॥

ಭೂಮೌ ಚ ಪತಿತಂ ಯಚ್ಚ ತಾಭ್ಯಾಂ ಶುಕ್ರಂ ವಿಮರ್ದಿತಂ ।
ತಸ್ಮಾತ್ತ್ಲೇಶ್ವಾತ್ಸಮುತ್ಪನ್ನಃ ಕುಮಾರಃ ಸೂರ್ಯಸನ್ನಿಭಃ ॥ ೮೬ ॥

ತತಃ ಸ್ವರೂಪಮಾಸ್ಥಾಯ ದೇವದೇವೋಽಪಿ ಭಾಸ್ಕರಃ ।
ಸ್ವರೂಪಿಣೀಮಥಾದಾಯ ಸಂಜ್ಞಾಂ ತಾಂ ಸ್ವಗೃಹಂ ಯಯೌ ॥ ೮೭ ॥

ನಾಸತ್ಯೌ ದೇವಭಿಷಜೌ ಕೃತವಾನಶ್ವಿನಾವುಭೌ ।
ತತೋ ವಿಮರ್ದನಾಜ್ಜಾತಂ ಪುತ್ರಂ ದೃಷ್ಟ್ವಾ ದಿವಾಕರಃ ॥ ೮೮ ॥

ರೇವಂತೇತಿ ತದಾ ತಸ್ಯ ನಾಮ ಚಕ್ರೇ ಜಗದ್ಗುರುಃ ।
ತಂ ಚ ಪುತ್ರಮುವಾಚಾಥ ಸೂರ್ಯೋ ಗ್ರಹಗಣೇಶ್ವರಃ ॥ ೮೯ ॥

---

ಮೈಥುನಕ್ಕೆ ದಾರಿಗೊಡದೆ ತಂಟೆ ಮಾಡಿತು ಆಗ ಪ್ರಕಾಶ ಕಿರಣನಾದ ಸೂರ್ಯನು ಸಂಜ್ಞೆಯ ಮುಖಭಾಗಕ್ಕೆ ಬಂದು ಅವಳ ಮುಖವನ್ನು ಚೆನ್ನಾಗಿ ಮೂಸಿ ನೋಡಲು ಆ ಸಂಜ್ಞೆ (ಬಡಬ) ಯ ಎರಡು ಮೂಗಿನ ಹೊಳ್ಳೆಗಳಲ್ಲೂ ವೀರ್ಯವು ತುಂಬಿಕೊಂಡಿತು ಆ ಕೂಡಲೇ ಆ ಮೂಗಿನ ಎರಡು ಹೊಳ್ಳೆಗಳಿಂದಲೂ ಇಬ್ಬರು ಮಕ್ಕಳು ಹುಟ್ಟಿದರು ಆ ಅವಳೀ ಮಕ್ಕಳಿಗೆ ನಾಸತ್ಯರೆಂದೂ ಅಶ್ವಿನೀ (ಹೆಣ್ಣು ಕುದುರೆಯಿಂದ ಹುಟ್ಟಿದವರು) ದೇವತೆಗಳೆಂದೂ ಹೆಸರಾಯಿತು ಆ ಕುಮಾರರು ಉತ್ಪನ್ನರಾದೊಡನೆ ಆ ಎರಡು ಮೂಗಿನ ಹೊಳ್ಳೆಗಳಲ್ಲಿ ತುಂಬಿಕೊಂಡಿದ್ದ ವೀರ್ಯವು ಭೂಮಿಗೆ ಜಾರಿಬಿದ್ದು ಗಂಡು ಕುದುರೆಯ ಕಾಲಿನಿಂದ ತುಳಿಯಲ್ಪಟ್ಟಿತು ಆ ಕೂಡಲೇ ಆ ವೀರ್ಯವು ಮಣ್ಣಿನೊಡನೆ ಕಲಿತು ಗಟ್ಟಿಯಾಗಿ ಸೂರ್ಯನಂತೆ ಪ್ರಕಾಶಮಾನನಾದ ಒಂದು ಗಂಡು ಮಗುವು ಹುಟ್ಟಿತು ಆ ಬಳಿಕ ಸೂರ್ಯನು ತನ್ನ ಸ್ವಸ್ವರೂಪವನ್ನು ಧರಿಸಿ ಸಂಜ್ಞಾದೇವಿಯನ್ನು ಸ್ವಸ್ವರೂಪದಿಂದಿರುವಂತೆ ಮಾಡಿ ಅವಳನ್ನು ಜತೆಯಲ್ಲಿ ಕರೆದುಕೊಂಡು ತನ್ನ ಮನೆಯನ್ನು ಸೇರಿಕೊಂಡನು

೮೮-೮೧ ಆ ಅಶ್ವಿನೀ ದೇವತೆಗಳಿಬ್ಬರೂ ನಾಸತ್ಯರೆಂಬ ಹೆಸರಿನಿಂದ ದೇವತೆಗಳ ವೈದ್ಯರಾದರು ಆ ಬಳಿಕ ಕಾಲಿನ ತುಳಿತದ ವೀರ್ಯದಿಂದ ಹುಟ್ಟಿದ ಮಗನನ್ನು ನೋಡಿ ಸೂರ್ಯನು ಅವನಿಗೆ ರೇವಂತನೆಂದು ನಾಮಕರಣ ಮಾಡಿದನು ಆಗ

**ಯಸ್ಮಾತ್ಸೋಽಶ್ವಾತ್ಸಮುತ್ಪನ್ನೋ ಮತ್ತಸ್ತ್ವದ್ದೀಪ್ತದೀಧಿತಿಃ ।**
**ಪೂಜಾಮಾಪ್ಸ್ಯಸಿ ಸೋಽಶ್ವೇಭ್ಯಸ್ತಸ್ಮಾನ್ನಿತ್ಯಂ ಜಗತ್ಪ್ರಿಯಃ ॥ ೯೦ ॥**

**ಯೇ ಚ ತ್ವಾಂ ಪೂಜಯಿಷ್ಯಂತಿ ತೇಷಾಂ ವೃದ್ಧಿರ್ಭವಿಷ್ಯತಿ ।**
**ಶನೈಶ್ಚರಸ್ಯ ತೇ ಜನ್ಮ ಮಯೋಕ್ತಂ ನೃಪಸತ್ತಮ ॥ ೯೧ ॥**

**ಅತಃ ಪರಂ ಪ್ರವಕ್ಷ್ಯಾಮಿ ರಾಹೋರ್ಜನ್ಮ ತಥಾಽನಘ ।**
**ದಾಕ್ಷಾಯಿಣೀ ಸಿಂಹಿಕಾಖ್ಯಾ ಭಾರ್ಯಾ ವೈ ಕಶ್ಯಪಸ್ಯ ತು ॥ ೯೨ ॥**

**ಅಕಾಲೇ ವರಯಾಮಾಸ ಭರ್ತಾರಂ ತಪಸಾಽನ್ವಿತಂ ।**
**ಭಗವನ್ಪುತ್ರಕಾಮಾಹಂ ತಂ ಪ್ರಯಚ್ಛ ಮಮಾನಘ ॥ ೯೩ ॥**

**ಅಕಾಲಯಾಚ್ಞಾಸಂಕ್ರುದ್ಧಸ್ತಾಂ ಜಗಾದ ಸ ಕಶ್ಯಪಃ ।**
**ದೈತ್ಯದಾನವಸಂಕಾಶಂ ಪುತ್ರಂ ತ್ವಂ ಜನಯಿಷ್ಯಸಿ ॥ ೯೪ ॥**

---

ಸೂರ್ಯನು ಆ ಮಗನನ್ನು ನೋಡಿ ಈ ಮಾತನ್ನು ಹೇಳಿದನು ಎಲೈ ಮಗನೇ ನಾನು ಅಶ್ವವೇಷವನ್ನು ಧರಿಸಿದ್ದ ಕಾಲದಲ್ಲಿ ನನ್ನಿಂದ ನೀನು ಉತ್ಪನ್ನನಾದ್ದರಿಂದ ನೀನೂ ನನ್ನಂತೆ ಪ್ರಕಾಶಮಾನನಾಗಿರು ನೀನು ಇನ್ನು ಮುಂದೆ ಸಕಲ ಅಶ್ವಗಳಿಗೂ ರಾಜನೆನಿಸಿ ಸಕಲ ಅಶ್ವಗಳಿಂದಲೂ ಪೂಜಿಸಲ್ಪಡುತ್ತೀಯೇ ನೀನು ಸಕಲ ಜಗತ್ಪ್ರಿಯನಾಗಿ ಇರು ಯಾರು ರೇವಂತನೆಂಬ ನಿನ್ನನ್ನು ಪೂಜಿಸುವರೋ ಅಂಥವರು ಅಭಿವೃದ್ಧಿಹೊಂದಲಿ ಎಲೈ ವಜ್ರಮಹಾರಾಜನೇ! ಈರೀತಿಯಾಗಿ ನಾನು ನಿನಗೆ ಶನೈಶ್ಚರನ ಚರಿತ್ರೆಯನ್ನು ಹೇಳಿದೇನೆ

ರಾಹುವಿನ ಜನ್ಮಚರಿತ್ರೆ

೯೨-೯೪ ಇನ್ನು ಮುಂದಕ್ಕೆ ರಾಹುವಿನ ಜನ್ಮವೃತ್ತಾಂತವನ್ನು ನಿನ್ನೊಡನೆ ಹೇಳುತ್ತೇನೆ, ಕೇಳು ಕಶ್ಯಪಬ್ರಹ್ಮನಿಗೆ ಸಿಂಹಿಕೆಯೆಂಬ ಹೆಸರಿನ (ದಾಕ್ಷಾಯಣಿಯೆಂಬ) ಹೆಂಡತಿಯಿದ್ದಳು ಆಕೆಯು ಹೊತ್ತಲ್ಲದ ಹೊತ್ತಿನಲ್ಲಿ (ಪ್ರದೋಷಕಾಲದಲ್ಲಿ) ತಪೋನಿಷ್ಠನಾಗಿದ್ದ ಗಂಡನನ್ನು ಕುರಿತು ಈ ರೀತಿ ಪ್ರಾರ್ಥಿಸಿಕೊಂಡಳು ಭಗವನ್! ನಾನು ಪುತ್ರಕಾಮಳಾಗಿ ನಿನ್ನ ಸಂಗವನ್ನು ಬಯಸುತ್ತೇನೆ ಹೀಗೆನ್ನಲು ಕಶ್ಯಪನು ಕೋಪಗೊಂಡು ಅಕಾಲದಲ್ಲಿ ನೀನು ನನ್ನ ಸಂಗವನ್ನು ಬಯಸಿದುದರಿಂದ ಇದರಿಂದ ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ದಿತಿಯ ಮಕ್ಕಳಾದ ದಾನವರಿಗೆ ಸದೃಶನಾಗಿ ಹುಟ್ಟುತ್ತಾನೆಂದು ಹೇಳಿಬಿಟ್ಟನು ಈ ರೀತಿಯಾದ ವರದಾನದಿಂದ ದಾಕ್ಷಾಯಣಿ (ಸಿಂಹಿಕೆ) ಯ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ರಾಹು (ಗ್ರಹ) ವು

ರಾಹುಂ ಸಾ ಜನಯಾಮಾಸ ವರದಾನಾನ್ಮಹಾತ್ಮನಃ ।
ಅತಃ ಪರಂ ಪ್ರವಕ್ಷ್ಯಾಮಿ ಕೇತೋಸ್ತೇ ಜನ್ಮ ಪಾರ್ಥಿವ ॥ ೯೫ ॥

ಪ್ರಜಾನಾಂ ಮಹತೀಂ ವೃದ್ಧಿಂ ದೃಷ್ಟ್ವಾ ದೇವಃ ಪಿತಾಮಹಃ ।
ಕ್ಷಯೇ ತಾಸಾಂ ತದಾ ಚಕ್ರೇ ಬುದ್ಧಿಂ ಬುದ್ಧಿಮತಾಂ ವರಃ ॥ ೯೬ ॥

ಕ್ಷಯಂ ಚಿಂತಯತಸ್ತಸ್ಯ ಪ್ರಜಾನಾಂ ಮನುಜೇಶ್ವರ ।
ಪ್ರಾದುರ್ಭೂತಾ ತತಃ ಕನ್ಯಾ ಮೃತ್ಯುರ್ನಾಮೇತಿ ವಿಶ್ರುತಾ ॥ ೯೭ ॥

ತಾಂ ಜಗಾದ ತದಾ ಬ್ರಹ್ಮಾ ಪ್ರಜಾಃ ಸಂಹರ ಶೋಭನೇ ।
ಸಾ ತಥೋಕ್ತಾ ತದಾ ತೇನ ರುರೋದ ವರವರ್ಣಿನೀ ॥ ೯೮ ॥

ತದಾಶ್ರುಬಿಂದುಭಿರ್ಜಾತಾ ವ್ಯಾಧಯೋಽಥ ಸಹಸ್ರಶಃ ।
ದೃಷ್ಟ್ವಾ ವ್ಯಾಧೀನ್ಸಮುತ್ಪನ್ನಾನ್ಸಂಹೃತ್ಯಾಶ್ರೂಣಿ ಭಾಮಿನೀ ॥ ೯೯ ॥

ಕೇತುವಿನ ಜನ್ಮಚರಿತ್ರೆ

೯೫-೯೭ ಎಲೈ ವಜ್ರಮಹಾರಾಜನೇ! ಇನ್ನು ಮುಂದೆ ಕೇತುವಿನ ಜನ್ಮವೃತ್ತಾಂತವನ್ನು ಹೇಳುತ್ತೇನೆ ಕೇಳುವವನಾಗು ಒಂದಾನೊಂದು ಕಾಲದಲ್ಲಿ ಭೂಮಿಯಲ್ಲಿ ಪ್ರಜೆಗಳು ಬಹಳವಾಗಿ ಹೆಚ್ಚಿಹೋಗಿ ಭೂಭಾರ ಹೆಚ್ಚಾಯಿತೆಂದು ಬ್ರಹ್ಮನಿಗೆ ತಿಳಿದುಬರಲಾಗಿ ಪ್ರಜಾನಾಶಕ್ಕೆ ಉಪಾಯವನ್ನು ಯೋಚಿಸುತ್ತಿದ್ದನು ಈ ಯೋಚನೆಯು ಮನಸ್ಸಿನಲ್ಲಿ ಹುಟ್ಟಿದೊಡನೆಯೇ ಒಂದು ಕನ್ಯೆಯು ಉತ್ಪತ್ತಿಯಾದಳು ಅವಳಿಗೆ ಮೃತ್ಯುದೇವತೆಯೆಂಬ ಹೆಸರು ಪ್ರಸಿದ್ಧವಾಯಿತು

೯೮-೧೦೦ ಆ ಮೃತ್ಯುದೇವತೆಯನ್ನು ಕುರಿತು ಬ್ರಹ್ಮನು ಪ್ರಜೆಗಳನ್ನು ಸಂಹಾರಮಾಡೆಂದು ಹೇಳಿದನು ಆ ಮಾತನ್ನು ಕೇಳಿ ಮೃತ್ಯುದೇವತೆಯು ಬಹಳವಾಗಿ ಅಳುವುದಕ್ಕೆ ಆರಂಭಮಾಡಿದಳು ಆಗ ಅವಳ ಕಣ್ಣುಗಳಿಂದ ದುಃಖಾಶ್ರುಗಳು ತಟತಟನೆ ಉದುರಿದುವು ಆ ಕಣ್ಣು ನೀರಿನ ನೂರಾರು ಸಾವಿರಾರು ತೊಟ್ಟುಗಳೆಲ್ಲವೂ ಅಷ್ಟು ವಿಧವಾದ ವಿವಿಧ ವ್ಯಾಧಿಗಳಾಗಿ ಪರಿಣಮಿಸಿದುವು ಈ ರೀತಿ ನಾನಾ ರೋಗಗಳು ಹುಟ್ಟಿದುದನ್ನು ನೋಡಿ ಆ ಮೃತ್ಯುದೇವತೆಯು ತನ್ನ ಕಣ್ಣೀರನ್ನು ನಿಲ್ಲಿಸಿ

ಸುದುಶ್ಚರಂ ತಪಸ್ತೇಪೇ ಪುಷ್ಕರಾರಣ್ಯಮಾಶ್ರಿತಾ ।
ಸ್ಥಾನೇಷು ಚ ತಥಾನ್ಯೇಷು ಬಹೂನ್ವರ್ಷಗಣಾನ್ಶುಭಾ ॥ ೧೦೦ ॥

ಭೂಯೋ ಜಗಾದ ತಾಂ ಬ್ರಹ್ಮಾ ಪ್ರಜಾಃ ಸಂಹರ ಶೋಭನೇ ।
ಮಯೋಕ್ತಂ ಯತ್ಪುರಾ ಭದ್ರೇ ತತ್ತಥಾ ನ ತದನ್ಯಥಾ ॥ ೧೦೧ ॥

ತಪಸಾ ತೇ ವರಂ ಗ್ರಾಹ್ಯಂ ತದಾಚಕ್ಷ್ವ ಸುಶೋಭನೇ ।
ನೃಣಾಂ ನಿಮಿತ್ತಂ ಮರಣೇ ಲೋಕೇ ಯಾಸ್ಯತಿ ದೋಷತಃ ॥ ೧೦೨ ॥

ನ ಕಶ್ಚಿದ್ದೋಷತೋ ಮಂತಾ ತ್ವಾಂ ಕದಾಚಿದಪಿ ಧ್ರುವೇ
ಏವಮುಕ್ತಾ ತದಾ ತೇನ ಬ್ರಹ್ಮಣಾ ಸಾ ಶುಭಾನನಾ ॥ ೧೦೩ ॥

ದೀರ್ಘಮುಷ್ಣಂ ಚ ನಿಃಶ್ವಾಸಂ ಮುಮೋಚ ವರವರ್ಣಿನೀ ।
ಕೃಷ್ಣಸರ್ಪಸಮಾಕಾರಸ್ತಸ್ಮಾತ್ಕೇತುರಜಾಯತ ॥ ೧೦೪ ॥

---

ಪುಷ್ಕರಾರಣ್ಯದಲ್ಲೂ ಇನ್ನೂ ಅನೇಕ ಸ್ಥಳಗಳಲ್ಲಿಯೂ ಬಹು ವರ್ಷಕಾಲ ಘೋರವಾದ ತಪಸ್ಸನ್ನು ಮಾಡಿದಳು

೧೦೧ ಆ ತಪಸ್ವಿಯನ್ನು ಕುರಿತು ಪುನಃ ಬ್ರಹ್ಮನು ಎಲೌ ಮಂಗಳಾಂಗಿಯೇ! ನನ್ನ ಮಾತಿನಂತೆ ನೀನು ಪ್ರಜೆಗಳನ್ನು ಸಂಹಾರ ಮಾಡಬೇಕು ನನ್ನ ಮಾತು ಅನ್ಯಥಾ ಪರಿಣಮಿಸಕೂಡದೆಂದು ಹೇಳಿದನು

೧೦೨-೧೦೩ ಮತ್ತು ಬ್ರಹ್ಮನು ಮೃತ್ಯುವನ್ನು ಕುರಿತು ಹೇಳಿದನೇನಂದರೆ - ಎಲೌ ಮಂಗಳಾಂಗಿಯೇ! ನೀನು ಮಾಡಿದ ತಪಸ್ಸಿಗೆ ನಾನು ಮೆಚ್ಚಿ ಅದಕ್ಕೆ ವರವನ್ನು ಕೊಡಬೇಕಾಗಿದೆ ಮನುಷ್ಯರು ತಾವು ತಾವು ಮಾಡಿದ ದೋಷಗಳ ದೆಸೆಯಿಂದಲೇ ಪ್ರಪಂಚದಲ್ಲಿ ಸಾಯುತ್ತಾರೆ ಹಾಗೆ ಅವರ ತಪ್ಪುಗಳಿಂದಲೇ ಅವರು ಸಾಯುತ್ತಿರುವಲ್ಲಿ ನಿನಗೆ ಯಾವ ದೋಷವೂ ಸಂಭವಿಸಲಾರದೆಂದು ತಿಳಿದುಕೋ ಮನುಷ್ಯರ ಮರಣಕ್ಕೆ ನೀನು ತಪ್ಪಿತಸ್ಥಳಾಗಲಾರ ಎನ್ನಲು ಆ ಮೃತ್ಯುವು ಆ ಮಾತನ್ನು ಕೇಳಿ ಬಿಸಿಬಿಸಿಯಾದ ಒಂದು ನಿಟ್ಟುಸಿರನ್ನು ಬಿಟ್ಟಳು ಆ ಉದ್ದವಾದ ನಿಟ್ಟುಸಿರು ಕರೀ ನಾಗರ ಹಾವಿನಂತೆ ಉತ್ಪತ್ತಿಯಾಯಿತು ಅದರಿಂದಲೇ ಕೇತುವು ಉತ್ಪತ್ತಿಯಾದನು. ಅದೇ ಕೃಷ್ಣಸರ್ಪವೇ ಕೇತುವೆಂದು ಲೋಕದಲ್ಲಿ ಪ್ರಸಿದ್ಧಿಯಾದನು ಆ ಕೃಷ್ಣ ಸರ್ಪದ ಹೆಡೆಯಲ್ಲಿ ಬೆಂಕಿಯು ಉರಿಯುತ್ತಿತ್ತು ಅದು ಕಾಲಾಗ್ನಿ ರುದ್ರಜ್ವಾಲೆ

ಶಿಖಿದೀಪ್ತಶಿಖೋ·ರಾಜನ್ಕಾಲಾನಲಸಮಪ್ರಭಃ ।
ಧೂಮಪ್ರಭಸ್ಯ ತಸ್ಯಾಥ ಕೇತುರೂಪಸ್ಯ ಪಾರ್ಥಿವ ॥ ೧೦೫ ॥

ಸಂಜ್ಞಾಂ ಚಕಾರ ಸರ್ವಾತ್ಮಾ ದೇವದೇವಃ ಪಿತಾಮಹಃ ।
ಧೂಮಕೇತುರಯಂ ನಾಮ್ನಾ ಭವಿಷ್ಯತಿ ಜಗತ್ರಯೇ ॥ ೧೦೬ ॥

ದರ್ಶಯಿಷ್ಯತಿ ಲೋಕಾನಾಂ ತಥೈವ ಚ ಶುಭಾಶುಭಂ ।
ದಿವ್ಯಂತರಿಕ್ಷೇ ಭುವಿ ಚೈಕ ಏಷಃ
ಸಂದೃಶ್ಯತೇ ಧೂಮಕೇತುರ್ಮಹಾತ್ಮಾ ।
ಸಂಸ್ಥಾನರೂಪೈಸ್ತು ಬಹುಪ್ರಕಾರೈಃ
ಶುಭಾಶುಭಂ ದರ್ಶಯನ್ಮಾನುಷಾಣಾಂ ॥ ೧೦೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗ್ರಹಸಂಭವೋನಾಮಷಡುತ್ತರ
ಶತತಮೋಽಧ್ಯಾಯಃ

ಯಂತೆ ಜ್ವಲಿಸುತ್ತಿತ್ತು ಆ ಜ್ವಾಲೆಯಿಂದ ಹೊರಟ ಒಂದಾನೊಂದು ಧೂಮವು ಧ್ವಜಪಟದಂತೆ ಕಂಗೊಳಿಸಿತು. ಅದನ್ನೇ ಧೂಮಕೇತುವೆಂದು ಹೇಳುವರು ಆಗ ಬ್ರಹ್ಮನು ಅದಕ್ಕೆ ಧೂಮಕೇತುವೆಂದು ಹೆಸರನ್ನು ಕೊಟ್ಟು ಮುಂದೆ ಇದೇ ಹೆಸರೇ ಇದಕ್ಕೆ ಪ್ರಸಿದ್ಧಿಯಾಗಲೆಂದು ವರವನ್ನು ಕೊಟ್ಟನು ಆಗಿನಿಂದಲೂ ಅಂತರಿಕ್ಷದಲ್ಲಿ ಆಗಿಂದಾಗ್ಗೆ ಧೂಮಕೇತುವು (ಬಾಲಚುಕ್ಕೆಯು) ಕಾಣಿಸಿಕೊಂಡು ಜನರ ಶುಭಾಶುಭ ವನ್ನು ತೋರಿಸುತ್ತಿರುವುದು ಕ್ಷಾಮಡಾಮರಗಳು ಪ್ರಾಪ್ತವಾದಾಗಲೂ ಲೋಕಕ್ಕೆ ಅರಿಷ್ಟಸೂಚನೆಯಾದಾಗಲೂ ಯುದ್ಧಾದಿ ಕಷ್ಟಪರಂಪರೆಗಳು ಪ್ರಾಪ್ತವಾದಾಗಲೂ ಸ್ವರ್ಗದಲ್ಲೂ ಆಕಾಶದಲ್ಲೂ ಈ ಮಹಾತ್ಮನಾದ ಧೂಮಕೇತುವು ಜನರ ಕಣ್ಣಿಗೆ ಕಾಣಿ ಸಿಕೊಂಡು ಬಹುವಿಧ ಆಕಾರಗಳಿಂದ ನಾನಾತರಹ ಬಾಲಚುಕ್ಕೆಯಂತ ತೋರುತ್ತಾ ಮನುಷ್ಯರ ಶುಭಾಶುಭವನ್ನು ತೋರಿಸುತ್ತಿರುವನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಗ್ರಹಸಂಭವವೆಂಬ ಹೆಸರಿನ ಒಂದುನೂರಾರನೆಯ
ಅಧ್ಯಾಯವು ಮುಗಿದುದು

ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತೋತ್ತರಾಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ಪೂರ್ವಂ ಬ್ರಹ್ಮಾ ಮಹೀಪಾಲ ಸಿಸೃಕ್ಷುರ್ವಿವಿಧಾಃ ಪ್ರಜಾಃ ।**
**ಅಭ್ಯಯುಂಕ್ತ ತದಾಽತ್ಮಾನಂ ತಸ್ಯ ಯುಕ್ತಸ್ಯ ಪಾರ್ಥಿವ । ॥ ೧ ॥**

**ತತೋಽಸ್ಯ ಜಘನಾತ್ಪೂರ್ವಮಸುರಾ ಜಜ್ಞಿರೇ ಸುತಾಃ ।**
**ಅಸುಃ ಪ್ರಾಣಃ ಸ್ಮೃತೋ ವಿಪ್ರೈಸ್ತಜ್ಜನ್ಮಾನಸ್ತತೋಽಸುರಾಃ ॥ ೨ ॥**

**ಯಯಾ ಸೃಷ್ಟಾಃ ಸುರಾಸ್ತನ್ವಾ ತಾಂ ತನುಂ ಸೋಽವ್ಯಪೋಹತ ।**
**ಅವ್ಯಕ್ತಂ ತತ್ತ್ವಬಹುಲಂ ತತಸ್ತಾನ್ಯೋಽಭ್ಯಯುಂಜತ ॥ ೩ ॥**

---

### ನೂರೇಳನೆಯ ಅಧ್ಯಾಯವು

೧-೩ ಮಾರ್ಕಂಡೇಯನು ಹೇಳುತ್ತಾನೆ— ಎಲೈ ವಜ್ರಮಹಾರಾಜನೇ ! ಕೇಳು ಪೂರ್ವದಲ್ಲಿ ಬ್ರಹ್ಮನು ವಿವಿಧವಾದ ಪ್ರಜೆಗಳನ್ನು ಸೃಷ್ಟಿಮಾಡಲು ಆರಂಭಿಸಿ ಮೊದಲು ತನ್ನ ತೊಡೆಯಿಂದ ಅಸುರರನ್ನು ಸೃಷ್ಟಿಸಿದನು ಅಸುವೆಂದರೆ ಪ್ರಾಣವೆಂದರ್ಥ ಆ ಪ್ರಾಣದಿಂದ ಜನ್ಮತಾಳಿದವರಾದ್ದರಿಂದ ಅಸುರರೆಂದು ಹೆಸರಾಯಿತು ಮೊದಲು ಯಾವ ತನ್ನ ತನುವಿನಿಂದ ದೇವತೆಗಳನ್ನು ಸೃಷ್ಟಿಸಿದ್ದನೋ ಅದೇ ತನ್ನ ತನುವಿನಿಂದ ಈಗಲೂ ದೇವತೆಗಳನ್ನು ಪುನಃ ಸೃಷ್ಟಿಸಿದನು ಅವರು ಅವ್ಯಕ್ತರಾದವರು. ಆದರೂ ತತ್ತ್ವಬಾಹುಳ್ಯದಿಂದ ದೊಡ್ಡವರೆನಿಸಿರುವರು ಈ ರೀತಿ ದೇವತೆಗಳು ಸೃಷ್ಟರಾದ ಬಳಿಕ ಬ್ರಹ್ಮನಿಗೆ ಬಹಳ ಸುಶಕುನಗಳಾದುವು ಆ ಬಳಿಕ

ತತಸ್ತಾನ್ಯುಂಜಮಾನಸ್ತ ಪ್ರಿಯಮಾಸೀತ್ಪ್ರಭೋಃ ಕಿಲ ।
ತತೋ ಮುಖಾತ್ಸಮುತ್ಪನ್ನಾ ದೀವ್ಯತಸ್ತಸ್ಯ ದೇವತಾಃ ॥ ೪ ॥

ಉತ್ಪನ್ನಾ ದೀವ್ಯತಸ್ತಸ್ಮಾದ್ದೇವಾಸ್ತೇನ ತತಃ ಸ್ಮೃತಾಃ ।
ಧಾತುರ್ದೇವೀತಿ ಯತ್ಪ್ರೋಕ್ತಂ ಕ್ರೀಡಾರ್ಥಂ ಸಂವಿಭಾವ್ಯತೇ ॥ ೫ ॥

ತಸ್ಮಾದ್ದೇವ್ಯಾಂತು ತನ್ವಾಯಾಂ ಜಜ್ಞಿರೇ ತಸ್ಯ ದೇವತಾಃ ।
ದೇವಾನ್ಸೃಷ್ಟ್ವಾ ತತಃ ಸೋ ನ್ಯೈ ತನುಮನ್ಯಾಂ ಪ್ರಪದ್ಯತ ॥ ೬ ॥

ಸತ್ವಮಾತ್ರಾತ್ಮಿಕಾಮೇವ ತನುಂ ತಾಂ ಸೋಽಭ್ಯಯುಂಜತ ।
ಪಿತೇವ ಮನ್ಯಮಾನಸ್ತಾನ್ಸುತಾನ್ಪ್ರ್ಯಾಧ ಸ ಪ್ರಭುಃ ॥ ೭ ॥

ಪಿತರೋ ಹ್ಯುಪಪಕ್ಷಾಭ್ಯಾಂ ಮಧ್ಯೇ ರಾತ್ರ್ಯಹ್ನಯೋಃ ಪುರಾ ।
ತಸ್ಮಾತ್ತೇ ಪಿತರೋ ದೇವಾಃ ಪಿತೃತ್ವಂ ತೇಷು ತತ್ಸ್ಮೃತಂ ॥ ೮ ॥

ಯಯಾ ಸೃಷ್ಟಾಸ್ತು ಪಿತರಸ್ತನುಂ ತಾಂ ಸ ವ್ಯಪೋಹತ ।
ಸಾಽಪವಿದ್ಧಾ ತನುಸ್ತೇನ ಸದ್ಯಃ ಸಂಧ್ಯಾ ವ್ಯಜಾಯತ ॥ ೯ ॥

---

ಮುಖದ ಭಾಗದಿಂದ ದೇವತೆಗಳನ್ನು ದೇವಲೋಕದಲ್ಲಿ ಸೃಷ್ಟಿಸಿದುದರಿಂದಲೂ ಸಹ ದೇವತೆಗಳೆಂದೇ ಹೆಸರಾಯಿತು

೫-೬ ದೇವಲೋಕದಲ್ಲಿ ಹುಟ್ಟಿದವರಾದ್ದರಿಂದ ದೇವತೆಗಳೆಂದು ಹೆಸರಾಯಿತೆಂದು ಹೇಳಿತಷ್ಟೆ? ಬ್ರಹ್ಮನ ಕ್ರೀಡಾರ್ಥವಾಗಿ ಯಾವುದನ್ನು ದೇವಿಯೆಂದು ಹೇಳುವರೋ ಅದೇ ಪ್ರಕೃತಿ ಅಥವಾ ಶಕ್ತಿಯೆನ್ನಿಸಿಕೊಳ್ಳುವುದು ಬ್ರಹ್ಮನಿಂದ ಆ ದೇವಿಯಲ್ಲಿ ಜನಿಸಿದವರಾದ್ದರಿಂದಲೂ ದೇವತೆಗಳೆಂದು ಹೆಸರು ಬಂದಿತೆಂದು ತಿಳಿಯಬೇಕು ಈ ರೀತಿ ದೇವತೆಗಳ ಉತ್ಪತ್ತ್ಯನಂತರದಲ್ಲಿ ಬ್ರಹ್ಮನು ಬೇರೆಯೊಂದು ದೇಹವನ್ನು ಧರಿಸಿದನು ಆ ದೇಹವು ಸತ್ವಮಾತ್ರಾತ್ಮಕವಾಗಿದ್ದುದರಿಂದಲೂ ನಾನು ತಂದೆಯಾಗಿ ಮಕ್ಕಳನ್ನು ಪಡೆದೆನೆಂಬ ಭಾವನೆಯು ಬ್ರಹ್ಮನಿಗಿದ್ದುದರಿಂದಲೂ ಆ ದೇಹದಲ್ಲಿ ಮಕ್ಕಳು ಉತ್ಪನ್ನರಾದರು ಆ ಮಕ್ಕಳು ರಾತ್ರಿ ಹಗಲುಗಳ ಮಧ್ಯಕಾಲದಲ್ಲಿ ಉಪಪಕ್ಷಗಳಿಂದ ಉತ್ಪನ್ನರಾದ್ದರಿಂದ ಪಿತೃದೇವತೆಗಳೆಂದು ಪ್ರಸಿದ್ಧಿ ಹೊಂದಿದರು ಆದ್ದರಿಂದ ಅವರುಗಳಲ್ಲಿ ಪಿತೃತ್ವವಿದೆಯೆಂದು ತಿಳಿಯಬೇಕು (ಬ್ರಹ್ಮನು ಪಿತೃಗಳ ತಂದೆಯಾದ್ದರಿಂದ ಪಿತಾಮಹನೆಂದು ಹೆಸರು ಬಂದ ಕಾರಣವು ಇದೇ ಸಂದ

**ತಸ್ಮಾದಹರ್ದೇವತಾನಾಂ ರಾತ್ರಿಃ ಸ್ಯಾದಾಸುರೀ ಮತಾ ।**
**ತಯೋರ್ಮಧ್ಯೇ ತು ಪಿತರಃ ಸಾ ತನುಸ್ತು ಗರೀಯಸೀ ॥ ೧೦ ॥**

**ತಸ್ಮಾದ್ದೇವಾಸುರಾಶ್ಚೈವ ಋಷಯೋ ಮಾನವಸ್ತಥಾ ।**
**ಯುಕ್ತಾಸ್ತೇ ತಾಮುಪಾಸಂತೇ ತಥಾ ವಿಷ್ಣೋರ್ಯದಂತರಂ ॥ ೧೧ ॥**

**ತಸ್ಮಾದ್ರಾತ್ರ್ಯಹ್ನಯೋಃ ಸಂಧ್ಯಾಮುಪಾಸಂತೇ ದ್ವಿಜಾಸ್ತು ತಾಂ ।**
**ತತೋಽನ್ಯಸ್ಯಾಂ ಪುನರ್ಬ್ರಹ್ಮಾ ಸ ತನ್ವಾಮುಪಪದ್ಯತ ॥ ೧೨ ॥**

**ರಾಜಸತ್ವಾತ್ಮಿಕಾಯಾಂ ತು ಮನಸಾ ಸೋಽಸೃಜತ್ಪ್ರಭುಃ ।**
**ಮನಸಾ ತು ತತಸ್ತಸ್ಯ ಪ್ರಜಾನಾಂಜಜ್ಞಿರೇ ಪ್ರಜಾಃ ॥ ೧೩ ॥**

**ಮನಸಾ ಚ ಮನುಷ್ಯಾಸ್ತೇ ಜನನಾತ್ಪ್ರಥಿತಾಃ ಪ್ರಜಾಃ ।**
**ಸೃಷ್ಟ್ವಾ ಪುನಃ ಪ್ರಜಾಃ ಸೌಮ್ಯ ಸ್ವಾಂ ತನುಂ ಸೋಽಪ್ಯಪೋಹತ ॥ ೧೪ ॥**

---

ಭರ್ಗವಲ್ಲೆಂದು ವಾಚಕರು ತಿಳಿದಿರಬೇಕು.) ಪಿತೃಗಳು ಯಾವ ದೇಹದಿಂದ ಸೃಷ್ಟಿಸಲ್ಪಟ್ಟರೋ ಆ ದೇಹವನ್ನು ಬ್ರಹ್ಮನು ಮುಚ್ಚಿಕೊಂಡನು. ಆ ದೇಹವು ಮುಚ್ಚಿಹೋದೂ ಹಸಯೋ ಸಂಧ್ಯಾಕಾಲವು ನಿರ್ಮಿತವಾಯಿತು. ಆ ಬಳಿಕ ಹುಟ್ಟಿದವರು ರಾಕ್ಷಸರಾದರು. ಆದ್ದರಿಂದಲೇ ಹಗಲು ಕಾಲವು ದೇವತೆಗಳಿಗೂ ರಾತ್ರಿಕಾಲವು ರಾಕ್ಷಸರಿಗೂ ಉಭಯ ಸಂಧ್ಯಾಕಾಲವು ಪಿತೃಗಳಿಗೂ ಹಿತಕರವೆಂದು ಭಾವಿಸಬೇಕು. ಸಂಧ್ಯಾಸಮಯವು ಶ್ರೇಷ್ಠವಾದುದರಿಂದ ಎಲ್ಲರೂ (ದೇವತೆಗಳೂ, ರಾಕ್ಷಸರೂ, ಋಷಿಗಳೂ, ಮನುಗಳೂ) ಆ ಸಂಧ್ಯಾಸಮಯದಲ್ಲಿ ಮಹಾ ವಿಷ್ಣುವನ್ನು ಉಪಾಸನೆ ಮಾಡುತ್ತಾರೆ. ಆದ್ದರಿಂದಲೇ ಬ್ರಾಹ್ಮಣರೂ ಸಹ ರಾತ್ರಿ ಹಗಲುಗಳ ಸಂಗಮ ಕಾಲವಾದ ಸಂಧ್ಯಾಕಾಲದಲ್ಲಿ ಭಗವದುಪಾಸನ (ಸಂಧ್ಯಾವಂದನೆ) ಯನ್ನು ಮಾಡುತ್ತಾರೆ. ಈ ರೀತಿ ಸೃಷ್ಟಿಮಾಡಿದ ಬಳಿಕ ಬ್ರಹ್ಮನು ಇನ್ನೊಂದು ದೇಹವನ್ನು ಧರಿಸಿದನು.

೧೩-೧೪. ಆ ದೇಹವು ರಜೋಗುಣ ಪ್ರಧಾನವಾಗಿತ್ತು. ಆಗ ಮನಸ್ಸಿನಿಂದ ಬ್ರಹ್ಮನು (ಆ ದೇಹದಿಂದ) ಪ್ರಜೆಗಳನ್ನು ನಿರ್ಮಿಸಿದನು. ಮನಸ್ಸಿನಿಂದ ಪ್ರಜೆಗಳಾಗಲೆಂದಿಷ್ಟಪಟ್ಟುದರಿಂದ ಪ್ರಜೆಗಳೆಂದೂ ಮನಸ್ಸಿನಿಂದ ನಿರ್ಮಿತರಾದುದರಿಂದ ಮನುಷ್ಯರೆಂದೂ ಪ್ರಸಿದ್ಧರಾದರು. ಈ ರೀತಿ ಮನುಷ್ಯ ಪ್ರಜೆಗಳು ಉತ್ಪನ್ನರಾದ ಬಳಿಕ ಆ ದೇಹವನ್ನು ಮರೆಮಾಡಿಕೊಂಡನು.

ಸಾಪವಿದ್ಧಾ ತನುಸ್ತೇನ ಜ್ಯೋತ್ಸ್ನಾ ಸದ್ಯಃ ಪ್ರಜಾಯತ ।
ತಸ್ಮಾದ್ಭವಂತಿ ಸಂಹೃಷ್ಟಾ ಜ್ಯೋತ್ಸ್ನಯಾ ಉದ್ಭವೇ ಪ್ರಜಾಃ ॥ ೧೫ ॥

ತಾಮುತ್ಸೃಜ್ಯ ತತೋ ಜ್ಯೋತ್ಸ್ನಾಂ ತತೋಽನ್ಯಾಂ ಪ್ರಾವಿಶತ್ಪುನಃ ।
ಮೂರ್ತಿಂ ರಜಸ್ತಮಾಸಕ್ತಾಂ ತತಸ್ತಾಂ ಸೋಽಭ್ಯಯುಂಜತ ॥ ೧೬ ॥

ತತೋಽನ್ಯಾಸ್ಸಾಂಧಕಾರೇ ತು ಕ್ಷುಧಾವಿಷ್ಟಾಃ ಪ್ರಜಾಃ ಸೃಜತ್ ।
ತಾಃ ಸೃಷ್ಟ್ವಾ ತು ಕ್ಷುಧಾವಿಷ್ಟಾ ಅಂಗುಲ್ಯಾ ದಾತುಮುದ್ಯತಾಃ ॥ ೧೭ ॥

ಅಂಭಾಂಸ್ಯೇತಾನಿ ರಕ್ಷಾಮ ಉಕ್ತವಂತಸ್ತು ತೇಷು ಯೇ ।
ರಾಕ್ಷಸಾಸ್ತೇ ಸ್ಮೃತಾಸ್ತಸ್ಮಾತ್ಕ್ಷುಧಾತ್ಮಾನೋ ನಿಶಾಚರಾಃ ॥ ೧೮ ॥

ಧ್ರುವಂ ಕ್ಷಣೋಮಿ ಯೇಂಭಾಂಸಿ ತೇಷು ದೃಷ್ಟ್ವಾ ಪರಸ್ಪರಂ ।
ತೇನ ತೇ ಕರ್ಮಣಾ ಯುಕ್ತಾ ಗುಹ್ಯಕಾಃ ಕ್ರೂರಕರ್ಮಿಣಃ ॥ ೧೯ ॥

ರಕ್ಷಣೇ ಪಾಲನೇ ಚಾಪಿ ಧಾತುರೇವ ವಿಭಾವ್ಯತೇ ।
ಯಕ್ಷ ಇತ್ಯೇಷ ಧಾತುರ್ವೈ ಕ್ಷೇಪಣೇ ಸನ್ನಿರುಧ್ಯತೇ ॥ ೨೦ ॥

೧೫-೧೮ ಆ ದೇಹವು ಮರೆಯಾದ ಬಳಿಕ ಬೆಳದಿಂಗಳು ಉತ್ಪನ್ನವಾಯಿತು ಆ ಬೆಳದಿಂಗಳಲ್ಲಿ ಉತ್ಪನ್ನರಾದ ಜನರು ಸಂತೋಷದಿಂದ ಸುಖವಾಗಿದ್ದರು ಬೆಳದಿಂಗಳೂ ಸಹ ಮರೆಯಾಗಿ ಹೋಯಿತು ಬ್ರಹ್ಮನು ಬೇರೇ ದೇಹವನ್ನು ನಿರ್ಮಿಸಿದನು ಆ ದೇಹವು ರಜಸ್ತಮೋಗುಣಗಳಿಂದ ಕೂಡಿದುದಾಗಿತ್ತು ಆಗ ಎಲ್ಲೆಲ್ಲೂ ಕತ್ತಲೆಯಾಗಿತ್ತು ಆ ಕತ್ತಲೆಯಲ್ಲಿ ಸೃಷ್ಟಿಸಲ್ಪಟ್ಟವರೆಲ್ಲರೂ ಕ್ಷುತ್ಪೀಡಿತರಾಗಿಯೇ ಹುಟ್ಟಿದುದರಿಂದ ರಾಕ್ಷಸರೆಂದು ಪ್ರಸಿದ್ಧರಾದರು ಇಂತಹ ಕ್ಷುತ್ಪೀಡಿತ ರಾಕ್ಷಸರನ್ನು ರಕ್ಷಿಸುವುದಕ್ಕೋಸ್ಕರ ಬೆರಳಿನಿಂದ ಬ್ರಹ್ಮನು ನೀರನ್ನು ತೋರಿಸಿದನು ಆ ನೀರು ಇವರನ್ನು ನಾವು ರಕ್ಷಿಸುವೆವೆಂದು ಹೇಳಿದುದರಿಂದ ಕ್ಷುದ್ರೂಪಧಾರಿಗಳಾದ ನಿಶಾಚರರು ರಾಕ್ಷಸರೆಂದು ಪ್ರಸಿದ್ಧರಾದರು

೧೯-೨೦ ಈ ರೀತಿ ಉತ್ಪನ್ನರಾದ ರಾಕ್ಷಸರು ಪರಸ್ಪರ ಆ ನೀರನ್ನು ನೋಡಿ ಅದನ್ನು ತಾನು ಕುಡಿಯಬೇಕೆಂದೂ ನಾನು ಕುಡಿಯಬೇಕೆಂದೂ ಪರಸ್ಪರ ಕಡಿದಾಡಲಾರಂಭಿಸಿದರು. ಈ ಕ್ರೂರ ಕರ್ಮದಿಂದ ಯಕ್ಷರೆಂದೂ, ಗುಹ್ಯಕರೆಂದೂ ಒಳಪಂಗಡದ ಹೆಸರುಗಳುಂಟಾದುವು ಇವರುಗಳನ್ನು ಕಾಪಾಡಿಕೊಂಡು ಬರುವ ಜವಾಬ್ದಾರಿಯು ಬ್ರಹ್ಮನನ್ನೇ ಸೇರಿತು ಯಕ್ಷ ಎನ್ನುವ ಧಾತುವು ಕ್ಷೇಪಣಾರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ

ರಕ್ಷಣಾದ್ರಕ್ಷ ಇತ್ಯುಕ್ತಾಃ ಕ್ಷಪಣಾದ್ಯಕ್ಷ ಉಚ್ಯತೇ ।
ತಾನ್ದೃಷ್ಟ್ವಾ ತತ್ಕ್ಷಣೇನಾಸ್ಯ ಕೇಶಾಃ ಶೀರ್ಯಂತ ಧೀಮತಃ ॥ ೨೧ ॥

ತೇ ಶೀರ್ಣಾ ವ್ಯುತ್ಥಿತಾ ಹ್ಯೂರ್ಧ್ವಮಾರೋಹಂತ ತತಃ ಪುನಃ ।
ಸರ್ಪಣಾತ್ತು ಸ್ಮೃತಾಃ ಸರ್ಪಾಃ ಪನ್ನತ್ವಾತ್ಪನ್ನಗಾಃ ಸ್ಮೃತಾಃ ॥ ೨೨ ॥

ಬಾಲಾತ್ಮಾನಃ ಸ್ಮೃತಾ ವ್ಯಾಲಾ ಹೀನತ್ವಾಚ್ಚಾಹಯಃ ಸ್ಮೃತಾಃ ।
ಪನ್ನತ್ವಾತ್ಪನ್ನಗಾಶ್ಚಾಪಿ ಸರ್ಪಾಸ್ತೇಽಪಾಯಸರ್ಪಣಾತ್ ॥ ೨೩ ॥

ತೇಷಾಂ ಲಯಾಃ ಪೃಥಿವ್ಯಾಪಃ ಸೂರ್ಯಾಚಂದ್ರಮಸೌ ಘನಾಃ ।
ತಸ್ಯ ಕ್ರೋಧೋಭವದ್ಧೂಮುಮುಗ್ನಿಗರ್ಭಃ ಸುದಾರುಣಃ ॥ ೨೪ ॥

ಸ ತಾನ್ಸರ್ಪಾನ್ಸಮುತ್ಪನ್ನಾನಾವಿವೇಶ ವಿಷಾತ್ಮಕಾ ।
ಸರ್ಪಾನ್ದೃಷ್ಟ್ವಾ ತತಃ ಕ್ರೋಧಾತ್ಕ್ರೋಧಾತ್ಮಾನೋ ವಿನಿರ್ಮಮೇ

ಗಾಂ ಧಯಂತಸ್ತತೋ ದೃಷ್ಟ್ವಾ ಗಂಧರ್ವಾ ಅಗ್ನಿರೇತಸಃ ।
ಧಯ ಇತ್ಯೇಷ ಧಾತುರ್ವೈ ಪಾನೇ ಹ್ಯೇಷ ನಿರುಧ್ಯತೇ ॥ ೨೬ ॥

---

೨೧-೨೩ ರಕ್ಷಣೆಯಿಂದ ರಾಕ್ಷಸರೆಂದೂ ಕ್ಷೀಣತೆ (ಎರಚುವಿಕೆ) ಯಿಂದ ಯಕ್ಷರೆಂದೂ ಹೆಸರಾಯಿತು ಅವರುಗಳನ್ನು ನೋಡಿದ ಕ್ಷಣವೇ ಬ್ರಹ್ಮನ ಕೂದಲುಗಳು ಉದುರಿಹೋದುವು ಆ ಬಳಿಕ ಆ ಕೂದಲುಗಳು ಪುನಃ ಮೇಲುಮುಖನಾಗಿ ಬೆಳೆಯುವುದಕ್ಕೆ ಉಪಕ್ರಮಿಸಿದುವು ಸರಿದುಹೋಗುವ ಪ್ರಾಣಿಗಳು ಸರ್ಪಗಳೆನಿಸಿದುವು ಎದೆಯಲ್ಲಿ ಹರಿಯುವುದರಿಂದ ಪನ್ನಗ (ಹಾವು) ಗಳೆನಿಸಿಕೊಂಡವು ಬಾಲಗಳಿದ್ದುದರಿಂದ ವ್ಯಾಳಗಳೆನಿಸಿದುವು ಹೀನಸ್ವಭಾಗಳಾದ್ದರಿಂದ ಅಹಿಗಳೆನಿಸಿಕೊಂಡುವು ಇವು ಜನಗಳಿಗೆ ಅಪಾಯಗಳನ್ನುಂಟುಮಾಡುವ ಸ್ವಭಾವಗಳವುಗಳಾದ್ದರಿಂದ ಸರ್ಪಗಳೆನಿಸಿಕೊಂಡವು

೨೪-೨೬ ಭೂಮಿ-ನೀರು-ಸೂರ್ಯ ಚಂದ್ರರುಗಳೇ ಅವುಗಳ ಲಯಕ್ಕೆ ಕಾರಣಗಳು ಆ ಬ್ರಹ್ಮನ ಕೋಪವೇ ಹೊಗೆಯಾಯಿತು ದಾರುಣವಾದ ಅಗ್ನಿಗರ್ಭವೇ ಅದಕ್ಕೆ ಮೂಲವು ಸರ್ಪಗಳು ವಿಷದಿಂದ ಕೂಡಿದುವು ಬ್ರಹ್ಮನ ಕ್ರೋಧದಿಂದ ಹೊರಟ ಹೊಗೆಯೇ ಸರ್ಪಗಳ ವಿಷಗಳು ಬಳಿಕ ಗಂಧರ್ವರು ಉತ್ಪನ್ನರಾದರು ಇವರಿಗೆಅಗ್ನಿರೇತಸರೆಂದು ಹೆಸರು ಧಯ್ ಎಂಬ ಧಾತುವು ಪಾನಾರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ ಗಾಂ,-ಧಯಂತೆ, ಅಂದರೆ ಹಸುವಿನ ಹಾಲನ್ನು ಕುಡಿಯುವವರೆಂ

**ಪಿಬಂತೋ ಜಜ್ಞಿರೇ ವಾಚಾ ಗಂಧರ್ವಾಸ್ತೇನ ತೇ ಸ್ಮೃತಾಃ ।
ಕರ್ಣೇನ ಕಪಿಲಾ ಭೂತ್ವಾ ಪಿಶಾಚಾಃ ಕಪಿಶಾ ಹ್ಯಲಂ ॥ ೨೭ ॥**

**ಭೂತತ್ವಾತ್ತೇ ಸ್ಮೃತಾ ಭೂತಾಃ ಪಿಶಾಚಾಃ ಪಿಶಿತಾಶಿನಃ ।
ಅಷ್ಟಾಸು ತಾಸು ಸೃಷ್ಟಾಸು ದೇವಯೋನಿಷು ಸ ಪ್ರಭುಃ ॥ ೨೮ ॥**

**ತತಃ ಸ್ವಚ್ಛಂದತೋಽನ್ಯಾನಿ ವಯಾಂಸಿ ವಯಸಾ ಸೃಜತ್ ।
ಪಕ್ಷಿಣಃ ಸ ತು ಸೃಷ್ಟ್ವಾ ವೈ ತತಃ ಪಶುಗಣಾನ್ಸೃಜತ್ ॥ ೨೯ ॥**

**ಮುಖತೋಽಜಾ ಸೃಜನ್ಸೋಽ ವೈ ವಕ್ಷಸಶ್ಚಾವಯೋಽಸೃಜತ್ ।
ಗಾವಶ್ಚೈವೋದರಾದ್ಬ್ರಹ್ಮಾ ಪುನರನ್ಯಾಂಶ್ಚ ನಿರ್ಮಮೇ ॥ ೩೦ ॥**

**ಪಾದತೋಽಶ್ವಾಂಸ್ತುರಂಗಾಂಶ್ಚ ರಾಸಭಾನ್ಗವಯಾನ್ಮೃಗಾನ್ ।
ಉಷ್ಟ್ರಾಂಶ್ಚೈವ ವರಾಹಾಂಶ್ಚ ಶ್ವಾನಾನನ್ಯಾಂಶ್ಚ ಜಾತಯಃ ॥ ೩೧ ॥**

**ಓಷಧ್ಯಃ ಫಲಮೂಲಿನ್ಯೋ ರೋಮಭಿಸ್ತಸ್ಯ ಜಜ್ಞಿರೇ ।
ಏವಂ ವಿಧೌಷಧೀಃ ಸೃಷ್ಟ್ವಾ ನ್ಯಯುಂಜತ್ಸೋಽಧ್ವರೇಷು ತಾಃ ॥ ೩೨ ॥**

---

ವರ್ಗ ಹಸುವಿನ ಹಾಲನ್ನು ಕುಡಿದು ಹುಟ್ಟಿದವರಾದ ಈ ಗಂಧರ್ವರು ಮಾತಿನಿಂದ ಲೂ ಗಂಧರ್ವರೇ (ಸೊಗಸಾದ ಕಂಠವುಳ್ಳವರು) ಆದರು ಬ್ರಹ್ಮನ ಕರ್ಣದಿಂದ ಹೊಂಬಣ್ಣವಾಗಿ ಹುಟ್ಟಿದ ಪ್ರಾಣಿಗಳು ಪಿಶಾಚಿಗಳೆಂದೆನಿಸಿಕೊಂಡರು ಮತ್ತು ಇವು ಹಿಂದೆಯೇ ಇದ್ದುದರಿಂದ ಭೂತಗಳೆಂದೂ ಪಿಶಿತ (ಮಾಂಸ) ವನ್ನು ತಿನ್ನುವುದರಿಂದ ಪಿಶಾಚಿಗಳೆಂದೂ ಪ್ರಸಿದ್ಧವಾಗಿ ಪರಿಣಮಿಸಿದುವು ಈ ರೀತಿ ದೇವಯೋನಿವಿಶೇಷ ಗಳನ್ನು ಎಂಟು ವಿಧವಾಗಿ ಬ್ರಹ್ಮನು ಸೃಷ್ಟಿಸಿದನು ಅನಂತರ ತನ್ನ ಸ್ವಂತ ಇಚ್ಛೆ ಯಿಂದ ಪಕ್ಷ (ರೆಕ್ಕೆ) ವುಳ್ಳ ಹಕ್ಕಿಗಳನ್ನು ನಾನಾವಿಧವಾಗಿ ಸೃಜಿಸಿದನು ಆ ಮೇಲೆ ಪಶುಗಣಗಳನ್ನು ಸೃಷ್ಟಿಸಿದನು

೩೦-೩೪ ಮುಖದಿಂದ ಆಡುಗಳು, ಎದೆಯಿಂದ ಟಗರುಗಳು, ಹೊಟ್ಟೆಯಿಂದ ಹಸುಗಳು ಮತ್ತು ಇತರ ಚತುಷ್ಪಾದಜಂತುಗಳು ಕಾಲಿನಿಂದ ಕುದುರೆಗಳು, ಕತ್ತೆ ಗಳು, ನರಿಗಳು, ಒಂಟೆಗಳು, ಹಂದಿಗಳು, ನಾಯಿಗಳು, ಇತರ ಚತುಷ್ಪಾತ್ಪಶುಗಳು ಕೂದಲುಗಳಿಂದ ಓಷಧಿಲತೆಗಳು, ಫಲಮೂಲಗಳು ಸಹ ಹುಟ್ಟಿದುವು ಈರೀತಿ ಯಾಗಿ ಓಷಧಿಲತೆಗಳನ್ನು ಸೃಷ್ಟಿಸಿ ಅವುಗಳನ್ನು ಯಜ್ಞದಲ್ಲಿ ಉಪಯೋಗವಾಗಲೆಂದು

ಅಸ್ಯ ತ್ವಾದೌ ತು ಕಲ್ಪಸ್ಯ ತ್ರೇತಾಯುಗಮುಖೇ ಪುರಾ ।
ಗೌರಜಃ ಪುರುಷೋಥಾವಿರಥಾಶ್ವತರಗರ್ದಭಾಃ　　　॥ ೩೩ ॥

ಏತೇ ಗ್ರಾಮ್ಯಾಃ ಸ್ಮೃತಾಃ ಸಪ್ತ ಆರಣ್ಯಾಃ ಸಪ್ತ ಚಾಪರೇ ।
ಮಹಿಷೋ ಗವಯೋಽಷ್ಟ್ರಾಸ್ತು ದ್ವಿಖುರಃ ಶರಭೋ ದ್ವಿಪಃ　　　॥ ೩೪ ॥

ಮರ್ಕಟಃ ಸಪ್ತಮಸ್ತೇಷಾಮಾರಣ್ಯಾಃ ಪಶವಸ್ತು ತೇ ।
ಗಾಯತ್ರೀಂ ಚ ಋಚಂ ಚೈವ ತ್ರಿವೃತ್ಸ್ತೋಮಂ ರಥಂತರಂ　　　॥ ೩೫ ॥

ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್ ।
ಯಜೂಂಷಿ ತ್ರೈಷ್ಟುಭಂ ಛಂದಃ ಸ್ತೋಮಂ ಪಂಚದಶಸ್ತಥಾ　　　॥ ೩೬ ॥

ಬೃಹತ್ಸಾಮ ತಥೋಕ್ತಂ ಚ ದಕ್ಷಿಣಾತ್ಸೋಽಸೃಜನ್ಮುಖಾತ್
ಸಾಮಾನಿ ಜಗತೀ ಚೈವ ಸ್ತೋಮಂ ಸಪ್ತದಶಂ ತಥಾ　　　॥ ೩೭ ॥

ವೈರೂಪ್ಯಮತಿರಾತ್ರಂ ಚ ಪಶ್ಚಿಮಾತ್ಸೋಽಸೃಜನ್ಮುಖಾತ್ ।
ಆಥರ್ವಮೇಕವಿಂಶಂ ಚ ತ್ರಿಷ್ಟುಬ್ವೈರಾಜಮೇವ ಚ ।
ಅಪ್ತೋರ್ಯಾಮಂ ಚ ಯಜ್ಞಾನಾಂ ಚೋತ್ತರಾತ್ಸೋಽಸೃಜನ್ಮುಖಾತ್

ಅಜ್ಞಮಾಡಿದನು　ಈಗ ಹಿಂದೆ ಕಳೆದ ತ್ರೇತಾಯುಗದಾದಿಯಲ್ಲಿ ಬಿಳೀ ಆಡು, ಬಿಳೀ ಟಗರು, ಹೇಸರುಕತ್ತೆ, ಕತ್ತೆಗಳು, ಇನ್ನೂ ಕೆಲವು ಗ್ರಾಮ್ಯಪಶುಗಳು, ಏಳು ವಿಧವಾದ ಅರಣ್ಯಪಶುಗಳು ಸಹ ನಿರ್ಮಾಣಮಾಡಲ್ಪಟ್ಟಿದ್ದುವು　ಆರಣ್ಯಪಶುಗಳಾವುವೆಂದರೆ —ಕಾಡುಕೋಣ, ನರಿ, ಒಂಟೆ, ಆನೆ, ಕರಡಿ, ಎರಡು ಗೊರಸಲಿನ ಪ್ರಾಣಿ, ಕಪಿ ಇವುಗಳು

೩೫-೩೮　ಈರೀತಿ ಏಳುವಿಧವಾದ ಅರಣ್ಯಪಶುಗಳನ್ನು ನಿರ್ಮಾಣಮಾಡಿದ ಬಳಿಕ ಬ್ರಹ್ಮನು ತನ್ನ ಚತುರ್ಮುಖಗಳಲ್ಲಿ ಮೊದಲನೆಯ ಮುಖದಿಂದ ಗಾಯತ್ರಿಯನ್ನೂ ಋಕ್ಕುಗಳನ್ನೂ, ತ್ರಿವೃತ್‌ಸ್ತೋಮ, ರಥಂತರಸ್ತೋಮಗಳನ್ನೂ, ಯಜ್ಞಗಳಲ್ಲಿ ಶ್ರೇಷ್ಠವಾದ ಅಗ್ನಿಷ್ಟೋಮ ಯಜ್ಞವನ್ನೂ ನಿರ್ಮಿಸಿದನು　ಬಳಿಕ ದಕ್ಷಿಣಮುಖದಿಂದ ಯಜ್ಞ, ತ್ರಿಷ್ಟುಪ್‌ಛಂದಸ್ಸು, ಸ್ತೋಮ, ಪಂಚದಶ, ಬೃಹತ್ಸಾಮಗಳನ್ನೂ ನಿರ್ಮಾಣಮಾಡಿದನು　ಬಳಿಕ ಪಶ್ಚಿಮಮುಖದಿಂದ ಜಗತೀ ಛಂದಸ್ಸು ಸ್ತೋಮ ಸಪ್ತದಶ, ವೈರೂಪ್ಯ, ಅತಿರಾತ್ರಗಳನ್ನೂ ನಿರ್ಮಾಣಮಾಡಿದನು　ಬಳಿಕ ಉತ್ತರಮುಖದಿಂದ, ಅಥರ್ವಶೀರ್ಷ, ಏಕವಿಂಶಸ್ತೋಮ, ತ್ರಿಷ್ಟುಪ್, ವೈರಾಜಗಳನ್ನೂ ಯಜ್ಞಗಳೊಳಗೆ ಉತ್ತಮವಾದ ಅಪ್ತೋರ್ಯಾಮವನ್ನೂ ಸೃಷ್ಟಿಸಿದನು

ವಿದ್ಯುತೋಽಶನಿಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ॥ ೩೯ ॥

ಸೃಷ್ಟ್ವಾ ಚತುಷ್ಟಯಂ ಪೂರ್ವಂ ದೇವರ್ಷಿಪಿತೃಮಾನವಾನ್ ।
ತತೋಽಸೃಜತ್ಸ ಭೂತಾನಿ ಸ್ಥಾವರಾಣಿ ಚರಾಣಿ ಚ ॥ ೪೦ ॥

ಸೃಷ್ಟ್ವಾ ಯಕ್ಷಪಿಶಾಚಾಶ್ಚ ಗಂಧರ್ವಾಪ್ಸರಸಸ್ತಥಾ ।
ನರಕಿನ್ನರರಕ್ಷಾಂಸಿ ವಯಃ ಪಶುಮೃಗೋರಗಾ ॥ ೪೧ ॥

ಅವ್ಯಯಂ ಚ ವ್ಯಯಂ ಚೈವ ದ್ವಯಂ ಸ್ಥಾವರಜಂಗಮಂ ।
ಜರಾಯುಜಂ ಚಾಂಡಜಂ ಚ ಸಸ್ವೇದಜ ಮಥೋದ್ಭಿಜಂ ॥ ೪೨ ॥

ಭೂತಗ್ರಾಮಂ ಸಕೃತವಾನ್ದೇವದೇವಶ್ಚತುರ್ವಿಧಂ ।
ಪಶವಶ್ಚ ಮೃಗಾಶ್ಚೈವ ವ್ಯಾಲಾಶ್ಚೋಭಯತೋತತಃ ॥ ೪೩ ॥

ರಕ್ಷಾಂಸಿ ಚ ಪಿಶಾಚಾಂಶ್ಚ ಮನುಷ್ಯಾಂಶ್ಚ ಜರಾಯುಜಾಃ ।
ಅಂಡಜಾಃ ಪಕ್ಷಿಣಃ ಸರ್ಪಾ ನಕ್ರಾನ್ಮತ್ಸ್ಯಾಂಶ್ಚ ಕಚ್ಛಪಾ ॥ ೪೪ ॥

ಯಾನಿ ಚೈವಂ ಪ್ರಕಾರಾಣಿ ಸ್ಥಾವರಾಣಿ ಚರಾಣಿ ಚ ।
ಸ್ವೇದಜಂ ದಂಶಮಶಕಯೂಕಾಮಕ್ಷಿಕಮತ್ಕುಣಂ ॥ ೪೫ ॥

---

೩೯–೪೫ ಬಳಿಕ ಮಿಂಚು, ಸಿಡಿಲು, ಮೋಡ, ಗುಡುಗು, ಕಾಮನಬಿಲ್ಲು, ಇವುಗಳನ್ನು ಸೃಷ್ಟಿಮಾಡಿದನು ಈರೀತಿ ಐದನ್ನೂ ಸೃಷ್ಟಿಮಾಡಿದ ಬಳಿಕ ದೇವ ಋಷಿ ಮಾನವ ಪಿತೃಾದಿ ಚತುಷ್ಟಯವಂ ನಿರ್ಮಿಸಿದನು ಅನಂತರ ಭೂತಗಳನ್ನೂ ಸ್ಥಾವರಜಂಗಮ ಪ್ರಾಣಿಗಳನ್ನೂ ಸೃಷ್ಟಿಸಿದನು ಬಳಿಕ ಯಕ್ಷ ಪಿಶಾಚರೂ, ಗಂಧರ್ವಾಪ್ಸರಸುಗಳೂ, ನರಕಿನ್ನರರಾಕ್ಷಸರೂ, ಸೃಷ್ಟರಾದರು ಬಳಿಕ ಪಕ್ಷಿಗಳೂ, ಪಶುಮೃಗಗಳೂ, ಹಾವುಗಳೂ, ಉತ್ಪತ್ತಿನಾಶಗಳೂ, ಚರಸ್ಥಿರ ಪ್ರಾಣಿಗಳೂ ಸೃಷ್ಟವಾದುವು ಬಳಿಕ ಮನುಷ್ಯರೂ (ಜರಾಯುಜ) ಮೊಟ್ಟೆಯಿಂದ ಹುಟ್ಟುವ (ಅಂಡಜ) ಪ್ರಾಣಿಗಳೂ, ಬೆವರಿನಿಂದ (ಸೊಳ್ಳೆ ಮುಂತಾದ) ಪ್ರಾಣಿಗಳೂ ಮರಗಿಡವೇ ಮುಂತಾದ (ಉದ್ಭಿಜಗಳೂ) ಪ್ರಾಣಿಗಳೂ ಉತ್ಪನ್ನವಾದುವು ಬಳಿಕ ಅನೇಕ ಭೂತಗಳು ಉತ್ಪತ್ತಿಯಾದುವು ಬಳಿಕ ಪಶುಗಳೂ, ಮೃಗಗಳೂ, ವಿಚಿತ್ರವಿಚಿತ್ರ ಹಾವುಗಳೂ, ನಾನಾವಿಧ ಮನುಷ್ಯರೂ, ಮೊಸಳೆ, ಆಮೆ, ಮೀನುಗಳೂ, ಬೆವರಿನಿಂದ ಹುಟ್ಟುವ ಸೊಳ್ಳೆ, ಹೇನು, ನೊಣ, ತಿಗಣೆಗಳೂ ಉತ್ಪತ್ತಿಯಾದುವು.

**ಊಷ್ಮಣಶ್ಚೋಪಜಾಯಂತೇ ಯಚ್ಚಾನ್ಯತ್ಕಿಂಚಿದೀದೃಶಂ ।**
**ಉದ್ಭಿಜ್ಜಾಸ್ತರವಃ ಸರ್ವೇ ಬೀಜಕಾಂಡಪ್ರರೋಹಿಣಃ　　॥ ೪೬ ॥**

**ಓಷಧ್ಯಃ ಫಲಪಾಕಾಂತಾ ಬಹುಪುಷ್ಪಫಲೋಪಗಾಃ ।**
**ಅಪುಷ್ಪಾಃ ಫಲವಂತೋ ಯೇ ತೇ ವನಸ್ಪತಯಃ ಸ್ಮೃತಾಃ　　॥ ೪೭ ॥**

**ಪುಷ್ಪಿಣಃ ಫಲಿನಶ್ಚೈವ ವೃಕ್ಷಾಸ್ತೂಭಯತಃ ಶುಭಾಃ ।**
**ಪ್ರತಾನಾಶ್ಚೈವ ವಲ್ಲ್ಯಶ್ಚ ವೀರುಧಃ ಪರಿಕೀರ್ತಿತಾಃ　　॥ ೪೮ ॥**

**ಗುಚ್ಛಗುಲ್ಮಂ ತು ವಿವಿಧಂ ತಥೈವ ತೃಣಜಾತಯಃ ।**
**ಬೀಜಕಾಂಡರುಹಾಣ್ಯೇವ ಪ್ರತಾನಾ ವಲ್ಲ್ಯ ಏವ ಚ　　॥ ೪೯ ॥**

**ತಮಸಾ ಬಹುರೂಪೇಣ ವೇಷ್ಟಿತಾಃ ಕರ್ಮಹೇತುನಾ ।**
**ಅನುಸಂಜ್ಞಾ ಭವಂತ್ಯೇತೇ ಸುಖದುಃಖಸಮನ್ವಿತಾಃ　　॥ ೫೦ ॥**

---

೪೬-೫೦ ಕೆಲವು ಪ್ರಾಣಿಗಳು ಬಿಸಿಲಿನಿಂದ ಹುಟ್ಟಿದುವು ಇದೇ ರೀತಿ ಭೂಮಿಯೊಳಗೆ ತಮ್ಮಷ್ಟಕ್ಕೆ ತಾವೇ ಕೆಲವು ಮರಗಳು ಹುಟ್ಟಿದುವು ಬಿತ್ತ, ಕೊಂಬೆಗಳಾಗಿಯೇ ಕೆಲವು ಮರಗಳಾದುವು ಓಷಧಿಲತಗಳು, ಮತ್ತು ಫಲಬಿಟ್ಟಕೂಡಲೇ ಒಣಗಿ ಹೋಗತಕ್ಕ ಬೆಳೆಗಳು (ಭತ್ತ, ರಾಗಿ, ಜೋಳ, ನವಣೆ ಇತ್ಯಾದಿಗಳು) ಬಾಳೆಗಿಡವೇ ಮುಂತಾದ ಮನೋಹರವಾದ ಗಿಡಗಳು, ಬಹಳ ಹೂವು ಬಿಡುವ ಜಾಜಿ, ಮಲ್ಲಿಗೆ, ಸಂಪಿಗೆ ಮುಂತಾದ ಗಿಡಗಳೂ, ಬಹು ಹಣ್ಣುಗಳನ್ನು ಬಿಡುವ ಸೀಬೆ, ಅಂಜೂರ, ದಾಡಿಮಾ ಮುಂತಾದ ಹಣ್ಣಿನ ಮರಗಳೂ ಉತ್ಪತ್ತಿಮಾಡಲ್ಪಟ್ಟುವು ಕೆಲವು ಗಿಡಗಳು ಹೂವೇ ಬಿಡದೆ ಹಣ್ಣಾಗಿಯೇ ಇರುವುವು ಕೆಲವು ಹೂವೂ ಬಿಟ್ಟು ಹಣ್ಣು ಬಿಡುವುವು ಕೆಲವು ತೋರಣವಹಾಗ ಸಾಲಾಗಿಯೂ, ಚಿತ್ರವಿಚಿತ್ರವಾಗಿ ಹೊಮ್ಮುವ ಬಳ್ಳಿಗಳಿಗೂ ವೀರುಧಗಳೆಂದು ಹೆಸರು ಇವು ಗೊನೆಗೊನೆಯಾಗಿ ಬಿಡುವುವು ಕಲವು ಗೊಂಚಲುಗೊಂಚಲಾಗಿ ಬಿಡುವುವ (ದ್ರಾಕ್ಷಿ) ಕೆಲವು ಮತ್ತು ನಾನಾತರಹ ಹುಲ್ಲುಗಳು ಬೀಜ ಕೊಂಬಗಳನ್ನೇ ಬಿಡುವುವು ಕೆಲವು. ನಾನಾ ರಂಗುರಂಗಾಗಿ ಬಿಡುವ ಬಳ್ಳಿಗಳು ಕೆಲವು ಇಂತಹ ಹೇಳಲಿಕ್ಕೇ ಸಾಧ್ಯವಿಲ್ಲದ ಎಷ್ಟೋವಿಧ ಮರ ಗಿಡ ಬಳ್ಳಿಗಳು ಉತ್ಪತ್ತಿಯಾದುವು ಇವೆಲ್ಲವುಗಳೂ ತಮೋಗುಣ ಪ್ರಧಾನವಾದ ಸೃಷ್ಟಿಗಳು ಈರೀತಿ ಬಹುಪ್ರಾಣಿಗಳು ತಮ್ಮತಮ್ಮ ಘೋರಕರ್ಮ ಕಾರಣಗಳಿಂದ ಬಿಗಿಯಲ್ಪಟ್ಟು (ಕರ್ಮಬೀಜಗಳಾಗಿದ್ದು) ಸುಖದುಃಖಗಳನ್ನನುಭವಿಸುತ್ತಾ ಭೂಲೋಕದಲ್ಲಿ ಜನಿಸು

ಏಕದಂತಾಸ್ತು ಗತಯೋ ಬ್ರಹ್ಮಾದ್ಯಾಃ ಸಮುದಾಹೃತಾಃ ।
ಘೋರೇಸ್ಮಿನ್ಭೂತಸಂಸಾರೇ ನಿತ್ಯೇ ಸತತಯಾಯಿನಿ ॥ ೫೧ ॥

ಯಂ ತು ಕರ್ಮಣಿ ಯಸ್ಮಿನ್ಸನ್ಯಯುಂಕ್ತ ಪ್ರಥಮಂ ಪ್ರಭುಃ ।
ತತ್ತದೇವ ಸ್ವಯಂ ತೇಜೋ ಯುಜ್ಯಮಾನಃ ಪುನಃ ಪುನಃ ॥ ೫೨ ॥

ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೇ ಋತಾನೃತೇ ।
ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ೫೩ ॥

ಯದ್ಯಸ್ಯ ಸೋದದಾತ್ಸರ್ಗೇ ಸ ತತ್ತತ್ಸ್ವಯಮಾವಿಶತ್ ।
ಯಥಾರ್ತುಲಿಂಗಾನ್ಯೃತವಃ ಸ್ವಯಮೇವ ತು ಪರ್ಯಯೇ ॥ ೫೪ ॥

ಸ್ವಾನಿಸ್ವಾನ್ಯಭಿಪದ್ಯಂತೇ ತಥಾ ಕರ್ಮಾಣಿ ದೇಹಿನಾಂ ।
ಲೋಕಾನಾಂ ತು ವಿಶುದ್ಧ್ಯರ್ಥಂ ಮುಖಬಾಹೂರುಪಾದತಃ ॥ ೫೫ ॥

ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ।
ಅಸ್ಮಾದ್ವೈ ಬ್ರಾಹ್ಮಣಾ ಜಾತಾ ಬಾಹುಭ್ಯಾಂ ಕ್ಷತ್ರಿಯಾಃ ತುಭಾಃ ॥ ೫೬ ॥

---

ವುವು ಬ್ರಹ್ಮಾದಿ ಪಿಪೀಲಿಕಾ (ದೊಡ್ಡವನೆಂದರೆ ಬ್ರಹ್ಮ, ಚಿಕ್ಕದಂದರೆ ಇರುವೆ) ಪರ್ಯಂತವಾದ ಸೃಷ್ಟಜೀವಿಗಳಲ್ಲೇ ಅಣೋರಣೀಯನೂ, ಮಹತೋಮಹೀಯನೂ ಆದ ಆ ಅನಿರ್ದೇಶ್ಯವಪುವಾದ ಪರಮಾತ್ಮನು ಏಕಮುಲಭಗತಿಯಿಂದ ವಿರಾಜಿಸುತ್ತಿರುವನು ಘೋರತರವಾದ ಈ ಪ್ರಾಣಿ (ಭೂತ) ಗಳ ಸಂಸಾರವು ಪ್ರತಿನಿತ್ಯವೂ ಹೊಳಹರಿಯುವಂತೆ ಯಾವಾಗಲೂ ಹರಿದುಕೊಂಡೇ ಹೋಗುತ್ತಿರುವುದು ಇದಕ್ಕೆ ತುದಿ ಮೊದಲೇ ಇಲ್ಲ ಮೊಟ್ಟಮೊದಲು ಪರಮಾತ್ಮನು ಯಾವ ಪ್ರಾಣಿಯಲ್ಲಿ ಯಾವ ಕರ್ಮವನ್ನು ನೇರಿಸಿದನೋ ಅದದೇ ಕರ್ಮಗಳು ಅ ಪ್ರಾಣಿಯನ್ನನುಸರಿಸಿ ಪುನಃ ಪುನಃ ಬಳಲಿಸುತ್ತಿರುವುವು

೫೩-೬೧ ಯಾರು ಹಿಂಸೆಮಾಡುವ ಸ್ವಭಾವವುಳ್ಳವರೋ ಮತ್ತದಾರು ಪ್ರಾಣಿಹಿಂಸ ಮಾಡದಿರುವರೋ ಮತ್ತದಾರು ಮೃದುಹೃದಯರೋ ಅಥವಾ ಕಠಿಣಾತ್ಮರಾಗಿರುವರೋ ಧರ್ಮಾಧರ್ಮಗಳನ್ನು ತಿಳಿದವರಾರೋ ಸುಳ್ಳುನಿಜಗಳನ್ನು ಯಾರು ಸ್ವಭಾವವಾಗಿ ಅವಲಂಬಿಸಿರುವರೋ ಆಯಾಯ ಜನರಿಗೆ ಆಯಾ ಮನಸ್ಸಿಗೆ ಅದು ಇಷ್ಟವಾಗಿರುತ್ತದೆ ಭಗವಂತನು ಯಾರಿಗೆ ಯಾವುದನ್ನು ಮೊದಲು ಕೊಟ್ಟನೋ ಆಯಾ ಕರ್ಮ

ಊರುಭ್ಯಾಂ ಚ ವಿಶಃ ಸೃಷ್ಟಾಃ ಶೂದ್ರಃ ಪದ್ಭ್ಯಾಮಜಾಯತ ।
ವರ್ಣಾನಾಮಾಶ್ರಮಾಣಾಂ ಚ ಧರ್ಮಂ ಚಕ್ರೇ ಪೃಥಕ್ಪೃಥಕ್ ॥ ೫೭ ॥

ಸ್ವಧರ್ಮೇ ಚ ನಿವಿಷ್ಟಾನಾಂ ಸ್ಥಾನಾನಿ ವ್ಯದಧಾತ್ಪ್ರಭುಃ ।
ಬ್ರಹ್ಮಲೋಕಂ ಬ್ರಾಹ್ಮಣಾನಾಂ ಶಾಕ್ರಂ ಕ್ಷತ್ರಿಯಜನ್ಮನಾಂ ॥ ೫೮ ॥

ಮಾರುತಂ ಚ ವಿಶಾಂ ಸ್ಥಾನಂ ಗಾಂಧರ್ವಂ ಶೂದ್ರಜನ್ಮನಾಂ ।
ಬ್ರಹ್ಮಚಾರಿವ್ರತಸ್ಥಾನಾಂ ಬ್ರಹ್ಮಲೋಕಂ ಪ್ರಜಾಪತಿಃ ॥ ೫೯ ॥

ಪ್ರಾಜಾಪತ್ಯಂ ಗೃಹಸ್ಥಾನಾಂ ಯಥಾವಿಹಿತಕಾರಿಣಾಂ ।
ಸ್ಥಾನಂ ಸಪ್ತಋಷೀಣಾಂ ಚ ತಥೈವ ವನವಾಸಿನಾಂ ॥ ೬೦ ॥

ಯತೀನಾಮಕ್ಷಯಂ ಸ್ಥಾನಂ ಯತ್ರೇಚ್ಛಾಗಾಮಿನಾಂ ಸದಾ ।
ಕೃತ್ವಾ ಸ ಸೂತ್ರಸಂಸ್ಥಾನಂ ಪ್ರಜಾಗರ್ಭಂ ತು ಮಾನಸಂ ॥ ೬೧ ॥

---

ಗಳನ್ನು ಅವರವರು ಅನುಭವಿಸಲೇಬೇಕಾದ್ದು ಸಹಜವು ಋತು, ಆಯನ, ಪಕ್ಷ ಗಳು ತಮ್ಮತಮ್ಮ ಸಹಜವೃತ್ತಿಯನ್ನು ಬಿಡದೆ ನಡೆಸಿಕೊಂಡು ಹೋಗುವಂತೆ ಕರ್ಮ ಗತಿಗಳು ದೇಹಿಗಳನ್ನನುಸರಿಸಿಕೊಂಡೇ ಇರುತ್ತವೆ

ಇಂತು ಲೋಕದಲ್ಲಿ ಕರ್ಮಗಳು ಪ್ರಾಣಿಗಳನ್ನು ಅನುಸರಿಸಿಕೊಂಡು ಹೋಗು ತ್ತಲೇ ಇದ್ದರೆ ಲೋಕವು ಅಶುದ್ಧವಾಗಿಯೇ ನಿಲ್ಲುವುದಿಲ್ಲವೋ ಎಂದು ಸಂದೇಹಪಡು ವುದಕ್ಕೆ ಅವಕಾಶವಿಲ್ಲದಂತೆ ಬುದ್ಧಿಜೀವಿಗಳಾದ ಮನುಷ್ಯರನ್ನು ನಾಲ್ಕುವಿಧವಾಗಿ ಬ್ರಹ್ಮನು ನಿರ್ಮಿಸಿದನು ಆ ಮನುಷ್ಯಪ್ರಾಣಿಗಳು, ಮುಖ, ತೋಳು, ತೊಡೆ, ಕಾಲುಗಳಿಂದ ನಿರ್ಮಿತರಾದರು ಮುಖದಿಂದ ಬ್ರಾಹ್ಮಣರು ಹುಟ್ಟಿದರು ಬಾಹು ಗಳಿಂದ ಕ್ಷತ್ರಿಯರು ಹುಟ್ಟಿದರು ತೊಡೆಗಳಿಂದ ವೈಶ್ಯರೂ, ಕಾಲುಗಳಿಂದ ಶೂದ್ರರೂ ಸಹ ಹುಟ್ಟಿದರು ಈರೀತಿ ನಾಲ್ಕು ವರ್ಣಗಳನ್ನು ಸೃಷ್ಟಿಮಾಡಿ ಆ ವರ್ಣಗಳಿಗೆ ಆಶ್ರಮಧರ್ಮಗಳನ್ನು ಮೀರದೇ ಇರುವುದಕ್ಕಾಗಿ ವರ್ಣಾಶ್ರಮಧರ್ಮಗಳನ್ನು ಬೇರೆ ಬೇರೆಯಾಗಿ ಗೊತ್ತುಮಾಡಿದನು ಈರೀತಿ ಗೊತ್ತುಮಾಡಿ ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ಎಂಬ ವಚನದಂತೆ ಪ್ರತಿಯೊಬ್ಬನೂ ತನ್ನ ವರ್ಣಾಶ್ರಮಧರ್ಮಗಳನ್ನು ಕಾಪಾಡಿಕೊಂಡು ಬಂದರೆ ಅಂತಹವನು ಒಳ್ಳೆಯ ಗತಿ ಯನ್ನು ಹೊಂದುವಂತೆ ನಿಧಾಯಕಮಾಡಿದನು ಆ ರೀತಿ ಧರ್ಮಗಳನ್ನಾರು ಕಾಪಾ

ಅಥಾಸೃಜತ್ಪ್ರಜಾಕರ್ತಾ ಮಾನಸಾನ್ ತನಯಾನ್ಪ್ರಭುಃ ।
ಧರ್ಮಂ ರುದ್ರಂ ಮನುಂ ಚೈವ ಸನಕಂ ಚ ಸನಂದನಂ ॥ ೬೨ ॥

ಭೃಗುಂ ಸನತ್ಕುಮಾರಂ ಚ ರುಚಿಂ ಶ್ರದ್ಧಾಂ ತಥೈವ ಚ ।
ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಂ ॥ ೬೩ ॥

ವಸಿಷ್ಠಂ ಚ ಮಹಾಭಾಗಂ ನಾರದಂ ಚ ಮಹಾಮುನಿಂ ।
ಸ್ವಭಾಸ್ಕರಾನ್ಬರ್ಹಿಷದಃ ಅಗ್ನಿಷ್ವಾತ್ತಾಂ ಸ್ತಥೈವ ಚ ॥ ೬೪ ॥

ಕ್ರವ್ಯಾದಾಂಶ್ಚೋಪಹೂತಾಂಶ್ಚ ಆಜ್ಯಪಾಂಶ್ಚ ಸುಕಾಲಿನಃ ।
ಆದ್ಯಾ ಮೂರ್ತಿವಿಹೀನಾಶ್ಚ ತ್ರಯಸ್ತೇಷಾಂ ಗಣಾಃ ಸ್ಮೃತಾಃ ॥ ೬೫ ॥

---

ಡಿಕೊಂಡುಬರುವವರಿಗೆ ಯಾವಯಾವ ದಿವ್ಯಲೋಕವಾಸವು ಪ್ರಾಪ್ತವಾಗುವುದೆಂದು ಈಗ ಹೇಳುತ್ತಾರೆ

ಬ್ರಾಹ್ಮಣರಿಗೆ ಬ್ರಹ್ಮಲೋಕಪ್ರಾಪ್ತಿ ಕ್ಷತ್ರಿಯರಿಗೆ ಇಂದ್ರಲೋಕಪ್ರಾಪ್ತಿ ವೈಶ್ಯರಿಗೆ ವಾಯುಲೋಕವೂ, ಶೂದ್ರರಿಗೆ ಗಂಧರ್ವಲೋಕವೂ ಸಹ ಪ್ರಾಪ್ತವಾಗುವುದು ಬ್ರಹಚರ್ಯವ್ರತದಿಂದಲೇ ಜನ್ಮವನ್ನು ಕಳೆದವರಿಗೆ ಬ್ರಹ್ಮನು ತನ್ನ ಲೋಕದಲ್ಲಿ ವಾಸವನ್ನುಂಟುಮಾಡುವನು ಗ್ರಹಸ್ಥಾಶ್ರಮದಲ್ಲಿಯೇ ಇದ್ದವರಿಗೆ ಪ್ರಾಜಾಪತ್ಯಲೋಕವಾಸ (ಸತ್ಯಲೋಕ) ವು ಸಿದ್ಧಿಸುವುದು ವಾನಪ್ರಸ್ಥಾಶ್ರಮಿಗಳಿಗೆ ಸಪ್ತರ್ಷಿಲೋಕದಲ್ಲಿ ಸ್ಥಳವು ಸಿಕ್ಕುವುದು ಸನ್ಯಾಸಾಶ್ರಮದಲ್ಲಿದ್ದು ಮುಕ್ತರಾದವರಿಗೆ ಸ್ಥಾನವಾವುದೆಂದು ಹೇಳಿಯೇ ಇಲ್ಲ ಅವರು ಎಲ್ಲಿ ಯಾವ ಲೋಕದಲ್ಲಿದ್ದರೂ ಆಕ್ಷೇಪವಿಲ್ಲ (ಮೋಕ್ಷವನ್ನು ಹೊಂದದೆ ಆಶಾಪರರಾದವರ ವಿಷಯವೆಂದು ತಿಳಿಯಬೇಕು) ಈರೀತಿಯಾಗಿ ಒಂದು ಸೂತ್ರಸಮೂಹವನ್ನು ನಿಷ್ಕರ್ಷಿಸಿ ಪ್ರಜಾವರ್ಗದ ಮನಸ್ಸಿನ ಮೇಲೆ ಬ್ರಹ್ಮನು ಒಂದು ಪರಿಣಾಮವನ್ನುಂಟುಮಾಡಿದನು

೬೨-೬೬ ತಾನೇ ಸೃಷ್ಟಿಮಾಡುವುದೆಂದರೆ ಒಬ್ಬನಿಗೆ ಬಹಳ ಕಷ್ಟವಾಗುವುದೆಂದರಿತು ಬ್ರಹ್ಮನು ಪ್ರಜಾಸೃಷ್ಟಿಗೋಸ್ಕರವೇ ಕೆಲವು ಮಂದಿ ಮಾನಸಪುತ್ರರನ್ನು (ಮನಸ್ಸಿನಲ್ಲಿ ಮಕ್ಕಳಾಗಬೇಕೆಂದೊಡನೆ ತಕ್ಷಣ ಉತ್ಪತ್ತಿಯಾದ ಅಯೋನಿಜರು) ನಿರ್ಮಾಣಮಾಡಿದನು. ಅವರುಗಳ ಹೆಸರುಗಳನ್ನು ಹೇಳುತ್ತೇನೆ.

ಧರ್ಮ, ರುದ್ರ, ಮನು, ಸನಕ, ಸನಂದನ, ಭೃಗು, ಸನತ್ಕುಮಾರ, ರುಚಿ,

**ಚರಮಾಸ್ತೇ ಗಣಾಸ್ತೇಷಾಂ ಕಥಿತಾಸ್ತು ಸಮೂರ್ತಯಃ ।**
**ಮಹಾಭೂತಶರೀರಾಣಿ ಸೃಷ್ಟವಾನ್ಸ ತಥೈವ ಚ　　　　॥ ೬೬ ॥**

**ಏವಂ ಕೃತ್ವಾ ಪ್ರಜಾಸರ್ಗಂ ಚಾಂಗುಷ್ಠಾದ್ದಕ್ಷಿಣಾತ್ತತಃ ।**
**ಸಸರ್ಜ ದಕ್ಷಂ ಭಗವಾನ್ವಾಮಾಂಗುಷ್ಠಾತ್ತಥೈವ ಚ　　　　॥ ೬೭ ॥**

**ಸಸರ್ಜ ಭಾರ್ಯಾಂ ತಸ್ಯೈವ ದೇವದೇವಃ ಪಿತಾಮಹಃ ।**
**ತಸ್ಯಾಂ ತು ಜನಯಾಮಾಸ ದಕ್ಷೋ ದುಹಿತರಃ ಶುಭಾಃ　　　　॥ ೬೮ ॥**

**ದದೌ ತಾಶ್ಚ ಸ ಧರ್ಮಾತ್ಮಾ ಬ್ರಹ್ಮಪುತ್ರೇಭ್ಯ ಏವ ಚ ।**
**ಸತೀಂ ದದೌ ಸ ರುದ್ರಾಯ ರುದ್ರಾ ಯಸ್ಯಾಃ ಸುತಾಃ ಸ್ಮೃತಾಃ　　॥ ೬೯ ॥**

---

ಬ್ರಹ್ಮ, ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ನಾರದ ಮಹಾಮುನಿ, ಸ್ವಯಂಪ್ರಕಾಶರಾದ ಭಾಸ್ಕರರು, ದೇವತೆಗಳು, ಅಗ್ನಿಷ್ವಾತ್ತರೆಂಬ ಪಿತೃಗಳು, ಕ್ರವ್ಯಾದ, ಉಪಹೂತ, ಆಜ್ಯನ, ಸುಕಾಲಿಗಳೆಂಬ ಪಿತೃಗಳು, ಇವರಲ್ಲಿ ಅಗ್ನಿಷ್ವಾತ್ತ, ಕ್ರವ್ಯಾದ, ಉಪಹೂತರಿಗೆ ರೂಪವಿಲ್ಲ ಕೊನೆಯವರಿಗೆ ಮೂರ್ತಿ (ಸ್ವರೂಪ) ಯುಂಟು. ಮೊದಲನೆಯ ಮೂರು ಗಣಗಳು, ಕೊನೆಯ ಎರಡು ಗಣಗಳು, ಇಷ್ಟು ಮಂದಿಗಳನ್ನು ಮನಸ್ಸಿನಿಂದ ಸೃಷ್ಟಿಮಾಡಿದ ಬಳಿಕ ಮಹಾಭೂತಗಳ ಶರೀರಗಳನ್ನು ಬ್ರಹ್ಮನು ಸೃಷ್ಟಿಸಿದನು

೬೭-೬೮　ಈರೀತಿ ಪ್ರಜೆಗಳನ್ನು ಸೃಷ್ಟಿಮಾಡಿದ ಬಳಿಕ ಬ್ರಹ್ಮನು ತನ್ನ ಬಲ ಹೆಬ್ಬೆಟ್ಟಿನಿಂದ ದಕ್ಷಬ್ರಹ್ಮನನ್ನು ಸೃಷ್ಟಿಸಿದನು ಅದೇಮೇರೆ ಎಡಗೈಹೆಬ್ಬೆಟ್ಟಿನಿಂದ ದಕ್ಷಬ್ರಹ್ಮನ ಹೆಂಡತಿಯಲ್ಲಿ ಸೃಷ್ಟಿಮಾಡಿ ಅವನಿಗೊಪ್ಪಿಸಿದನು. ದಕ್ಷಬ್ರಹ್ಮನು ಆ ಹೆಂಡತಿಯನ್ನು ಮಂಗಳಕರರಾದ ಹೆಣ್ಣುಮಕ್ಕಳನ್ನು ಪಡೆದನು

೬೯　ಆರೀತಿ ತನ್ನ ಹೆಂಡತಿಯಲ್ಲಿ ಹುಟ್ಟಿದ ಹೆಣ್ಣುಮಕ್ಕಳನ್ನು ದಕ್ಷಬ್ರಹ್ಮನು ಬ್ರಹ್ಮನ ಮಾನಸಪುತ್ರರುಗಳಿಗೆ ಮದುವೆಮಾಡಿಕೊಟ್ಟನು ಅವರಲ್ಲಿ ಸತಿಯೆಂಬ ಹೆಣ್ಣುಮಗಳನ್ನು ರುದ್ರನಿಗೆ ಮದುವೆಮಾಡಿಕೊಟ್ಟನು. ಆಕೆಯ ಹೊಟ್ಟೆಯಲ್ಲಿ ಹುಟ್ಟಿದವರೇ ಏಕಾದಶರುದ್ರರೆಂದು ಪ್ರಸಿದ್ಧರಾದರು

**ಜನಯಾಮಾಸ ಪುತ್ರೌ ದ್ವೌ ಸ್ತಂಬಃ ಕಶ್ಯಪ ಏವ ಚ ।**
**ತಯೋರ್ಗೋತ್ರಕರೌ ಪುತ್ರೌ ಜ್ಞೇಯೌ ಸಂನ್ಯಾಸನಿಶ್ಚಯೌ ॥ ೭೯ ॥**

**ಸ್ಮೃತಿಮಂಗಿರಸಂ ಪ್ರಾದಾದ್ದಕ್ಷಃ ಪೂರ್ವಂ ಪ್ರಜಾಪತಿಃ ।**
**ಸಿನೀವಾಲೀ ಕುಹೂ ರಾಕಾ ತಥೈವಾನುಮತಿಃ ಶುಭಾ ॥ ೮೦ ॥**

**ತಸ್ಯಾಂ ಸಂಜನಯಾಮಾಸ ಅಗ್ನಿಂ ಚ ಭರತಂ ತಥಾ ।**
**ಭರತಸ್ಯ ತಥಾ ಪುತ್ರಃ ಪರ್ಜನ್ಯ ಇತಿ ವಿಶ್ರುತಃ ॥ ೮೧ ॥**

**ಹಿರಣ್ಯರೋಮಾ ಪರ್ಜನ್ಯ ಉದೀಚೀಂ ದಿಶಮಾಶ್ರಿತಃ ।**
**ಲೋಕಾಲೋಕೇಽವತಿಷ್ಠಂಸ್ತೇ ಲೋಕಪಾಲೋ ಮಯೇರಿತಃ ॥ ೮೨ ॥**

**ಅನಸೂಯಾಂ ದದೌ ದಕ್ಷಃ ತಥಾತ್ರೇಃ ಸುಮಹಾತ್ಮನಃ ।**
**ತಸ್ಯಾಂ ಸ ಜನಯಾಮಾಸ ತಪೋರಾಶಿಕರಂ ಪರಂ ॥ ೮೩ ॥**

ನಾಗಿರುತ್ತಾನೆ ಈ ಸುಧಾಮನು ಹುಟ್ಟಿದಮೇಲೆ ಪೌರ್ಣಮಾಸ (ವಿರಜ) ನಿಗೆ ಮತ್ತೊಬ್ಬ ಮಗ ಹುಟ್ಟಿದನು ಇವನಿಗೆ ಸರ್ವೇಶನೆಂಬ ಹೆಸರಾಯಿತು

೭೯ ಸರ್ವೇಶನಿಗೆ ಇಬ್ಬರು ಗಂಡುಮಕ್ಕಳಾದರು ಸ್ತಂಬ ಮತ್ತು ಕಶ್ಯಪರೆಂಬು ಅವರ ಹೆಸರು ಅವರ ಗೋತ್ರದಲ್ಲಿ ಸನ್ಯಾಸನಿಶ್ಚಯರೆಂಬ ಇಬ್ಬರು ಮಕ್ಕಳು ಹುಟ್ಟಿದರೆಂದು ತಿಳಿದುಕೊಳ್ಳಬೇಕು

ದಕ್ಷನ ಮಗಳಾದ ಸ್ಮೃತೀದೇವಿಯ ವಂಶ

೮೦ ದಕ್ಷನ ಮತ್ತೊಬ್ಬಳು ಮಗಳಾದ ಸ್ಮೃತೀದೇವಿಯನ್ನು ಅಂಗಿರಸಋಷಿಗಳಿಗೆ ಲಗ್ನಮಾಡಿದನು ಸಿನೀವಾಲಿ, ಕುಹೂ, ರಾಕಾ ಅನುಮತಿಯರೇ ಅವರ ಹೆಣ್ಣುಮಕ್ಕಳು

೮೧-೮೨ ನಾಲ್ಕುಮಂದಿ ಹೆಣ್ಣುಮಕ್ಕಳಾದ ಬಳಿಕ ಆಕೆ (ಸ್ಮೃತಿ) ಯ ಹೊಟ್ಟೆಯಲ್ಲಿ ಅಗ್ನಿ-ಭರತರೆಂಬ ಇಬ್ಬರು ಗಂಡುಮಕ್ಕಳಾದರು ಆ ಭರತನಿಗೆ ಪರ್ಜನ್ಯನೆಂಬ ಮಗನಾದನು. ಆ ಪರ್ಜನ್ಯನ ಕೂದಲುಗಳೆಲ್ಲಾ ಚಿನ್ನದ ರೇಕುಗಳು ಈ ಪರ್ಜನ್ಯನು ಉತ್ತರದಿಕ್ಕಿನಲ್ಲಿರುವ ಲೋಕಾಲೋಕ ಪರ್ವತದಲ್ಲಿದ್ದುಕೊಂಡು ಲೋಕಪಾಲಕರಲ್ಲೊಬ್ಬನಾದನು

ಅನಸೂಯಾಚರಿತ್ರೆ

೮೩ ಅನಸೂಯೆಯು ದಕ್ಷನ ಹೆಣ್ಣುಮಕ್ಕಳಲ್ಲೊಬ್ಬಳು ಈ ಲೋಕಪ್ರಸಿದ್ಧ

**ಪ್ರೀತಿಂ ದಕ್ಷಃ ಪುಲಸ್ತ್ಯಾಯ ದತ್ತೋರ್ಣಾಂ ಜನನೀಂ ದದೌ ।**
**ಪುಲಸ್ತ್ಯಾಯ ಕ್ಷಮಾಂ ಪ್ರಾದಾತ್ಕರ್ದಮಸ್ಯ ತು ಮಾತರಂ ॥ ೮೪ ॥**

**ಕಾರ್ದಮಿಃ ಶಂಖಪಾದಶ್ಚ ದಕ್ಷಿಣಾಮಾಶ್ರಿತೋ ದಿಶಂ ।**
**ಲೋಕಾಲೋಕನಿವಿಷ್ಟಾಸ್ತೇ ಲೋಕಪಾಲೋ ಮಯೇರಿತಃ ॥ ೮೫ ॥**

**ದಕ್ಷಶ್ಚ ಸನ್ನತಿಂ ಪ್ರಾದಾತ್ಕ್ರತವೇ ಭೂರಿತೇಜಸೇ ।**
**ಷಷ್ಟಿಃ ಪುತ್ರಸಹಸ್ರಾಣಿ ವಾಲಖಿಲ್ಯಾ ಇತಿ ಸ್ಮೃತಾಃ ॥ ೮೬ ॥**

---

ಪತಿವ್ರತೆಯನ್ನು ಅತ್ರಿಮಹಾಮುನಿಗಳಿಗೆ ದಕ್ಷನು ಲಗ್ನಮಾಡಿಕೊಟ್ಟನು ಆಕೆಯ ಹೊಟ್ಟೆಯಲ್ಲಿ ಮಹಾತಪಸ್ವಿಯೊಬ್ಬನು ಜನಿಸಿದನು ಅವನೇ ಪರಮುನಿಯೆಂಬುವನು

೮೪ ದಕ್ಷನು ದತ್ತೋರ್ಣನ ಜನನಿಯಾದ ಪ್ರೀತಿಯೆಂಬ ತನ್ನ ಮಗಳನ್ನೂ ಕರ್ದಮನ ತಾಯಿಯಾದ ಕ್ಷಮಾದೇವಿಯೆಂಬ ತನ್ನ ಮಗಳನ್ನೂ ನಹ ಪುಲಸ್ತ್ಯನಿಗ ಲಗ್ನಮಾಡಿಕೊಟ್ಟನು

ಟಿಪ್ಪಣಿ —ಪುಲಸ್ತ್ಯನ ಮೊದಲನೆ ಹೆಂಡತಿಯು ಪ್ರೀತಿಯು ಮಗ ದತ್ತೋರ್ಣ ಎರಡನೆಯ ಹೆಂಡತಿ ಕ್ಷಮೆಯು ಮಗ ಕರ್ದಮನೆಂದು ಈ ಶ್ಲೋಕದ ಮುಖ್ಯಾರ್ಥವು

೮೫ ಕರ್ದಮನ ಮಗನಾದ ಶಂಖಪಾದನು ಈತನು ದಕ್ಷಿಣದಿಕ್ಕನ್ನು ಆಶ್ರಯಿಸಿಕೊಂಡು ಲೋಕಾಲೋಕದಲ್ಲಿ ವಾಸಮಾಡುತ್ತಾ ಲೋಕಪಾಲಕರಲ್ಲೊಬ್ಬನಾಗಿ ಪ್ರಸಿದ್ಧಿಹೊಂದಿರುತ್ತಾನೆ

ಸನ್ನತಿಯೆಂಬ ದಕ್ಷಕನ್ಯಾವೃತ್ತಾಂತ

೮೬ ದಕ್ಷನು ತನ್ನ ಕನ್ಯಾರಾಶಿಗಳಲ್ಲೊಬ್ಬಳಾದ ಸನ್ನತೀದೇವಿಯನು ಮಹಾತೇಜಸ್ವಿಯಾದ ಕ್ರತುವಿಗ ಮದುವೆಮಾಡಿಕೊಟ್ಟನು. ಆಕೆಯ ಹೊಟ್ಟೆಯಲ್ಲಿ ವಾಲಖಿಲ್ಯರೆಂಬ ಹೆಸರಿನ ಅರವತ್ತುಸಾವಿರ ಮಂದಿ ಮಹರ್ಷಿಗಳು ಉತ್ಪನ್ನರಾದರು ಅವರೆಲ್ಲರೂ ಊರ್ಧ್ವರೇತಸ್ಕರುಗಳು

ಟಿಪ್ಪಣಿ —ಊರ್ಧ್ವರೇತಸ್ಕ-ಅಧೋರೇತಸ್ಕರೆಂದು ಎರಡು ಕ್ರಮವಿದೆ ತನ್ನ ಧರ್ಮಪತ್ನಿಯಲ್ಲಿ ಸುರತಕ್ರೀಡೆಯನ್ನು ಮಾಡಿ ಕೊನೆಯಲ್ಲಿ ತನ್ನ ರೇತಸ್ಸನ್ನು ತನ್ನ ಅಧೀನದಲ್ಲಿಡಲಾರದೆ ಹೆಂಗಸಿನ ಯೋನಿದ್ವಾರದಲ್ಲಿಯೇ ಬಿಟ್ಟುಬಿಡುವ ಸಾಮಾನ್ಯ ಮನುಷ್ಯನು ಅಧೋರೇತಸ್ಕನಾಗುವನು (ವೀರ್ಯವನ್ನು ಕೆಳಗೆ ಬಿಡುವನು) ಅದಕ್ಕೆ

**ಜನಯಾಮಾಸ ಧರ್ಮಜ್ಞಾನ್ಸರ್ವಾನ್ಸ್ವನೂರ್ಧ್ವರೇತಸಃ ।**
**ದಕ್ಷಃ ಪ್ರಾದಾದಥೋರ್ಜಾಂ ವಸಿಷ್ಠಾಯ ಮಹಾತ್ಮನೇ ॥ ೮೭ ॥**

**ತಸ್ಯಾಮಸ್ಯ ಸುತಾ ಜಾತಾಃ ಸಪ್ತ ಸಪ್ತಾಶ್ವವರ್ಚಸಃ ।**
**ರಜೋಬಾಹುರೂರ್ಧ್ವಬಾಹುಃ ಪವನಶ್ಚಾನಘಶ್ಚ ಯಃ ॥ ೮೮ ॥**

**ಸುತಪಾಃ ಶಕ್ತಿರಿತ್ಯೇತೇ ವಾಸಿಷ್ಠಾಃ ಸಪ್ತಕೀರ್ತಿತಾಃ ।**
**ಕೇತುಮಾನ್ಸುಮಹಾತೇಜಾ ರಾಜಸಶ್ಚ ತಥಾ ಸುತಃ ॥ ೮೯ ॥**

**ಲೋಕಾಲೋಕನಿವಾಸೀ ತೇ ಪ್ರತೀಚ್ಯಾಂ ಸ ಮಯೇರಿತಃ ।**
**ಸ್ವಾಹಾಂ ಪ್ರಾದಾತ್ಸ ದಕ್ಷೋಪಿ ಸಶರೀರಾಯ ವಹ್ನಯೇ ॥ ೯೦ ॥**

---

ವ್ಯತಿರೇಕನಾಗಿ ಯಾವ ಮಹಾತ್ಮನು ಸಂಭೋಗಾಭ್ಯಾಸದಲ್ಲಿ ತನ್ನ ರೇತಸ್ಸನ್ನು ಯೋನಿದ್ವಾರದಲ್ಲಿ ವಿಸರ್ಜಿಸದೆ ಪುನಃ ಶಿಶ್ನದ್ವಾರದಿಂದ ಮೇಲಕ್ಕೆ ಸೆಳೆದುಕೊಳ್ಳುವ ಶಕ್ತಿಯನ್ನು ಹೊಂದಿರುವನೋ ಅವನು ಊರ್ಧ್ವರೇತಸ್ಕನೆಂದು ಹೇಳಿಸಿಕೊಳ್ಳುವನು. ಇದು ಯೋಗಾಭ್ಯಾಸವನ್ನು ಗುರುಮುಖೇನ ಮಾಡಿ ಯೋಗನಿಷ್ಠರಾದ ಮಹರ್ಷಿಯರಿಗ ಮಾತ್ರ ಸಾಧ್ಯವೇ ಹೊರತು ಸಾಮಾನ್ಯ ಮನುಷ್ಯರಿಂದ ಸುತರಾಂ ಸಾಧ್ಯವಿಲ್ಲವೆಂದು ತಿಳಿಯಬೇಕು. ಊರ್ಧ್ವರೇತಸ್ಕರು ಚಿರಂಜೀವಿಗಳಾಗುವ ಅವಕಾಶವನ್ನು ಪಡೆಯಬಲ್ಲರಾದವರು.

ಊರ್ಜಾದೇವಿಯ ವೃತ್ತಾಂತ

೮೭-೮೯ ದಕ್ಷನು ತನ್ನ ಹೆಣ್ಣುಮಕ್ಕಳ ಪೈಕಿ ಊರ್ಜಾದೇವಿಯೆಂಬ ಮಗಳನ್ನು ಮಹಾತ್ಮರಾದ ವಸಿಷ್ಠರಿಗೆ ಮದುವೆಮಾಡಿಕೊಟ್ಟನು. ಆಕೆಯ ಹೊಟ್ಟೆಯಲ್ಲಿ ವಸಿಷ್ಠರಿಗೆ ಸೂರ್ಯನಂತೆ ಪ್ರಕಾಶಮಾನರಾದ ಏಳುಮಂದಿ ಗಂಡುಮಕ್ಕಳಾದರು. ಅವರುಗಳ ಹೆಸರೇಂದರೆ —ರಜೋಬಾಹು-ಊರ್ಧ್ವಬಾಹು-ಪವನ-ಅನಘ-ಸುತಪ-ಶಕ್ತಿ. ಈ ಆರುಮಂದಿಗಿಂತ ಚಿಕ್ಕವನೇ ಕೇತುಮಂತ. ಈರೀತಿ ಏಳುಮಂದಿಯೂ ವಾಸಿಷ್ಠರೆಂದು ಪ್ರಸಿದ್ಧರಾದರು. ಕೊನೆಯಲ್ಲಿ ಹುಟ್ಟಿದ ರಾಜಸನಾದ ಕೇತುಮಂತನು ಮಹಾಪರಾಕ್ರಮಶಾಲಿಯಾಗಿ ಲೋಕಾಲೋಕದಲ್ಲಿ ವಾಸಮಾಡುತ್ತಾ ಪಶ್ಚಿಮದಿಕ್ಕಿನಲ್ಲಿ ಲೋಕಪಾಲಕನಾಗಿ ಪ್ರಕಾಶಿಸುತ್ತಿರುವನು.

ಸ್ವಾಹಾ ಸ್ವಧಾದೇವಿಯರ ಚರಿತ್ರೆ

೯೦-೯೧ ದಕ್ಷನು ತನ್ನ ಮಗಳಾದ ಸ್ವಾಹಾದೇವಿಯನ್ನು ಶರೀರಸಹಿತನಾದ ಅಗ್ನಿದೇವನಿಗೆ ಮದುವೆಮಾಡಿಕೊಟ್ಟನು. ಈಕೆಯು ದೇವಲೋಕ-ಆಕಾಶ-ಭೂಮಿ

ದಿವ್ಯಾಂತರಿಕ್ಷಭೌಮಾನಾಮಗ್ನೀನಾಂ ಜನನೀಂ ಪ್ರಭುಃ ।
ಸ್ವಧಾಂ ಪ್ರಾದಾತ್ಪಿತೃಭ್ಯಸ್ತು ಮೇನಯಾ ಜನನೀಂ ಶುಭಾಂ ॥ ೯೧ ॥

ಹಿಮಾಚಲಾಲಯೇ ಮೇನಾ ಪಿತೃಭಿಃ ಪ್ರತಿಪಾದಿತಾ ।
ಚತುರ್ದಶೋಮಾಃ ಕನ್ಯಾಶ್ಚ ದಕ್ಷೋ ಧರ್ಮಾಯ ವೈ ದದೌ ॥ ೯೨ ॥

ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ಮತಿಃ ।
ಬುದ್ಧಿರ್ಲಜ್ಜಾ ವಪುಃ ಶಾಂತಿಃ ತುಷ್ಟಿಃ ಸಿದ್ಧಿಶ್ಚತುರ್ದಶ ॥ ೯೩ ॥

ಕೀರ್ತಿಪುತ್ರೋ ಯಶೋದೇವೋ ದರ್ಪೋ ಲಕ್ಷ್ಮೀಸುತಃ ಸ್ಮೃತಃ ।
ನಿಶ್ಚಯಶ್ಚ ಧೃತೇಃ ಪುತ್ರೋ ಮೇಧಾಪುತ್ರಸ್ತಥಾ ಶ್ರುತಃ ॥ ೯೪ ॥

ಪುಷ್ಟೇರ್ಲಾಭಃ ಸುತಶ್ಚೈವ ಕಾಮಃ ಶ್ರದ್ಧಾಸುತಃ ಸ್ಮೃತಃ ।
ಕ್ರಿಯಾಯಾಸ್ತನಯೋ ದೇವೋ ಮತಿಪುತ್ರಸ್ತಥಾ ದಮಃ ॥ ೯೫ ॥

ಯಲ್ಲಿರುವ ಅಗ್ನಿಗಳಿಗೆಲ್ಲಾ ಜನನಿಯಾದಳು ಮತ್ತೋರ್ವ ಮಗಳಾದ ಸ್ವಧಾದೇವಿಯನ್ನು ದಕ್ಷನು ಪಿತೃದೇವತೆಗಳಿಗೆ ಮದುವೆಮಾಡಿಕೊಟ್ಟನು ಆಕೆಯ ಹೊಟ್ಟೆಯಲ್ಲಿ ಹುಟ್ಟಿದವಳೇ ಮೇನಾದೇವಿ ಈಕೆಯನ್ನು ಪಿತೃಗಳು ಹಿಮವಂತನಿಗೆ ಮದುವೆಮಾಡಿಕೊಟ್ಟರು

ಚತುರ್ದಶ ಕನ್ಯೆಯರು

೯೨-೯೫ ಮುಂದೆ ಹೇಳುವ ಹದಿನಾಲ್ಕುಮಂದಿ ಕನ್ಯೆಯರನ್ನು ದಕ್ಷನು ಧರ್ಮನಿಗೆ ಮದುವೆಮಾಡಿಕೊಟ್ಟನು ಅವರ ಹೆಸರುಗಳನ್ನು ಇಲ್ಲಿ ಬರೆಯುತ್ತೇವೆ

ಕೀರ್ತಿ, ಲಕ್ಷ್ಮೀ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಮತಿ, ಬುದ್ಧಿ, ಲಜ್ಜಾ, ವಪು, ಶಾಂತಿ, ತುಷ್ಟಿ, ಸಿದ್ಧಿ, ಈ ಹದಿನಾಲ್ಕು ಮಂದಿ ಕನ್ಯೆಯರಲ್ಲಿಯೂ ಧರ್ಮದೇವತೆಗೆ ಹುಟ್ಟಿದ ಮಕ್ಕಳ ಹೆಸರನ್ನು ಇಲ್ಲಿ ಬರೆಯುವೆವು

ಕೀರ್ತಿಯ ಮಗ ಯಶಸ್ಸು, ಲಕ್ಷ್ಮಿಯ ಮಗ ದರ್ಪ, ಧೃತಿಯ ಮಗ ನಿಶ್ಚಯ ಮೇಧೆಯ ಮಗ ಶ್ರುತ, ಪುಷ್ಟಿಯ ಮಗ ಕಾಮ, ಶ್ರದ್ಧೆಯ ಮಗ ಸ್ಮೃತ, ಕ್ರಿಯೆಯ ಮಗ ದೇವ, ಮತಿಯ ಮಗ ದಮ, ಬುದ್ಧಿಯ ಮಗ ಬೋಧ, ಲಜ್ಜೆಯ ಮಗ ವಿನಯನು, ವಪುವಿನ ಮಗ ವ್ಯವಸಾಯ, ಶಾಂತಿಯ ಮಗ ಕ್ಷೇಮ, ತುಷ್ಟಿಯ ಮಗ ಸಂತೋಷ, ಸಿದ್ಧಿಯ ಮಗ ಸುಖಿ, ಇಷ್ಟು ಜನರಪೈಕಿ ಪುಷ್ಟಿಯ ಮಗನಾದ ಕಾಮನು ರತಿಯನ್ನು ಮದುವೆಮಾಡಿಕೊಂಡು ಹರ್ಷನೆಂಬ ಮಗನನ್ನು ಉತ್ಪತ್ತಿಮಾಡಿದನ

ಬುದ್ಧೇರ್ಬೋಧಃ ಸುತಃ ಪ್ರೋಕ್ತೋ ಲಜ್ಜಾಯಾ ವಿನಯಃ ಸ್ಮೃತಃ ।
ವಪುಷೋ ವ್ಯವಸಾಯಸ್ತು ಕ್ಷೇಮಃ ಶಾಂತಿಸುತಸ್ತಥಾ ॥ ೯೬ ॥

ತುಷ್ಟೇಃ ಪುತ್ರಸ್ತು ಸಂತೋಷಃ ಸುಖಃ ಸಿದ್ಧೇಶ್ಚ ಭಾಸ್ವರಃ ।
ಕಾಮಸ್ಯ ಚ ರತಿರ್ಭಾರ್ಯಾ ತತ್ಪುತ್ರೋ ಹರ್ಷಉಚ್ಯತೇ ॥ ೯೭ ॥

ಏವಂ ಪ್ರಜಾವಿವೃದ್ಧ್ಯರ್ಥಂ ದಕ್ಷೋ ದತ್ವಾಥ ಕನ್ಯಕಾಃ ।
ಈಜೇ ಕದಾಚಿದ್ಯಜ್ಞೇನ ಹಯಮೇಧೇನ ಪಾರ್ಥಿವ ॥ ೯೮ ॥

ಇದರಿಂದ ಪ್ರಜಾವೃದ್ಧಿಯಾಯಿತು ಈರೀತಿಯಾಗಿ ದಕ್ಷನು ತನ್ನ ಹೆಣ್ಣುಮಕ್ಕಳುಗಳಿಗೆಲ್ಲಾ ಮದುವೆಮಾಡಿಕೊಟ್ಟ ಬಳಿಕ ಒಂದಾನೊಂದು ಕಾಲದಲ್ಲಿ ಅಶ್ವಮೇಧಯಾಗವನ್ನು ಮಾಡಿದನು

ಟಿಪ್ಪಣಿ -- ಗಂಡ, ಹೆಂಡತಿ, ಮಕ್ಕಳು-ಹೆಸರು-ಪುರಾಣ, ಈ ವಿಚಾರಗಳನ್ನು ಗಮನಿಸುವುದಕ್ಕಿಂತಲೂ ಈ ಶ್ಲೋಕಗಳಿಂದ ತಿಳಿದುಬರುವ ತತ್ವಾರ್ಥವನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳುವುದಾದರೆ ಪ್ರಪಂಚೋತ್ಪತ್ತಿ-ಪುರಾಣೋತ್ಪತ್ತಿ-ದೇವಪಿತೃಗಳ ಕರ್ತವ್ಯ ಪ್ರಪಂಚದಲ್ಲಿ ಮಾನವನು ತಿಳಿದುಕೊಳ್ಳಬೇಕಾದ ಮಾರ್ಗಗಳು ಮನವರಿಕೆಯಾಗುವುದು ದಕ್ಷನಿಗೆ ಹದಿನಾಲ್ಕುಮಂದಿ ಹೆಣ್ಣುಮಕ್ಕಳಿದ್ದರು ಅವರ ಹೆಸರಿನಿಂದಲೇ ಅವರ ಗುಣಗಳು ವ್ಯಕ್ತವಾಗುತ್ತವೆ ಕೀರ್ತಿಯ ಮಗ ಯಶಸ್ಸು ಇವನು ಧರ್ಮನ ಮಗನು ಇದರ ಅರ್ಥವನ್ನು ವಿಚಾರಿಸೋಣ ಧರ್ಮಾತ್ಮನಾಗಿ ಸ್ವಧರ್ಮಾಸಕ್ತನಾಗಿ ಚತುರ್ವರ್ಗ ವಿದ್ಯೆಗಳನ್ನು ಕಲಿತವನು ಎಂತಹ ಪ್ರಯೋಜನಗಳನ್ನು ಪಡೆಯುವನೆಂಬುದು ಇದರಿಂದ ಅಭಿವ್ಯಕ್ತವಾಗುವುದು ಇದರಂತೆ ಹದಿನಾಲ್ಕು ಹೆಸರುಗಳಲ್ಲೂ ತತ್ವಾರ್ಥವು ವಿವೃತವಾಗಿವೆ ಕಾಮ, ರತಿ, ಹರ್ಷ, ಆಶ, ಭೋಗ, ಸಂತೋಷ, ತಂದೆ, ತಾಯಿ, ಮಗ ಇವುಗಳು ಏಕಾರ್ಥವನ್ನು ಕೊಡುವ ಶಬ್ದಗಳು ಇದರಿಂದಲೇ ಪ್ರಪಂಚದ ಅಭಿವೃದ್ಧಿ ಇದಿಲ್ಲವಾದರೆ ಹಾನಿ ಮತ್ತು ಸಂಕಟ ಪಾಪಗಳ ಸಂಪ್ರಾಪ್ತಿ ಈರೀತಿಯಾಗಿ ಬುದ್ಧಿವಂತರಾದ ವಾಚಕರು ಇಲ್ಲಿ ತೋರುವ ತತ್ವಾರ್ಥವನ್ನು ವಿವೇಚಿಸುತ್ತಾ ಈ ಪುರಾಣವನ್ನೋದುತ್ತಾ ಬಂದರೆ ವ್ಯಾಸಮಹರ್ಷಿಗಳು ಎಷ್ಟುಮಟ್ಟಿಗೆ ಲೋಕೋಪಕಾರಮಾಡಿರುವರೆಂಬುದು ಗೊತ್ತಾಗುವುದು ಪುರಾಣವೆಂದರೆ ಬಹಳ ಹಿಂದೆ ಬರೆದ ಧರ್ಮಗ್ರಂಥಗಳು

ತಸ್ಯ ಜಾಮಾತರಃ ಸರ್ವೇ ಗತಾ ಯಜ್ಞನಿಮಂತ್ರಿತಾಃ ।
ಭಾರ್ಯಾಭಿಃ ಸಹಿತಾಃ ಸರ್ವೇ ರುದ್ರಂ ದೇವಂ ಸತೀಂ ವಿನಾ ॥ ೯೯ ॥

ರುದ್ರೋ ನತಿಂ ನ ಕುರುತೇ ಭಾವ್ಯರ್ಥವಿನಿಬೋಧಿತಃ ।
ಕದಾಚಿದಪಿ ದಕ್ಷಸ್ಯ ತೇನಾಸೌ ನ ನಿಮಂತ್ರಿತಃ ॥ ೧೦೦ ॥

ಅನಾಹೂತಾಪಿ ಚ ಗತಾ ಪಶ್ಚಾತ್ತತ್ರ ಸತೀ ಶುಭಾ ।
ದಕ್ಷಾನ್ನ ಲೇಭೇ ಪೂಜಾಂ ಸಾ ತತಃ ಕ್ರುದ್ಧಾ ಶುಭಾನನಾ ॥ ೧೦೧ ॥

ತತ್ಯಾಜ ದಕ್ಷಸಂಭೂತಾಂ ತಾಂ ತನುಂ ಹಿಮಕಂದರೇ ।
ವಿನಷ್ಟಾಂ ತು ಸತೀಂ ಶ್ರುತ್ವಾ ದೇವದೇವಃ ಪಿನಾಕಧೃಕ್ ॥ ೧೦೨ ॥

ಶಶಾಪ ದಕ್ಷಂ ಧರ್ಮಜ್ಞಂ ಮನುಷ್ಯಸ್ತ್ವಂ ಭವಿಷ್ಯಸಿ ।
ಧ್ರುವಸ್ಯಾನ್ವಯಸಂಭೂತೋ ರಾಜಾ ತ್ರೈಲೋಕ್ಯವಿಶ್ರುತಃ ॥ ೧೦೩ ॥

೯೯-೧೦೩ ಆ ಅಶ್ವಮೇಧಯಾಗಕ್ಕೆ ದಕ್ಷನು ತನ್ನ ಅಳಿಯಂದಿರನ್ನೂ, ಹೆಣ್ಣುಮಕ್ಕಳನ್ನೂ ಕರೆಯಿಸಿದ್ದನು. ಅವರೆಲ್ಲರೂ ಯಜ್ಞಕ್ಕೆ ಬಂದಿದ್ದರು. ಆದರೆ ಸತೀದೇವಿಯನ್ನು ಅವಳ ಗಂಡ ರುದ್ರನನ್ನೂ ಯಜ್ಞಕ್ಕೆ ಕರೆಯಲಿಲ್ಲ. ಅದರಿಂದ ಈಶ್ವರನು ಯಾಗಕ್ಕೆ ಹೋಗಿ ಮಾವನಿಗೆ ಮನ್ನಣೆಯನ್ನು ಮಾಡಲಿಲ್ಲ. ಇದು ಮುಂದಿನ ಕೆಲವು ಸಂದರ್ಭಗಳಿಗಾಗಿ ನಡೆದ ಸಂಗತಿ. ಗಂಡನನ್ನೂ ತನ್ನನ್ನೂ ಕರೆಯದೇ ಇದ್ದಾಗ್ಯೂ ಸತೀದೇವಿಯು ತಂದೆಯ ಮನೆಗೆ ಯಜ್ಞದರ್ಶನಕ್ಕಾಗಿ ಹೋದಳು (ಅನಾಹೂತೋಽಧ್ವರಂ ಗಚ್ಛೇತ್-ಅಂತ ಶಾಸ್ತ್ರವಿದೆ ಅಂದರೆ ಯಜ್ಞಯಾಗಾದಿಗಳಿಗೆ ಕರೆಯದೇ ಇದ್ದರೂ ಹೋಗಬಹುದೆಂದರ್ಥ) ಅಲ್ಲಿ ತಂದೆಯು ಅವಳನ್ನು ಮರ್ಯಾದಿಸದೆ ಅಸಡ್ಡೆಮಾಡಿದನು. ಆಗ ಸತೀದೇವಿಗೆ ಬಹಳ ಕೋಪ ಬಂದು ಆ ದಕ್ಷನಿಂದ ಉತ್ಪನ್ನವಾದ ಈ ದೇಹವನ್ನಿಟ್ಟುಕೊಂಡಿರಬಾರದೆಂದು ಯೋಚಿಸಿ ಹಿಮಾಲಯದ ತಪ್ಪಲಿನಲ್ಲಿ ಆ ದೇಹವನ್ನು ತ್ಯಾಗಮಾಡಿಬಿಟ್ಟಳು. ಈರೀತಿ ತನ್ನ ಹೆಂಡತಿಯು ಪ್ರಾಣತ್ಯಾಗಮಾಡಿದ ಸಂಗತಿ ಪರಮೇಶ್ವರನಿಗೆ ಗೊತ್ತಾಗಲು ಧರ್ಮಜ್ಞನಾದ ದಕ್ಷನನ್ನು ಕುರಿತು ನೀನು ರಜೋಗುಣವಿಶಿಷ್ಟನಾಗಿ ಮಾಡಿದ ಈ ಕೆಲಸಕ್ಕಾಗಿ ಮನುಷ್ಯನಾಗಿ ಹುಟ್ಟೆಂದು ಶಾಪಕೊಟ್ಟನು. ನೀನು ಧ್ರುವನ ವಂಶದಲ್ಲಿ ತ್ರಿಲೋಕವಿಶ್ರುತನಾದ ಮಹಾರಾಜನಾಗಿ ಹುಟ್ಟಿ ಯಜ್ಞವನ್ನು ಮಾಡುತ್ತೀಯೆ. ಆಗ ನಾನು

ತತ್ರಾಪಿ ವಿಘ್ನಂ ಕರ್ತಾಸ್ಮಿ ಯಜ್ಞಕರ್ಮಣ್ಯುಪಸ್ಥಿತೇ ।
ಭೃಗುಂ ಮರೀಚಿಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಂ ॥ ೧೦೪ ॥

ಶಶಾಪ ಚೈವಾಂಗಿರಸಂ ವಸಿಷ್ಠಂ ಚ ಮಹಾಮುನಿಂ ।
ಸತೀಮನುಪ್ರವೃತ್ತಸ್ಯ ದಕ್ಷಸ್ಯಾಸ್ಯ ಪ್ರಜಾಪತೇಃ ॥ ೧೦೫ ॥

ಅನುವೃತ್ತಿಃ ಕೃತಾ ಯಸ್ಮಾದ್ಭವದ್ಭಿರ್ಧರ್ಮಕೋವಿದೈಃ ।
ತಸ್ಮಾದ್ವೈವಸ್ವತೇ ಪ್ರಾಪ್ತೇ ಶುಭೇ ಮನ್ವಂತರೇ ದ್ವಿಜಾಃ ॥ ೧೦೬ ॥

ಬ್ರಹ್ಮಣೋ ಯಜಮಾನಸ್ಯ ಜನ್ಮ ಕ್ರೂರಮವಾಪ್ಸ್ಯಥ ।
ದೇಹತ್ಯಾಗೇ ಕೃತೇ ರಾಜನ್ಸತೀದೇವೀ ಮಹಾಬಲಾ ॥ ೧೦೭ ॥

ಉಮೇತಿ ವಿಶ್ರುತಾ ಲೋಕೇಮೇನಾಯಾಃ ಸಮುಪದ್ಯತ ।
ಹಿಮಾಚಲೋಽಪಿ ತಾಂ ದೇವೀಂ ದದೌ ಶರ್ವಾಯ ಪಾರ್ಥಿವ ॥ ೧೦೮ ॥

ತಯಾ ವಿಯುಜ್ಯತೇ ನಾಽಸೌ ಕದಾಚಿದಪಿ ವಿಶ್ರುತಾ ।
ತಸ್ಯಾಂ ತು ಜನಯಾಮಾಸ ದೇವದೇವೋಽಪಿ ಶಂಕರಃ ॥ ೧೦೯ ॥

ಬಂದು ಆ ಯಜ್ಞವನ್ನು ವಿಘ್ನಮಾಡುತ್ತೇನೆ ಈ ರೀತಿ ಹೇಳಿ ಪರಮೇಶ್ವರನು ಆ ಯಜ್ಞದಲ್ಲಿ ಸನ್ನಿಹಿತರಾಗಿದ್ದಾಗ್ಯೂ ತನಗಾದ ಅವಮಾನವನ್ನು ನೋಡಿ ದಕ್ಷನನ್ನು ಆಕ್ಷೇಪಿಸದ ಸುಮ್ಮನಿದ್ದ ತನ್ನ ಸಮಾನಸ್ಕಂಧರಾದ ಋಷಿಗಳಿಗೂ ಶಾಪಕೊಟ್ಟನು ಅವರಾರೆಂದರೆ --ಭೃಗು, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು

೧೦೫ ಆಂಗಿರಸರು, ವಸಿಷ್ಠರು, ಇವರುಗಳನ್ನೂ ಸಹ ಕುರಿತು ಹೀಗೆ ಹೇಳಿದನು --ಸತಿಯನ್ನು ಅವಮಾನಗೊಳಿಸಿದ ದಕ್ಷನಿಗೆ ನೀವು ಸರಿಯಾಗಿ ಬುದ್ಧಿಹೇಳದೆ ಅವನಮಾರ್ಗವನ್ನೇ ಧರ್ಮಕೋವಿದರಾದ ನೀವೂ ಅನುಸರಿಸಿದಿರಾದ್ದರಿಂದ ಬ್ರಾಹ್ಮಣಜನ್ಮದಲ್ಲಿ ಕಠಿಣಚಿತ್ತರಾಗಿ ಜನಿಸಿರಿ

೧೦೭-೧೧೧ ಮಹಾಬಲಶಾಲಿನಿಯಾದ ಸತೀದೇವಿಯು ದೇಹತ್ಯಾಗಮಾಡಿದ ಬಳಿಕ ಅದೇ ಹಿಮವಂತನ ಹೆಂಡತಿಯಾದ ಮೈನಾದೇವಿಯ ಹೊಟ್ಟೆಯಲ್ಲಿ ಉಮಾ ಎಂಬ ಹೆಸರಿನಿಂದ ಜನಿಸಿದಳು ಹಿಮಾಚಲನು ಆ ಉಮಾದೇವಿಯನ್ನು ಪರಮೇ

**ವಿನಾಯಕಂ ಕುಮಾರಂ ಚ ಭೃಂಗೀಶಂ ಸು ಮಹಾಬಲಂ ।**
**ವಿಘ್ನಾನಾಂ ಚ ಗಣಾನಾಂ ಚ ಪುತ್ರಂ ರಾಜ್ಯೇಭ್ಯಷೇಚಯತ್ ॥ ೧೧೦ ॥**

**ವಿನಾಯಕಂ ಮಹಾದೇವೋ ಗಜವಕ್ತ್ರಂ ಮನಸ್ವಿನಂ ।**
**ದೇವಸೇನಾಪತಿಂ ಶಕ್ರಃ ಕುಮಾರಂ ಕೃತವಾಂಸ್ತದಾ । ॥ ೧೧೧ ॥**
**ನ ತತ್ಯಾಜ ಸಮೀಪಾಚ್ಚ ಭೃಂಗೀಶಂ ಶಂಕರಸ್ತದಾ ।**
**ವೈವಸ್ವತೇಂತರೇ ಪ್ರಾಪ್ತೇ ರಾಜಾ ದಕ್ಷೋಽವ್ಯಜಾಯತ ॥ ೧೧೨ ॥**

**ಧ್ರುವಸ್ಯಾನ್ವಯಸಂಭೂತೋ ಮಹಾಬಲ ಪರಾಕ್ರಮಃ ।**
**ತತ್ರಾಶ್ವಮೇಧೇ ವಿತತೇ ಅನಾಹೂತೇನ ಶೂಲಿನಾ ॥ ೧೧೩ ॥**

**ಯಜ್ಞೋಽವಿಧ್ವಂಸಿತಸ್ತಸ್ಯ ವೀರಭದ್ರೇಣ ಪಾರ್ಥಿವ ।**
**ಸ ದಕ್ಷೋ ಜನಯಾಮಾಸ ಕನ್ಯಾಃ ಪಾರ್ಥಿವಸತ್ತಮ ॥ ೧೧೪ ॥**

---

ಪ್ಪರಿಗೇ ಮದುವೆಮಾಡಿಕೊಟ್ಟನು ಆಗ ಪರಮೇಶ್ವರನು ಉಮೆಯ ಗರ್ಭದಲ್ಲಿ ವಿನಾಯಕ, ಕುಮಾರಸ್ವಾಮಿ, ಭೃಂಗೀಶ್ವರರೆಂಬ ಮೂರು ಮಕ್ಕಳನ್ನು ಪಡೆದನು ಹಿರೀಮಗನಾದ ವಿನಾಯಕ ದೇವರನ್ನು ಸಕಲ ವಿಘ್ನಗಳಿಗೂ ಪ್ರಥಮರುಗಳಿಗೂ ಒಡೆಯನನ್ನಾಗಿ ಮಾಡಿದನು ಆ ವಿನಾಯಕನು ಆನೆಯಂತೆ ಮುಖದಿಂದ ಕೂಡಿ ತನ್ನ ಮನಸ್ಸುಬಂದಂತೆ ನಡೆಯತಕ್ಕವನು ಎರಡನೆಯ ಮಗನಾದ ಕುಮಾರ ಸ್ವಾಮಿಯ ಬಲವನ್ನು ನೋಡಿ ಇಂದ್ರನು ದೇವಸೇನೆಗಳಿಗೆ ಯಜಮಾನನನ್ನಾಗಿ (ಸೇನಾಧಿಪತಿ) ಮಾಡಿದನು

೧೧೨-೧೧೬ ಮೂರನೆಯ ಮಗನಾದ ಭೃಂಗೀಶ್ವರನನ್ನು ಶಂಕರನು ಸರ್ವದಾ ತನ್ನ ಬಳಿಯಲ್ಲಿಯೇ ಇಟ್ಟುಕೊಂಡನು ಎಲ್ಲಿಗೂ ಕಳುಹಿಸಿಕೊಡಲಿಲ್ಲ ಹೀಗೇ ಅನೇಕಕಾಲ ಕಳೆದುಹೋದ ಮೇಲೆ ವೈವಸ್ವತಮನ್ವಂತರವು ಬಂದೇ ಬಂದಿತು ದಕ್ಷನು ರಾಜನಾಗಿ ಹುಟ್ಟಿದನು ಧ್ರುವನ ವಂಶದಲ್ಲಿ ಮಹಾಬಲಪರಾಕ್ರಮಶಾಲಿ ಯಾಗಿ ಹೆಸರುವಾಸಿಯನ್ನು ಹೊಂದಿ ಈ ದಕ್ಷನು ಅಶ್ವಮೇಧಯಾಗವನ್ನಾರಂಭಿಸಿ ದನು ಆಗ ಪರಮೇಶ್ವರನು ತನ್ನನ್ನು ಕರಯದೇ ಇದ್ದಾಗ್ಯೂ ಆ ಯಜ್ಞಕ್ಕೆ ತಾನೇ ಹೋಗಿ ಅಲ್ಲಿ ಸತ್ಕಾರ ಸಿಕ್ಕದೇಹೋಗಲು ವೀರಭದ್ರನನ್ನು ನಿರ್ಮಾಣಮಾಡಿ ಆ ದಕ್ಷಯಾಗವನ್ನು ಧ್ವಂಸಮಾಡಿದನು ಆ ಬಳಿಕ ದಕ್ಷನಿಗೆ ಅನೇಕಮಂದಿ ಹೆಣ್ಣು ಮಕ್ಕಳು ಪುನಃ ಹುಟ್ಟಿದರು ಆ ಕನ್ಯಾರಾಶಿಮಧ್ಯದಿಂದ ಇಪ್ಪತ್ತೆಂಟು ಮಂದಿ

**ತಾಸಾಂ ಚ ಮಧ್ಯಾತ್ಪ್ರದದಾವಷ್ಟಾವಿಂಶತಿಮಿದವೇ ।**
**ದೇವತಾಸ್ತ್ವಭಿಮಾನಿನ್ಯೋ ನಕ್ಷತ್ರಾಣಾಂ ಪೃಥಕ್ಪೃಥಕ್ ॥ ೧೧೫ ॥**

**ಉಕ್ತಂ ಹಿ ತೇ ಋಕ್ಷಗಣಸ್ಯ ಜನ್ಮ**
**ಶುಭಾವಹಂ ಪಾಪಭಯಾಪಹಂ ಚ ।**
**ಅತಃ ಪರಂ ಕಿಂ ಕಥಯಾಮಿ ತುಭ್ಯಂ**
**ತತ್ತ್ವಂ ವದಸ್ವಾಯತಲೋಹಿತಾಕ್ಷ ॥ ೧೧೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಗ್ರಹರ್ಕ್ಷಾದಿಸಂಭವಾಧ್ಯಾಯೋನಾಮ**
**ಸಪ್ತೋತ್ತರಶತತಮೋಧ್ಯಾಯಃ**

ಹೆಣ್ಣುಮಕ್ಕಳನ್ನು ಚಂದ್ರನಿಗೆ ಮದುವೆಮಾಡಿಕೊಟ್ಟನು ಇವರೇ ನಕ್ಷತ್ರಾಭಿಮಾನಿ ದೇವತೆಗಳು. ಎಲೈ ವಜ್ರಮಹಾರಾಜನೇ! ಇದುವರೆಗೆ ನಿನಗೆ ನಕ್ಷತ್ರಗಣಗಳ ಜನ್ಮ ವೃತ್ತಾಂತವನ್ನು ತಿಳಿಸಿರುತ್ತೇನೆ. ಈ ಚರಿತ್ರೆಯು ಪರಮಮಂಗಳಕರವಾದುದು. ಮತ್ತು ಪಾಪಭಯವನ್ನು ಪರಿಹಾರಮಾಡತಕ್ಕದಾಗಿರುವುದು. ಈ ಚರಿತ್ರೆಯನ್ನು ನೀನು ಕೇಳಿದೆಯಷ್ಟೆ? ಇನ್ನು ಮುಂದೆ ನಿನಗೆ ಏನು ಹೇಳಬೇಕೋ ಅದನ್ನು ಕೇಳೆಂದು ಮಾರ್ಕಂಡೇಯ ಮಹರ್ಷಿಗಳು ವಜ್ರಮಹಾರಾಜನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಗ್ರಹನಕ್ಷತ್ರಾದಿ ಸಂಭವಾಧ್ಯಾಯವೆಂಬ
ಹೆಸರಿನ ಒಂದುನೂರೇಳನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟೋತ್ತರಾಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ದಕ್ಷಸ್ಯ ವಂಶಂ ಸಕಲಂ ನಕ್ಷತ್ರಾಣಾಂ ಚ ಸಂಭವಂ ।**
**ತ್ವತ್ತೋಽಹಂ ಶ್ರೋತುಮಿಚ್ಛಾಮಿ ಸರ್ವಧರ್ಮಭೃತಾಂ ವರ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಔತ್ತಾನಪಾದಿರ್ಧರ್ಮಾತ್ಮಾ ಧ್ರುವಃ ಪೂರ್ವಂ ಮಯೋದಿತಃ ।**
**ಧ್ರುವಸ್ತ್ವಜನಯತ್ಸೃಷ್ಟಿಂ ಮಹಾಬಲಪರಾಕ್ರಮಾಂ ॥ ೨ ॥**

### ಒಂದು ನೂರಎಂಟನೇ ಅಧ್ಯಾಯ

೧. ವಜ್ರರಾಜನು ಪ್ರಶ್ನೆಮಾಡುತ್ತಾನೆ - -ಸಕಲ ಧರ್ಮಗಳನ್ನೂ ತಿಳಿದ ಎಲೈ ಮಾರ್ಕಂಡೇಯ ಮಹರ್ಷಿಯೇ ! ದಕ್ಷನ ಸಕಲ ವಂಶವೃತ್ತಾಂತವನ್ನೂ ನಕ್ಷತ್ರಗಳು ಹುಟ್ಟಿದ ಕ್ರಮವನ್ನೂ ನೀನು ಸೂಕ್ಷ್ಮವಾಗಿ ಹೇಳಿಬಿಟ್ಟೆ ಅದರಿಂದ ನನಗೆ ತೃಪ್ತಿಯಾಗಲಿಲ್ಲ ಅವುಗಳನ್ನು ವಿಸ್ತಾರವಾಗಿ ತಿಳಿಸಬೇಕು

೨ ಮಾರ್ಕಂಡೇಯನು ಹೇಳುತ್ತಾನೆ ---ಉತ್ತಾನಪಾದರಾಜನ ಮಗನಾದ ಧರ್ಮಾತ್ಮನಾದ ಧ್ರುವನ ವೃತ್ತಾಂತವನ್ನು ಈ ಮೊದಲೇ ನಿನಗೆ ಹೇಳಿರುವೆನಷ್ಟೆ ? ಆ ಧ್ರುವನಿಗೆ ಮಹಾಬಲ ಪರಾಕ್ರಮಶಾಲಿಯಾದ ಸೃಷ್ಟಿಯೆಂಬ ಮಗಳು ಹುಟ್ಟಿದಳು (ಅಥವಾ ತನ್ನ ವಂಶವನ್ನು ಸೃಷ್ಟಿಸಿದನೆಂದೂ ಹೇಳಬಹುದು )

ತಸ್ಯ ಪ್ರಾಚೀನಗರ್ಭಸ್ತು ಪುತ್ರಸ್ತಸ್ಯಾಪ್ಯುದಾರಧೀಃ ।
ದಿವಂಜಯಸ್ತಸ್ಯ ಸುತಸ್ತಸ್ಯ ಪುತ್ರೋ ರಿಪುಃ ಸ್ಮೃತಃ ॥ ೩ ॥

ರಿಪೋಃಪುತ್ರಸ್ತಥಾಶ್ರೀಮಾನ್ಚಾಕ್ಷುಷಃ ಕೀರ್ತಿತೋ ಮನುಃ ।
ಊರುಸ್ತಸ್ಯ ಸುತಃ ಶ್ರೀಮಾನಂಗಸ್ತಸ್ಯಾಪ್ಯಥಾತ್ಮಜಃ ॥ ೪ ॥

ಅತ್ರಿರ್ಜಗ್ರಾಹ ತಂ ಪುತ್ರಂ ದತ್ತಕಂ ತು ಯಶಸ್ವಿನೇ ।
ಅಂಗಸ್ಯ ವೇನಃ ಪುತ್ರಸ್ತು ನಾಸ್ತಿಕೋ ಧರ್ಮವರ್ಜಿತಃ ॥ ೫ ॥

ಅಸಚ್ಛಾಸ್ತ್ರರತೋ ನಿತ್ಯಂ ಲೋಕಾಯತಿಕಸತ್ತಮಃ ।
ಚಕಾರ ಲೋಕೇ ಮರ್ಯಾದಾಂ ಧರ್ಮಬಾಹ್ಯೋ ನರಾಧಿಪಃ ॥ ೬ ॥

ನ ಯಷ್ಟವ್ಯಂ ನ ಹೋತವ್ಯಂ ನ ದೇಯಂ ಧರ್ಮಕಾರಣಂ ।
ಋಷಯಸ್ತಂ ಸಮಾಗಮ್ಯ ಕದಾಚಿದ್ವಾಕ್ಯಮಬ್ರುವನ್ ॥ ೭ ॥

---

೩ ಧ್ರುವನ ಮಗ ಪ್ರಾಚೀನಗರ್ಭ ಆತನ ಮಗನ ಹೆಸರು ದಿವಂಜಯ ಆದಿವಂಜಯನಿಗೆ ರಿಪುವೆಂಬ ಮಗನು ಹುಟ್ಟಿದನು

೪ ಆ ರಿಪುವಿನ ಮಗನೇ ಸುಪ್ರಸಿದ್ಧನಾದ ಚಾಕ್ಷುಷ ಮನುವೆಂದು ತಿಳಿ ದುಕೋ ಚಾಕ್ಷುಷನ ಮಗ ಊರು ಆತನ ಮಗ ಅಂಗರಾಜ

೫ ಈ ಅಂಗನನ್ನು ಅತ್ರಿಯು ದತ್ತು (ಸ್ವೀಕೃತ ಪುತ್ರ) ಮಾಡಿಕೊಂಡನು ಆ ಬಳಿಕ ಅಂಗರಾಜನಿಗೆ ವೇನನೆಂಬ ಮಗನು ಹುಟ್ಟಿದನು ಈ ವೇನನು ನಾಸ್ತಿಕ ನಾಗಿ ಬಿಟ್ಟನಲ್ಲದೆ ಸಕಲ ಧರ್ಮಗಳನ್ನೂ ತ್ಯಾಗಮಾಡಿ ಬಿಟ್ಟನು

ವೇನರಾಜನ ಚರಿತ್ರೆ

೬ ಈ ವೇನರಾಜನು ಶಾಸ್ತ್ರಮರ್ಯಾದೆಯನ್ನು ಮೀರಿ ಪರಮನಾಸ್ತಿಕನಾಗಿ ಬಿಟ್ಟನಲ್ಲದೆ ಧರ್ಮಬಾಹ್ಯನಾಗಿ ಪರಿಣಮಿಸಿದನು

೭ ನನ್ನ ರಾಜ್ಯದಲ್ಲಿ ಯಾರೂ ಯಜ್ಞಮಾಡಕೂಡದು ಹೋಮಮಾಡ ಕೂಡದು ಧರ್ಮಕಾರ್ಯಗಳನ್ನಾಚರಿಸಕೂಡದೆಂದು ಶಾಸನವನ್ನೇ ಮಾಡಿ ಬಿಟ್ಟನು ಆಗ ಸಕಲ ಋಷಿಗಳೂ ನೇರಿ ಸಭೆಮಾಡಿ ಅವರೆಲ್ಲರೂ ಈ ವೇನನ ಬಳಿಗೆ ಬಂದು ಈ ಮಾತನ್ನು ಹೇಳಿದರು ಅದೇನೆಂದರೆ --

॥ ಋಷಯಊಚುಃ ॥

**ಪೂರ್ವಪ್ರವೃತ್ತಾಂ ಮರ್ಯಾದಾಂ ಪೂರ್ವೈಃ ಪೂರ್ವತರೈಃ ಕೃತಾಂ ।**
**ಲೋಕಾಯತಿಕವಾಕ್ಯೇನ ನ ತ್ವಂ ಹಂತುಮಿಹಾರ್ಹಸಿ ॥ ೮ ॥**

**ಕರ್ಮಣಾ ಸುಕೃತೇನೇಹ ಸುಖಂ ಜಂತುಃ ಸಮಶ್ನುತೇ ।**
**ದುಃಖಂ ಜಂತುಶ್ಚ ಪ್ರಾಪ್ನೋತಿ ದುಷ್ಕೃತೇನ ಚ ಕರ್ಮಣಾ ॥ ೯ ॥**

**ಯೇಯಜಂತೇ ಸದಾ ದೇವಾನ್ಗುರುಶುಶ್ರೂಷಕಾಶ್ಚ ಯೇ ।**
**ವಿಪ್ರಪೂಜಾರತಾ ಯೇ ಚ ತೀರ್ಥಯಾತ್ರಾರತಾಶ್ಚ ಯೇ ॥ ೧೦ ॥**

**ತಪಸ್ವಿನಸ್ಸತ್ಯರತಾ ಯೇ ಚ ದಾನೇ ಸದಾ ರತಾಃ ।**
**ಸಮಶ್ನುವಂತಿ ಭೂಪಾಲ ಪರಲೋಕೇ ಸುಖಾನಿ ತೇ ॥ ೧೧ ॥**

೮ ಋಷಿಗಳು ಹೇಳುತ್ತಾರೆ --ಅಯ್ಯಾ! ವೇನರಾಜ! ನಿನ್ನ ತಂದೆ ತಾತ ಮುತ್ತಾತನ ಕಾಲದಿಂದ ಬಂದ ಮರ್ಯಾದೆಯನ್ನು ನೀನು ನಾಸ್ತಿಕರ ಮಾತನ್ನು ನಂಬಿಕೊಂಡು ಬಿಟ್ಟುಬಿಡುವುದು ಸರಿಯಾದ ದಾರಿಯಲ್ಲ

೯ ಈ ಲೋಕದಲ್ಲಿ ಯಾರು ಪುಣ್ಯಕಾರ್ಯಗಳನ್ನು ಮಾಡುವರೋ ಅಂತಹ ಪ್ರಾಣಿಗಳು ಬೇಕಾದ ಭೋಗ ಭಾಗ್ಯಗಳನ್ನು ಈ ಲೋಕ ಪರಲೋಕಗಳಲ್ಲಿ ಅನುಭವಿಸುತ್ತಾರೆ ಅದರಂತೆ ದುಷ್ಕಾರ್ಯ (ಪಾಪಕೃತ್ಯ) ಗಳನ್ನು ಮಾಡಿದವರೂ ಸಹ ದುಃಖವನ್ನು ಹೊಂದಲೇ ಬೇಕಾಗುತ್ತದೆ

೧೦--೧೧ ಯಾವ ಮನುಷ್ಯರು ಸರ್ವದಾ ದೇವತೆಗಳನ್ನು ಪೂಜೆಮಾಡುವರೋ ಯಾರು ಗುರುಗಳ ಸೇವೆಮಾಡುವರೋ ಮತ್ತು ಬ್ರಾಹ್ಮಣರನ್ನು ಪೂಜೆ ಮಾಡುವುದರಲ್ಲಾಸಕ್ತರಾಗಿರುವರಾರೋ ಮತ್ತದಾರು ತೀರ್ಥಯಾತ್ರೆಮಾಡುವುದರಲ್ಲಿ ನಿರತರಾಗಿರುವರೋ ಮತ್ತೂ ಇನ್ನಾರಾರು ತಪಸ್ಸನ್ನು ಮಾಡುತ್ತಾ ಸತ್ಯವಾದಿಗಳಾಗಿರುವರೋ ಇನ್ನೂ ದಾನಧರ್ಮ ಮಾಡುವುದರಲ್ಲಿ ಯಾರು ಆಸಕ್ತಿಹೊಂದಿರುವರೋ ಅಂತಹವರೆಲ್ಲರೂ ಪರಲೋಕದಲ್ಲಿ ಬೇಕು ಬೇಕಾದ ಸುಖಗಳನ್ನನುಭವಿಸುತ್ತಾರೆ-ಕೇಳಯ್ಯ! ವೇನಮಹಾರಾಜ!

ಸ ತ್ವಂ ಸುಖಪರಿಭ್ರಷ್ಟಾನ್ಮನ್ಯಲೋಕಾನ್ಗಂತುಮರ್ಹಸಿ ।
॥ ವೇನ ಉವಾಚ ॥
ಭವತಾಂ ಕಿಂ ಪ್ರಲಾಪೇನ ವೃಥೈವ ದ್ವಿಜಪುಂಗವಾಃ ॥ ೧೨ ॥

ಯೇ ಮೃತಾಸ್ತೇ ಮೃತಾಃ ಸರ್ವೇ ಮೃತಾನಾಂ ಸಂಭವಃ ಕುತಃ ।
ಪ್ರಾಣಸ್ಯ ವಾಯುಭೂತಸ್ಯ ನಿಷ್ಕ್ರಾಂತಸ್ಯ ಶರೀರತಃ ॥ ೧೩ ॥

ಭೂಯಃ ಶರೀರಗ್ರಹಣಂ ಯುಕ್ತ್ಯಾ ನೈವೋಪಪದ್ಯತೇ ।
ತಪಾಂಸಿ ಹಾಯನಶ್ಚಿತ್ರಾಃ ಸಯಮೋ ಭೋಗವಂಚನಾ ॥ ೧೪ ॥

ಅಗ್ನಿಹೋತ್ರಾದಿಕಂ ಕರ್ಮ ಬಾಲಕ್ರೀಡೇವ ಲಕ್ಷ್ಯತೇ ।
ಗ್ರಾಮ್ಯಾಣಾಂ ಮೂಢಚಿತ್ತಾನಾಂ ಸ್ರಗ್ವಿಣಾಂ ಚೈವ ಯೋಷಿತಾಂ ॥ ೧೫ ॥

ಅನ್ಯೇಷಾಂ ಚೈವ ಧನಿನಾಂ ಧೂರ್ತೈರಾದಿತ್ಸುಭಿರ್ಧನಂ ।
ಶಾಸ್ತ್ರಾಣ್ಯನೇಕರೂಪಾಣಿ ಗ್ರಥಿತಾನಿ ಸಹಸ್ರಶಃ ॥ ೧೬ ॥

೧೨ ಅಯ್ಯಾ! ವೇನರಾಜ! ಈಗ ನೀನಾದರೋ ಸುಖದಿಂದ ಭ್ರಷ್ಟನಾಗ ತಕ್ಕ ಮನುಷ್ಯರ ದಾರಿಯನ್ನು ಹಿಡಿದು ಪುನಃ ಮನುಷ್ಯ ಲೋಕವನ್ನೇ ಹೊಂದುವ ಕೆಲಸಗಳನ್ನು ಮಾಡುತ್ತಿರುತ್ತೀಯೋ! ವೇನರಾಜನು ಋಷಿಗಳಿಗೆ ಉತ್ತರ ಹೇಳು ತ್ತಾನೆ ಎಲೈ ಬ್ರಾಹ್ಮಣರೇ! ನನ್ನ ಮುಂದೆ ನೀವು ವ್ಯರ್ಥವಾಗಿ ಏಕೆ ಪ್ರಲಾಪ (ಅಳು) ಮಾಡುತ್ತೀರಿ ಆದರಿಂದ ಉಪಯೋಗವಿಲ್ಲ ಕೇಳಿ

೧೩-೨೦ - ಯಾರಾರು ಇದುವರಿಗೆ ಸತ್ತುಹೋಗಿರುವರೋ ಅವರೆಲ್ಲಾ ಸತ್ತೇ ಹೋದರು ಅವರು ಹಿಂದಕ್ಕೆ ಬಂದುದನ್ನು ಮಾತ್ರ ಯಾರೂ ನೋಡಲೇ ಇಲ್ಲ ಪ್ರಾಣವಾಯುವು ಈ ಶರೀರವನ್ನು ಬಿಟ್ಟು ಹೊರಟು ಹೋದಮೇಲೆ ಪುನಃ ಮತ್ತೊಂದು ಶರೀರ (ಜನ್ಮ)ವು ಬರುವುದೆಂದು ಹೇಳಿದರ ಆ ಯುಕ್ತಿಯು ಒಪ್ಪತಕ್ಕ ಮಾತೇ ಅಲ್ಲ ವರ್ಷಗಟ್ಟಲೆ ತಪಸ್ಸು ಮಾಡುತ್ತಾ ಚಿತ್ರ ವಿಚಿತ್ರವಾದ ವ್ರತಗಳೆಂದು ಹೇಳಿಕೊಳ್ಳುತ್ತಾ ಇಂದ್ರಿಯುಗಳನ್ನು ಜಯಿಸಬೇಕೆಂದು ಹೇಳುವ ಮಾತುಗಳೆಲ್ಲವೂ ಭೋಗವನ್ನುವಂಚಿಸತಕ್ಕ ಮಾತುಗಳೇವಿನಾ ಬೇರೆಯಲ್ಲ ಅಗ್ನಿಹೋತ್ರ ಮುಂತಾದ ಕರ್ಮಗಳೆಲ್ಲವೂ ಮಕ್ಕಳಾಟದಂತೆ ಕಾಣುತ್ತವೆಯೋ ಹೊರತು ಅದರಲ್ಲಿ ಅರ್ಥ ವಿಲ್ಲ ಹಳ್ಳಿಯ ಜನರಿಗೂ ಮೂಢಜನರಿಗೂ, ಹೇಳಿದ್ದನ್ನೆಲ್ಲಾ ನಂಬುವವರಿಗೂ, ಹೆಂಗಸರಿಗೂ, ಇನ್ನೂ ಅನೇಕ ಮಂದಿ ಹಣಗಾರರಿಗೂ, ಸಹ, ಸಹಸ್ರ ರೂಪವಾಗಿ

**ದೇಹಿ ನಿತ್ಯಂ ಯಜಸ್ವೈವಂ ದೇವಾಸ್ತೇನುಗ್ರಹೀಕೃತಾಃ ।**
**ಧನಮಾಪ್ಸ್ಯಸಿ ಶತ್ರೂಂಶ್ಚ ವಿಜೇಷ್ಯಸಿ ಸುಖಂ ಚ ತೇ ॥ ೧೭ ॥**

**ಮುಗ್ಧಾ ಏವಂ ಪ್ರತಾರ್ಯಂತೇ ಧನೈರ್ಧನಜಿಹೀರ್ಷಯಾ ।**
**ಯಾವಜ್ಜೀವಂ ಸುಖಂ ಜೀವೇನ್ನಾಸ್ತಿ ಮೃತ್ಯೋರಗೋಚರಂ ॥ ೧೮ ॥**

**ಭಸ್ಮೀಭೂತಸ್ಯ ಶಾಂತಸ್ಯ ಪುನರಾಗಮನಂ ಕುತಃ ।**
**ನಾಸ್ತಿ ದತ್ತಂ ಹುತಂ ಚೇಷ್ಟಂ ನ ದೇವಾ ಋಷಯೋ ನ ಚ ॥ ೧೯ ॥**

ಅನೇಕ ರೂಪವಾಗಿ ಶಾಸ್ತ್ರಗಳು ಬರೆಯಲ್ಪಟ್ಟಿವೆಯೆಂದೂ ಅದರಂತೆ ಆಚರಿಸಬೇಕೆಂ ತಲೂ ಹೇಳುತ್ತಾ ಆ ಮೂಲಕ ಹಣವನ್ನು ಎಳೆದುಕೊಂಡು ದ್ರವ್ಯಾರ್ಜನೆಮಾಡು ತ್ತಿರುವ ಧೂರ್ತಜನರಿಂದ ಈ ಆಸ್ತಿಕ್ಯವೆಂಬುದು ಕಟ್ಟಲ್ಪಟ್ಟ ಆಟವಾಗಿದೆ ಮಾಡ ಲ್ಪಟ್ಟಮಾಟವಾಗಿದೆ ಪ್ರತಿದಿನವೂ ದಾನಮಾಡು ಇಂತಹ ಯಜ್ಞಗಳನ್ನು ಮಾಡು ದೇವತೆಗಳು ನಿನಗೆ ಅನುಗ್ರಹಮಾಡುತ್ತಾರೆ. ಅದರಿಂದ ನಿನಗೆ ಯಥೇಚ್ಛವಾಗಿ ದ್ರವ್ಯಲಾಭವಾಗುತ್ತದೆ ನಿನ್ನ ಶತ್ರುಗಳನ್ನೆಲ್ಲಾ ನೀನು ಗೆಲ್ಲುತ್ತೀಯೇ !! ನಿನಗೆ ಸುಖವು ಲಭಿಸುವುದು ಹೀಗೆಲ್ಲಾ ಹೇಳುತ್ತಾ ತಿಳಿಯದ ಮೂಢರನ್ನು ಮೋಸ ಮಾಡುತ್ತಾ ಧೂರ್ತ ಜನರು ಹಣವನ್ನೆಳೆಯುತ್ತಿದಾರೆ ಅಯ್ಯ !! ಋಷಿ ಜನರೇ !! ಕೇಳಿ ಮನುಷ್ಯನು ಬದುಕಿರುವವರಿವಿಗೂ ಸುಖವಾಗಿದ್ದು ಬಿಟ್ಟರೆ ಸಾಕು ಮೃತ್ಯುವಿಗೆ ಕಾಣದಿರುವ ಕೋಣೆಯಿಲ್ಲವೆಂಬಂತೆ ಈ ದೇಹ ಹೊರಟು ಹೋದ ಮೇಲೆ ಸುಟ್ಟು ಬೂದಿಯಾಗಿ ಹೋಗುತ್ತದೆ ಈ ದೇಹ ಪುನಃ ಬರುವಂತಿಲ್ಲ

ಟಿಪ್ಪಣಿ - ೧೩ ರಿಂದ ೨೦ ಶ್ಲೋಕದವರಿಗೂ ಹೇಳಲ್ಪಟ್ಟಿರುವ ಅಭಿಪ್ರಾಯ ವನ್ನು ಶಾಸ್ತ್ರಜ್ಞರೂ, ವೇದಾಂತಿಗಳೂ, ಚಾರ್ವಾಕ (ನಾಸ್ತಿಕ) ಮತ ದರ್ಶನವೆಂದು ಹೇಳುತ್ತಾರೆ. ತರ್ಕಶಾಸ್ತ್ರದಲ್ಲಿ ಇದರ ಚರ್ಚೆಗಳೆಲ್ಲಾ ವಿಪರೀತವಾಗಿ ಬರು ತ್ತವೆ ಈ ಮತದ ಮೇಲೆಯೇ ವಿಶೇಷ ತರ್ಕ ನಡೆದು ಈ ಮತಗಳೆಲ್ಲಾ ಆಸ್ತಿಕರಿಂದ ಖಂಡಿಸಲ್ಪಟ್ಟಿವೆ

ವೇನರಾಜನು ಪುನಃ ಋಷಿಗಳನ್ನು ಕುರಿತು ಹೇಳುತ್ತಾನೆ ದಾನವೂ ಇಲ್ಲ ಧರ್ಮವೂ ಇಲ್ಲ ಹೋಮ ಯಜ್ಞಗಳಾವುವೂ ಇಲ್ಲ ದೇವತೆಗಳೂ ಇಲ್ಲ ಋಷಿ ಗಳೂ ಇಲ್ಲ ಹೋಗಿ ! ಹೋಗಿ !! ನಿಮ್ಮ ಕೆಲಸಮಾಡಿಕೊಳ್ಳಿ !!! ನಾನು ಭೂಲೋಕದಲ್ಲಿ ರಾಜ್ಯವನ್ನು ಹೊಂದಿ ರಾಜನಾಗಿದೇನೆ ಈ ರಾಜ್ಯಭೋಗವೂ

ಮಯಾಪ್ತಂ ಭುವಿ ರಾಜ್ಯಂ ಚ ಭೋಗಾಶ್ಚಾನ್ಯೇ ಪೃಥಗ್ವಿಧಾಃ ।
ಕಥಂ ಪ್ರಾಪ್ತಂ ಹಿ ತ್ಯಕ್ಷ್ಯಾಮಿ ಭವತಾಂ ವಚನೇನ ವೈ ॥ ೨೦ ॥

॥ ಮಾರ್ಕಂಡೇಯ ಉವಾಚ ॥
ಏತಚ್ಛ್ರುತ್ವಾ ವಚಸ್ತಸ್ಯ ವೇನಸ್ಯ ನೃಪಸತ್ತಮ ।
ಋಷಯಸ್ತಮಥೋಚುಸ್ತೇ ರಾಜಾನಂ ದುಷ್ಟಚೇತಸಂ ॥ ೨೧ ॥

॥ ಋಷಯ ಊಚುಃ ॥
ನೈತದೌಪಯಿಕಂ ವಾಕ್ಯಂ ಧ್ರುವವಂಶೋದ್ಭವಸ್ಯ ತೇ ।
ಪ್ರತ್ಯಕ್ಷಂ ಕರ್ಮಣಾಂ ಲೋಕೇ ಫಲಂ ಪಾರ್ಥಿವ ದೃಶ್ಯತೇ ॥ ೨೨॥ ॥

ಕಾಂಕ್ಷ್ಯಮಾಣಾನ್ನನಾನ್ಪಶ್ಯ ಭೋಜನಾಚ್ಛಾದನಂ ಪರಂ ।
ಸಹಸ್ರಂಭರಕಾನನ್ಯಾನ್ಪಶ್ಯ ಭೂಪಾಲ ಮಾನವಾನ್ ॥ ೨೩ ॥

ಇನ್ನೂ ಬೇರೆ ಬೇರೆ ನಾನಾ ವಿಧವಾದ ಭೋಗಗಳೂ ನನಗೆ ಲಭ್ಯವಾಗಿರುವಾಗ ಇವುಗಳನ್ನೆಲ್ಲಾ ನಾನು ನಿಮ್ಮ ಮಾತನ್ನು ನಂಬಿಕೊಂಡು ಅದಂತು ಬಿಡುವುದಕ್ಕಾದೀತು ?

೨೧ ಮಾರ್ಕಂಡೇಯರು ಹೇಳುತ್ತಾರ —ಕೇಳಿದೆಯೇನಯ್ಯ !! ವಜ್ರ ಮಹಾರಾಜ !! ವೇನರಾಜನು ಹೇಳಿದ ಕೆಟ್ಟ ಅಭಿಪ್ರಾಯವನ್ನು ಕೇಳಿದ ಋಷಿ ಜನರಲ್ಲರೂ ಅವನನ್ನು ಕುರಿತು ಹೇಳಿದುವೇನೆಂದರ -

೨೨ ಋಷಿಗಳು ಹೇಳುತ್ತಾರೆ ಎಲೈ ದೊರೆಯೇ ! ನೀನು ಧ್ರುವ ಮಹಾರಾಜನ ಪರಮ ಪವಿತ್ರವಾದ ವಂಶದಲ್ಲಿ ಹುಟ್ಟಿ ಈ ಮಾತನ್ನು ಹೇಳುವುದು ಸಮಂಜಸವಾಗಿ ಕಾಣುವುದಿಲ್ಲ ಈ ಪ್ರಪಂಚದಲ್ಲಿ ಮಾಡಿದ ಕರ್ಮಗಳಿಗೆ ಫಲವು ಪ್ರತ್ಯಕ್ಷ (ಕಣ್ಣೆದುರಿಗೆ) ವಾಗಿಯೇ ಕಾಣುತಲಿದೆ

೨೩-೨೮ —ಎಲೈ ರಾಜನೇ ನೋಡು ಲೋಕದಲ್ಲಿ ಹೊಟ್ಟೆ ಬಟ್ಟೆಗಿಲ್ಲದ ಅನ್ನಕ್ಕಾಗಿ ಅಲೆಯುತ್ತಿರುವ ಜನಗಳನ್ನು ನೋಡು ನಾನಾ ವಿಧವಾಗಿ ಉದರಂ ಭರಣಕ್ಕಾಗಿ ಕಷ್ಟಪಡುತ್ತಿರುವ ಮನುಷ್ಯರನ್ನು ನೋಡು ಪಲ್ಲಕ್ಕಿಯ ಮೇಲೂ ವಿವಿಧ ವಾಹನಗಳ ಮೇಲೂ ಸುಖವಾಗಿ ಸಂಚಾರಮಾಡುತ್ತಿರುವ ಜನರನ್ನು ನೋಡು. ಹೊಟ್ಟೆಯ ಹಸಿವನ್ನು ತಡೆಯಲಾರದೆ ಸೊಪ್ಪುಸೊದೆಗಳನ್ನೂ ಎಂಜಲೆಲೆಯಲ್ಲಿ ಬಿದ್ದ ಅಗುಳನ್ನೂ ತಿನ್ನುತ್ತಿರುವ ಜನರನ್ನು ನೋಡು ಭಾರವಾದ ಸೌದೇ ಹೊರ

**ಶಿಬಿಕಾಭ್ಯಸ್ತಥೈವಾನ್ಯಾನ್ಗಚ್ಛಮಾನಾನ್ಯಥಾಸುಖಂ ।**
**ಕ್ಷುಧಯಾ ಚ ಪರೀತಾಂಶ್ಚ ಶಾಖೋಚ್ಛಿಷ್ಟಭುಜಸ್ತಥಾ ॥ ೨೪ ॥**

**ಕಾಷ್ಠಭಾರಸಮಾಕ್ರಾಂತಾನ್ಪರಿಭೂತಾನ್ಪರೈಸ್ತಥಾ ।**
**ಜುಗುಪ್ಸಿತಾಂಸ್ತಥಾ ದೀನಾನ್ಬಹುಶಲ್ಯಾನ್ನರಾನ್ಸ್ತಥಾ ॥ ೨೫ ॥**

**ಪಂಗೂನನ್ಯಾನ್ಕುಬ್ಜಕಾಂಶ್ಚ ಕುಷ್ಠಜ್ವರವಿಪೀಡಿತಾನ್ ।**
**ರೋಗೈರ್ಬಹುಭಿರಾಕ್ರಾಂತಾನ್ಪರಿಭೂತಾನ್ಪರೈಸ್ತಥಾ ॥ ೨೬ ॥**

**ತಾರ್ಕಕಾನ್ಕೃಪಣಾನ್ದೀನಾನ್ವ್ಯಾಧಿಗ್ರಸ್ತಾನ್ಸುಖಚ್ಯುತಾನ್ ।**
**ಇಷ್ಟಬಂಧುವಿಯೋಗಾರ್ತಾನ್ಪಶ್ಯ ಪಾಪೇನ ಮಾನವಾನ್ ॥ ೨೭ ॥**

**ಆರೋಗ್ಯರೂಪಸತ್ತ್ವೌಜೋಧನಧಾನ್ಯಸಮನ್ವಿತಾನ್ ।**
**ಧರ್ಮೇಣ ಚ ಜನಾನ್ಪಶ್ಯ ಬಂಧುಭೃತ್ಯಸಮನ್ವಿತಾನ್ ॥ ೨೮ ॥**

ಯಾನ್ನು ಹೊತ್ತು ಜೀವಿಸುತ್ತಿರುವವರನ್ನೂ, ಇತರರಿಂದ ತಿರಸ್ಕಾರ ಹೊಂದಿ ಆ ತಿರಸ್ಕಾರವನ್ನು ಸಹಿಸಿಕೊಂಡು ಜೀವನಮಾಡುತ್ತಿರುವವರನ್ನೂ ಜುಗುಪ್ಸೆಯಾಗುವಂತಹ ಕೆಲಸಮಾಡುತ್ತಿರುವವರನ್ನೂ ದೈನ್ಯದಿಂದ ಭಿಕ್ಷೆ ಬೇಡುತ್ತಿರುವವರನ್ನೂ ಬಹು ಕಷ್ಟಕ್ಕೊಳಗಾಗಿರುವ ಜನರನ್ನೂ, ಹೆಳವರನ್ನೂ, ಕುಂಟ, ಕುರುಡ, ಕುಬ್ಜರನ್ನೂ ಅಂಗಹೀನರಾಗಿ ಅಂಗಲಾಚಿ ಬೇಡಿ ಹೊಟ್ಟೆ ಹೊರೆಯುವ ಜನರುಗಳನ್ನೂ ಕುಷ್ಠ ಜ್ವರಾದಿ ವಿವಿಧ ರೋಗಪೀಡಿತರನ್ನೂ ಜಗಳಗಂಟರನ್ನೂ, ಜೀರ್ಣರನ್ನೂ, ದೀನರನ್ನೂ ವ್ಯಾಧಿಪೀಡಿತರನ್ನೂ, ಸುಖಲೇಶವೂ ಇಲ್ಲದ ಸಂಕಟಪಡುತ್ತಿರುವವರನ್ನೂ ಇಷ್ಟಬಂಧುಗಳ ಮರಣದಿಂದ ಆರ್ತರಾಗಿ ಇರುವವರನ್ನೂ ಮಹಾಪಾಪಕಾರ್ಯಗಳನ್ನು ಮಾಡಿ ಪರಿಣಾಮದ ಕಷ್ಟಕ್ಕೆ ಸಿಕ್ಕಿ ಸುತ್ತುತ್ತಿರುವವರನ್ನೂ ನೋಡಯ್ಯಾ ॥

ವೇನರಾಜ ॥ ಮತ್ತೊಂದು ಬಗೆಯಾಗಿ ರಾಜಮಾರ್ಗದಲ್ಲಿರುವ ಜನರನ್ನು ನೋಡು. ಆರೋಗ್ಯದಿಂದಲೂ ಸೌಂದರ್ಯದಿಂದಲೂ, ಬಲತೇಜಸ್ಸುಗಳಿಂದಲೂ ಧನ ಧಾನ್ಯಸಮೃದ್ಧಿಗಳಿಂದಲೂ ಕೂಡಿದವರಾಗಿ ಲೀಲೆಯಿಂದಿರುವ ಸುಖಲೀಲಾಸಂಪನ್ನರಾದ ಧರ್ಮಾತ್ಮರನ್ನು ನೋಡು ಬಂಧುಬಳಗಗಳಿಂದ ತುಂಬಿ ದಾಸದಾಸೀನಿಕರದಿಂದ ಸೇವೆಯಂ ಕೈಗೊಳ್ಳುತ್ತಿರುವ ಪುಣ್ಯಾತ್ಮರನ್ನೂ ನಹ ನೋಡು. ಇದನ್ನೆಲ್ಲಾ ನೋಡಿದರೆ ಕರ್ಮಾನುಸಾರವಾಗಿ ಜನರು ಹುಟ್ಟುತ್ತಾರೆಂದು ತಿಳಿಯಬಹುದಲ್ಲವೇ ॥

**ರಾಜಮಾರ್ಗಮಿಮಂ ಲೋಕಾಸ್ತ್ವಸ ಕರ್ಮಾನುವರ್ತತೇ ।**
**॥ ಮಾರ್ಕಂಡೇಯ ಉವಾಚ ॥**
**ತತಸ್ತೇಷಾಂ ವಚಃ ಶ್ರುತ್ವಾ ಋಷೀಣಾಮುಗ್ರಚೇತಸಾಂ ॥ ೨೯ ॥**

**ಹಸ್ತೇನ ಹಸ್ತಂ ಸಂಘಟ್ಯ ಪ್ರಹಸನ್ನಿದಮುವಾಚ ಹ ।**
**॥ ವೇನ ಉವಾಚ ॥**
**ಶುಭೇನ ಕರ್ಮಣಾ ಸೌಖ್ಯಂ ದುಃಖಂ ಪಾಪೇನ ಕರ್ಮಣಾ ॥ ೩೦ ॥**

**ನಾಪ್ನುವಂತಿ ಜನಾ ವಿಪ್ರಾಃ ಪ್ರಾಪ್ನುವಂತಿ ಸ್ವಭಾವತಃ ।**
**ಸ್ವಭಾವಶ್ಚ ವಿಚಿತ್ರೋಽಯಂ ಸಂಸಾರೋದ್ವೇಜಕಃ ಸದಾ ॥ ೩೧ ॥**

**ನಾತ್ರಪೂರ್ವಕೃತಂ ಕರ್ಮ ಧೂರ್ತವಾದೋ ಯಥಾದ್ವಿಜಾಃ ।**
**ಅಶ್ಮಾನಃ ಕರ್ಮಣಾ ಕೇನ ಸೂಕ್ಷ್ಮಾ ಶ್ಚಾನ್ಯೇ ಮಹತ್ತರಾಃ ॥ ೩೨ ॥**

**ವಿನ್ಯಸ್ತಾಃ ಕರ್ಮಣಾ ಕೇನ ಸುರಾರ್ಚಾವಾಪಭೂಮಿಷು ।**
**ಪಾಷಾಣಾರ್ಚಾದಿದತ್ತೇನ ಕಥಂ ತುಷ್ಯಂತಿ ದೇವತಾಃ ॥ ೩೩ ॥**

೨೯ ಮಾರ್ಕಂಡೇಯರು ಮಧ್ಯದಲ್ಲಿ ವಜ್ರನನ್ನು ಕುರಿತು ಹೇಳುತ್ತಾರೆ ಕೇಳಯ್ಯ! ವಜ್ರ! ವೇನನು, ಉಗ್ರಮನಸ್ಸಿನಿಂದ ಋಷಿಗಳು ಹೇಳಿದ ಮಾತನ್ನು ಕೇಳಿ ಘಟ್ಟಿಯಾಗಿ ಚಪ್ಪಾಳೆ ಹೊಡೆದು ಹಾಸ್ಯಮಾಡುತ್ತಾ ಋಷಿಗಳ ಮುಂದ ಪುನಃ ಹೇಳುತ್ತಾನೆ

೩೦-೩೩ – ವೇನನು ಹೇಳುತ್ತಾನೆ – ಎಲೈ ಬ್ರಾಹ್ಮಣರಿರಾ! ಕೇಳಿರಿ ನೀವು ಹೇಳಿದಂತೆ ಜನರು ಶುಭಕರ್ಮಗಳಿಂದ ಸುಖವನ್ನೂ ಪಾಪ ಕರ್ಮಗಳಿಂದ ದುಃಖವನ್ನೂ ಹೊಂದುವರೆಂಬ ಮಾತು ಸುಳ್ಳು ಜನರು ತಮ್ಮ ತಮ್ಮ ಸ್ವಭಾವ ಗಳಿಂದಲೇ ಹೀಗಿರುತ್ತಾರೆಂದು ತಿಳಿದುಕೊಳ್ಳಿರಿ ಈ ಸ್ವಭಾವವೆಂಬುದು ವಿಚಿತ್ರ ವಾದುದು ಇದು ಸಂಸಾರವನ್ನು ಉದ್ವೇಗಗೊಳಿಸತಕ್ಕದಾಗಿರುವುದು ಈ ವಿಷಯದಲ್ಲಿ ಪೂರ್ವ ಜನ್ಮದಲ್ಲಿ ಮಾಡಿದ ಕರ್ಮವೆಂಬ ಮಾತು ಧೂರ್ತರಾಡುವ ವಾದವೆಂದು ತಿಳಿಯಬೇಕು ಕಲ್ಲುಗಳಲ್ಲಿ ದೊಡ್ಡವೂ ಸಣ್ಣವೂ ಇವೆಯಷ್ಟೆ! ಯಾವ ಕರ್ಮದಿಂದ ಅವು ದೊಡ್ಡದಾಗಿ ಚಿಕ್ಕದಾಗಿ ಪರಿಣಮಿಸಿದುವು ಹೇಳಿರಿ! ದೇವತಾಪೂಜೆಯೆಂಬ ಈ ವಾಸಪೂರಿತ ಭೂಮಿಯಲ್ಲಿ ಕಲ್ಲುಗಳನ್ನು ಪೂಜೆ

ಕೋದೇಶಾ ನ ಮಯಾ ದೃಷ್ಟಾ ನಾಪಿ ಪೂರ್ವಂ ಪಿತಾಮಹೈಃ ।
ನಾನ್ಯೈರ್ಜನೈಸ್ತಥಾ ತಾಂಶ್ಚ ಧೂರ್ತವಾಕ್ಯಾತ್ಪ್ರತೀಮಹೇ ॥ ೩೪ ॥

ಅನ್ಯಭುಕ್ತೇನ ಚಾನ್ಯಸ್ಯ ತೃಪ್ತಿಶ್ಚೈವ ಕಥಂ ಭವೇತ್ ।
ಅನ್ಯಭುಕ್ತೇನ ಚಾನ್ಯಸ್ಯ ಯದಿ ತೃಪ್ತಿರ್ಭವಿಷ್ಯತಿ ॥ ೩೫ ॥

ದದ್ಯಾತ್ಪ್ರವಸಿತೇ ಶ್ರಾದ್ಧಂ ನ ಸ ಪಥ್ಯೋದನಂ ಮಹತ್ ।
ಮೃತಸ್ಯ ವಹ್ನೌ ದಗ್ಧಸ್ಯ ಭಸ್ಮೀಭೂತಸ್ಯ ವಾ ಪುನಃ ॥ ೩೬ ॥

ಸರ್ವಭಾವವಿನಿಷ್ಟಸ್ಯ ಕಿಂ ನು ಶ್ರಾದ್ಧೈಃ ಪ್ರಯೋಜನಂ ।
ಕೃಪಣೈರ್ಯಜ ದೇಹೀತಿ ಧನಲುಬ್ಧೈಃ ಪ್ರಕೀರ್ತಿತಂ ॥ ೩೭ ॥

ಧನಿನಾಂ ಧನನಾಶಾಯ ಸತತಂ ಸ್ವಾರ್ಥತತ್ಪರೈಃ ।
ಧರ್ಮೇ ನಿವಿಷ್ಟಾಃ ಪುರುಷಾಃ ದೃಶ್ಯಂತೇ ದುಃಖಜೀವಿನಃ ॥ ೩೮ ॥

---

ಮಾಡುತ್ತಾ ಅವ್ರಗಳಿಗೆ ಕೊಟ್ಟ ನೈವೇದ್ಯಾದಿಗಳಿಂದ ದೇವತೆಗಳು ತೃಪ್ತರಾಗುತ್ತಾರೆನ್ನುವಿರಲ್ಲಾ! ಅದು ಹೇಗೆ? ಹೇಳಿರಿ!

೩೪-೩೮ —ಕಾಣದೇ ಇರುವ ಸ್ವರ್ಗಾದಿ ಲೋಕಗಳನ್ನು ನಾನು ನೋಡಿಲ್ಲ ನಮ್ಮಪ್ಪನೂ ನಮ್ಮತಾತನೂ ನೋಡಿರಲಿಲ್ಲ ಮುಂದ ಹುಟ್ಟುವವರೂ ಆ ಲೋಕಗಳನ್ನು ನೋಡಲಾರರು ಧೂರ್ತರಾದ ಕೆಲವುಮಂದಿ ಶಾಸ್ತ್ರಜ್ಞರ ಮಾತನ್ನು ನಂಬಿ ಅದನ್ನು ನಾವು ಒಪ್ಪಿಕೊಳ್ಳಬೇಕಾಗಿದೆ ಯಾವನೋ ಊಟಮಾಡಿದರೆ ಇನ್ನಾವನಿಗೋ ತೃಪ್ತಿಯಾಗುವುದಂತೆ! ಹಾಗಾಗುವ ಪಕ್ಷದಲ್ಲಿ ಪರಸ್ಥಳಕ್ಕೆ ಹೋಗಿರುವವನಿಗೆ ಶ್ರಾದ್ಧವನ್ನು ಮಾಡಿ ಅವನಿರುವ ಕಡೆಯಲ್ಲಿಯೇ ತೃಪ್ತಿಪಡಿಸಬಹುದಷ್ಟೆ! ಸತ್ತುಹೋಗಿ ಸುಟ್ಟುಬೂದಿಯಾಗಿ ಕಣ್ಣಿಗೆ ಕಾಣದೆ ಇರುವ ಮೃತನ ಪಕ್ಷದಲ್ಲೇ ಹೀಗಿರುವಾಗ ಪರಸ್ಥಳದಲ್ಲಿ ಬದುಕಿರುವವನಿಗೇಕೆ ತೃಪ್ತಿಯಾಗಬಾರದು! ಸಕಲ ಭಾವಗಳನ್ನೂ ಕಳೆದುಕೊಂಡು ನಾಶವಾಗಿ ಹೋದವನಿಗೆ ಶ್ರಾದ್ಧಾದಿಗಳಿಂದ ಪ್ರಯೋಜನವೇನಿದೆಯೋ! ಕೃಪಣಾಗ್ರಗಣ್ಯರಾದ ಧನಲೋಭಗ್ರಸ್ತರಾದವರಿಂದ, ಯಜ್ಞ ಮಾಡು ದಾನಮಾಡು ಎಂಬುದಾಗಿ ಹೇಳುವ ಮಾತುಗಳೆಲ್ಲವೂ ಧನಿಕರ ಧನವನ್ನು ನಾಶಗೊಳಿಸುವುದಕ್ಕಾಗಿಯೇ ಹೊರತು ಬೇರೆಯಿಲ್ಲ ಇವೆಲ್ಲವೂ ಸ್ವಾರ್ಥಪರರಾದ ಜನರಿಂದ ಉತ್ಪತ್ತಿಯಾದ ಮಾತುಗಳು ನೋಡಿ! ಸ್ವಾಮಿ! ಬ್ರಾಹ್ಮಣರೇ! ಧರ್ಮದಲ್ಲೇ ನಿರತರಾದ ಜನರೆಷ್ಟು ಮಂದಿ ದುಃಖಪಡುತ್ತಿರುವುದನ್ನೂ ಪಾಪಕರ್ಮ

ಸುಖಾನ್ವಿತಾ ಹಿ ದೃಶ್ಯಂತೇ ಪಾಪಕರ್ಮರತಾಸ್ತಥಾ ।
ತಸ್ಮಾದ್ಧರ್ಮೇಣ ಕಿಂ ಕಾರ್ಯಂ ಸುಖಂ ಜೀವೇತ್ತು ಪಂಡಿತಃ ॥ ೩೯ ॥

ಪುರುಷಾರ್ಥಃ ಪರಃ ಕಾಮೋ ಧನೇನ ಚ ತದಾಪ್ಯತೇ ।
॥ ಋಷಯ ಊಚುಃ ॥
ಪ್ರತ್ಯಕ್ಷಮೇವ ಪಶ್ಯಂತಃ ಪೂರ್ವಜನ್ಮನಿ ಮಾನವಾಃ ॥ ೪೦ ॥

ಪರಲೋಕಂ ನ ಪಶ್ಯಂತಿ ಪಶ್ಯ ದೇವೇನ ವಂಚಿತಾಃ ।
ಜಾತಮಾತ್ರೇ ಯಥಾ ಜಂತುಸ್ತನಂ ಗೃಹ್ಣಾತಿ ಪಾರ್ಥಿವ ॥ ೪೧ ॥

ಪೂರ್ವಜನ್ಮಾಂತರಾಭ್ಯಾಸಂ ವಿನಾ ತತ್ಕಸ್ಯ ಚೇಷ್ಟಿತಂ ।
ಪ್ರಾಣೇನ ವಾಯುಭೂತೇನ ಜನ್ಮನ್ಯಸ್ಮಿನ್ಯಥಾ ನರಃ ॥ ೪೨ ॥

ಕರೋತಿ ದೇಹಗ್ರಹಣಂ ಜನ್ಮಾಂತರಗತಸ್ತಥಾ ।
ಮಹೀವಿಕಾರಮುಕ್ತಾನಃ ಕರ್ಮಜೀವವಿವರ್ಜಿತಾನ್ ॥ ೪೩ ॥

---

ದಲ್ಲೇ ಆಸಕ್ತರಾದ ಜನರು ಸುಖಪಡುತ್ತಿರುವುದನ್ನೂ ನಾವು ನೋಡುತ್ತಿಲ್ಲವೇ ! ಆದ್ದರಿಂದ ಧರ್ಮದಿಂದೇನು ಕೆಲಸ ? ಬುದ್ಧಿವಂತರಾದ ಜನರು ಸುಖಪಡಲು ಪ್ರಯತ್ನ ಪಡಬೇಕೇ ಹೊರತು, ಧರ್ಮ ಕರ್ಮಗಳೆಂದು ಯಾವುದನ್ನೂ ನಂಬಬಾರದು ಪುರುಷಾರ್ಥವೆಂದರೆ ಹಣದಿಂದ ಆವಾವ ಕಾಮೋಪಭೋಗಗಳು ದೊರೆಯುವುವೋ ಅದೇ ಪರಮಪುರುಷಾರ್ಥವು

೪೦-೪೬ — ಋಷಿಗಳು ಹೇಳುತ್ತಾರೆ ! ಪೂರ್ವ ಜನ್ಮದಲ್ಲಿ ಮಾಡಿದ ಕರ್ಮ ಫಲವನ್ನು ಈ ಜನ್ಮದಲ್ಲಿ ಕಣ್ಣಿನಿಂದ ನೋಡುತ್ತಿದ್ದರೂ ಪರಲೋಕವನ್ನು ನೋಡಿಲ್ಲ ನೆಂದು ಹೇಳುವುದು ಸರಿಯಾದ ಯುಕ್ತಿಯಲ್ಲ ಎಲೈ ರಾಜನೇ ! ನೋಡು ಈ ರೀತಿ ಹೇಳುವವರು ದೇವರಿಂದ ವಂಚಿಸಲ್ಪಟ್ಟವರೇ ಸರಿ ಜನ್ಮಾಂತರವಾಸನೆ ಯಿಲ್ಲದೆ ಇದ್ದರೆ ಭೂಮಿಯಲ್ಲಿ ಹುಟ್ಟಿದ ಪ್ರಾಣಿಯು ಹುಟ್ಟಿದ ತಕ್ಷಣವೇ ತನ್ನ ಆಹಾರಕ್ಕಾಗಿ ಮಾತೃವಿನ ಸ್ತನ್ಯವನ್ನು ಹುಡುಕುವುದನ್ನು ನೋಡಿಲ್ಲವೇ ? ಇದು ಆ ಮಗುವಿಗೆ ಹೇಗೆ ಗೊತ್ತು ? ಜನ್ಮಾಂತರದಲ್ಲಿ ಮಾಡಿದ ಅಭ್ಯಾಸಬಲದಿಂದಲೇ ಅಲ್ಲವೇ ! ಈ ಜ್ಞಾನವು ಆ ಮಗುವಿಗೆ ಬಂದುದು ವಾಯುವು ಈ ಜನ್ಮದಲ್ಲಿ ಪ್ರಾಣದೊಡನೆ ಹೇಗೆ ಈ ಶರೀರವನ್ನು ಬಿಟ್ಟು ಹೊರಟುಹೋಗುವುದೋ ಅದೇ

**ಸೂಕ್ಷ್ಮತ್ವಂ ಚ ಮಹತ್ವಂ ಚ ತೇಷಾಮೀಶ್ವರಕಾರಿತಂ ।**
**ಮಂತ್ರೇಣ ನೀಯತೇ ಶ್ರಾದ್ಧಂ ಪರಲೋಕಗತೇ ಜನೇ ॥ ೪೪ ॥**

**ದೃಷ್ಟಿಃ ಪ್ರವಾಸಿನೋ ನೈವ ತಥಾ ಮಂತ್ರಸ್ಯ ಪಾರ್ಥಿವ ।**
**ಪ್ರಾಕಾಮ್ಯಯುಕ್ತಾ ದೇವಾಶ್ಚ ಯುಕ್ತಾ ಲಘಿಮನಾ ತಥಾ ॥ ೪೫ ॥**

**ಜ್ಞಾನಯುಕ್ತಾಶ್ಚ ಗೃಹ್ಣಂತಿ ಸರ್ವತ್ರ ವಿನಿವೇದಿತಂ ।**
**ಧರ್ಮಮಾಸೇವತಾಂ ನೃಣಾಂ ವಿಪತ್ತಿರ್ಯಾ ನರಾಧಿಪ ॥ ೪೬ ॥**

---

ಮೇರೆ ಜನ್ಮಜನ್ಮಾಂತರಗಳಲ್ಲಿಯೂ ದೇಹಗ್ರಹಣ ಕಾಲದಲ್ಲಿ ಭಗವದಿಚ್ಛೆಯಿಂದ ಬಂದು ಕೂಡಿಕೊಳ್ಳುತ್ತದೆ ಮಣ್ಣಿನ ವಿಕಾರವನ್ನು ಹೊಂದಿದ ಚಿಕ್ಕ ದೊಡ್ಡ ಕಲ್ಲುಗಳೂ ಬಂಡೆಗಳೂ ಕರ್ಮಜೀವನಿಂದ ವಿರಹಿತವಾದುವು ಈ ರೀತಿ ಅವುಗಳ ಸೂಕ್ಷ್ಮತ್ವ ಮಹತ್ವಗಳಿಗೆ ಈಶ್ವರನೇ ಕಾರಣನು ಪರಲೋಕಕ್ಕೆ ಹೊರಟುಹೋದ ಜನರನ್ನು ಕುರಿತು ಶ್ರಾದ್ಧಕರ್ಮದಲ್ಲಿ ಹೇಳುವ ಮಂತ್ರಗಳು ಸೂಕ್ಷ್ಮರೂಪದಿಂದ ಮೃತನ ಸನ್ನಿಧಾನವನ್ನು ಸೇರಿ ಅವನಿಗಾಗಿ ದತ್ತವಾದ ಸಕಲ ಪದಾರ್ಥಗಳನ್ನೂ ಅವನಿಗೆ ಕೊಟ್ಟು ಅವನನ್ನು ತೃಪ್ತಿಪಡಿಸುವುವು ಪ್ರವಾಸಿಗಳು ಪ್ರವಾಸಿಗಳೇ ಹೊರತು ಮಂತ್ರಗಳಿಗೆ ಪರರಲ್ಲ ಪಿತೃಗಳು (ಅದೃಶ್ಯರಾದ್ದರಿಂದ) ಮಂತ್ರಗಳಿಗೆ ಅಧೀನರು

ಟಿಪ್ಪಣಿ ---(ಮೈಸೂರಿನಿಂದ ಟಿಕೇಟ್ ತೆಗೆದುಕೊಂಡು ಬೆಂಗಳೂರಿಗೆ ಒಬ್ಬನು ಹೊರಡುತ್ತಾನೆ ಅವನು ಬೆಂಗಳೂರನ್ನು ನೋಡದೆ ಇದ್ದರೂ ಟಿಕೇಟಿನ ಬಲದಿಂದ ಬೆಂಗಳೂರಿಗೆ ತಲುಪಿಯೇ ತಲಪುತ್ತಾನೆ (೨) ದೇಶಾಂತರದಲ್ಲಿರುವವನೊಬ್ಬನಿಗೆ ನಾವು ಹಣವನ್ನು ಕಳುಹಿಸಬೇಕಾದರೆ ಅಂಚೆಕಚೇರಿಗೆ ಹೋಗಿ ಹಣವನ್ನೂ ಅದರ ಶುಲ್ಕ (ಫೀ) ವನ್ನೂ ನಂಬಿಕೆಯಿಂದ ಕೊಟ್ಟರೆ ಅದು ವಿಳಾಸದಾರನಿಗೆ ತಲುಪಿಯೇ ತಲುಪುವದೆಂಬ ಭರವಸೆ ನಮಗೆ ಇದ್ದೇ ಇದೆ ಮಣಿಯಾರ್ಡರ್ ಕಮಿಷನ್ ಎಂಬುವುದೇ ಮಂತ್ರಗಳು ಅವು ದಾರಿಯಲ್ಲಿ ಸೂಕ್ಷ್ಮರೂಪದಲ್ಲಿ ಹೋಗುವುದೆಂಬುದೇ ಪ್ರಾಕಾಮ್ಯ ಮತ್ತು ಲಘಿಮತಾ ಎಂಬ ದೇವೀಶಕ್ತಿಗಳು ಈ ಸೂಕ್ಷ್ಮಶಕ್ತಿಯಿಂದ ಮಂತ್ರಗಳೆಂಬ ಹಣ (ಮೂಲ್ಯ-ಶುಲ್ಕ) ವನ್ನು ಪಡೆದ ಸೂಕ್ಷ್ಮರೂಪೀ ದೇವಪಿತೃಗಳು, ದೃಷ್ಟಿರೂಪ ಸೂಕ್ಷ್ಮಶಕ್ತಿಯಿಂದ ಮೃತನೆಂಬ ವಿಳಾಸದಾರನಿಗೆ ತೃಪ್ತಿಕರ ವಸ್ತುಗಳನ್ನು ತಲುಪಿಸಬಲ್ಲರೆಂಬ ಲೌಕಿಕೋದಾಹರಣೆಯನ್ನು ಇಲ್ಲಿ ಕೊಡಲಾಗಿದೆ )

ಪೂರ್ವಜನ್ಮಕೃತೇನೇಹ ಸುಕೃತೇನ ಚ ಕರ್ಮಣಾ ।
ಸುತಪ್ತೇನೇಹ ತಪಸಾ ಬ್ರಾಹ್ಮಣೈರ್ವಸುಧಾಧಿಪ ॥ ೪೭ ॥

ಶಾಪಾನಿ ದೀಯಮಾನಾನಿ ಪ್ರತ್ಯಕ್ಷಂ ಕಿನ್ನ ಪಶ್ಯಸಿ ।
ಅಮೋಘಾಶಾಸ್ತಥಾ ವಿಪ್ರಾಃ ಸುತಪ್ತತಪಸೋ ನೃಪ ॥ ೪೮ ॥

ಕಿನ್ನ ಪಶ್ಯಸಿ ಲೋಕೇಽಸ್ಮಿನ್ಪ್ರತ್ಯಕ್ಷಂ ಧರ್ಮದರ್ಶನಂ ।
ಬೀಜಾನಿ ಬೀಜಕಾಲೇಷು ಯೈರೇವಾಪ್ತಾನಿ ಪಾರ್ಥಿವ ॥ ೪೯ ॥

ತ ಏವ ಲೋಕೇ ದೃಶ್ಯಂತೇ ಪ್ರತ್ಯಕ್ಷಂ ಫಲಭಾಗಿನಃ ।
ದೃಷ್ಟ್ವಾ ಮಂತ್ರಪ್ರಭಾವೇಣ ವಿಪ್ರಕರ್ಷಣತತ್ಪರಾನ್ ॥ ೫೦ ॥

ವಿಷಾಪಹಾರಂ ಕುರ್ವಾಣಾನ್ಧರ್ಮೋಽವ್ಯಸ್ತೀತಿ ಚಿಂತಯ ।
ಯೇಷಾಮಪಿ ವಚಃ ಕ್ಷುದ್ರಂ ಪರಲೋಕಂ ನ ವಿದ್ಯತೇ ॥ ೫೧ ॥

---

ಜ್ಞಾನಬಲದಿಂದ ಪಿತೃಗಳು ತಮ್ಮ ಮಗನು ಕೊಟ್ಟ ಶ್ರಾದ್ಧದಿಂದ ತೃಪ್ತಿ ಹೊಂದುವರು. ಅಯ್ಯ ಘೋರಯೇ! ಈ ಉದಾಹರಣೆಯನ್ನು ಕೇಳಿದಮೇಲೂ ಧರ್ಮಮಾರ್ಗನಿರತರಾದ ಮನುಷ್ಯರಿಗೆ ಯಾವ ವಿಪತ್ತೂ ಒದಗುವುದಿಲ್ಲನೆಂದು ತಿಳಿದುಕೋ!

೪೭-೫೧--ಎಲೈ ವೇನರಾಜನೇ! ಪೂರ್ವ ಜನ್ಮದಲ್ಲಿ ಮಾಡಿದ ಮಹತ್ತರವಾದ ಸತ್ಕರ್ಮದಿಂದಲೂ ದೇಹವನ್ನು ದಣಿಸಿ ಮಾಡಿದ ತಪಸ್ಸಿನಿಂದಲೂ ಬ್ರಾಹ್ಮಣರು ಶಾಪಾನುಗ್ರಹ ಸಾಮರ್ಥ್ಯವನ್ನು ಹೊಂದಿ ಕೇಡುಮಾಡುವ ಜನರಿಗೆ ಶಾಪವನ್ನು ಕೊಡುತ್ತಿರುವುದನ್ನು ನೀನು ಕಣ್ಣಿನಿಂದ ನೋಡಿಲ್ಲವೇನಯ್ಯ! ಮತ್ತು ತಪೋನಿರತರಾದ ಬ್ರಾಹ್ಮಣರು ಬಹುಕಾಲ ತಪಸ್ಸನ್ನು ಮಾಡಿ ಧರ್ಮಸಾಧನೆಯನ್ನು ಮಾಡಿರುವುದು ನಿನ್ನ ಕಣ್ಣಿಗೆ ಬಿದ್ದಿಲ್ಲವೇ! ಅವರು ಸತ್ಯವಾದ ಆಶೀರ್ಯುಕ್ತರಾಗಿದಾರೆ ಎಂಬುದನ್ನು ನೋಡಿಲ್ಲವೆ! ಬೀಜ ಬಿತ್ತುವಾಗ ಯಾರು ಬಿತ್ತನೆ ಹಾಕಿದರೋ ಅವರು ಆ ಬೀಜವು ಗಿಡವಾಗಿ ಮರವಾಗಿ ಫಲ ಕೊಟ್ಟಾಗ ಫಲಾನುಭವ ಮಾಡುತ್ತಿರುವುದು ಸರ್ವರಿಗೂ ತಿಳಿದ ವಿಷಯವೇ ಆಗಿದೆ. ತಮ್ಮ ಮಂತ್ರಪ್ರಭಾವದಿಂದ, ವಿಷದಿಂದ ಸಾಯುತ್ತಿರುವವರನ್ನು ಮಂತ್ರಹಾಕಿ ವಿಷಾಪಹಾರಮಾಡಿ ಬದುಕಿಸುತ್ತಿರುವುದನ್ನು ನೀನು ಕಣ್ಣಿನಿಂದ ನೋಡಿರುವಿ! ಇದರಿಂದಲಾದರೂ ಧರ್ಮವಿದ

**ತೇಪ್ಯೃದ್ಧಿಂಜಂತೇ ಪಾಪಾನಾಂ ತಸ್ಮಾತ್ಪಾಪಂ ವಿವರ್ಜಯ ।**
**॥ ಮಾರ್ಕಂಡೇಯ ಉವಾಚ ॥**
**ಏತಚ್ಛೃತ್ವಾ ತು ವಚನಮೃಷೀಣಾಂ ಭಾವಿತಾತ್ಮನಾಂ ॥ ೫೨ ॥**

**ಹೃತೋತ್ತರಸ್ತದಾ ದೀನೋ ನೋತ್ತರಂ ಪ್ರತ್ಯಭಾಷತ ।**
**ಚಿಂತಯಾಮಾಸ ಮನಸಾ ಬ್ರಾಹ್ಮಣೈರ್ಧರ್ಮತತ್ಪರೈಃ ॥ ೫೩ ॥**

**ಯದೇತದುಕ್ತಂ ವಚನಂ ಮಿಥ್ಯೈತನ್ನಾತ್ರ ಸಂಶಯಃ ।**
**ಅಭಿಪ್ರಾಯಂ ನರೇಂದ್ರಸ್ಯ ಜ್ಞಾತ್ವಾ ಬ್ರಾಹ್ಮಣಪುಂಗವಾಃ ॥ ೫೪ ॥**

**ವಿನಷ್ಟಂ ಮೇನಿರೇ ಸರ್ವಂ ತ್ರೈಲೋಕ್ಯಂ ಸಚರಾಚರಂ ।**
**ಏತಸ್ಮಿನ್ನಂತರೇ ದೇವೈರ್ಬ್ರಾಹ್ಮಣಾನಾಂ ಮಹಾತ್ಮನಾಂ ॥ ೫೫ ॥**

**ಬುದ್ಧಿರ್ನಿವೇದಿತಾ ತಸ್ಯ ವಿನಾಶಾಯ ದುರಾತ್ಮನಃ ।**
**ಸರ್ವೇಶ್ವರಃ ಸರ್ವಶಕ್ತಿಃ ಸರ್ವದೃಕ್ಸರ್ವಸಾಧನಃ ॥ ೫೬ ॥**

ಯೆಂದು ಅಂದುಕೋ. ಪರಲೋಕವೇ ಇಲ್ಲವೆಂದು ಹೇಳುವವರ ಕ್ಷುದ್ರವಾರ್ತೆಯನ್ನು ನಂಬಿ, ಪಾಪಕಾರ್ಯಮಾಡುವವರು ಉದ್ವೇಗ (ದುಃಖ) ವನ್ನನುಭವಿಸಬೇಕಾಗುವ ದೆಂದು ಆದು ಪಾಪಕಾರ್ಯವನ್ನು ಬಿಡು.

೫೨-೫೬ - ಮಾರ್ಕಂಡೇಯನು ಹೇಳುತ್ತಾನೆ - ಈ ರೀತಿ ಹೇಳಿದ ಋಷಿಗಳ ಮಾತನ್ನು ಕೇಳಿ, ವೇನರಾಜನು ಏನೂ ಉತ್ತರ ಕೊಡಲಾರದ ದೀನನಾಗಿ ಸುಮ್ಮನಿದ್ದುಬಿಟ್ಟನು. ಆದರೆ ಮನಸ್ಸಿನಲ್ಲಿಯೇ ಹೀಗೆ ಯೋಚಿಸಿಕೊಂಡನು. ಋಷಿಗಳು ಹೇಳಿದ ಮಾತನ್ನು ನಾನು ನಂಬಲಾರೆ. ಇದೆಲ್ಲಾ ವಂಚನೆಯಮಾತುಗಳನ್ನು ದರಲ್ಲಿ ಸಂದೇಹವಿಲ್ಲ. ಈ ರೀತಿ ರಾಜನು ಮನಸ್ಸಿನಲ್ಲಿ ಅಭಿಪ್ರಾಯಪಟ್ಟೊಡನೆಯೇ ಋಷಿಗಳಿಗೆ ಇವನ ಮನೋಭಿಪ್ರಾಯವು ತಿಳಿದುಹೋಯಿತು. ಆಗ ಬ್ರಾಹ್ಮಣರು ಹತಾಶರಾಗಿ ಚರಾಚರ ಸಹಿತವಾದ ಮೂರು ಲೋಕವೂ ನಾಶವಾಗಿ ಹೋದಂತೆ ಎಂದು ನಮ್ಮಸಾವದು. ಈ ರೀತಿ ಇರಲಾಗಿ ಬ್ರಾಹ್ಮಣರಿಗೆ ಒದಗಿದ ಈ ವಿಷ ವೃತ್ತಾಂತವು ದೇವತೆಗಳಿಗೆ ಗೊತ್ತಾಯಿತು. ಆಗ ಅವರೆಲ್ಲರೂ ಸೇರಿ ವೇನನು ನಾಶವಾಗುವ ಉಪಾಯವನ್ನಾಲೋಚಿಸಿ ಪೃಥಿವಿಗೆ, ನಾಸ್ತಿಕ್ಯಕಾರಣದಿಂದ ವಿಪತ್ಪ್ರಾಪ್ತವಾಯಿತೆಂಬ ಸಂಗತಿಯನ್ನು ಸರ್ವೇಶ್ವರನೂ ಸರ್ವಶಕ್ತನೂ ಸರ್ವದರ್ಶಿಯೂ ಸರ್ವಸಾಧನನೂ ಆದ ಮಹಾವಿಷ್ಣುವಿಗೆ ತಿಳಿಸಿ ಆತನನ್ನು ಪ್ರಾರ್ಥಿಸಿಕೊಂಡರು.

ಪ್ರಾರ್ಥಿತಶ್ಚ ತದಾ ವಿಷ್ಣುಃ ಪೃಥಿವೀರಾಜ್ಯಕಾರಣಾತ್ ।

॥ ದೇವಾ ಊಚುಃ ॥

ಧ್ರುವವಂಶೋದ್ಭವಂ ದೇವ ವೇನಂ ಭೂಪಾಲಕಿಲ್ಬಿಷಂ ॥ ೫೭ ॥

ಬ್ರಾಹ್ಮಣಾ ಘಾತಯಿಷ್ಯಂತಿ ಮಂತ್ರಪೂತೈಃ ಕುಶೋದಕೈಃ ।
ಊರೂ ಚಾಸ್ಯ ತತಃ ಕ್ಷಿಪ್ತಂ ಮಥಿಷ್ಯಂತಿ ಸಮಾಹಿತಾಃ ॥ ೫೮ ॥

ಕುರುಷ್ವ ಸಂಭವಂ ತತ್ರ ಲೋಕಾನಾಂ ಹಿತಕಾಮ್ಯಯಾ ।
ಕೃತ್ವಾ ತು ಸಂಭವಂ ತತ್ರ ಪಾಲಯಸ್ವ ಜಗತ್ತ್ರಯಂ ॥ ೫೯ ॥

ಆಸ್ಥಾಯ ಮಾನುಷಂ ರೂಪಂ ತ್ವಂ ಹಿ ಪಾಲಯ ತಾಪತಃ ।
ಏವಂ ಕರಿಷ್ಯ ಇತ್ಯುಕ್ತಂ ದೇವದೇವೇನ ದಕ್ಷಿಣ ॥ ೬೦ ॥

ದೇವಕ್ರೋಧೇನ ಸಂಕ್ರುದ್ಧಾ ನಿಜಘ್ನುರ್ಬ್ರಾಹ್ಮಣಾ ನೃಪಂ ।
ಮಂತ್ರಪೂತೈಃ ಕುಶೈಃ ಸರ್ವೈಸ್ತತಸ್ತಸ್ಯ ದುರಾತ್ಮನಃ ॥ ೬೧ ॥

---

೫೭-೬೦ --ಎಲೈ ಮಹಾವಿಷ್ಣುವೇ! ಧ್ರುವವಂಶದಲ್ಲಿ ವೇನನೆಂಬ ಮಹಾ ಪಾಪಿಯಾದ ರಾಜನು ಜನಿಸಿರುತ್ತಾನೆ ಅವನ ದುಷ್ಕೃತ್ಯವನ್ನು ಸಹಿಸಲಾರದ ಬ್ರಾಹ್ಮಣರೆಲ್ಲರೂ ಸೇರಿ ಮಂತ್ರಪೂತವಾದ ಕುಶೋದಕಗಳಿಂದ ಅವನ ತೊಡೆಯನ್ನು ಕೂಡಲೆ ಕಡಯಲಾರಂಭಿಸುತ್ತಾರೆ ಆಗ ನೀನು ಲೋಕಾನುಗ್ರಹಕ್ಕಾಗಿ ಅವನ ತೊಡೆಯಲ್ಲಿ ಜನಿಸಿ ಮೂರು ಲೋಕವನ್ನೂ ಕಾಪಾಡಬೇಕು ನೀನು ಮನುಷ್ಯರೂಪ ದಿಂದ ಅವತರಿಸಿ ಜನರ ತಾಪವನ್ನು ತಪ್ಪಿಸಿ ಸಂರಕ್ಷಿಸಬೇಕೆಂದು ಬೇಡಿಕೊಳ್ಳಲು ಹಾಗೇ ಆಗಲೆಂದು ಭಗವಂತನು ಒಪ್ಪಿಕೊಂಡನು ಕೇಳಯ್ಯ! ವಜ್ರಭೂಪಾಲ

೬೧-೬೬ --ದೇವತೆಗಳು ಮಹಾವಿಷ್ಣುವನ್ನು ಕೇಳಿಕೊಂಡ ಬಳಿಕ ಬ್ರಾಹ್ಮಣ ರೆಲ್ಲರೂ ವಿಶೇಷ ಕ್ರೋಧಯುಕ್ತರಾಗಿ ಮಂತ್ರದಿಂದ ಪೂತವಾದ ಪರಮಪವಿತ್ರವಾದ ದರ್ಭೆಯ ಅಗ್ರಗಳಿಂದ ದುರಾತ್ಮನಾದ ಆ ವೇನನ ಎರಡು ತೊಡೆಗಳನ್ನೂ ಹಿಡಿದು ಕಡೆದರು ಆ ರೀತಿ ಕಡೆದೊಡನೆಯೇ ಒಬ್ಬ ಮಗನು ಹುಟ್ಟಿದನು ಆ ಮಗುವು ಬಹು ಚಿಕ್ಕದಾಗಿ ಕಪ್ಪುವೇಷದಿಂದ ದಾರುಣವಾಗಿಯೂ ಭಯಂಕರ ರೂಪಿನಿಂದಲೂ

ಊರೂ ಮಮಂಥುಃ ಸಹಸಾ ತತೋಽಸ್ಯ ತನಯೋಽಭವತ್ ।
ಹ್ರಸ್ವೋಽತಿಮಾತ್ರಂ ಕೃಷ್ಣಾಂಗೋ ದಾರುಣೋ ದಾರುಣಾಕೃತಿಃ　॥ ೬೨ ॥

ನಿಷೀದೇತಿ ತಮೂಚುಸ್ತೇ ಬ್ರಾಹ್ಮಣಾ ವೇದಪಾರಗಾಃ ।
ಸರ್ವಭೂತನಿಷಾದಾನಾಮೃಷಿವಾಕ್ಯೇನ ಪಾರ್ಥಿವ　॥ ೬೩ ॥

ನಿಷಾದವಂಶಕರ್ತಾರಂ ವೇನಕಲ್ಮಷಸಂಭವಂ ।
ತತೋಽಸ್ಯ ದಕ್ಷಿಣಂ ಪಾಣಿಂ ಮಮಂಥುಃ ಸಹಸಾ ದ್ವಿಜಾಃ　॥ ೬೪ ॥

ತಸ್ಮಾತ್ತಸ್ಯ ಸುತೋ ಜಾತೋ ವಿಷ್ಣುರ್ಮಾನುಷರೂಪಧೃಕ್ ।
ಪೃಥುರಿತ್ಯೇವ ನಾಮಾಸ್ಯ ಚಕ್ರುಸ್ತೇ ದ್ವಿಜಪುಂಗವಾಃ ।
ತೇನ ಜಾತೇನ ಪುತ್ರೇಣ ವೇನಃ ಪಾಪಾದಮುಚ್ಯತ　॥ ೬೫ ॥

ಸತ್ಪುತ್ರಲಾಭಾತ್ತ್ರಿದಿವಂ ಜಗಾಮ
ವೇನೋ ದುರಾತ್ಮಾ ಕೃತಸರ್ವಪಾಪಃ ।

---

ಕಂಗೊಳಿಸುತ್ತಿತ್ತು ಆ ಮಗುವನ್ನು ನೋಡಿ ಬ್ರಾಹ್ಮಣರೆಲ್ಲರೂ ನಿಷೀದ, (ಕುತುಕೋ) ಯೆಂದು ಹೇಳಿದರು ವೇದಪಾರಂಗತರಾದ ಸಕಲ ಬ್ರಾಹ್ಮಣರೂ ಋಷಿಗಳ ವಾಕ್ಯದಂತೆ ಮಹಾಪಾಪಿಯಾದ ವೇನನ ಆ ಮಗನನ್ನು ಸಕಲ ನಿಷಾದ (ವ್ಯಾಧ-ಬೇಡ) ವಂಶದ ಕರ್ತ (ಯಜಮಾನ) ವನ್ನಾಗಿ (ಮೂಲಪುರುಷನನ್ನಾಗಿ) ಮಾಡಿದರು ಬಳಿಕ ಆ ದ್ವಿಜರು ವೇನನ ಎರಡುಕೈಗಳನ್ನೂ ಹಿಡಿದುಕೊಂಡು ಅವನ ಬಲಗೈಯನ್ನು ಕಡೆದರು ಆಗ ಅವನ ಬಲಗಯ್ಯಿಂದ ಮನುಷ್ಯನಂತೆ ಆಕಾರವನ್ನು ತಾಳಿ ಮಹಾವಿಷ್ಣುವು ಉತ್ಪನ್ನನಾದನು ಈ ರೀತಿ ವೇನನ ಮಗನಾಗಿ ಜನಿಸಿದ ಮಹಾ ವಿಷ್ಣುವಿಗೆ ಬ್ರಾಹ್ಮಣರೆಲ್ಲರೂ ಸೇರಿ ಪೃಥುವೆಂಬದಾಗಿ ನಾಮಕರಣ ಮಾಡಿದರು ಇವನೇ ಮಹಾಪ್ರಸಿದ್ಧನಾದ ಪೃಥುಚಕ್ರವರ್ತಿಯು ಯಾವಾಗ ಮಹಾವಿಷ್ಣುವು ವೇನನ ದೇಹದಿಂದ ಉತ್ಪನ್ನನಾದನೋ ಆಕೂಡಲೇ ವೇನನು ಸಕಲ ಪಾಪಗಳಿಂದಲೂ ಮುಕ್ತನಾದ (ಬಿಡಲ್ಪಟ್ಟ) ನು ದುರಾತ್ಮನಾದಾವೇನನು ಸತ್ಪುತ್ರಜನನ ಮಾತ್ರದಿಂದಲೇ ಸಕಲಪಾಪಗಳನ್ನೂ ಕಳೆದುಕೊಂಡು ಪರಿಶುದ್ಧನಾಗಿ ಸ್ವರ್ಗಲೋಕಕ್ಕೆ ಹೊರಟುಹೋದನು ಈ ರೀತಿ ಹುಟ್ಟಿದ ವೇನನ ಮಗನನ್ನು

ದೃಷ್ಟ್ವಾಪಿ ಜಾತಮೃಷಯಃ ಕುಮಾರಂ
ಸಂಮೋನಿರೇ ಲೋಕಮಿದಂ ಕೃತಾರ್ಥಂ ॥ ೬೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪೃಥೂದ್ಭವೋ ನಾಮಾಷ್ಟೋತ್ತರ
ಶತತಮೋಽಧ್ಯಾಯಃ

---

ನೋಡಿ ಸಕಲ ಋಷಿಗಳೂ ಈಗಲೀಗ ಲೋಕವು ಕೃತಾರ್ಥವಾಯಿತೆಂದು ತಿಳಿದು ಕೊಂಡರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಪೃಥೂದ್ಭವವೆಂಬ ಒಂದು ನೂರೆಂಟನೆಯ
ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ನವೋತ್ತರಶತತಮೋಽಧ್ಯಾಯಃ ॥

---

ಮಾರ್ಕಂಡೇಯ ಉವಾಚ ॥

ಆದ್ಯಮಾಜಗವಂ ನಾಮ ಧನುರ್ಗೃಹ್ಯ ಮಹಾಯಶಾಃ ।
ದೃಷ್ಟ್ವಾ ಜಾತಂ ಪೃಥುಂ ದೇವಾಃ ಸರ್ವ ಏವ ಸವಾಸವಾಃ ॥ ೧ ॥

ಆಜಗ್ಮುಃ ಪುಷ್ಕರಂ ತೀರ್ಥಮಭಿಷೇಕ್ತುಂ ತದಾ ಪೃಥುಂ ।
ತಂ ಚಾಭಿಸಿಷಿಚುರ್ದೇವಾರತ್ನಚಿತ್ರವರಾಸನೇ ॥ ೨ ॥

ಬ್ರಹ್ಮಾ ವಿಷ್ಣುಶ್ಚರುದ್ರಶ್ಚ ಚಂದ್ರಾದಿತ್ಯೌ ಪ್ರಭಾಕರೌ ।
ದಿಶಶ್ಚ ವಿದಿಶಶ್ಚೈವ ಲೋಕಪಾಲಾಃ ಸವಾಸವಾಃ ॥ ೩ ॥

ಸರ್ವೇ ದೇವಗಣಾಶ್ಚೈವ ಋಷಯಶ್ಚ ತಪೋಧನಾಃ ।
ಸ್ವಂ ಸ್ವಂ ತೋಯಮುಪಾದಾಯ ಸಮುದ್ರಾಶ್ಚ ನರಾಧಿಪ ॥ ೪ ॥

ಸರಾಂಸಿ ಸರಿತಃ ಶೈಲಾಃ ಸರ್ವೇ ತೀರ್ಥವರಾಸ್ತಥಾ ।
ಸೋಽಭಿಷಿಕ್ತಸ್ತದಾ ಶ್ರೀಮಾನ್ವೇನಪುತ್ರಃ ಪರಂತಪ ॥ ೫ ॥

### ಒಂದು ನೂರೊಂಭತ್ತನೆ ಅಧ್ಯಾಯ

೧-೫ —ಮಾರ್ಕಂಡೇಯನು ಹೇಳುತ್ತಾನೆ ಮಹಾಯಶಸ್ವಿಯಾದ ಪೃಥು ಮಹಾರಾಜನು ಹುಟ್ಟುವಾಗಲೇ ಆಜಗವವೆಂಬ ಹೆಸರಿನ ಧನುಸ್ಸನ್ನು ಹಿಡಿದು ಕೊಂಡೇ ಹುಟ್ಟಿದನು. ಈ ರೀತಿ ಹುಟ್ಟಿದ ಪೃಥುವನ್ನು ನೋಡಿ ಇಂದ್ರನೇ ಮೊದ ಲಾದ ದೇವತೆಗಳೆಲ್ಲರೂ ಆ ಪೃಥುವನ್ನು ನೋಡಿ ಇಂದ್ರನೇ ಮೊದಲಾದ ದೇವತೆ

**ಸಂವತ್ಸರಃ ಕೃತಸ್ತಸ್ಯ ವೃದ್ಧಗರ್ಗೇಣ ಮಹಾಯಶಾಃ ।**
**ಸ್ಥಿತಾಃ ಶಿಷ್ಯವರಾ ನಿತ್ಯಂ ತಸ್ಯೋತ್ಪಾತನಿರೀಕ್ಷಣೇ ॥ ೬ ॥**

**ಪುರೋಹಿತಃ ಕೃತಸ್ತಸ್ಯ ಯಾಜ್ಞವಲ್ಕ್ಯೋ ಮಹಾಯಶಾಃ ।**
**ಆಥರ್ವಣೇನ ಯಸ್ತಸ್ಯ ಸರ್ವಾನ್ದೋಷಾನ್ವ್ಯಪೋಹತ ॥ ೭ ॥**

**ಉಶನಾಶ್ಚ ತಥಾ ಮಂತ್ರೀ ಕೃತಸ್ತಸ್ಯ ಮಹಾತ್ಮನಃ ।**
**ಷಾಡ್ಗುಣ್ಯಯೋಗಾದ್ಯಸ್ತಸ್ಯ ಸರ್ವಾನ್ದೋಷಾನ್ವ್ಯಪೋಹತ ॥ ೮ ॥**

**ಕಮಲಾಭರಣೋ ನಾಮ ಸುಪ್ರತೀಕಸುತಸ್ತದಾ ।**
**ರಾಜಹಸ್ತೀ ಕೃತಸ್ತಸ್ಯ ಸ್ವಯಂ ಗಾರ್ಗೇಣ ಧೀಮತಾ ॥ ೯ ॥**

ಗಳೆಲ್ಲರೂ ಆ ಪೃಥು ಮಹಾರಾಜನಿಗೆ ಪಟ್ಟಾಭಿಷೇಕಮಾಡಬೇಕೆಂದು ಪುಷ್ಕರ ತೀರ್ಥದ ಸಮೀಪಕ್ಕೆ ಬಂದರು. ಆ ರೀತಿ ಬಂದೊಡನೆಯೇ ದೇವತೆಗಳೆಲ್ಲರೂ ಆ ಪೃಥು ಚಕ್ರವರ್ತಿಯನ್ನು ರತ್ನ ಖಚಿತವಾದ ಚಿತ್ರಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕವನ್ನು ಮಾಡಿದರು ಬ್ರಹ್ಮನೂ, ವಿಷ್ಣುವೂ, ಮಹೇಶ್ವರನೂ, ಚಂದ್ರಾದಿತ್ಯರೂ, ಪ್ರಭಾಕರರೂ, ದಿಕ್ಕು ವಿದಿಕ್ಕುಗಳೂ, ಇಂದ್ರಾದ್ಯಷ್ಟಲೋಕಪಾಲಕರೂ, ಸಕಲ ದೇವತಾಗಣಗಳೂ, ತಪೋಧನರಾದ ಮಹರ್ಷಿಗಳೂ, ತಮ್ಮ ತಮ್ಮ ತೀರ್ಥಗಳನ್ನು ತಂದು ಅಭಿಷೇಕಮಾಡಿದರು ಸಕಲ ಸಮುದ್ರಗಳೂ, ಸಕಲ ಸರೋವರಗಳೂ, ಸಮಸ್ತ ಪರ್ವಗಳೂ, ಸಮಸ್ತ ತೀರ್ಥಗಳೂ ಅಭಿಷೇಕಮಾಡಲ್ಪಟ್ಟವು ಈ ರೀತಿ ಅಭಿಷಿಕ್ತನಾದ ವೇನಪುತ್ರನಾದ ಪೃಥುಚಕ್ರವರ್ತಿಗೆ ವೃದ್ಧರಾದ ಗರ್ಗಋಷಿಗಳು ಒಂದು ವರ್ಷ ಕಾಲ ಸಮೀಪದಲ್ಲಿದ್ದುಕೊಂಡು ದಿನವೂ ಅಭಿಷೇಕಮಾಡುತ್ತಲಿದ್ದರು ಈ ವೃದ್ಧ ಗರ್ಗರು ಮರಣಾಸನ್ನರಾದ್ದರಿಂದ ಇವರ ಮರಣ (ಉತ್ಪಾತ) ನಿರೀಕ್ಷಣೆಯಿಂದ ಇವರ ಶಿಷ್ಯರೆಲ್ಲರೂ ಇವರ ಸಮೀಪದಲ್ಲಿಯೇ ಕಾದುಕೊಂಡಿದ್ದರು ಮಹಾತಪಸ್ವಿಗಳಾದ ಯಾಜ್ಞವಲ್ಕ್ಯ ಮಹರ್ಷಿಗಳು ಇವರ ಪುರೋಹಿತರಾಗಿದ್ದರು ಈ ಮಹರ್ಷಿಗಳು ಅಥರ್ವಣವೇದ ಮಂತ್ರಗಳಿಂದ ಪೃಥುವಿನ ಸಕಲ ದೋಷಗಳನ್ನೂ ಪರಿಹಾರಮಾಡಿದರು ಮಹಾತ್ಮನಾದ ಪೃಥುವಿಗೆ ಶುಕ್ರಾಚಾರ್ಯರು ಮಂತ್ರಿಗಳಾದರು ಷಡ್ಗುಣೈಶ್ವರ್ಯಸಂಪನ್ನನಾದ ಶುಕ್ರನು ಪೃಥುವಿನ ಸಕಲ ದೋಷಗಳನ್ನೂ ಪರಿಹಾರ ಮಾಡಿದನು

೯ ಅಷ್ಟದಿಗ್ಗಜಗಳಲ್ಲೊಂದಾದ ಸುಪ್ರತೀಕವೆಂಬ ಗಜರಾಜನಿಗೆ ಕಮಲಾಭರಣನೆಂಬ ಪುತ್ರನಿದ್ದನು ಈ ಕಮಲಾಭರಣ ಹಸ್ತಿ (ಆನೆ) ಯನ್ನು ವೃದ್ಧ ಗರ್ಗರು ಕರೆಯಿಸಿ ಅರಮನೆಯ ಪಟ್ಟದಾನೆಯನ್ನಾಗಿಮಾಡಿ ಅದಕ್ಕೆ ಅಭಿಷೇಕಮಾಡಿದರು.

ಶ್ರೀಸುತಸ್ತುರಗಃ ಶ್ರೇಷ್ಠಃ ಶಶಾಂಕಸದೃಶಚ್ಛವಿಃ ।
ಮಂಗಲಾಶ್ವಃ ಕೃತಸ್ತಸ್ಯ ವೃದ್ಧಗರ್ಗೇಣ ಪಾರ್ಥಿವ ॥ ೧೦ ॥

ಸ್ವಯಂ ದೇವವರೈಸ್ತಸ್ಯ ದತ್ತಾನಿ ಮನುಜಾಧಿಪ ।
ಛತ್ರಂ ಸವಾಲವ್ಯಜನಂ ಖಡ್ಗಂ ಚ ವಸುಧಾಧಿಪ ॥ ೧೧ ॥

ತಸ್ಯ ಲಕ್ಷಣಸಂಯುಕ್ತಂ ದದುರ್ದೇವಾ ನರೇಶ್ವರ ।
ಇತ್ಯೇವಂ ಚಾಭಿಷಿಕ್ತಸ್ತು ಪೃಥುರ್ನೃಪೋ ಮಹಾಯಶಾಃ ॥ ೧೨ ॥

ವಿಧಿನಾ ಶಾಸ್ತ್ರದೃಷ್ಟೇನ ಬ್ರಾಹ್ಮಣೈರ್ಮಂತ್ರಪಾರಗೈಃ ।
ತಸ್ಯ ಪೈತಾಮಹೇ ಯಜ್ಞೇ ಹಯಮೇಧೇ ಪುರಾತನೇ ॥ ೧೩ ॥

ಅಪ್ತುರ್ಯಾಮಸ್ಯ ಸುತ್ಯೇಽಹ್ನಿ ಸೂತೋ ಜಾತಃ ಪರಂತಪ ।
ಸಾಮಗೇಷ್ವಥ ಗಾಯತ್ಸು ಅಧ್ವರೇ ವೈಶ್ವದೇವಿಕೇ ॥ ೧೪ ॥

ಮಾಗಧಶ್ಚ ಸಮುತ್ಪನ್ನಸ್ತಸ್ಮಿನ್ನೇವ ಮಹಾಕ್ರತೌ ।
ಪೃಥೋಸ್ತವಾರ್ಥಂ ತೌ ದೇವೌ ಚೋದಿತಾವೃಷಿಭಿಸ್ತದಾ ॥ ೧೫ ॥

---

೧೦,—ವೃದ್ಧ ಗರ್ಗಾಚಾರ್ಯರ ಅನುಮತಿಯಂತೆ ಚಂದ್ರಸಮಾನಕಾಂತಿಯುಳ್ಳ ಶ್ರೀ ಸುತವೆಂಬ ಅಶ್ವಶ್ರೇಷ್ಠವು ಪಟ್ಟದ ಕುದುರಯಾಗಿ ಮಾಡಲ್ಪಟ್ಟಿತು

೧೧-೧೬ —ಇದೇ ಮೇರೆ ಪೃಥುಮಹಾರಾಜನಿಗೆ ಸಕಲ ದೇವತೆಗಳಿಂದಲೂ ಛತ್ರ-ವ್ಯಜನ-ಖಡ್ಗವೇ ಮುಂತಾದ ಅನೇಕ ರಾಜಾರ್ಹವಸ್ತುಗಳು ಕೊಡಲ್ಪಟ್ಟವು ಈ ರೀತಿಯಾಗಿ ಶಾಸ್ತ್ರವಿಧಿಯಿಂದ ವೈದಿಕರು ವೇನನ ಮಗನಾದ ಪೃಥುವಿಗೆ ವೇದ ಮಂತ್ರಗಳಿಂದ ಪಟ್ಟಾಭಿಷೇಕಮಾಡಿದರು ಹಿಂದೆ ಇವರ ತಾತನು (ಪಿತಾಮಹನು) ಅಶ್ವಮೇಧ ಯಜ್ಞವನ್ನು ಮಾಡಿದ್ದನು ಆ ಯಜ್ಞದಲ್ಲಿ ಸುತ್ಯಾಹಸ್ಸಿನ (ಇದರ ಟಿಪ್ಪಣಿಯನ್ನು ಮುಂದೆ ಬರೆದಿರುತ್ತೇನೆ) ದಿವಸ ಸೂತ (ಹೊಗಳಭಟ್ಟ) ನು ಹುಟ್ಟಿದನು ಸಾಮಗರುಗಾನ (ಸ್ತೋತ್ರ) ಮಾಡುತ್ತಲಿದ್ದರು ವಿಶ್ವೇದೇವರ ಸಂಬಂಧವಾದ ಯಜ್ಞದಲ್ಲಿ (ಆ ಕ್ರತುಸಮಯದಲ್ಲೇ) ಮಾಗಧ (ಸ್ತುತಿಪಾಠಕ) ನು ಹುಟ್ಟಿದನು ಅಯ್ಯಾ ! ಪೃಥುಮಹಾರಾಜನೇ ! ಕೇಳು ಆಗ ಅಲ್ಲಿದ್ದ ಋಷಿಗಳು ಅವರಿಬ್ಬರನ್ನೂ ಕುರಿತು, ಎಲೈ ಸೂತ ಮಾಗಧರೇ ! ನೀವು ಪೃಥುಚಕ್ರವರ್ತಿಯನ್ನು ಸ್ತೋತ್ರಮಾಡಬೇಕೆನ್ನಲು ಆ ಸ್ತುತಿಪಾಠಕರು ದೇವತೆಗಳಿಗೂ ಋಷಿಗಳಿಗೂ ನಮ

**ಊಚತುಸ್ತೌ ತದಾ ದೇವಾನೃಷೀಂಶ್ಚ ಪ್ರಣತೌ ಸ್ಥಿತೌ ।**
**ಕರ್ಮಭಿಃಸ್ತೂಯತೇ ಸರ್ವಃ ಕರ್ಮ ಚಾಸ್ಯ ನ ವಿದ್ಮಹೇ ॥ ೧೬ ॥**

**ಕರ್ಮಣಶ್ಚಾಪ್ಯವಿಜ್ಞಾನಾತ್ತ್ಸ್ತೋಷ್ಯಾವಸ್ತತ್ಕಥಂ ಪೃಥುಂ ।**
**॥ ಋಷಯ ಊಚುಃ ॥**
**ಅಸ್ಮತ್ಪ್ರಭಾವವಿಜ್ಞಾತೌ ಸ್ತುವತಾಮವಿಚಾರತಃ ॥ ೧೭ ॥**

**॥ ಮಾರ್ಕಂಡೇಯ ಉವಾಚ ॥**
**ಋಷಿಭಿಸ್ತೌ ನಿಯುಕ್ತೌ ತು ತುಷ್ಟುವಾತೇ ಸ್ವಕರ್ಮಭಿಃ ।**
**ಭವಿಷ್ಯತ್ಪೃಥಿವೀಪಾಲಂ ದಿವ್ಯಜ್ಞಾನೌ ಪರಂತಪೌ ॥ ೧೮ ॥**

**ತಯೋರ್ವೈನ್ಯಸ್ತು ಸುಪ್ರೀತಃ ಪೃಥುಃ ಪ್ರಾದಾತ್ಪ್ರಜೇಶ್ವರಃ ।**
**ಅನೂಪದೇಶಂ ಸೂತಾಯ ಮಗಧಂ ಮಾಗಧಾಯ ಚ ॥ ೧೯ ॥**

---

ಸ್ಮರಿಸಿ ಯಾವ ಕರ್ಮ (ಯಜ್ಞ) ಮಾಡಿದುದಕ್ಕಾಗಿ ನಾವು ನೋಡದೆ ಇರುವ ಮುಂದಿನ ಪೃಥುವನ್ನು ಹೊಗಳೋಣ ಕರ್ಮ ಸ್ವರೂಪವನ್ನೇ ಕಾಣದ ನಾವು ಯಾವ ರೀತಿಯಲ್ಲಿ ಆ ಅಜ್ಞಾತ ಪೃಥುವನ್ನು ಹೊಗಳೋಣ--ಹೇಳಿರೆಂದು ಪ್ರಶ್ನೆ ಮಾಡಿದರು

೧೭ ಅದಕ್ಕೆ ಋಷಿಗಳು ಹೇಳುತ್ತಾರೆ ಎಲೈ ಋಷಿಗಳಿರಾ ! ನಮ್ಮ ಪ್ರಭಾವವನ್ನು ನೀವೆಲ್ಲರೂ ತಿಳಿದು ಇರುತ್ತೀರಿಯಾದ್ದರಿಂದ ವಿಚಾರವನ್ನೇ ಮಾಡದ ನಿಮಗೆ ತೋರಿದಂತೆ ಪೃಥುವನ್ನು ಸ್ತೋತ್ರಮಾಡಿರಿ

೧೮ ಮಾರ್ಕಂಡೇಯರು ಹೇಳುತ್ತಾರೆ — ಈ ರೀತಿ ಋಷಿಗಳಿಂದ ಆಜ್ಞಪ್ತರಾದ ಸೂತ ಮಾಗಧರು ದಿವ್ಯಜ್ಞಾನದಿಂದ ಭವಿಷ್ಯದ್ರಾಜನಾದ ಪೃಥುವಿನ ಅಪಾರ ಮಹಿಮೆಯನ್ನು ಅರಿತವರಾಗಿ ಆ ಮಹಿಮೆಯನ್ನು ಗಾನಮಾಡಿದರು

೧೯ ಕೇಳೈ ವಜ್ರರಾಜನೇ ! ಈ ರೀತಿ ಹೇಳಿದ ಋಷಿಗಳ ಮಾತನ್ನು ಕೇಳಿ ಪೃಥುವು ಸೂತ ಮಾಗಧರ ಸ್ತೋತ್ರಕ್ಕೆ ಮೆಚ್ಚಿ ಸೂತನಿಗೆ ಅನೂಪವೆಂಬ ದೇಶವನ್ನೂ, ಮಾಗಧನಿಗೆ ಮಗಧ ರಾಜ್ಯವನ್ನೂ ಬಹುಮಾನವಾಗಿ ಕೊಟ್ಟನು.

ಟಿಪ್ಪಣಿ.—ಯಜ್ಞಯಾಗಾದಿಗಳಲ್ಲಿ ಸುತ್ಯಾಹನ್ಸೆಂಬುದು ಬಹು ಮುಖ್ಯವಾದ ದಿವಸ ಈ ದಿವಸ ಯಜ್ಞ ನೆರವೇರಿದ ಆನಂದಕ್ಕಾಗಿ ಸಕಲ ಮಂದಿ ಋತ್ವಿಜರೂ (ಅಧ್ವರ್ಯೂದ್ಗಾತೃ ಹೋತ್ರಾದಿಗಳು) ಸೇರಿ ಆನಂದವಾಗಿ ದೇವತೆಗಳನ್ನು ವೇದ

ಮಂತ್ರಗಳಿಂದ (ಸಾಮಗಾನಾದಿಗಳಿಂದ) ಹೊಗಳುವರು ಮತ್ತು ಪರಸ್ಪರ ಸೋಮ ರಸ ಪಾನಮಾಡಿ ಆನಂದವಾಗಿ ನಲಿದು, ಹಾಡಿ, ಕುಣಿದು ಪರಸ್ಪರ ಸುಖಿಸುವರು ಅದರ ಕ್ರಮವನ್ನು ವಾಚಕರ ತಿಳುವಳಿಕೆಗಾಗಿ ಇಲ್ಲಿ ಬರೆಯುತ್ತೇನೆ ಸುತ್ಯಾಹಸ್ಸು ಅಗ್ನಿಗೆ ಬಹು ಪ್ರಿಯವಾದ ದಿವಸ ಈ ದಿನ ಕರ್ಮಾಂಗವಾಗಿ ಪ್ರಾತಸ್ಸವನವು ನೆರ ವೇರಿದೊಡನೆಯೇ ಸವನಾರಂಭವಾಗುವುದನ್ನರಿತ ಪರೋಕ್ಷ ಪ್ರಿಯರಾದ ದೇವತೆಗಳು ಅದೃಶ್ಯರಾಗಿ ಯಜ್ಞಶಾಲೆಗೆ ಬರುವರು ಇವರು ಬಂದ ಸಂಗತಿಯನ್ನರಿತು ಸಕಲ ಋತ್ವಿಜರೂ ನರ್ತನಮಾಡುವರು ನರ್ತನದ ಕ್ರಮ —ಯಜ್ಞ ಋತ್ವಿಜರೆಲ್ಲರೂ ಉಟ್ಟ ಧೋತ್ರದ ಮೇಲೆ ಭದ್ರವಾಗಿ ದಟ್ಟಿಯನ್ನು ಬಿಗಿದು ಕಟ್ಟುವರು ಎಲ್ಲರಿಗೂ ಮುಂದೆ ಅಧ್ವರ್ಯುವು ನಿಂತುಕೊಳ್ಳುವನು ಅವನ ಹಿಂದೆ ಅವನ ಕಚ್ಚೆಯ (ದಟ್ಟಿ) ನ್ನು ಹಿಡಿದು ಪ್ರಸ್ತೋತನೂ ಅವನ ಹಿಂದೆ ಉದ್ಗಾತ (ಸಾಮಗ) ನೂ ಅವನ ಹಿಂದೆ ಕ್ರಮವಾಗಿ ಪ್ರತಿಹರ್ತ-ಬ್ರಹ್ಮ ಯಜ್ಞಯಜಮಾನನೇ ಮುಂತಾದವರು ಒಬ್ಬರ ದಟ್ಟಿಯನ್ನೊಬ್ಬರು ಹಿಡಿದು ಕುಣಿ ಕುಣಿಯುತ್ತಾ ಔದ್ಗಾತೃಗಣವು ವಿರಚಿಸಿದ ಬಹಿ ಷ್ಪವಮಾನ ಕಲಶದ ಸುತ್ತಲೂ ಕುಳಿತುಕೊಳ್ಳುವರು ಬಹಳ ಹೊತ್ತು ಸಾಮಗಾನ ವಾದನಂತರ ಉದ್ಗಾತೃವು ಬಹಿಷ್ಪವಮಾನ ಕಲಶವನ್ನು ಪೂಜಿಸುವನು ಸಾಮಗರ ಲ್ಲರೂ ಉಪಾಸ್ಮೈಗಾಯತಾನರಃ ಎಂಬ ಸಾಮವನ್ನಾರಂಭಿಸಿ ಸಾಮಗಾನ ಮಾಡು ವರು ಮಧ್ಯೆ ಮಧ್ಯೆ ಅವರು ಹೇಳುವ ಒ ಒ ಒ ಒ ಒ ಒ ಒ ಒ —ಓ-ಓ-ಓ-ಓ-ಓ- ಎಂಬ ಗಾನಗಳು ಶ್ರೋತೃಗಳ ಕಿವಿಗಿಂಪಾಗಿರುವುವು ಗಾನಾನಂತರ ಆ ಕಲಶತೀರ್ಥ ಸರ್ವರಿಗೂ ಪ್ರೋಕ್ಷಿಸುವರು ಈ ದಿನ ಸವನೀಯಾಂಗವಾಗಿ ಒಂದು ಪಶುಯಾಗ ವನ್ನು ಮಾಡುವುದು ಮಥನಾಗ್ನಿಯನ್ನು ಮಹಾವೇದಿಯಲ್ಲಿರುವ ಅಗ್ನಿಗೆ ಸೇರಿಸಿ ಹೋಮಗಳನ್ನು ಮಾಡುವರು ಬಳಿಕ ಹೋತ್ರಾದಿಗಳು ಉಪಸ್ಥಾನಮಾಡುವರು ಔದ್ಗಾತೃಗಣವು ಭೋಜನಾದಿಗಳನ್ನು ಮಾಡಿ ತೃಪ್ತರಾಗಿ ತಾಂಬೂಲಸೇವನೆ ಮಾಡುತ್ತಾ ಸದಸ್ಸಿನಲ್ಲಲಂಕೃತವಾದ ಔದುಂಬರ ದಂಡ (ಅತ್ತಿಮರ) ವನ್ನೊರಗಿ ಕುಳಿತ ಮುಖ್ಯಾಧ್ವರ್ಯನಾದ ಉದ್ಗಾತನ ಮುಂದೆ, ಬಾಕಿಯವರು ಎದುರುಬದುರಾಗಿ ಕುಳಿತುಕೊಳ್ಳುವರು ಬಳಿಕ ಸಾಮಗಾನಕ್ಕಾರಂಭವಾಗುವುದು. ಯಜಮಾನ-ಬ್ರಹ್ಮ ಮುಂತಾದವರು ಉತ್ತರಾಭಿಮುಖವಾಗಿಯೂ ಹೋತ್ರಾದಿಗಳು ಪೂರ್ವಾಭಿಮುಖ ರಾಗಿಯೂ ಕುಳಿತುಕೊಳ್ಳುವರು. ಶ್ರೌತಕರ್ಮಪಾರಂಗತರಾದ ಅನೇಕ ಮಂದಿ ವೇದಾಭಿಜ್ಞರು ಸದಸ್ಸಿಗೆ ಸೇರುವರು ಮೈತ್ರಾವರುಣನು ದಂಡಧಾರಿಯಾಗಿ "ಧಾನಾವಂತಂ ಕರಂಭಿಣಮಪೂಪವಂತಮುಕ್ಥಿನಂ" ಇಂದ್ರಪ್ರಾತರ್ಜುಷಸ್ವನಃ || ಎಂಬದಾಗಿ ಆರಂಭಿಸಿ ಕರ್ಮಾಂಗ ಮಂತ್ರಗಳನ್ನುಚ್ಚರಿಸುವನು ಹೀಗೆಯೇ ಶ್ರೌತ ಪ್ರಯೋಗಾನುಸಾರವಾಗಿ ಸೋಮರಸ ಹೋಮಗಳೂ ಸೋಮಪಾನಕ್ರಮಗಳೂ ನೆರ

**ತತೋ ವೈನ್ಯಂ ಮಹಾಭಾಗಂ ಪ್ರಜಾಸ್ತಾಃ ಸಂಪ್ರದುದ್ರುವುಃ ।**
**ತ್ವನ್ನೋ ವೃತ್ತಿಂ ದದಸ್ವೇತಿ ಮಹರ್ಷಿವಚನಾತ್ತದಾ ॥ ೨೦ ॥**

**ಸೋಽಭಿದ್ರುತಃ ಪ್ರಜಾಭಿಸ್ತು ಪ್ರಜಾಹಿತಚಿಕೀರ್ಷಯಾ ।**
**ಧನುರಾದಾಯ ಬಾಣಾಂಶ್ಚ ವಸುಧಾಂ ಮರ್ದಯನ್ಬಲೀ ॥ ೨೧ ॥**

**ತತೋ ವೈನ್ಯಭಯತ್ರಸ್ತಾ ಗೌರ್ಭೂತ್ವಾ ಪ್ರಾದ್ರವನ್ಮಹೀ ।**
**ಬ್ರಹ್ಮಲೋಕಾದಿಕಾನ್ಲೋಕಾನ್ನ ಚ ತ್ರಾಣಮವಿಂದತ ॥ ೨೨ ॥**

**ಸರ್ವತ್ರೈವ ಪೃಥುಂ ವೈನ್ಯಮಾತ್ತಕಾರ್ಮುಕಮುದ್ಯತಂ ।**
**ದದರ್ಶ ಸುಮಹಾಭಾಗಂ ತೇಜಸಾ ಭಾಸ್ಕರಪ್ರಭಂ ॥ ೨೩ ॥**

ವೇರಿದ ನಂತರ ದೇವತೆಗಳನ್ನು ಶಸ್ತ್ರ (ಶಂಸನ ಅಂದರೆ ಸ್ತುತಿ) ಮಂತ್ರಗಳಿಂದ ಹೊಗಳಲಾರಂಭಿಸುವರು ಇದನ್ನೇ ಸುತ್ಯಾಹಸ್ಸೆಂದು ಹೇಳುವರು

೨೦-೨೧ —ಮಹರ್ಷಿಗಳೆಲ್ಲರೂ ಅಲ್ಲಿದ್ದ ಜನರನ್ನು ಕುರಿತು ಪೃಥುವನ್ನು ನೀವು ಕೇಳಿಕೊಂಡರೆ ನಿಮಗೆಲ್ಲರಿಗೂ ಭೂಮಿಯನ್ನೂ ವೃತ್ತಿಯನ್ನೂ ದಾನಕೊಡುವ ನೆಂದು ಹೇಳಲು ಅದರಂತೆ ಜನರೆಲ್ಲರೂ ಓಡಿ ಬಂದು ಪೃಥುವನ್ನು ಭೂದಾನ ಕೇಳಿ ದರು ಅವರಂತೆ ಪ್ರಜಾಹಿತತತ್ಪರನಾದ ಪೃಥುವು ಧನುರ್ಧಾರಿಯಾಗಿ ಆ ಪ್ರಜೆ ಗಳೊಡನೆ ಭೂಮಿಯನ್ನು, ಸಂಘಟ್ಟಿಸುತ್ತಾ ಭೂಮಿಯನ್ನು ಅಟ್ಟಿಸಿಕೊಂಡು ಬಂದನು

ಟಿಪ್ಪಣಿ—ಭೂಮಿಯನ್ನು ಪೃಥುವು ಪ್ರಜೆಗಳಿಗಾಗಿ ಏಕೆ ಪೀಡಿಸಿದನು? ಭೂಮಿಯ ಅಪರಾಧವೇನೆಂದು ಇಲ್ಲಿ ಪ್ರಶ್ನೆ ಬರುವುದರಿಂದ ಆ ವಿಚಾರವನ್ನು ಬರೆದು ಮುಂದಿನ ವೃತ್ತಾಂತವನ್ನು ಪಕ್ರಮಿಸುವೆನು ಭೂಮಿಯು ಆ ಕಾಲದಲ್ಲಿ ತನ್ನಷ್ಟಕ್ಕೆ ತಾನೇ ಸ್ವೇಚ್ಛೆಯಾಗಿ ಬೆಳೆದು ಏರುಪೇರಾಗಿ ಹಳ್ಳದಿಣ್ಣೆಗಳಾಗಿ ವ್ಯವಸಾಯಕ್ಕಾಗಲೀ ನಗರ ನಿರ್ಮಾಣಾದಿಗಳಿಗಾಗಲೀ ಅನುಕೂಲವಿಲ್ಲದೆ ಇತ್ತು ಅದನ್ನು ಸಮಮಾಡು ವುದಕ್ಕಾಗಿ ಪೃಥುವು ಪ್ರಯತ್ನಪಟ್ಟಾಗ್ಯೂ ಸಾರ್ಥಕವಾಗದೇ ಹೋಗಲು ಧನುಸ್ಸನ್ನು ಹಿಡಿದು ಭೂಮಿಯನ್ನು ಹದಕ್ಕೆ ತರಬೇಕೆಂದು ಅಟ್ಟಿಸಿಕೊಂಡು ಬಂದನೆಂದು ತಿಳಿಯ ಬೇಕು

೨೨-೨೩ ಆಗ ಭೂಮಿಯು ವೈನ್ಯ (ವೇನನಮಗವೈನ್ಯ-ಪೃಥು)ನ ಭಯದಿಂದ ದಿಗಿಲುಗೊಂಡು ಒಂದು ಹಸುವಿನಂತೆ ಆಕಾರವನ್ನು ಧರಿಸಿಕೊಂಡು ಬ್ರಹ್ಮಲೋಕ-ಶಿವ

**ಅಲಭಂತೀ ತು ಸಾ ತ್ರಾಣಂ ವೈನ್ಯಮೇವಾನ್ವಪದ್ಯತ ।**
**ಕೃತಾಂಜಲಿಪುಟಾ ದೇವೀ ಪೂಜ್ಯಾ ಲೋಕೈಸ್ತ್ರಿಭಿಸ್ತದಾ ॥ ೨೪ ॥**

**ಉವಾಚ ವೈನ್ಯಂ ಸಾ ಧರ್ಮಂ ಸ್ತ್ರೀವಧೇ ಪರಿಪಶ್ಯಸಿ ।**
**ಕಥಂ ಧಾರಯಿತಾ ಚಾಸಿ ಮಯಾ ಹೀನಾಸ್ತ್ವಿಮಾಃ ಪ್ರಜಾಃ ॥ ೨೫ ॥**

**॥ ಪೃಥುರುವಾಚ ॥**

**ಏಕಸ್ಯಾರ್ಥಾಯ ಯೋ ಹನ್ಯಾದಾತ್ಮನೋ ವಾ ಪರಸ್ಯ ವಾ ।**
**ಏಕಂ ಜೀವಂ ಬಹುತ್ವೇಽಪಿ ಕಾಮಂ ನೈವಾಸ್ತಿ ಪಾತಕಂ ॥ ೨೬ ॥**

**ಯಸ್ಮಿಂಸ್ತು ನಿಹತೇ ಭದ್ರೆ ಏಧಂತೇ ಬಹವಃ ಸುಖಂ ।**
**ತಸ್ಮಿನ್ಹತೇ ನಾಸ್ತಿ ಪರೇ ಪಾತಕಂ ನೋಪಪಾತಕಂ ॥ ೨೭ ॥**

**ಸೋಽಹಂ ಪ್ರಜಾನಿಮಿತ್ತಂ ತ್ವಾಂ ವಧಿಷ್ಯಾಮಿ ವಸುಂಧರಾಂ ।**
**ಆತ್ಮಾನಂ ಪೃಥಯಿತ್ವಾ ತು ಧಾರಯಿಷ್ಯೇ ಪ್ರಜಾಸ್ತ್ವಿಮಾಃ ॥ ೨೮ ॥**

---

ಲೋಕಾದಿಗಳಿಗೆ ಓಡಿಹೋಗಿ ಬೇಡಿಕೊಂಡರೂ, ಯಾರೂ ಅವಳನ್ನು ಲಕ್ಷ್ಯವಾಡಲೇ ಇಲ್ಲ ಎಲ್ಲೆಲ್ಲಿ ಹೋದರೂ ಸಾಕ್ಷಾದಚ್ಯುತಾಪರಾವತಾರನಾದ ವೈನ್ಯನು ಧನುಷ್ಪಾಣಿಯಾಗಿ ಹಿಂದೆ ಹಿಂದ ಬರುತ್ತಲೇ ಇರುವುದನ್ನು ಕಂಡು, ಭೂದೇವಿಯು ಇನ್ನಾರನ್ನೂ ಸಂರಕ್ಷರನ್ನು ಕಾಣದ, ಪೃಥುಮಹಾರಾಜನನ್ನೇ ಶರಣುಹೊಂದಿದಳು ಆ ಭೂಮಿಯು, ಓಡುವುದನ್ನು ನಿಲ್ಲಿಸಿ ಹಿಂತಿರುಗಿ ಕೈಗಳನ್ನು ಜೋಡಿಸಿಕೊಂಡು ವೇನನ ಮುಂದೆ ನಿಂತುಕೊಂಡು ಸ್ತ್ರೀವಧೆಯಿಂದ ಅಧರ್ಮ ಸಂಘಟನೆಯಾಗುವುದೆಂದೂ ನನ್ನನ್ನು ಕಾಪಾಡಬೇಕೆಂದೂ ಈ ದೀನರಾದ ಪ್ರಜೆಗಳ ವೃತ್ತಿಗಾಗಿ ನನ್ನನ್ನು ತೊಂದರೆ ನಡಿಸಬಾರದೆಂದು ಪ್ರಾರ್ಥಿಸಿದಳು

೨೬-೨೭ —ಪೃಥುವು ಭೂಮಿಯನ್ನು ಕುರಿತು ಹೇಳುತ್ತಾನೆ --ಎಲೌ ಭೂಮಿಯೇ! ಕೇಳು ತನ್ನೊಬ್ಬನ ರಕ್ಷಣೆಗಾಗಲೀ ಇತರರ ಸಂರಕ್ಷಣೆಗಾಗಲೀ ಒಂದು ಜೀವನನ್ನು ಕೊಲ್ಲುವುದು ಪಾಪವೆನಿಸಿಕೊಳ್ಳುವುದಿಲ್ಲ ಯಾರ ನಾಶದಿಂದ ಬಹು ಜನಗಳು ಮಂಗಳವನ್ನು (ಸೌಖ್ಯವನ್ನು) ಹೊಂದುವರೋ ಅಂತಹವನನ್ನು ಸಂಹರಿಸೋಣದರಿಂದ ಪಾಪವಾಗಲೀ ಉಪಪಾತಕವಾಗಲೀ ಸಂಭವಿಸುವುದಿಲ್ಲ

೨೮-೨೯ --ಎಲೌ ಭೂದೇವಿಯೇ! ನನ್ನನ್ನು ಶರಣಹೊಂದಿರುವ ಈ ಜನಗಳಿಗೆ, ಭೂಮಿಯಾದ ನೀನು ಸಮನಾಗಿ ನಿಂತು ಸರಿಯಾದ ವೃತ್ತಿಯನ್ನು ವಿಂಗಡಿಸಿ

ವೃತ್ತ್ಯುಪಾಯಂ ನ ಚೇದಾಸಾಂ ಪ್ರಜಾನಾಂ ತ್ವಂವಿಧಾಸ್ಯಸಿ ।
ವಿಧಾಸ್ಯಸಿ ಯದಾ ಭದ್ರೇ ತದಾ ತ್ವಂ ಸುಖಮಾಪ್ಸ್ಯಸಿ ॥ ೨೯ ॥

ಪೃಥಿವ್ಯುವಾಚ

ಪ್ರಜಾನಾಂ ಜೀವನೋಪಾಯಂ ವಿಧಾಸ್ಯಾಮಿ ನರೇಶ್ವರ ।
ವಿಧತ್ಸ್ವ ವತ್ಸಂ ಧರ್ಮಜ್ಞ ಕ್ಷರೇಯಂ ಯೇನ ವತ್ಸಲಾ ॥ ೩೦ ॥

ಸಮಾಂ ಚ ಕುರು ಸರ್ವತ್ರ ಮಾಮ ಧರ್ಮಭೃತಾಂ ವರ ।
ಯಥಾ ನಿಷ್ಯಂದಮಾನಂ ಮೈ ಕ್ಷೀರಂ ಸರ್ವತ್ರ ಭಾವಯೇತ್ ॥ ೩೧ ॥

॥ ಮಾರ್ಕಂಡೇಯ ಉವಾಚ ॥

ತತ ಉತ್ಸಾರಯಾಮಾಸ ಶಿಲಾಜಾಲಾನಿ ಸರ್ವತಃ ॥
ಪೃಥುರ್ವೈನ್ಯೋ ಮಹಾತೇಜಾಸ್ತೇನ ಶೈಲಾ ವಿವರ್ಧಿತಾಃ ॥ ೩೨ ॥

ಕೊಟ್ಟು ಜೀವನೋಪಾಯವನ್ನು ಮಾಡಿಕೊಡದೇ ಹೋದರೆ ಆ ಪ್ರಜಗಳ ಹಿತಕ್ಕಾಗಿ ನಾನು ವಸುಂಧರೆಯಾದ ನಿನ್ನನ್ನು ಕೊಂದು ಈ ಪ್ರಜಗಳನ್ನು ನಾನೇ ಧರಿಸಿ ಪೋಷಿಸಿ ನನ್ನ ಯಶಸ್ಸನ್ನು ಪ್ರಸಿದ್ಧಿಪಡಿಸಿಕೊಳ್ಳುತ್ತೇನೆಂದು ಖಂಡಿತವಾಗಿ ತಿಳಿದುಕೋ !

೩೦--ಭೂಮಿಯು ಹೇಳುತ್ತಾಳೆ --ಎಲೈ ಪೃಥುಮಹಾರಾಜನೇ ! ನಿನ್ನ ಮಾತಿನಂತೆ ಪ್ರಜೆಗಳಿಗೆ ವೃತ್ತಿಯನ್ನು ವಿಂಗಡಿಸಿ ಜೀವನೋಪಾಯವನ್ನು ಕಲ್ಪಿಸಿ ಕೊಡುತ್ತೇನೆ ಈ ಭೂಮಿಯಾದ ನಾನು ಯಾವ ಮಗುವಿನಿಂದ ಪ್ರೀತ್ಯಾನಂದ ವನ್ನು ಹೊಂದಬಹುದೋ ಅಂತಹ ಒಂದು ಮಗುವನ್ನು ಈಗ ಸೃಷ್ಟಿಸು

೩೧--ಎಲೈ ಪೃಥುರಾಜನೇ ! ನನ್ನ ಸ್ತನಗಳಿಂದ ಹೊರಟ ಹಾಲು ಎಲ್ಲ ಕಡೆಯಲ್ಲೂ ಸಮನಾಗಿ(ಸಮಪ್ರದೇಶದಲ್ಲಿ) ಹೇಗೆ ಹರಡಿಕೊಂಡು ನಿಲ್ಲುವುದೋ ಹಾಗೆ ನನ್ನನ್ನು (ಹಳ್ಳದಿಣ್ಣೆಗಳಿಲ್ಲದಂತೆ) ಸಮನನ್ನಾಗಿಮಾಡು

೩೨--ಮಾರ್ಕಂಡೇಯನು ಹೇಳುತ್ತಾನೆ --ಅನಂತರ ಪೃಥುಮಹಾರಾಜನು ಎಲ್ಲ ಕಡೆಗಳಲ್ಲೂ ಕಲ್ಲುರಾಶಿಗಳನ್ನೆರಚಿಬಿಟ್ಟನು ಆ ಕಲ್ಲುರಾಶಿ ಬಿದ್ದ ಕಡೆಗಳಲ್ಲೆಲ್ಲಾ ಮಹಾ ಮಹಾ ಪರ್ವತಗಳು ಉತ್ಪನ್ನವಾದುವು

ತತಃ ಪ್ರಭೃತಿ ರಾಜೇಂದ್ರ ಗ್ರಾಮಾಶ್ಚ ನಗರಾಣಿ ಚ ।
ಕೃಷ್ಯಾದಿಕಂ ಚ ಸಕಲಂ ಭುವಿ ಕರ್ಮ ಪ್ರವರ್ತಿತಂ ॥ ೩೩ ॥

ತಸ್ಯಾಃ ಸಸ್ಯಾನಿ ಸಾ ದುಗ್ಧಾ ಪೃಥುನಾ ಪೃಥಿವೀಕ್ಷಿತಾ ।
ವತ್ಸಂ ಸ್ವಾಯಂಭುವಂ ಕೃತ್ವಾ ಮನುಂ ವೈ ದಕ್ಷಿಣೇ ಕರೇ ॥ ೩೪ ॥

ತತಸ್ತು ಋಷಿಭಿರ್ದುಗ್ಧಾ ಚ್ಛಂದಃಪಾತ್ರೇ ವಸುಂಧರಾ ।
ವತ್ಸಃ ಸೋಮೋಽಭವತ್ತೇಷಾಂ ದೋಗ್ಧಾ ಚೈವ ಬೃಹಸ್ಪತಿಃ ॥ ೩೫ ॥

ಊರ್ಜಂ ದೇವಗಣೈರ್ದುಗ್ಧಾ ರುಕ್ಮಪಾತ್ರೇ ವಸುಂಧರಾ ।
ವತ್ಸಸ್ತು ಮಘವಾನಾಸೀದ್ದೋಗ್ಧಾ ಚ ಸವಿತಾ ತಥಾ ॥ ೩೬ ॥

ಸುಧಾಂ ಚ ಪಿತೃಭಿರ್ದೋಗ್ಧಾ ರೌಪ್ಯಪಾತ್ರೇ ವಸುಂಧರಾ ।
ಅಂತಕಶ್ಚಾಭವದ್ದೋಗ್ಧಾ ವತ್ಸೋ ವೈವಸ್ವತೋ ಯಮಃ ॥ ೩೭ ॥

---

೩೩ ಎಲೈ ವಜ್ರಮಹಾರಾಜನೇ ಕೇಳು ! ಈ ರೀತಿ ಅಲ್ಲಲ್ಲಿ ಪರ್ವತಗಳಾದ ಮೇಲೆ ಆಗಿನಿಂದ ಗ್ರಾಮಗಳೂ ನಗರಗಳೂ ಏರ್ಪಟ್ಟವು ಭೂಲೋಕದಲ್ಲಿ ಆ ಲಾಗಾಯಿತು ಕೃಷಿಯೇ ಮುಂತಾದ ಕರ್ಮಗಳೇರ್ಪಟ್ಟು ಸಸ್ಯಸಮೃದ್ಧಿಯೂ ಆ ಮೂಲಕ ಧಾನ್ಯಸಮೃದ್ಧಿಯೂ ಉಂಟಾಯಿತೆಂದು ತಿಳಿದುಕೋ

೩೪ ಕರುವು ಹಸುವಿನ ಮೊಲೆಯನ್ನುಣ್ಣದೆ ಹೋದರೆ ಹಾಲನ್ನು ಕರೆಯು ವುದಕ್ಕಾಗುವುದಿಲ್ಲವಷ್ಟೆ ! ಆದ್ದರಿಂದ ಕರುವಿದ್ದೇ ಇರಬೇಕು ಅದರಂತೆ ಪೃಥ್ವೀ ಪಾಲಕನಾದ ಪೃಥು ಮಹಾರಾಜನು ಸ್ವಾಯಂಭುವನೆಂಬ ಮಗನನ್ನು ಕರುವನ್ನಾಗಿ ಮಾಡಿ ಬಲಗಯ್ಯಲ್ಲಿ ಅದನ್ನು ಹಿಡಿದು ಭೂಮಿಯು ಹಾಲನ್ನುಣಿಸಿ ಅದರಿಂದ ಸಸ್ಯ ರೂಪವಾದ ಕ್ಷೀರವನ್ನು ಕರೆದು ಪ್ರಜಗಳ ಆಹಾರವನ್ನು ನಿರ್ಮಾಣಮಾಡಿ ಲೋಕೋ ದ್ಧಾರ ಮಾಡಿದನು

೩೫-೪೧ – ಬಳಿಕ ಋಷಿಗಳಿಂದ ಭೂಮಿಯು ಛಂದಸ್ಸೆಂಬ ಪಾತ್ರೆಯಲ್ಲಿ ಕರೆಯಲ್ಪಟ್ಟಳು ಆಗ ಚಂದ್ರನೇ ಕರುವಾದನು ಬೃಹಸ್ಪತಿಯೇ ಕರೆಯುವವ ನಾದನು ಆ ಬಳಿಕ ಭೂಮಿಯು ದೇವಗಣಗಳಿಂದ ಚಿನ್ನದ ಪಾತ್ರೆಯಲ್ಲಿ ಊರ್ಜ ರಸವನ್ನು ಕರೆದಳು ಆಗ ಇಂದ್ರನೇ ಕರುವಾದನು ಸೂರ್ಯನೇ ಕರೆಯುವವ ನಾದನು ಭೂಮಿಯು ಬೆಳ್ಳಿಯ ಪಾತ್ರೆಯಲ್ಲಿ ಅಮೃತವನ್ನು ಕರೆದಳು ಆಗ

ಪಯಶ್ಚೈವಾಯಸೇ ಪಾತ್ರೇ ದುಗ್ಧಾ ದೈತ್ಯೈರ್ವಸುಂಧರಾ ।
ದೋಗ್ಧಾ ಗಗನಮೂರ್ಧಾ ಸಾ ವತ್ಸಂ ಕೃತ್ವಾ ವಿರೋಚನಂ ॥ ೬೮ ॥

ಅಲಾಬುಪಾತ್ರೇ ಸರ್ಪೈಶ್ಚ ವಿಷಂ ದುಗ್ಧಾಧರಾ ತಥಾ ।
ತೇಷಾಂ ಚ ವಾಸುಕಿರ್ದೋಗ್ಧಾ ವತ್ಸಶ್ಚಾಸೀಚ್ಚ ತಕ್ಷಕಃ ॥ ೬೯ ॥

ಅಂತರ್ಧಾನಂ ಯದಾ ಯಕ್ಷೇ ರಾಮಪಾತ್ರೇ ವಸುಂಧರಾ ।
ದುಗ್ಧಾ ರಜತನಾಭೇನ ವತ್ಸಂ ಕೃತ್ವಾ ಧನೇಶ್ವರಂ ॥ ೭೦ ॥

ಕಪಾಲೇ ರುಧಿರಂ ದುಗ್ಧಾ ರಾಕ್ಷಸೈರ್ಭೀಮವಿಕ್ರಮೈಃ ।
ಹೇತಿಃ ಪ್ರಹೇತಿಶ್ಚ ತಥಾ ದೋಗ್ಧಾ ವತ್ಸಸ್ತಥಾಽಭವತ್ ॥ ೭೧ ॥

ದುಗ್ಧಾ ಗಂಧಾನ್ಪದ್ಮಪಾತ್ರೇ ಗಂಧರ್ವಾಪ್ಸರಸಾಂ ಗಣೈಃ ।
ವತ್ಸಶ್ಚಿತ್ರರಥಸ್ತೇಷಾಂ ದೋಗ್ಧಾ ವಸುರುಚಿಸ್ತಥಾ ॥ ೭೨ ॥

ಓಷಧ್ಯಶ್ಚ ತಥಾ ಶೈಲೈರ್ದುಗ್ಧಾ ಪಾತ್ರೇ ಶಿಲಾಮಯೇ ।
ವತ್ಸಸ್ತು ಹಿಮವಾನಾಸೀದ್ದೋಗ್ಧಾ ಮೇರುರ್ಮಹಾಗಿರಿಃ ॥ ೭೩ ॥

---

ಯಮನೇ ಕರೆಯುವನಾಗಿಯೂ, ವೈವಸ್ವತನೇ ಕರುವಾಗಿಯೂ ಪರಿಣಮಿಸಿದರು ಆ ಬಳಿಕ ಭೂಮಿಯು ದೈತ್ಯರಿಂದ ಅಯಃ (ಕಬ್ಬಿಣದ) ಪಾತ್ರೆಯಲ್ಲಿ ಹಾಲನ್ನು ಕರೆದಳು ಆಗ ವಿರೋಚನನೇ ಕರುವಾದನು ಸೂರ್ಯನೇ ಕರೆಯುವವನಾದನು ಆ ಬಳಿಕ ಭೂಮಿಯು ಸೋರೆ ಬುರುಡೆಯೆಂಬ ಪಾತ್ರೆಯಲ್ಲಿ ವಿಷವನ್ನು ಕರೆದಳು ತಕ್ಷಕನೇ ಆಗ ಕರುವಾದನು ವಾಸುಕಿಯೇ ಕರೆಯುವವನಾದನು ಬಳಿಕ ಭೂಮಿಯು ತಾಮ್ರದ ಪಾತ್ರೆಯಲ್ಲಿ ಅಂತರ್ಧಾನವನ್ನು ಹೊಂದಿದಳು ಆಗ ಧನೇಶ್ವರ (ಕುಬೇರ) ನೇ ಕರುವಾದನು ಹಿಮವಂತನೇ ಕರೆಯುವವನಾದನು ಬಳಿಕ ರಾಕ್ಷಸರು ತಲೆ ಬುರುಡೆಯಲ್ಲಿ ರಕ್ತವನ್ನು ಕರೆದರು ಹೇತಿಯೆಂಬುವನನು, ಕರೆಯಲು ನಿಂತನು ಪ್ರಹೇತಿದಾನವನೇ ಕರುವಾದನು

೭೨-೭೩ —ಗಂಧರ್ವರ ಮತ್ತು ಅಪ್ಸರ ಸ್ತ್ರೀಯರ ಗಣಗಳಿಂದ ಪದ್ಮಪಾತ್ರೆಯಲ್ಲಿ ಗಂಧವು ಕರೆಯಲ್ಪಟ್ಟಿತು ಆಗ ವತ್ಸರಥನು ಕರುವಾದನು ವಸುರುಚಿಯೇ ಕರೆಯುವವನಾದನು ಬಳಿಕ ಪರ್ವತಗಳಿಂದ ಶಿಲಾಮಯ ಪಾತ್ರದಲ್ಲಿ ಓಷಧಿ ವನಸ್ಪತಿಗಳು ಕರೆಯಲ್ಪಟ್ಟವು ಆಗ ಹಿಮವಂತನೇ ಕರುವಾದನು ಮೇರು ಪರ್ವ

**ಪಲಾಶಪಾತ್ರೇ ವೃಕ್ಷೈಸ್ತು ದುಗ್ಧಾ ಪುಷ್ಪಫಲಂ ಶುಭಂ ।**
**ಕಾಮಧುಕ್ಚ ತತಃ ಸಾಲಂ ಪ್ಲಕ್ಷೋ ವತ್ಸಸ್ತು ವೈ ಸ್ಮೃತಃ ॥ ೪೪ ॥**

**ಸರ್ವಕಾಮದುಘಾ ದೋಗ್ಧ್ರೀ ಪೃಥಿವೀ ಭೂತಭಾವಿನೀ ।**
**ಸೈಷಾ ಧಾತ್ರೀ ವಿಧಾತ್ರೀ ಚ ಜನನೀ ಭಾವನೀ ತಥಾ ॥ ೪೫ ॥**

**ಚರಾಚರಸ್ಯ ಲೋಕಸ್ಯ ಪ್ರತಿಷ್ಠೋತ್ಪತ್ತಿರೇವ ಚ ।**
**ಸರ್ವಭೂತಹಿರಣ್ಯಾ ಚ ಸರ್ವಭೂತಹಿತೈಷಿಣೀ ॥ ೪೬ ॥**

**ವರ್ಗದಾ ಮೇದಿನೀ ಭೂಮಿಃ ಕ್ಷಮಾ ಕ್ಷೋಣೀ ವಸುಂಧರಾ ।**
**ಸರ್ವಭೂತಶರೀರಸ್ಥಾ ಸರ್ವಾನುಗ್ರಹಕಾರಿಣೀ ॥ ೪೭ ॥**

**ಮನ್ವಂತರೇಸ್ಮಿನ್ಸಂಪ್ರಾಪ್ತೇ ವೈನ್ಯೇನ ಪೃಥಿವೀಕ್ಷಿತಾ ।**
**ಪ್ರಥಮಂ ವಸುಧಾ ದುಗ್ಧಾ ತತೋ ದುಗ್ಧಾ ಯಥೋದಿತೈಃ ॥ ೪೮ ॥**

**ದುಹಿತೃತ್ವಂ ಗತಾ ತಸ್ಯ ಪೃಥಿವೀ ತೇನ ಚೋಚ್ಯತೇ ।**
**ಏವಂ ಪ್ರಭಾವಃ ಸ ಪುರಾ ಪೃಥುರಾಸೀನ್ಮಹೀಪತಿಃ ॥ ೪೯ ॥**

---

ತವೇ ದೋಗ್ಧ್ರವಾದನು ಆ ಬಳಿಕ ಮುತ್ತುಗದ ಪಾತ್ರೆಯಲ್ಲಿ ವೃಕ್ಷಗಳಿಂದ ಶುಭಕರವಾದ ಪುಷ್ಪಫಲಗಳು ಕರೆಯಲ್ಪಟ್ಟುವು ಸಾಲವೃಕ್ಷವೇ ಕರೆಯುವುದಾಯಿತು. ಆಲದಮರವೇ ಕರುವಾಯಿತು ಈ ರೀತಿಯಾಗಿ ಸಕಲ ಪ್ರಾಣಿಗಳ ಉಪಕಾರಕ್ಕೋಸ್ಕರವಾಗಿ ಭೂಮಿಯು ಸಕಲ ಇಷ್ಟಾರ್ಥಗಳನ್ನೂ ಜನರಿಗೆ ಕರೆದುಕೊಟ್ಟಳು ಆದ್ದರಿಂದಲೇ ಭೂದೇವಿಗೆ ಧಾತ್ರೀ-ವಿಧಾತ್ರೀ-ಜನನೀ-ಭಾವನೀ ಮುಂತಾದ ಹೆಸರುಗಳು ಬಂದುವು ಚರಾಚರ ಪ್ರಪಂಚಕ್ಕೆ ಪ್ರತಿಷ್ಠೋತ್ಪತ್ತಿ ಕಾರಣಳಾಗಿಯೂ ಸಕಲ ಪ್ರಾಣಿಗಳಿಗೆ ಸುವರ್ಣ ಸ್ವರೂಪಳಾಗಿಯೂ ಸಕಲ ಭೂತಹಿತೈಷಿಣಿಯಾಗಿರುವ ಭೂದೇವಿಗೆ, ವರ್ಗದಾ-ಮೇದಿನೀ-ಭೂಮಿ-ಕ್ಷಮಾ-ಕ್ಷೋಣೀ-ವಸುಂಧರಾ ಎಂಬ ಹೆಸರುಗಳು ಅನ್ವರ್ಥವಾಗಿ ಪರಿಣಮಿಸಿದುವು ಈ ಮಹಾತಾಯಿಯು ಸಕಲ ಪ್ರಾಣಿಗಳ ಶರೀರದಲ್ಲಿಯೂ ಇರುವಳು ಸಕಲರಿಗೂ ಅನುಗ್ರಹಮಾಡತಕ್ಕವಳು ಈ ವೈವಸ್ವತ ಮನ್ವಂತರವು ಪ್ರಾಪ್ತವಾದಾಗ ಪೃಥಿವೀಪಾಲಕನಾದ ಪೃಥುಮಹಾರಾಜನಿಂದ ಭೂಮಿಯು ಮೊದಲು ಕರೆಯಲ್ಪಟ್ಟಳು ಆ ಬಳಿಕ ಮೇಲೆ ಹೇಳಿದ ಕ್ರಮದಂತೆ ಸಕಲ ಪದಾರ್ಥಗಳೂ ಕರೆಯಲ್ಪಟ್ಟುವು

೪೯ – ಈ ಕಾರಣದಿಂದಲೇ ಪೃಥಿವಿಯನ್ನು ಈಗಲೂ ಜನರು ಪೃಥುವಿನ

**ಪಿತ್ರಾಽನುರಂಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ ।**
**ಪ್ರಜಾನಾಂ ರಂಜನಾತ್ತಸ್ಯ ನಾಮ ರಾಜೇತಿ ಕೀರ್ತಿತಂ ॥ ೫೦ ॥**

**ರಾಜಾ ಭೋಜೋ ವಿರಾಟ್ ಸಮ್ರಾಟ್ ಗೋಪತಿಃ ಪಾರ್ಥಿವಸ್ತಥಾ ।**
**ಸ ಏವೋಕ್ತೋ ಮಹೀನಾಥ ಶಬ್ದೈಃ ಪರ್ಯಾಯವಾಚಕೈಃ ॥ ೫೧ ॥**

**ನಮಸ್ಕಾರಸ್ತು ಕರ್ತವ್ಯಸ್ತಸ್ಯ ನಿತ್ಯಂ ದ್ವಿಜೋತ್ತಮೈಃ ।**
**ವೇದಕಾಮೈರ್ವೇದವಿದ್ಭಿಃ ಪ್ರಾರ್ಥಯದ್ಭಿರ್ಮಹದ್ಯಶಃ ॥ ೫೨ ॥**

**ಪಾರ್ಥಿವೈಶ್ಚ ಮಹಾಭಾಗೈಃ ಪ್ರಾರ್ಥಯದ್ಭಿರ್ಮಹದ್ಯಶಃ ।**
**ವೃತ್ತಿದಾತಾ ತಥಾ ವೈಶ್ಯೈರ್ನಮಸ್ಕಾರ್ಯಸ್ತಥಾ ಪೃಥುಃ ॥ ೫೩ ॥**

**ಶೂದ್ರೈರಪಿ ನಮಸ್ಕಾರ್ಯೋ ಧರ್ಮಕಾಮೈರ್ಮಹೀಪತಿಃ ।**
**ಕ್ಷೇಮೇಪ್ಸುಭಿಸ್ತಥಾ ಧ್ಯಾನೇ ನಮಸ್ಕಾರ್ಯಃ ಪೃಥುರ್ನೃಪಃ ॥ ೫೪ ॥**

---

ಮಗಳೆಂದು ಕರೆಯುತ್ತಾರೆ ಈ ರೀತಿಯಾಗಿ ಪೂರ್ವದಲ್ಲಿ ಪೃಥುಮಹಾರಾಜನು ಇಂತಹ ಮಹತ್ತಾದ ಯಶಸ್ಸನ್ನು ಸಂಪಾದಿಸಿದನು ಕೇಳಯ್ಯ, ವಜ್ರರಾಜ !

೫೦ ಪ್ರಜೆಗಳನ್ನು ಪಿತೃವತ್ತಾಗಿ ಪಾಲಿಸಿದ ಆ ರಾಜನನ್ನು ನೋಡಿ ಸಕಲ ಪ್ರಜೆಗಳೂ ಸಂತೋಷಪಡುತ್ತಿದ್ದರು ಪ್ರಜೆಗಳನ್ನು ಈ ರೀತಿ ರಂಜನೆಮಾಡಿದುದ ರಿಂದಲೇ ಧೊರೆಗೆ ರಾಜನೆಂಬ ಹೆಸರು ಪ್ರಾಪ್ತವಾಯಿತು

೫೧ ಎಲೈ ವಜ್ರರಾಜನೇ ಕೇಳು —ಪರ್ಯಾಯ ವಾಚಕಗಳಾದ ರಾಜಾ ಭೋಜ, ವಿರಾಜ, ಸಮ್ರಾಜ, ಗೋಪತಿ ಪಾರ್ಥಿವ ಎಂಬ ಹೆಸರುಗಳು ಪೃಥುಮಹಾ ರಾಜನಿಗೇ ಸಲ್ಲತಕ್ಕವುಗಳೆಂದು ತಿಳಿ

೫೨ ಅಂತಹ ಪೃಥುಮಹಾರಾಜನನ್ನು ವೇದಕಾಮರಾದ ವೇದವೇತ್ತೃ ಗಳೂ ಮಹತ್ತಾದ ಯಶಸ್ಸನ್ನು ಹೊಂದಲಪೇಕ್ಷಿಸುವವರೂ ಸಹ ಪ್ರತಿನಿತ್ಯವೂ ನಮ ಸ್ಕರಿಸುತ್ತಿರಬೇಕು

೫೩ ಈ ಪೃಥುಮಹಾರಾಜನನ್ನು, ಮಹತ್ತಾದ ಯಶಸ್ಸನ್ನು ಪ್ರಾರ್ಥಿಸುವ ಮಹಾರಾಜರೂ ಮತ್ತು ವೈಶ್ಯರೂ, ಸಹ ಪ್ರತಿದಿನವೂ ನಮಸ್ಕಾರಮಾಡುತ್ತಲಿರ ಬೇಕು ಏಕೆಂದರೆ, ಈ ಪೃಥುವು ಲೋಕದ ಜನರಿಗೆಲ್ಲಾ ಜೀವನಾರ್ಥವಾದ ವೃತ್ತಿ ಯನ್ನು ಕಲ್ಪಿಸಿದವನು

೫೪-೫೭ —ಧರ್ಮವನ್ನಪೇಕ್ಷಿಸುವ ಶೂದ್ರರೂ ಕ್ಷೇಮಾಪೇಕ್ಷಿಗಳೂ ಪೃಥು ರಾಜನಿಗೆ ನಿತ್ಯವೂ ನಮಸ್ಕರಿಸಬೇಕು. ಯಾವ ಯೋದ್ಧನು ಪೃಥುಚಕ್ರವರ್ತಿಯ

ಯೋ ಹಿ ಯೋದ್ಧೋ ರಣೇ ಯಾತಿ ಕೀರ್ತಯಿತ್ವಾ ಪೃಥುಂ ನೃಪಂ ।
ಸ ಘೋರರೂಪಾತ್ಸಂಗ್ರಾಮಾತ್ ಕ್ಷೇಮೀಭವತಿ ಪಾರ್ಥಿವ　　|| ೫೫ ||

ಪೃಥೋಃ ಕೃತ್ವಾ ನಮಸ್ಕಾರಂ ಸರ್ವತ್ರ ವಿಜಯೀ ಭವೇತ್ ।
ತಸ್ಮಾತ್ತಸ್ಯ ನಮಸ್ಕಾರಃ ಸದಾ ಕಾರ್ಯೋ ಜಯೇಪ್ಸುನಾ　　|| ೫೬ ||

ವೈನ್ಯಸ್ಯ ಭೂಪಾಲವರಸ್ಯ ರಾಜನ್
ಶ್ರುತ್ವಾಭಿಷೇಕಂ ಪ್ರಯತೋ ಮನುಷ್ಯಃ ।
ಪಾಪಂ ಸಮಗ್ರಂ ವಿಜಹಾತಿ ಶೀಘ್ರಂ
ಜಯಂ ತಥಾಪ್ನೋತಿ ಯಶಶ್ಚ ಲೋಕೇ　　|| ೫೭ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪೃಥ್ವಭಿಷೇಕಾದಿವರ್ಣನಂ ನಾಮ
ನವೋತ್ತರಶತತಮೋಽಧ್ಯಾಯಃ

---

ನಾಮೋಚ್ಚಾರಣೆಮಾಡುತ್ತಾ ಯುದ್ಧರಂಗವನ್ನು ಪ್ರವೇಶಿಸುವನೋ ಅವನು ಘೋರ ಸಂಗ್ರಾಮದಲ್ಲಿ ವಿಜಯವನ್ನು ಸಂಪಾದಿಸಿ ಕ್ಷೇಮದಿಂದ ಹಿಂತಿರುಗುವನು ಪೃಥುವಿಗ ನಮಸ್ಕಾರಮಾಡಿದವರೆಲ್ಲರೂ ವಿಜಯಶಾಲಿಗಳಾಗುವರು ಎಲೈ ವಜ್ರ ರಾಜೇಂದ್ರನೇ! ರಾಜಶ್ರೇಷ್ಠನಾದ ಪೃಥು ಚಕ್ರವರ್ತಿಯ ಪಟ್ಟಾಭಿಷೇಕ ವೃತ್ತಾಂತ ವನ್ನು ಯಾವಮನುಷ್ಯನು ಕೇಳುವನೋ ಅಂಥವನು, ತನ್ನ ಪಾಪರಾಶಿಯನ್ನೆಲ್ಲಾ ಕಳೆದುಕೊಂಡು ಸಂಪೂರ್ಣ ವಿಜಯವನ್ನೂ ಯಶಸ್ಸನ್ನೂ ಹೊಂದುವನೆಂದು ಮಾರ್ಕಂಡೇಯರು ಹೇಳಿದರು

ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ
ರೂಪವಾದ ಪೃಥೂದ್ಭವನಂಬ ಹೆಸರಿನ ಒಂದು ನೂರೊಂಭತ್ತನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ದಶೋತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯಉವಾಚ ॥

**ಅಂತರ್ಧಾನಃ ಪೃಥೋಃ ಪುತ್ರೋ ಹವಿರ್ಧಾನಸ್ತದಾತ್ಮಜಃ ।**
**ಪ್ರಾಚೀನಬರ್ಹಿಸ್ತತ್ಪುತ್ರಃ ಪೃಥಿವ್ಯಾಮೇಕರಾಟ್ ಬಭೌ ॥ ೧ ॥**

**ಉಪಯೇಮೇ ಸಮುದ್ರಸ್ಯ ಲವಣಸ್ಯ ಸ ವೈ ಸುತಾಂ ।**
**ಸುವರ್ಣಾಯಾಂ ತು ಸಾಮುದ್ರ್ಯಾಂ ದಶ ಪ್ರಾಚೀನಬರ್ಹಿಷಃ ॥ ೨ ॥**

**ಸರ್ವೇ ಪ್ರಾಚೇತಸೋ ನಾಮ ಧನುರ್ವೇದಸ್ಯ ಪಾರಗಾಃ ।**
**ಅಪೃಥಗ್ಧರ್ಮಚರಣಾಸ್ತೇಽತಪ್ಯಂತ ಮಹತ್ತಪಃ ॥ ೩ ॥**

---

### ಒಂದು ನೂರ ಹತ್ತನೆಯ ಅಧ್ಯಾಯ.

೧ ಮಾರ್ಕಂಡೇಯನು ಹೇಳುತ್ತಾನೆ --ಪೃಥುವಿಗೆ ಅಂತರ್ಧಾನನೆಂಬ ಪುತ್ರನೂ ಅವನಿಗೆ ಹವಿರ್ಧಾನನೆಂಬ ಪುತ್ರನೂ ಆ ಹವಿರ್ಧಾನನಿಗೆ ಪ್ರಾಚೀನಬರ್ಹಿಯೆಂಬ ಮಗನೂ ಹುಟ್ಟಿ ಏಕಚ್ಛತ್ರಾಧಿಪತಿಗಳಾಗಿ ರಾಜ್ಯವನ್ನಾಳಿದರು

೨ ಲವಣಸಮುದ್ರನಿಗೆ ಸುವರ್ಣೆಯೆಂಬ ಮಗಳಿದ್ದಳು ಆ ಸಮುದ್ರಪುತ್ರಿಯನ್ನು ಪ್ರಾಚೀನಬರ್ಹಿಯು ಮದುವೆಮಾಡಿಕೊಂಡನು ಅವಳ ಹೊಟ್ಟೆಯಲ್ಲಿ ಹತ್ತುಜನ (ಪ್ರಾಚೀನಬರ್ಹಿಗಳು) ಇಂದ್ರರಾದರು

೩ ಅವರೆಲ್ಲರಿಗೂ ಪ್ರಾಚೇತಸರೆಂದು ಹೆಸರು ಬಂದಿತು ಅವರೆಲ್ಲರೂ ಧನುರ್ವೇದದಲ್ಲಿ ದೊಡ್ಡ ಪಂಡಿತರಾಗಿ ಮಹಾಧರ್ಮಾತ್ಮರಾಗಿ ಮಹತ್ತಾದ ತಪಸ್ಸನ್ನು ಮಾಡಿದರು

**ದಶವರ್ಷಸಹಸ್ರಾಣಿ ಸಮುದ್ರಸಲಿಲೇಶಯಾಃ ।**
**ಸಮುದ್ರಗೇಷು ದಶಸು ತಪಸ್ಯತ್ಸು ಮಹೀರುಹಾಃ ॥ ೪ ॥**

**ಅರಕ್ಷಮಾಣಾಂ ಗಾಂ ವವ್ರುರ್ಬಭೂವೇತ್ಥಂ ಪ್ರಜಾಕ್ಷಯಃ ।**
**ನ ಶಕ್ಯೋ ಮಾರುತೋ ವಾತುಂ ವೃತ್ತಂ ಖಮಭವದ್ದ್ರುಮೈಃ ॥ ೫ ॥**

**ತದುಪಶ್ರುತ್ಯ ರಾಜಾನಃ ಸರ್ವೇ ಯುಕ್ತಾಃ ಪ್ರಚೇತಸಃ ।**
**ಮುಖೇಭ್ಯೋ ವಾಯುಮಗ್ನಿಂ ಚ ಸಸೃಜುರ್ಜಾತಮನ್ಯವಃ ॥ ೬ ॥**

**ನಿಮೂರ್ಲಾನಥ ವೃಕ್ಷಾಂಸ್ತಾನ್ಕೃತ್ವಾ ವಾಯುರಶೋಷಯತ್ ।**
**ತಾನಗ್ನಿರದಹತ್ಕ್ರುದ್ಧ ಏವಮಾಸೀದ್ದ್ರುಮಕ್ಷಯಃ ॥ ೭ ॥**

**ದ್ರುಮಕ್ಷಯಮಥೋ ದೃಷ್ಟ್ವಾ ಕಿಂಚಿದ್ದಗ್ಧೇಷು ಶಾಖಿಷು ।**
**ಉಪಗಮ್ಯಾಬ್ರವೀದೇತಾನ್ಸೋಮೋ ರಾಜಾಪ್ರಚೇತಸಃ ॥ ೮ ॥**

---

೪ ಈ ಪ್ರಾಚೇತಸರು ಸಮುದ್ರದ ನೀರಿನಮೇಲೆ ಮಲಗಿಕೊಂಡು ಹತ್ತು ಸಾವಿರವರ್ಷ ಭಗವಂತನನ್ನು ಕುರಿತು ತಪಸ್ಸುಮಾಡಿದರು ಆಗ ಭೂಲೋಕವನ್ನು ಕಾಪಾಡಲು ರಕ್ಷಕರಿಲ್ಲದೇಹೋದುದರಿಂದ ಮರಗಳು ಭೂಮಿಯನ್ನು ಎಡೆಬಿಡದ ಆಕ್ರಮಿಸಿಕೊಂಡು ಬೆಳೆದುಬಿಟ್ಟುವು ಇದರಿಂದ ಹಳ್ಳಿ ನಗರಗಳೆಲ್ಲಾ ನಾಶವಾಗಿ ಪ್ರಜೆಗಳೆಲ್ಲರೂ ನಾಶವಾಗಿ ಹೋದರು ಗಾಳಿ ಬೀಸುವುದಕ್ಕೆ ಸಹ ಇಷ್ಟು ಅವಕಾಶ ವಿಲ್ಲದಂತೆ ಮರಗಳು ಅಂತರಿಕ್ಷವನ್ನು ವ್ಯಾಪಿಸಿ ತಾವೇತಾವಾಗಿ ಬೆಳೆದುಬಿಟ್ಟುವು

೫-೭ ಭೂಮಿಗೆ ಬಂದ ಪೀಡೆಯು ಸಮುದ್ರಶಾಯಿಗಳಾದ ಪ್ರಾಚೇತಸರ ಕಿವಿಗೆ ಬಿದ್ದಿತು ಅವರು ಆ ಕೂಡಲೇ ಕೋಪಗೊಂಡು ತಮ್ಮತಮ್ಮ ಮುಖಗಳಿಂದ ವಾಯುವನ್ನೂ, ಅಗ್ನಿಯನ್ನೂ ಸೃಷ್ಟಿಮಾಡಿದರು ಈರೀತಿ ಹುಟ್ಟಿದ ವಾಯುವು ಸಕಲ ವೃಕ್ಷಗಳನ್ನೂ ಬುಡಸಹಿತವಾಗಿ ಉರುಳಿಸಿಬಿಟ್ಟಿತು ಆರೀತಿ ಬುಡ ಕಳಚಿ ಬಿದ್ದು ಒಣಗಿಹೋದ ಮರಗಳನ್ನು ಅಗ್ನಿಯು ಭಸ್ಮಮಾಡಿಬಿಟ್ಟನು ಈರೀತಿಯಾಗಿ ವೃಕ್ಷಗಳೆಲ್ಲಾ ನಾಶವಾದುವು

೮-೯ ಈರೀತಿ ಸಕಲ ವೃಕ್ಷಸಂಕ್ತಿಗಳೂ ನಾಶವಾಗಿಹೋಗಲು ದಗ್ಧಾವಶಿಷ್ಟ ವಾದ ಕೆಲವು ಮರದ ಶಾಖೆ (ಕೊಂಬೆ) ಗಳು ಸೋಮರಾಜ (ಸೋಮಲತೆ) ನನ್ನು ಮರೆಹೊಕ್ಕುವು ಆ ಸೋಮರಾಜನು ಆ ದಶ ಪ್ರಾಚೇತಸರ ಬಳಿಗೆ ಹೋಗಿ

**ಕೋಪಂ ತ್ಯಜತ ರಾಜಾನಃ ಸರ್ವೇ ಪ್ರಾಚೀನಬರ್ಹಿಷಃ ।**
**ಕೃತಾ ಮಹೀ ವೃಕ್ಷಶೂನ್ಯಾ ಶಾಮ್ಯೇತಾಮಗ್ನಿಮಾರುತೌ ॥ ೯ ॥**

**ರತ್ನಭೂತಾ ಚ ಕನ್ಯೇಯಂ ವೃಕ್ಷಾಣಾಂ ವರವರ್ಣಿನೀ ।**
**ಭವಿಷ್ಯಂ ಜಾನತಾ ಹ್ಯೇಷಾ ಧೃತಾ ಗರ್ಭೇಣ ವೈ ಮಯಾ ॥ ೧೦ ॥**

**ಮಾರಿಷಾ ನಾಮ ಭವತಾಂ ಪತ್ನ್ಯರ್ಥೇ ಪ್ರದದಾಮ್ಯಹಂ ।**
**ತತಃ ಸೋಮಸ್ಯ ವಚನಾಜ್ಜಗೃಹುಸ್ತೇ ಪ್ರಚೇತಸಃ ॥ ೧೧ ॥**

**ಸಂಹೃತ್ಯ ಕೋಪಂ ವೃಕ್ಷೇಭ್ಯಃ ಪತ್ನೀಧರ್ಮೇಣ ಮಾರಿಷಾಂ ।**
**ಮನಸಾ ಚ ದಧುಸ್ತಸ್ಯಾಂ ಗರ್ಭಂ ಸರ್ವೇ ಪ್ರಚೇತಸಃ ॥ ೧೨ ॥**

**ದಶಭ್ಯಸ್ತು ಪ್ರಚೇತೇಭ್ಯೋ ಮಾರಿಷಾಯಾಂ ಪ್ರಜಾಪತಿಃ ।**
**ಭವಶಾಪೇನ ಸಂಭೂತೋ ಭೂಯೋ ದಕ್ಷಪ್ರಜಾಪತಿಃ ॥ ೧೩ ॥**

---

ಸ್ವಾಮಿ ! ನೀವೆಲ್ಲರೂ ದಯವಿಟ್ಟು ಕೋಪವನ್ನು ಬಿಟ್ಟು ಈ ಭಯಂಕರರಾದ ಅಗ್ನಿ ವಾಯುಗಳನ್ನು ಶಮನಮಾಡಬೇಕು. ಈಗಾಗಲೇ ಭೂಲೋಕವು ವೃಕ್ಷಶೂನ್ಯವಾಗಿ ಹೋಗಿರುತ್ತದೆ.

೧೦-೧೧ ಎಲೈ ಪ್ರಾಚೇತಸರೇ ! ವೃಕ್ಷಗಳ ಪುತ್ರಿಯಾದ ಈ ಸುಂದರೀ ರತ್ನಕ್ಕೆ ಭವಿಷ್ಯತ್ಕಾಲದಲ್ಲಿ (ಮುಂದಿನಕಾಲ) ನಡೆಯುವ ವಿಷಯಗಳೆಲ್ಲವೂ ತಿಳಿದಿರುತ್ತದೆ. ಇವಳನ್ನು ಇದುವರಿಗೆ ನನ್ನ ಗರ್ಭದಲ್ಲಿ ಕಾಪಾಡಿಕೊಂಡಿದ್ದೆನು. ಇವಳ ಹೆಸರು ಮಾರಿಷಾ. ಇವಳನ್ನು ನಿಮ್ಮೆಲ್ಲರಿಗೂ ಲಗ್ನಮಾಡಿಕೊಡುತ್ತೇನೆ. ಪರಿಗ್ರಹಿಸಬೇಕೆನ್ನಲು ಸೋಮರಾಜನ ಮಾತಿನಂತೆ ಆ ಪ್ರಾಚೇತಸರೆಲ್ಲರೂ ಆಕೆಯನ್ನು ಪರಿಗ್ರಹಿಸಿದರು.

೧೨-೧೩ ಮಾರಿಷೆಯನ್ನು ಪತ್ನೀಧರ್ಮದಿಂದ ಪ್ರತಿಗ್ರಹಮಾಡಿದೊಡನೆಯೇ ಪ್ರಾಚೇತಸರು ವೃಕ್ಷಗಳ ಮೇಲಿನ ಕೋಪವನ್ನು ಬಿಟ್ಟುಬಿಡಲು ಅಗ್ನಿಮಾರುತರು ಶಾಂತರಾದರು. ಆ ಬಳಿಕ ದಶಪ್ರಾಚೇತಸರೂ ಸೇರಿ ತಮ್ಮತಮ್ಮ ಮನಸ್ಸಿನಿಂದಲೇ ಅವಳನ್ನು ಗರ್ಭವತಿಯಾಗಿ (ಸಂಭೋಗಕ್ರಿಯೆಯಿಲ್ಲದೆ) ಮಾಡಿದರು. ಈ ದಶಪ್ರಾಚೇತಸರಿಂದ ಮಾರಿಷೆಯು ಹೊಟ್ಟೆಯಲ್ಲಿ ಈಶ್ವರಶಾಪದಿಂದ ದಕ್ಷಬ್ರಹ್ಮನು ಪುನಃ ಸಂಜನಿಸಿದನು.

**ಅಸೃಜನ್ಮನಸಾ ದಕ್ಷಃ ಪ್ರಜಾಃ ಪೂರ್ವಂ ಚತುರ್ವಿಧಾಃ ।**
**ನೋತ್ಪದ್ಯಂತೇ ಚ ತಾಸ್ತಸ್ಯ ಅಪಧ್ಯಾತಾ ಹರೇಣ ತು ॥ ೧೪ ॥**

**ಮೈಥುನೇನ ತತಃ ಸೃಷ್ಟಿಂ ಕರ್ತುಮಿಚ್ಛನ್ಪ್ರಜಾಪತಿಃ ।**
**ಅಸಿಕ್ನೀಮುವಹದ್ಭಾರ್ಯಾಂ ವೀರಣಸ್ಯ ಪ್ರಜಾಪತೇಃ ॥ ೧೫ ॥**

**ಸುತಾಂ ಸುಮಹತೀಂ ಯುಕ್ತಾಂ ತಪಸಾ ಲೋಕಧಾರಿಣೀಂ ।**
**ತಸ್ಯ ಪುತ್ರಸಹಸ್ರಂ ತು ವೀರಿಣ್ಯಾಂ ಸಮಪದ್ಯತ ॥ ೧೬ ॥**

**ತಾಂಸ್ತು ದೃಷ್ಟ್ವಾ ಮಹಾತೇಜಾ ವಿವರ್ಧಯಿಷವಃ ಪ್ರಜಾಃ ।**
**ತಾನುವಾಚ ಮಹಾತೇಜಾ ಬ್ರಹ್ಮಪುತ್ರಃ ಸ ನಾರದಃ ॥ ೧೭ ॥**

**ಕಿಮತ್ ಪ್ರಮಾಣಂ ಮೇದಿನ್ಯಾಂ ಸ್ರಷ್ಟವ್ಯಸ್ಯ ತಥೈವ ಚ ।**
**ಅಜ್ಞಾನಾತ್ತು ಕಥಂ ಸರ್ಗಂ ಭವಂತಃ ಕರ್ತುಮುದ್ಯತಾಃ ॥ ೧೮ ॥**

---

೧೪ ಮೊದಲು ದಕ್ಷನು ನಾಲ್ಕುವಿಧ ಪ್ರಜೆಗಳನ್ನು ಮನಸ್ಸಿನಿಂದಲೇ ನಿರ್ಮಿಸಿದನು ಆ ಪ್ರಾಣಿಗಳು ಸೃಷ್ಟಿಯಾಗುವುದಕ್ಕಿಂತ ಮುಂಚೆ ಈಶ್ವರನಿಂದ ತಡೆಯಲ್ಪಟ್ಟವರಾದಕಾರಣ ಪ್ರಜೆಗಳು ಉತ್ಪನ್ನರಾಗಲೇ ಇಲ್ಲ

೧೫ ಆಗ ದಕ್ಷಬ್ರಹ್ಮನು ಸ್ತ್ರೀಸಂಭೋಗದ ಮೂಲಕ ಪುನಃ ಸೃಷ್ಟಿಮಾಡಬೇಕೆಂದು ಯೋಚಿಸಿದವನಾಗಿ ವೀರಣಬ್ರಹ್ಮನ ಮಗಳಾದ ಅಸಿಕ್ನಿಯನ್ನು ಮದುವೆ ಮಾಡಿಕೊಂಡವನಾದನು (ಅಸಿಕ್ನಿ-ಮಹಾನದಿಗಳಲ್ಲೊಂದು)

೧೬ ಈ ಅಸಿಕ್ನಿಯು ಮಹಾಮಹಿಮಾನ್ವಿತಳು ತಪಸ್ಸಿನಿಂದ ಲೋಕವನ್ನು ಧರಿಸಲು ಸಮರ್ಥಳು. ಇಂತಹ ಮಹಾತಪಸ್ವಿನಿಯಾದ ಅಸಿಕ್ನಿ (ವೀರಿಣಿ-ವೀರನ ಪುತ್ರಿ) ಯಲ್ಲಿ ದಕ್ಷಬ್ರಹ್ಮನಿಂದ ಸಾವಿರಜನ ಮಕ್ಕಳು ಹುಟ್ಟಿದರು

೧೭. ಆ ಸಾವಿರ ಮಕ್ಕಳಿಗೂ ಸಂತಾನವಾಗಲಾರಂಭಿಸಿ ದೊಡ್ಡ ಪ್ರಜಾಸಂಖ್ಯೆಯು ಬೆಳೆಯುತ್ತ ಬಂತು ಈರೀತಿ ಅಭಿವೃದ್ಧಿಹೊಂದುತ್ತಲಿದ್ದ ಆ ಪ್ರಜಾಸಂಖ್ಯೆಯನ್ನು ನೋಡಿ ಮಹಾತೇಜಸ್ವಿಯಾದ ಬ್ರಹ್ಮಪುತ್ರರಲ್ಲೊಬ್ಬನಾದ ನಾರದನು ಆ ಪ್ರಜೆಗಳನ್ನು ಕುರಿತು ಇಂತು ಹೇಳಿದನು

೧೮ ಸೃಷ್ಟಿಮಾಡಬೇಕಾದ ಪ್ರಮಾಣವು ಭೂಮಿಯಲ್ಲಿ ಎಷ್ಟು ? ಭೂಮಿಯ ಅಳತೆಯೇನು ? ನೀವು ಜ್ಞಾನವಿಲ್ಲದೆ ಲೆಕ್ಕವಿಲ್ಲದಷ್ಟು ಸೃಷ್ಟಿಯನ್ನು ಮಾಡಲೇನು ಕಾರಣ ? ಹೇಳಿರೆನ್ನಲು,

**ಮಹೀಮಾನಮಥಾನ್ವೇಷ್ಟುಂ ಗತಾ ದಕ್ಷಸುತಾಸ್ತತಃ ।**
**ಲೋಕಾಲೋಕಸ್ಯ ಪರತೋ ಗರ್ಭೋದಸ್ಯ ತಥೋಪರಿ ॥ ೧೯ ॥**

**ವಾಯುಮಂಡಲಮಾಸಾದ್ಯ ಭ್ರಮಣಾನ್ನಾಶಮಾಗತಾಃ ।**
**ದಕ್ಷೋಽಪಿ ತೇಷು ನಷ್ಟೇಷು ವೀರಿಣ್ಯಾಮೇವ ಧರ್ಮವಿತ್ ॥ ೨೦ ॥**

**ಸಹಸ್ರಂ ಜನಯಾಮಾಸ ಪುತ್ರಾಣಾಮಪರಂ ತತಃ ।**
**ವಿವರ್ಧಯಿಷವಸ್ತೇ ತು ಶಬಲಾಶ್ವಾಃ ಪುನಃ ಪ್ರಜಾಃ ॥ ೨೧ ॥**

**ಪೂರ್ವಮುಕ್ತಂ ವಚಸ್ತದ್ವೈಶ್ರಾವಿತಾ ನಾರದೇನ ತು ।**
**ಅನ್ಯೋನ್ಯಮೂಚುಸ್ತೇ ಸರ್ವೇ ಸಮ್ಯಗಾಹ ಮಹಾನೃಷಿಃ ॥ ೨೨ ॥**

**ಭ್ರಾತೄಣಾಂ ಪದವೀಂ ಚೈವ ಗಂತವ್ಯಾ ನಾತ್ರ ಸಂಶಯಃ ।**
**ತೇಽಪಿ ಹರ್ಯಶ್ವಮಾರ್ಗೇಣ ಪ್ರಯಾತಾಃ ಪೃಥಿವೀಮಿಮಾಂ ॥ ೨೩ ॥**

---

೧೯-೨೦ ನಾರದನ ಮಾತನ್ನು ಕೇಳಿ ಆ ಅಸಂಖ್ಯಾತ ಪ್ರಜಾಸಮುದಾಯವೂ (ದಕ್ಷರ ಮಕ್ಕಳೂ ಸಹ) ಭೂಮಿಯ ಪ್ರಮಾಣವನ್ನು ಕಂಡುಹಿಡಿಯಬೇಕೆಂದು ನಿಶ್ಚಯಿಸಿದವರಾಗಿ ಹೊರಟು ಲೋಕಾಲೋಕಪರ್ವತದ ಆಚೆಯೂ ಗರ್ಭೋದಪರ್ವತದ ಮೇಲೆಯೂ ಏರಿಹೋದವರಾಗಿ ವಾಯುಮಂಡಲವನ್ನು ಪ್ರವೇಶಿಸಿ ಅಲ್ಲಿಂದ ತಲೆ ತಿರುಗಿಬಿದ್ದು ಸತ್ತುಹೋದರು ಈರೀತಿ ತನ್ನ ಸಾವಿರಮಂದಿ ಮಕ್ಕಳೂ ಸಪರಿವಾರರಾಗಿ ಸತ್ತುಹೋದುದನ್ನು ನೋಡಿ ಧರ್ಮಾತ್ಮನಾದ ದಕ್ಷನು ಪುನಃ ಅಸಿಕ್ನಿ(ವೀರಿಣಿ) ಯಲ್ಲಿ ಬೇರೆ ಒಂದುಸಾವಿರಮಂದಿ ಮಕ್ಕಳನ್ನು ಉತ್ಪತ್ತಿಮಾಡಿದನು

೨೧-೨೨- ಆ ಸಾವಿರ ಮಕ್ಕಳೂ ಸಹ ಅಭಿವೃದ್ಧಿಹೊಂದುತ್ತ ಬಂದು ಪುನಃ ಶಬಲಾಶ್ವರೆಂಬ ಪ್ರಜಗಳನ್ನು ಸೃಷ್ಟಿಸಿದರು ಈ ಪ್ರಜಾವರ್ಗವನ್ನು ನೋಡಿ ನಾರದನು ಮೊದಲು ಹೇಳಿದ್ದ ಮಾತುಗಳನ್ನೇ ಇವರ ಸಂಗಡಲೂ ಹೇಳಲು ಈ ಮಾತನ್ನು ಅವರು ಕೇಳಿ ಒಬ್ಬರನ್ನೊಬ್ಬರು ನೋಡುತ್ತಾ ಈ ಮಹರ್ಷಿಯು ನಮ್ಮನ್ನು ಕುರಿತು ಚೆನ್ನಾಗಿಹೇಳಿದನು

೨೩-೨೬ ನಾವೂ ಸಹ ಈಗ ನಮ್ಮಣ್ಣಂದಿರ ಗತಿಯನ್ನೇ ಹೊಂದಬೇಕಾಗಿ ಬಂದಿದೆಯೆನ್ನುವ ವಿಷಯದಲ್ಲಿ ಸಂಶಯವಿಲ್ಲ ಹೀಗೆ ಹೇಳಿಕೊಂಡು ಆ ಅಣ್ಣಂದಿರು ಹೋದ ದಿಕ್ಕನ್ನೇ ಅನುಸರಿಸಿ ಭೂಲೋಕವನ್ನೆಲ್ಲಾ ಸುತ್ತಿ ವಾಯುಮಂಡಲಕ್ಕೆ

ತಮೇವ ಮಾರ್ಗಮಾಸಾದ್ಯ ವಿನಷ್ಟಾಃ ಶಾಶ್ವತೀಸ್ಸಮಾಃ ।
ತದಾ ಪ್ರಭೃತಿ ವೈ ಭ್ರಾಂತಾ ಭ್ರಾತುರನ್ವೇಷಣೇ ರತಾಃ ॥ ೨೪ ॥

ಪ್ರಯಾತೋ ನಶ್ಯತಿ ವಿಭೋ ತನ್ನಃ ಕಾರ್ಯಂ ವಿಜಾನತಾ ।
ಅಥ ತೇಷು ವಿನಷ್ಟೇಷು ದಕ್ಷಃ ಕೋಪಸಮನ್ವಿತಃ ॥ ೨೫ ॥

ಶಶಾಪ ನಾರದಂ ಕ್ರುದ್ಧಃ ತುಲ್ಯಂ ಜನ್ಮ ನ ಚಾಪ್ಸ್ಯಸಿ ।
ದೇಹಂ ತ್ಯಕ್ತ್ವಾ ಸ ಶಾಪೇನ ತೇನ ದಕ್ಷಸ್ಯ ನಾರದಃ ॥ ೨೬ ॥

ಭೂಯೋ ಮುನಿಸುತೋ ಜಾತಃ ಕಶ್ಯಪಸ್ಯ ಮಹಾತ್ಮನಃ ।
ಅಶ್ವಮೇಧಂ ಚ ವಿತತಂ ದಕ್ಷಸ್ಯಾದ್ಭುತಕರ್ಮಣಃ ॥ ೨೭ ॥

ವಿಧ್ವಂಸಯಾಮಾಸ ಹರಃ ಪೂರ್ವವೈರೇಣ ಭಾವಿತಃ ।
ದಕ್ಷೋಽಪಿ ಶಪ್ತವಾನ್ರುದ್ರಂ ಶಪ್ತಾಸ್ತೇ ಬ್ರಾಹ್ಮಣೋತ್ತಮಾಃ ॥ ೨೮ ॥

ಅದ್ಯ ಪ್ರಭೃತಿ ಯಕ್ಷ್ಯಂತಿ ನತ್ವಾ ಸಾರ್ಧಂ ದಿವೌಕಸೈಃ ।
ಜನ್ಮಾಂತರೇಽಪಿ ವೈರಾಣಿ ವಿನಶ್ಯಂತಿ ನ ಪಾರ್ಥಿವ ॥ ೨೯ ॥

ತಸ್ಮಾದ್ವೈರಂ ನ ಕರ್ತವ್ಯಂ ಕದಾಚಿದಪಿ ಕೇನಚಿತ್ ।
ಹರ್ಯಶ್ವೇಷ್ವಪಿ ನಷ್ಟೇಷು ಮಹಾತ್ಮಸು ಪುರಾ ತದಾ ॥ ೩೦ ॥

ಹೋಗಿ ನಷ್ಟಹೊಂದಿ ಎಷ್ಟು ವರ್ಷಗಳಾದರೂ ಹಿಂದಕ್ಕೆ ಬರಲಿಲ್ಲ ಎಲೈ ವಜ್ರನೇ ಕೇಳು ಈರೀತಿ ಭ್ರಾತೃಗಳನ್ನು ಅನುಸರಿಸಿಹೋದ ಆ ಸಾವಿರಮಕ್ಕಳೂ ನಾಶ ಹೊಂದಿದ್ದನ್ನು ನೋಡಿ ದಕ್ಷನಿಗೆ ಬಹು ಕೋಪವುಂಟಾಗಿ ನೀನೂಕೂಡ ಈ ಜನ್ಮವನ್ನು ಕಳೆದುಕೊಳ್ಳೆಂದು ನಾರದನಿಗೆ ಶಾಪಕೊಟ್ಟನು ಆ ನಾರದನು ಈರೀತಿ ದಕ್ಷನಿಂದ ಶಾಪಗ್ರಸ್ತನಾಗಿ ಆ ದೇಹವನ್ನು ಕಳದುಕೊಂಡು ಕಶ್ಯಪಋಷಿಯ ಮಗನಾಗಿ ಮತ್ತೊಂದು ಜನ್ಮವನ್ನೆತ್ತಿದನು

೨೭-೩೧ ದಕ್ಷಬ್ರಹ್ಮನು ಪುನಃ ವಿಸ್ತಾರವಾದ ಅಶ್ವಮೇಧಯಾಗವನ್ನು ಮಾಡಿದನು ಆಗಲೂ ಈಶ್ವರನು ಪೂರ್ವವೈರವನ್ನು ಬಿಡದ ಯಜ್ಞವನ್ನು ಧ್ವಂಸ ಮಾಡಿಬಿಟ್ಟನು ಆಗ ದಕ್ಷನು ಈಶ್ವರನನ್ನು ಕುರಿತು ಪುನಃ ಶಾಪವನ್ನು ಕೊಟ್ಟನು ಮತ್ತು ಬ್ರಾಹ್ಮಣೋತ್ತಮರೂ ಸಹ ಈಶ್ವರನಿಂದ ಶಪಿಸಲ್ಪಟ್ಟರು ಇಲ್ಲಿಂದ ಮುಂದ ನಿಮ್ಮನ್ನು ಬಿಟ್ಟು ದೇವತೆಗಳಿಂದಲೇ ಯಜ್ಞವು ನಡೆಯಲೆಂದು ಆ ಶಾಪದ ಅಭಿಪ್ರಾಯ ವೈರವೆಂಬುದು ಜನ್ಮಜನ್ಮಾಂತರಕ್ಕೂ ಇದೆಯೆಂದು ಇದರಿಂದ ಗೊತ್ತಾಗುವುದು ಆದ್ದರಿಂದ ಯಾವಾಗಲೂ ಯಾರನ್ನೂ ದ್ವೇಷಿಸಿ ವೈರವನ್ನು ಬೆಳಸಬಾರದು

**ಅಸಿಕ್ನ್ಯಾಂ ಜನಯಾಮಾಸ ದಕ್ಷೋ ದುಹಿತರಸ್ತದಾ ।**
**ಷಷ್ಟಿಃ ಕನ್ಯಾ ರೂಪಯುಕ್ತಾಸ್ತಪಸಾ ಮಹತಾ ಯುತಾಃ ॥ ೩೧ ॥**
**ದ್ವೇ ದದೌ ಬಾಹುಪುತ್ರಾಯ ಚತಸ್ರೋಽರಿಷ್ಟನೇಮಿನೇ ।**
**ದ್ವೇ ಪ್ರಾದಾತ್ಸ ಕೃಶಾಶ್ವಾಯ ದಶ ಧರ್ಮಾಯ ಚಾಪ್ಯಥ ॥ ೩೨ ॥**
**ಚತುರ್ದಶ ಕಶ್ಯಪಾಯ ಚಾಷ್ಟಾವಿಂಶತಿಮಿಂದವೇ ।**
**ಪ್ರದದೌ ಬಾಹುಪುತ್ರಾಯ ಸುಪ್ರಭಾಂ ಭಾಮಿನೀಂ ತದಾ ॥ ೩೩ ॥**
**ಮನೋರಮಾಂ ಭಾನುಮತೀಂ ವಿಶಾಲಾಂ ಬಾಹುದಾಮಥ ।**
**ದಕ್ಷಃ ಪ್ರಾದಾನ್ಮಹಾಭಾಗಶ್ಚತಸ್ರೋಽರಿಷ್ಟನೇಮಿನೇ ॥ ೩೪ ॥**
**ಸ ಕೃಶಾಶ್ವಾಯ ಚ ಪ್ರಾದಾತ್ಸುಪ್ರಭಾಂ ಚ ತಥಾ ಜಯಾಂ ।**
**ಅರುಂಧತೀಂ ವಸುಂ ಜಾಮಿಂ ಲಂಬಾಂ ಭಾನುಮಿರಾವತೀಂ ॥ ೩೫ ॥**
**ಸಂಕಲ್ಪಾಂ ಚ ಮೂಹೂರ್ತಾಂ ಚ ಸಾಧ್ಯಾಂ ವಿಶ್ವಾಂ ತಥೈವ ಚ ।**
**ದದೌ ಸ ದಶ ಧರ್ಮಾಯ ಮಹಾತ್ಮಾ ಲೋಕವಿಶ್ರುತಃ ॥ ೩೬ ॥**

ಶಬಲಾಶ್ವ (ಹರ್ಯಶ್ವ) ರು ನಷ್ಟಹೊಂದಿದ ಬಳಿಕ ದಕ್ಷನು ದುಃಖಿತನಾಗಿ ಪತ್ನಿಯಾದ ಅಸಿಕ್ನೀದೇವಿಯಲ್ಲಿ ರೂಪಶಾಲಿಗಳಾದ ಮಹಾತಪಸ್ವಿನಿಯರಾದ ಅರವತ್ತುಮಂದಿ ಹೆಣ್ಣುಮಕ್ಕಳನ್ನು ಪಡೆದನು

೩೨ ಅವರಲ್ಲಿ ಬಾಹುಪುತ್ರನಿಗೆ ಇಬ್ಬರು ಅರಿಷ್ಟನೇಮಿಗೆ ನಾಲ್ಕುಮಂದಿ ಕೃಶಾಶ್ವನಿಗೆ ಇಬ್ಬರು ಧರ್ಮನಿಗೆ ಹತ್ತುಮಂದಿ ಕಶ್ಯಪರಿಗೆ ಹದಿನಾಲ್ಕುಮಂದಿ ಚಂದ್ರನಿಗೆ ಇಪ್ಪತ್ತೆಂಟುಮಂದಿ ಹೀಗೆ ಮೇಲೆ ಬರೆದಮೇರೆಗೆ ಅರವತ್ತುಮಂದಿಗಳನ್ನು ಮದುವೆಮಾಡಿಕೊಟ್ಟನು

೩೩-೪೦ ಈ ಅರವತ್ತುಮಂದಿ ಹೆಣ್ಣುಮಕ್ಕಳ ವಿವರವನ್ನೂ ಹೆಸರನ್ನೂ ಈಗ ಹೇಳುತ್ತೇನೆ —ಬಾಹುಪುತ್ರನಿಗೆ ಮದುವೆಯಾದವರು ಸುಪ್ರಭಾ-ಭಾಮಿನೀ ಅರಿಷ್ಟನೇಮಿಯನ್ನು ಮದುವೆಯಾದ ಹೆಣ್ಣುಮಕ್ಕಳ ಹೆಸರುಗಳು -ಮನೋರಮಾ-ಭಾನುಮತೀ-ವಿಶಾಲಾ-ಬಾಹುದಾ ಕೃಶಾಶ್ವನ ಹೆಂಡತಿಯರುಗಳು —ಸುಪ್ರಭಾ-ಜಯ ಧರ್ಮನನ್ನು ಲಗ್ನವಾದ ಹತ್ತುಮಂದಿ ಹೆಣ್ಣುಮಕ್ಕಳ ಹೆಸರುಗಳೇನೆಂದರೆ. ಅರುಂಧತಿ-ವಸು-ಜಾಮಿ-ಲಂಬಾ–ಭಾನು–ಇರಾವತಿ-ಸಂಕಲ್ಪಾ-ಮುಹೂರ್ತಾ- ಸಾಧ್ಯಾ-ವಿಶ್ವಾ-ಇವರುಗಳು. ಕಶ್ಯಪನನ್ನು ಮದುವೆಯಾದ ಹದಿನಾಲ್ಕುಮಂದಿ ಕನ್ಯೆಯರ ಹೆಸರುಗಳು -ಅದಿತಿ-ದಿತಿ-ದನು-ಕಾಲಾ-ದನಾಯು-ಸಿಂಹಿಕಾ-ಮುನಿ-ಕದ್ರು-ಕ್ರೋಧಾ-

**ಅದಿತಿರ್ದಿತಿರ್ದನುಃ ಕಾಲಾದನಾಯುಃ ಸಿಂಹಿಕಾ ಮುನಿಃ ।**
**ಕದ್ರೂಃ ಕ್ರೋಧಾ ಇರಾ ಪ್ರಾಧಾ ವಿನತಾ ಸುರಭಿಃ ಖಗಾ ॥ ೩೭ ॥**

**ಚತುರ್ದಶೈತಾಃ ಪ್ರದದೌ ಕಶ್ಯಪಾಯ ಪ್ರಜಾಪತಿಃ ।**
**ನಾಮಭಿಃ ಪೂರ್ವ ವಿಖ್ಯಾತಾಃ ಕೃತ್ತಿಕಾದ್ಯಾಸ್ತಥೈವ ಚ ॥ ೩೮ ॥**

**ದದೌ ನಕ್ಷತ್ರಯೋಗಿನ್ಯ ಅಷ್ಟಾವಿಂಶತಿಮಿಂದವೇ ।**
**ದೇವತಾಸ್ತ್ವಭಿಮಾನಿನ್ಯೋ ನಕ್ಷತ್ರಾಣಾಂ ಮಹೀಪತೇ ॥ ೩೯ ॥**

**ಏತಾವದುಕ್ತಂ ತವ ದಕ್ಷವಂಶ-**
**ಮೃಕ್ಷೋದ್ಭವಂ ಚಾಪ್ಯಥ ಭೂಮಿಪಾಲ ।**
**ಅತಃ ಪರಂ ಕಿಂ ಕಥಯಾಮಿ ತುಭ್ಯಂ**
**ತನ್ಮೇ ವದಸ್ವಾಯತಲೋಹಿತಾಕ್ಷ ॥ ೪೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ**
**ಮಾರ್ಕಂಡೇಯ ವಜ್ರ ಸಂವಾದೇ ದಕ್ಷವಂಶವರ್ಣನಂ ನಾಮ**
**ದಶೋತ್ತರಶತತಮೋಽಧ್ಯಾಯಃ**

ಇರಾ-ಪ್ರಾಧಾ-ವಿನತಾ-ಸುರಭಿ-ಖಗಾ-ಇವರೇ ಕಶ್ಯಪರ ಪತ್ನಿಯರು ಇನ್ನು ಇಪ್ಪತ್ತೆಂಟುಮಂದಿಯ ಹೆಸರುಗಳೇನೆಂದರೆ —ಕೃತ್ತಿಕೆಯೇ ಆದಿಯಾದ ಇಪ್ಪತ್ತೆಂಟು ಮಂದಿ ನಕ್ಷತ್ರಯೋಗಿನಿಯರು ಈ ಇಪ್ಪತ್ತೆಂಟುಮಂದಿ ಯೋಗಿನಿಯರನ್ನು ಚಂದ್ರನಿಗೆ ದಕ್ಷನು ಲಗ್ನ ಮಾಡಿಕೊಟ್ಟನು ಇವರು ನಕ್ಷತ್ರಾಭಿಮಾನಿದೇವತೆಗಳು ಒಟ್ಟು ೬೦ ಜನರ ಹೆಸರುಗಳೂ ಆದುವು ಎಲೈ ವಜ್ರನರಪತಿಯೇ ! ಇಲ್ಲಿಯವರಿವಿಗೆ ನಿನಗ ದಕ್ಷವಂಶಚರಿತ್ರೆಯನ್ನೂ ನಕ್ಷತ್ರೋತ್ಪತ್ತಿಗಳನ್ನೂ ಹೇಳಿಯಾಯಿತು ಇನ್ನು ಮುಂದೆ ನೀನು ಏನನ್ನು ಕೇಳಬೇಕೆಂದಿರುವೆಯೋ ಕೇಳು ಹೇಳುತ್ತೇನೆಂದು ವಜ್ರರಾಜನಿಗೆ ಮಾರ್ಕಂಡೇಯನು ಹೇಳಿದನಂಬಲ್ಲಿಗೆ

ಇಲ್ಲಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ದಕ್ಷವಂಶರೂಪ
ವರ್ಣನೆಯೆಂಬ ಒಂದನೂರ ಹತ್ತನೆಯ ಅಧ್ಯಾಯವು
ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಾದಶೋತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಮಹಾದೇವೇನ ಋಷಯಃ ಶಪ್ತಾಃ ಸ್ವಾಯಂಭುವೇಽಂತರ ।**
**ತೇಷಾಂ ವೈವಸ್ವತೇ ಪ್ರಾಪ್ತೇ ಸಂಭವಂ ಮಮ ಕೀರ್ತಯ ॥ ೧ ॥**

**ದಾಕ್ಷಾಯಣೀನಾಂ ಚ ತಥಾ ಪ್ರಜಾಃ ಕೀರ್ತಯ ಮೇ ವಿಭೋ ।**
**ಋಷೀಣಾಂ ಚ ತಥಾ ವಂಶಂ ಭೃಗುವಂಶವಿವರ್ಧನ ॥ ೨ ॥**

॥ ಮಾರ್ಕಂಡೇಯ ಉವಾಚ ॥

**ಮನ್ವಂತರೇಸ್ಮಿಕ್ಸಂಪ್ರಾಪ್ತೆ ರಾಜನ್ವೈವಸ್ವತೇ ಪುರಾ ।**
**ಅಶ್ವಮೇಧೇ ತು ವಿತತೇ ಬ್ರಹ್ಮಣಃ ಪರಮೇಷ್ಠಿನಃ ॥ ೩ ॥**

---

### ಒಂದುನೂರ ಹನ್ನೊಂದನೆಯ ಅಧ್ಯಾಯ

೧-೨ ವಜ್ರಮಹಾರಾಜನು ಹೇಳುತ್ತಾನೆ —ಎಲೈ ಮಾರ್ಕಂಡೇಯನೇ ! ಈಶ್ವರನಿಂದ ಋಷಿಗಳು ಸ್ವಾಯಂಭುವಮನ್ವಂತರದಲ್ಲಿ ದಕ್ಷಯಜ್ಞಕಾಲದಲ್ಲಿ ಶಾಪ ಹೊಂದಿದರೆಂದು ಹೇಳಿದೆಯಷ್ಟೆ. ಅವರು ಈ ವೈವಸ್ವತ ಮನ್ವಂತರದಲ್ಲಿ ಹೇಗೆ ಉತ್ಪನ್ನರಾದರು ? ದಕ್ಷನ ಹೆಣ್ಣುಮಕ್ಕಳ ವಂಶದ ಪ್ರಜಗಳನ್ನೂ ಆಯಾ ಋಷಿಗಳ ವಂಶವನ್ನೂ ನನ್ನೊಡನೆ ವಿಸ್ತಾರವಾಗಿ ನಿರೂಪಿಸು

೩-೬ ಮಾರ್ಕಂಡೇಯನು ಹೇಳುತ್ತಾನೆ —ಕೇಳೈ ವಜ್ರನರಪತಿಯೇ ! ಪೂರ್ವದಲ್ಲಿ ಈ ವೈವಸ್ವತಮನ್ವಂತರವು ಆರಂಭವಾದ ಸಮಯದಲ್ಲಿ ದಕ್ಷಬ್ರಹ್ಮನ ಯಜ್ಞದಲ್ಲಿ ಶರ್ವನಿಂದ ಶಾಪಹೊಂದಿದ ಋಷಿಗಳೆಲ್ಲರೂ ಆಯಾ ಜನ್ಮದ ದೇಹವನ್ನು ಯೋಗಬಲದಿಂದ ತಾವುತಾವೇ ಅನಾಯಾಸದಿಂದ ಬಿಟ್ಟವರಾಗಿ ಪುನಃ ಶರೀರವನ್ನು

**ಮಹಾದೇವಸ್ಯ ಶಾಪೇನ ತ್ಯಕ್ತ್ವಾ ದೇಹಾನ್ಸ್ವಯಂ ತತಃ ।**
**ಋಷಯಸ್ತು ಸಮುದ್ಭೂತಾ ದ್ರುತೇ ಶುಕ್ರೇ ಪ್ರಜೇಪ್ಸಯಾ ॥ ೪ ॥**

**ದೇವಾನಾಂ ಮಾತರೋ ದೃಷ್ಟ್ವಾ ದೇವಪತ್ನೀಸ್ತಥೈವ ಚ ।**
**ಸ್ಕನ್ನಂ ಶುಕ್ರಂ ಮಹಾರಾಜ ಬ್ರಹ್ಮಣಃ ಪರಮೇಷ್ಠಿನಃ ॥ ೫ ॥**

**ತಜ್ಜುಹಾವ ತತೋ ಬ್ರಹ್ಮಾ ತತೋ ಜಾತೋ ಹುತಾಶನಾತ್ ।**
**ತತೋ ಜಾತೋ ಮಹಾತೇಜಾ ಭೃಗುಃ ಸ ತಪಸಾಂ ನಿಧಿಃ ॥ ೬ ॥**

**ಅಂಗಾರೇಷ್ವಂಗಿರಾಜಾತಸ್ಸಭಾರ್ಯೋಽತ್ರಿಸ್ತಥೈವ ಚ ।**
**ಮರೀಚಿಭ್ಯೋ ಮರೀಚಿಶ್ಚ ತತೋ ಜಾತೋ ಮಹಾತಪಾಃ ॥ ೭ ॥**

**ವಸುಮಧ್ಯಾತ್ಸಮುತ್ಪನ್ನೋ ವಸಿಷ್ಠಶ್ಚ ಮಹಾತಪಾಃ ।**
**ಭೃಗುಃ ಪುಲೋಮ್ನಶ್ಚ ಸುತಾಂ ದಿವ್ಯಾಂ ಭಾರ್ಯಾಮವಿಂದತ ॥ ೮ ॥**

**ಯಸ್ಯಾಂ ತಸ್ಯ ಸುತಾ ಜಾತಾ ದೇವಾ ದ್ವಾದಶ ಯಾಜ್ಞಿಕಾಃ ।**
**ಭುವನೋ ಭಾವನಶ್ಚೈವ ಸುಜನ್ಯಃ ಸುಜನಸ್ತಥಾ ॥ ೯ ॥**

ಧಾರಣೆಮಾಡಿದರು ಆಕ್ರಮವನ್ನು ತಿಳಿಸುವೆನು ಕೇಳು ದೇವಮಾತೃಗಳನ್ನೂ ದೇವಪತ್ನಿಯರುಗಳನ್ನೂ ನೋಡಿದೊಡನೆ ಪರಮೇಷ್ಠಿಯಾದ ಬ್ರಹ್ಮನ ವೀರ್ಯವು ಕೆಳಕ್ಕೆ ಜಾರಿಬಿತ್ತು ಆ ವೀರ್ಯದಿಂದಲೇ ಪ್ರಜೋತ್ಪತ್ತಿ ಮಾಡಬೇಕೆಂದಾಶಿಸಿ ಆ ವೀರ್ಯವನ್ನು ಅಗ್ನಿಯಲ್ಲಿ ಹೋಮಮಾಡಿದನು ಆಗ ಯಜ್ಞಕುಂಡದಿಂದ ಭೃಗುಋಷಿಗಳು ಜನಿಸಿ ಈಚೆಗೆ ಬಂದರು

೭ ಅಗ್ನಿಯ ಕೆಂಡದಿಂದ ಅಂಗಿರಾಋಷಿಗಳೂ ಭಾರ್ಯಾಸಹಿತರಾದ ಅತ್ರಿ ಋಷಿಗಳೂ ಹುಟ್ಟಿದರು ಆ ಅಗ್ನಿಕಿರಣಗಳಿಂದ ಮರೀಚಿ ಋಷಿಗಳು ಹುಟ್ಟಿದರು ವಸುಮಧ್ಯದಿಂದ ಹುಟ್ಟಿದವರೇ ಮಹಾತಪಸ್ವಿಗಳಾದ ವಸಿಷ್ಠರು

೮-೧೧ ಮೊದಲು ಅಗ್ನಿಜ್ವಾಲೆಯಿಂದ ಜನಿಸಿದ ಭೃಗುಋಷಿಗಳು ಪುಲೋಮನ ಮಗಳಾದ ದಿವ್ಯೆಯೆಂಬ ಕನ್ಯೆಯನ್ನು ಲಗ್ನಮಾಡಿಕೊಂಡು ಆ ಕೆಯಲ್ಲಿ ಹನ್ನೆರಡುಮಂದಿ ಮಕ್ಕಳನ್ನುತ್ಪಾದನೆ ಮಾಡಿದರು ಆ ಹನ್ನೆರಡು ಜನರಿಗೆ ಯಜ್ಞದೇವತೆಗಳೆಂದು ಹೆಸರಾಯಿತು ಅವರುಗಳ ಹೆಸರುಗಳೇನೆಂದರೆ -ಭುವನ-ಭಾವನ-

**ಕ್ರತುಃ ಸ್ರುವಶ್ಚ ಪೂಗಶ್ಚ ವ್ಯಾಜಶ್ಚ ವೃಶ್ನುಜಶ್ಚ ಹ ।**
**ಪ್ರಸವಶ್ಚಾವ್ಯಯಶ್ಚೈವ-ದಕ್ಷೋ ದ್ವಾದಶಮಸ್ತಥಾ ॥ ೧೦ ॥**

**ಇತ್ಯೇತೇ ಭೃಗವೋ ನಾಮ ದೇವಾ ದ್ವಾದಶಕೀರ್ತಿತಾಃ ।**
**ಪೌಲೋಮ್ಯಜನಯದ್ವಿಪ್ರಂ ದೇವಾನಾಂ ತು ಕನೀಯಸಂ ॥ ೧೧ ॥**

**ಚ್ಯವನಂ ತು ಮಹಾಭಾಗಮಾತ್ಮವಂತಂ ತಥಾಽಪ್ಯಸೌ ।**
**ಆತ್ಮವಾನಾತ್ಮಜಸ್ತ್ವೌರ್ವೋಜಮದಗ್ನಿಸ್ತದಾತ್ಮಜಃ ॥ ೧೨ ॥**

**ಔರ್ವೋ ಗೋತ್ರಕರಸ್ತಸ್ಯ ಭಾರ್ಗವಾನಾಂ ಮಹಾತ್ಮನಾಂ ।**
**ತತ್ರ ಗೋತ್ರಕರಾನ್ವಕ್ಷ್ಯೇ ಭೃಗೋರ್ದೀಪ್ತೌಜಸಸ್ತ್ವಹಂ ॥ ೧೩ ॥**

**ಭೃಗುಶ್ಚ ಚ್ಯವನಶ್ಚೈವ ಆತ್ಮವಾಂಸ್ತು ತಥೈವ ಚ ।**
**ಔರ್ವಶ್ಚ ಜಮದಗ್ನಿಶ್ಚ ವಾತ್ಸ್ಯೋ ದಂಭಿರ್ನಡಾಯನಃ ॥ ೧೪ ॥**

**ನಾಗಾಯನೋ ವಹೇತಿಶ್ಚ ಪೇಲುಶ್ಚೈರಾನುಶಾತಿಕಃ ।**
**ಶೌನಕಾಯನಜೀವಂತಿ ಕೌಯೋಧಃ ಪಾರ್ಷತಿಸ್ತಥಾ ॥ ೧೫ ॥**

**ವೈಹೀನರಿರ್ವಿರೂಪಾಕ್ಷೋ ರೋಹಿಣ್ಯಾಯನಿರೇವ ಚ ।**
**ವೈಶ್ವಾನರಿರುಪಾರೀರುರ್ವಶಾವರ್ಣಿರ್ವೃಕಾಸ್ವಕಃ ॥ ೧೬ ॥**

---

ಸುಜನ್ಯ-ಸುಜನ-ಕ್ರತು-ಸ್ರುವ-ಪೂಗ-ವ್ಯಾಜ-ವಶ್ನುಜ-ಪ್ರಸವ-ಅವ್ಯಯ-ದಕ್ಷನೇ ಹನ್ನೆರಡನೆಯ ಮಗನು

೧೧-೧೨ ಮೇಲೆ ಹೇಳಿದ ಹನ್ನೆರಡು ಜನವೂ ದ್ವಾದಶ ಭೃಗುದೇವತೆಗಳೆಂದ ಸುಪ್ರಸಿದ್ಧರಾದರು ಬಳಿಕ ಪೌಲೋಮಿ (ದಿವ್ಯೆ) ಯು ಚ್ಯವನನನ್ನು ಚಿಕ್ಕಮಗನನ್ನಾಗಿ ಪಡೆದಳು. ಚ್ಯವನನ ಮಗ ಅತ್ಮವಂತ. ಆತ್ಮವಂತನ ಮಗ ಔರ್ವ ಔರ್ವನ ಮಗನೇ ಜಮದಗ್ನಿ ಮಹರ್ಷಿ

೧೩. ಮಹಾತ್ಮರಾದ ಭಾರ್ಗವಋಷಿಗಳ ಗೋತ್ರಕರನೇ ಔರ್ವನು ಆ ಗೋತ್ರದಲ್ಲಿನ ಗೋತ್ರಕಾರರಾರೆಂಬುದನ್ನು ಈಗ ಹೇಳುತ್ತೇನೆ ಇವರೆಲ್ಲಾ ಭಾರ್ಗವ ಗೋತ್ರಜರೆಂದು ತಿಳಿಯಬೇಕು

೧೪-೨೪ ಇದರ ಕೆಳಗೆ ಬರದಿರುವ ಮಹರ್ಷಿಗಳು ಭೃಗುವಿನಿಂದಾರಂಭಿಸಿ ಅವರವರ ಮಕ್ಕಳೆಂದು(ಗೋತ್ರಕಾರರೆಂದು)ತಿಳಿದುಕೊಳ್ಳಬೇಕು ಭೃಗು-ಅವನ ಮಗ

ವಿಷ್ಣುಃ ಪೌರೇಯುಸಾಲಾಕಿತೌಲಿಕೇನಾಂತಭಾಗಿನಃ ।
ವೃತಭಾಗೇಯಮರ್ಕಂಡಜಿಹಿತೋದೀಧಿನಸ್ತಥಾ ॥ ೧೭ ॥

ಮುಂಡೂಮಾಂಡವ್ಯಮುಂಡೂಕಸ್ಸೇನಸಾಂಕೃತಿನಸ್ತಥಾ ।
ಸ್ಥಾಲಿಪಿಂಡಿಃ ಶಿಲಾಪತ್ತಿಃ ಶಾರ್ಕರಾಕ್ಷಿಸ್ತಥೈವ ಚ ॥ ೧೮ ॥

ವೃಕಾಯಣೋ ದೇವಮತಿಃ ಸಾಂಡರಾಯಿಃ ಸಿಗಾಲವಃ ।
ಸಕೃತ್ಪ್ರಾತಕಿಃ ಕಾಯಿರ್ಯಾಜ್ಞೋ ದಾರ್ಭಿಸ್ತ್ರಿಲಾಯನಿಃ ॥ ೧೯ ॥

ಗಾರ್ಗ್ಯಾಯಣೋ ಹ್ವಾಯನಶ್ಚ ಋಷಿರ್ಗೇಹಾಯನಸ್ತಥಾ ।
ಗೋಪ್ಯಾಯನೋ ಬಾಹ್ಯಾಯನೋ ವೈಶಂಪಾಯನ ಏವ ಚ ॥ ೨೦ ॥

ವೈಕರ್ಣೇಯಃ ಶಾರ್ಙ್ಗರವೋ ಯಾಜ್ಞೇಯಿರ್ಭ್ರಾಷ್ಟಕಾಯನಃ ।
ಲಲಾಟಿರ್ಲಕುಟಿಶ್ಚೈವ ಲಾಕ್ಷಾಯಃ ಪರಿಮುಂಡಲಃ ॥ ೨೧ ॥

ಉಲುಂಬಿಃ ಶ್ಯಲುಕಿಃ ಕೋಷ್ಟಿಸ್ತಥಾನ್ಯಃ ಪೈಪ್ಪಲಾಯನಿಃ ।
ಸತ್ಯಾಯನಿರ್ಮಾಲಯನಿಃ ಕೋಟಾಲಿಃ ಕೌಚಹಸ್ತಿಕಃ ॥ ೨೨ ॥

---

ಜ್ಯನನನೆಂಬ ಋಷಿಮುಕೊಕ್ಕಬೇಕು. ಔರ್ವ-ಜಮದಗ್ನಿ-ವಾತ್ಸ್ಯ-ದಂಭೀನಹಾಯನ-ಸಾಗಾಯನ-ಪಮೇತಿ-ಸ್ಯಲು-ಜೈರ-ಅನುಶಾತಿಕ ಶೌನಕಾಯನ-ಜೀವಂತಿ-ಕೌಯೋಧ-ಪಾರ್ಷತಿ-ವೈಹೀನರಿ-ವಿರೂಪಾಕ್ಷ-ರೋಹಿಣ್ಯಾಯನಿ ವೈಶ್ವಾನರಿ-ಉಪಾರೀರು - - ವಶಾವರ್ಣ-ವೃಕಾನ್ವಕ-ವಿಷ್ಣು-ಪೌರೇಯ-ವಾಲಾಕಿ-ತೌಲೀಕೇನ-ಅಂತಭಾಗೀ- ವೃತ ಭಾಗೇಯ-ಮರ್ಕಂಡ-ಜಿಹಿತ-ದೀಧಿನ-ಮುಂಡು-ಮಾಂಡವ್ಯ-ಮುಂಡೂಕ-ಸ್ಸೇನ-ಸಾಂಕೃತಿ-ಸ್ಥಾಲೀಪಿಂಡಿ-ಶಿಲಾಪತ್ತಿ-ಶಾರ್ಕರಾಕ್ಷಿ-ವೃಕಾಯಣ-ದೇವಮತಿ ಸಾಂ ಡ ರಾ ಯಿ-ಸಿಗಾಲು ಸಕೃತ್ಪ ಜಾತಕಿ ಕಾಯಿ ಯಾಜ್ಞ ದರ್ಭ,ತ್ರಿಲಾಯನಿ,ಗಾರ್ಗ್ಯಾಯಣ,ಹ್ವಾಯನ-ಗೇಹಾಯನ ಋಷಿ-ಗೋಪ್ಯಾಯನ-ಬಾಹ್ಯಾಯನ-ವೈಶಂಪಾಯನ-ವೈಕರ್ಣೇಯಿ-ಶಾರ್ಜರವ-ಯಾಜ್ಞೇಯಿ-ಭ್ರಾಷ್ಟಕಾಯನ- ಲಲಾಪಿ-ಲಕುಟಿ - ಲಾಕ್ಷಾಯ-ಪರಿಮುಂಡಲ-ಉಲುಂಬಿ-ಶೈಲುಕಿ-ಕೋಷ್ಟಿ-ವೈಪ್ಪಲಾಯನಿ-ಸತ್ಯಾಯನಿ-ಮಾಲಾಯನಿ - ಕೌಟಲಿ-ಕೌಚಹಸ್ತಿಕ-ಶೌಕ್ತಿ-ಶೌಕ್ಲಿ-ಕೌಚಾಕ್ಷಿ-ಕೌಸಿ-ಚಾಂದ್ರಮಸಿ-ಜೈಕಪಿಷ್ಠಿ-ಜಿ ಹ್ವ ಶೂನ್ಯ-ವಾಜ್ಯಲೇಧಿ-ಕವೈರಿ-ಶಾರದ್ವತಿಕರ-ಸಿತ್ಯ-ರೋಮಾಕ್ಷಿ-ಚಲವೈರಿ-ನಾಗಾಯನಿ-ಅನುಮತಿ-ಪೌರ್ಣಭಾಗ-ಅಧಿಕಾಶಿಕೃತ್-ಈರೀತಿ ಹೇಳಿದ ಋಷಿಗಳೆಲ್ಲರೂ ಪ್ರತಿಯೊಬ್ಬರೂ

**ಶೌಕ್ರಿಃ ಶೌಕ್ಲಿಃ ಸ ಕೌಚಾಕ್ಷಿಃ ಕೌಸಿಶ್ಚಾಂದ್ರಮಸಿಸ್ತಥಾ ।**
**ಜೈಕಹಿಹ್ಮಿರ್ಜಿಹ್ವಶೂನ್ಯವಾಜ್ಯಲೇಢಿಕವೈರಿಣಃ ॥ ೨೩ ॥**

**ಶಾರದ್ವತಿಕರೇನಿತ್ಯಾ ಲೊಷ್ಯಾಕ್ಷಿಶ್ಚಲವೈರಿಣಃ ।**
**ನಾಗಾಯನಿಶ್ಚಾನುಮತಿಃ ಪೌರ್ಣಭಾಗಧಿಕಾಶಿಕೃತ್ ॥ ೨೪ ॥**

**ಸಮಾಮಾಖ್ಯಾತಾಸ್ತಥೈತೇಷಾಂ ಪಂಚ ತು ಪ್ರವರಾ ಮತಾಃ ।**
**ಭೃಗುಶ್ಚ ಚ್ಯವನಶ್ಚೈವ ಆತ್ಮವಾನಸ್ತಥೈವ ಚ ॥ ೨೫ ॥**

**ಔರ್ವಶ್ಚ ಜಮದಗ್ನಿಶ್ಚ ಪಂಚೈತೇ ಪ್ರವರಾ ಮತಾಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೨೬ ॥**

**ವಾಜ್ಯಾವಾಜ್ಯೋ ನ ವೈವಾಹ್ಯಾ ಜ್ಞೇಯಾಸ್ತ್ರಿಪ್ರವರಾಸ್ತು ತೇ ।**
**ಭೃಗುಶ್ಚ ಜಮದಗ್ನಿಶ್ಚ ತಥೈವೋರ್ವಶ್ಚ ಪಾರ್ಥಿವ ॥ ೨೭ ॥**

---

ಪಂಚಾರ್ಷೇಯರುಗಳೆಂದು ತಿಳಿದುಕೊಳ್ಳಬೇಕು ಒಂದು ಋಷಿಯಿಂದಾರಂಭಿಸಿ ಐದುಜನರ ಹೆಸರುಗಳನ್ನು ಕೂಡಿಸಿ ಹೇಳುವುದಕ್ಕೆ ಪಂಚಾರ್ಷೇಯರೆಂದು ಹೆಸರು ಉದಾಹರಣೆ — ಭಾರ್ಗವಚ್ಯವನ-ಆತ್ಮವಾನ-ಔರ್ವ-ಜಾಮದಗ್ನ್ಯ-ಪಂಚಾರ್ಷೇಯ-ಪ್ರವರಾನ್ವಿತ-ಜಾಮದಗ್ನ್ಯಮಸ ಗೋತ್ರಃ ಅಥವಾ ಭಾರ್ಗವನ ಗೋತ್ರಃ, ಚ್ಯವನಸ ಗೋತ್ರಃ ಎಂದಾದರೂ ಹೇಳುವರು ಆಯಾಯ ಗೋತ್ರದವರು ಆಯಾಯ ಪ್ರವರಗಳನ್ನು ಹೇಳಿಕೊಳ್ಳಬೇಕು

೨೫-೨೬ ಮೇಲೆ ಉದಾಹರಣೆಗೋಸ್ಕರ ಜಾಮದಗ್ನ್ಯಮಸಗೋತ್ರದವರು ಪಂಚಾರ್ಷೇಯರೆಂದು ತಿಳಿಸಿ ಪ್ರವರವನ್ನು ಬರೆದೇ ಇರುತ್ತೇವೆ ಅದೇ ಅರ್ಥವೇ ಈ ಶ್ಲೋಕದಲ್ಲಿ ಉಕ್ತವಾಗಿದೆ ಮೇಲೆ ಹೇಳಿದ ಋಷಿಗೋತ್ರದದರು ಒಂದು ಗೋತ್ರದವರು ಮತ್ತೊಂದು ಗೋತ್ರದವರನ್ನು (ಹೆಣ್ಣನ್ನು) ಮದುವೆಮಾಡಿಕೊಳ್ಳ ಕೂಡದು ಇದಕ್ಕೇ ಸಗೋತ್ರವಿವಾಹವು ನಿಷಿದ್ಧವೆಂದು ಧರ್ಮಶಾಸ್ತ್ರಕಾರರು ಸಾರಿ ಸಾರಿ ಹೇಳಿರುತ್ತಾರೆ ಅಂದರೆ ಅಣ್ಣತಂಗೀರ ವಾವೆಯಾಗುವುದರಿಂದ ನಿಷೇಧಿಸಿರುತ್ತಾರೆ ಋಷಿಗಳು ಸೃಷ್ಟಿಕಾಲದಲ್ಲಿ ಮಾಡಿದ ಈ ಸನಾತನಧರ್ಮವು ಸರ್ವರಿಂದಲೂ ಉಪಾದೇಯವು

೨೭ ವಾಜ್ಯಾವಾಜ್ಯ ಋಷಿಗಳೂ ಭೃಗು, ಜಮದಗ್ನಿ, ಔರ್ವ ಈ ಋಷಿಗಳೂ ತ್ರಿಯಾರ್ಷೇಯ ಪ್ರವರಾದುದರಿಂದ ಪರಸ್ಪರ ಕನ್ಯಾದಾನ ಪ್ರತಿಗ್ರಹಗಳನ್ನು ಮಾಡ ಕೂಡದು. ಜಮದಗ್ನಿಗೋತ್ರದಲ್ಲಿ ತ್ರಿಯಾರ್ಷೇಯರೂ ಪಂಚಾರ್ಷೇಯರೂ ಇರುವ ಸಂಗತಿ ಬ್ರಾಹ್ಮಣ ಸಾಮಾನ್ಯಕ್ಕೆ ತಿಳಿದೇ ಇರಬೇಕಾದುದು ಮುಖ್ಯಕರ್ತವ್ಯ

**ಅತಃ ಪರಂ ಪ್ರವಕ್ಷ್ಯಾಮಿ ಶೃಣು ಚಾನ್ಯಾನ್ಭೃಗೂದ್ವಹಾನ್ ।**
**ಜಮದಗ್ನಿರ್ವಿದಶ್ಚೈವ ಪೌಲಸ್ತ್ಯೋ ವೈಜಭೃತ್ತಥಾ ॥ ೨೮ ॥**

**ಪ್ರಾಚೀನಯೋಗ್ಯೋ ಭಗವಾನ್ನೃಷಿಃ ಕ್ರೌಂಚಾಯನಸ್ತಥಾ ।**
**ಋಷಿಭಯಶ್ಚಾಜಾತಶ್ಚ ಏಕಾಯನವಟಾಯನೌ ॥ ೨೯ ॥**

**ಆತ್ರೇಯೋಽಭಿಮತಶ್ಚೈಷಾಂ ಸರ್ವೇಷಾಂ ಪ್ರವರಃ ಸ್ಮೃತಃ ।**
**ಭೃಗುಶ್ಚ ಚ್ಯವನಶ್ಚೈವ ಹ್ಯಾತ್ಮವಾನಸ್ತಥೈವ ಚ ॥ ೩೦ ॥**

**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।**
**ಋಗ್ವೇದೀಯಾ ಮಾರ್ಗಪಥೇ ಗ್ರಾಮಾಯಣಿರಥಾಯನಿಃ ॥ ೩೧ ॥**

**ಆಪಸ್ತಂಬಿಸ್ತಥಾ ತಾಲ್ವಿರ್ನೈಕಟಿಃ ಕಂರಿರೇವ ಚ ।**
**ಆರ್ಷ್ಟಿಷೇಣೋ ಗಾರ್ದಭಿಶ್ಚ ಕಾರ್ದ್ದಮಾಯಣಿರೇವ ಚ ॥ ೩೨ ॥**

**ಅಶ್ವಾಯನಿರಥಾನ್ಯಾಪಿ ಪಂಚಾರ್ಷೇಯಾಃ ಪ್ರಕೀರ್ತಿತಾಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೩೩ ॥**

**ಯೋಽವಿರಾಧೋ ವೀತಹವ್ಯೋ ನಾಸಾಥಶ್ಚಂಡವೋದಮಃ ।**
**ಜೀವಂತ್ಯಾಯನಿಮೌದ್ಗಶ್ಚ ವಿಲಿಶ್ಚೈವ ಖಲಿಸ್ತಥಾ ॥ ೩೪ ॥**

---

೨೮-೨೯ ಇನ್ನು ಮುಂದೆ ಭೃಗೂದ್ವಹರಾದ ಇನ್ನು ಕೆಲವು ಋಷಿಗಳ ಹೆಸರನ್ನು ಹೇಳುತ್ತೇವೆ —ಜಮದಗ್ನಿ-ವಿದ-ಪೌಲಸ್ತ್ಯ-ವೈಜಭೃತ-ಪ್ರಾಚೀನಯೋಗ್ಯ-ಕ್ರೌಂಚಾಯನ-ಋಷಿಭಯ-ಅಜಾತ-ಏಕಾಯನ-ವಟಾಯನ- ಇವರುಗಳೆಲ್ಲರಿಗೂ ಆತ್ರೇಯರ ಅಭಿಮತರಾದವರು ಎಲ್ಲರ ಪ್ರವರವೂ ಹೀಗೆಯೇ ಎಂದು ತಿಳಿದುಕೊಳ್ಳಬೇಕು

೩೦ ಭೃಗು, ಚ್ಯವನ, ಆತ್ಮವಾನ, ಇವರು ತ್ರಿಯಾರ್ಷೇಯರು ಇವರುಗಳಲ್ಲಿ ಪರಸ್ಪರ ವಿವಾಹವು ನಿಷಿದ್ಧವು

೩೧-೩೩ ಮಾರ್ಗಪಥದೋ್ ಋಗ್ವೇದಿಗಳೂ (ಅಶ್ವಲಾಯನರು) ಗ್ರಾಮಾಯನಿ, ರಥಾಯನಿ, ಆಪಸ್ತಂಭಿ, ತಾಲ್ವಿ ನೇಕರಿ, ಕಂರಿ, ಆರ್ಷ್ಟಿಷೇಣ, ಗಾರ್ಧಭಿ, ಕಾರ್ದಮಾಯಣಿ, ಅಶ್ವಾಯನಿ ಇವರುಗಳೆಲ್ಲಾ ಪಂಚಾರ್ಷೇಯರೆಂದು ಹೇಳಿಸಿಕೊಳ್ಳುತ್ತಾರೆ ಇವರು ಪರಸ್ಪರ ಅವೈವಾಹ್ಯ (ಹೆಣ್ಣುತಂದು ಕೊಟ್ಟು ಮಾಡದವರು) ಋಷಿಗಳೆಂದು ತಿಳಿದುಕೊಳ್ಳಬೇಕು

೩೪-೩೬ ಯೋಽವಿರಾಧ, ವೀತಹವ್ಯ, ನಾಸಾಥ, ಚಂಡವ, ದಮ, ಜೀವಂತ್ಯಾಯನಿ, ಮೌದ್ಗ, ವಿಲಿ, ಖಲಿ, ಭಾವಿಲಿ, ಭಾಗವಿತ್ತಿ, ಕೌಶಾಂಬೇಯಿ, ಗೌರಕ್ಷಿತ್ರಿ,

ಭಾವಿಲಿರ್ಭಾವವಿತ್ತಿಶ್ಚ ಕೌಶಾಂಬೇಯಿನ್ಯಕಾಶ್ಚಕಿಃ ।
ಪಾಲೇಯಿಃ ಸಮುದಾ ಗೇಯಿರ್ಗೌರಕ್ಷಿತಿರಥೈವ ಚ ॥ ೩೫ ॥

ಗೌರ್ಗಜಿಶ್ಚ ಸಪಂಶಾಲಸ್ತಥಾ ಪೌಷ್ಣಾಯನೋ ಮುನಿಃ ।
ರೋಮಾದಶ್ಚ ತಥೈತೇಷಾಮಾರ್ಷೇಯಾಃ ಪ್ರವರಾ ಮತಾಃ ॥ ೩೬ ॥

ಭೃಗುಶ್ಚ ವೀತಹವ್ಯಶ್ಚ ತಥಾ ಚೈವ ಸದೇವಸಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೩೭ ॥

ಖಾಲಾಯನಿಃ ಶಾಕಟಾಕ್ಷ್ಯೋ ಮೈತ್ರೇಯಃ ಸಾತಯಸ್ತಥಾ ।
ದ್ರೋಣಾಯನೋ ನೌಕಾಯನ ಆಶಿಷಿಶ್ಚ ಪಿಕಾಯನಿಃ ॥ ೩೮ ॥

ಹೋಮಜಿಹ್ವಸ್ತಥೈತೇಷಾಮಾರ್ಷೇಯಾಃ ಪ್ರವರಾ ಮತಾಃ ।
ಭೃಗುಶ್ಚೈವಾಥ ವಧ್ಯ್ಯಶ್ವೋ ದಿವೋದಾಸಸ್ತಥೈವ ಚ ॥ ೩೯ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಸಕಾಯನೋ ಯಜ್ಞಪತಿರ್ಮಧ್ಯಗಂಧಿಸ್ತಥೈವ ಚ ॥ ೪೦ ॥

ಪ್ರತ್ಯೂಹಶ್ಚ ತಥಾ ಶ್ರೌಭ್ಯಕ್ಷೋಽಕ್ಷಿರ್ವೈಕಾದಶಾಯನಿಃ ।
ತಥಾ ಗೃತ್ಸಮದೋ ರಾಜನ್ಶುನಕಶ್ಚ ಮಹಾನೃಷಿಃ ॥ ೪೧ ॥

ಗೌರ್ಗಜಿ, ಸಪಂಶಾಲ, ಪೌಷ್ಣಾಯನ, ರೋಮಾದ ಇವರುಗಳ ಪ್ರವರವೂ ಆರ್ಷೇಯ ಪ್ರವರವೆಂದು ಪ್ರಸಿದ್ಧವಾಗಿರುವುದು

೩೭ ಭೃಗು, ವೀತಹವ್ಯ, ಸವೇವಸ ಋಷಿಗಳು ಪರಸ್ಪರ ಅವೈವಾಹ್ಯ ಗೋತ್ರಜರೆಂದು ತಿಳಿಯಬೇಕು

೩೮ ಖಾಲಾಯನಿ, ಶಾಕಟಾಕ್ಷ್ಯ, ಮೈತ್ರೇಯ, ಸಾತಯ, ದ್ರೋಣಾಯನ, ನೌಕಾಯನ, ಆಶಿಷಿ, ಪಿಕಾಯನಿ, ಹೋಮಜಿಹ್ವ ಇವರುಗಳೆಲ್ಲರೂ ಆರ್ಷೇಯಪ್ರವರವೆಂದು ತಿಳಿಯಬೇಕು

೩೯ ಭೃಗು, ವಧ್ಯ್ಯಶ್ವ, ದಿವೋದಾಸ ಈ ಋಷಿಗೋತ್ರಜರೆಲ್ಲರೂ ಪರಸ್ಪರ ವಿವಾಹಸಂಬಂಧವನ್ನು ಬೆಳೆಸಕೂಡದೆಂದು ಹೇಳಿರುತ್ತಾರೆ

೪೦-೪೧. ಸಕಾಯನ, ಯಜ್ಞಪತಿ, ಮಧ್ಯಗಂಧಿ, ಪ್ರತ್ಯೂಹ, ಶ್ರೌಭ್ಯಕ್ಷ, ಅಕ್ಷಿ, ಏಕಾದಶಾಯನಿ, ಗೃತ್ಸಮದ, ಶುನಕ ಇವರುಗಳೆಲ್ಲಾ ದ್ವ್ಯಾರ್ಷೇಯರು (ಎರಡು ಋಷಿ ಪ್ರವರವುಳ್ಳವರು)

ಪ್ರವರಸ್ತು ಯಥೋಕ್ತಾನಾಂ ದ್ವ್ಯಾರ್ಷೇಯಾಃ ಪರಿಕೀರ್ತಿತಾಃ ।
ಭೃಗುರ್ಗೃತ್ಸಮದಶ್ಚೈವ ದ್ವಾವೇತೌ ಪರಿಕೀರ್ತಿತೌ ॥
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥ ೪೨ ॥

ಏತೇ ತವೋಕ್ತಾ ಭೃಗುವಂಶಜಾತಾ
ಮಹಾನುಭಾವಾ ನೃಪ ಗೋತ್ರಕಾರಾಃ ।
ಯೇಷಾಂ ಚ ನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ವಿಜಹಾತಿ ಜಂತುಃ ॥ ೪೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಭೃಗುವಂಶಾನುಕೀರ್ತನಂ
ನಾಮೈಕಾದಶೋತ್ತರಶತತಮೋಽಧ್ಯಾಯಃ

---

೪೨ ಭೃಗು, ಗೃತ್ಸಮದರೆಂಬಿಬ್ಬರು ಋಷಿಗಳೂ ದ್ವ್ಯಾರ್ಷೇಯರೆಂದು ಹೇಳಲ್ಪಟ್ಟಿರುವರು ಪರಸ್ಪರ ವಿವಾಹ ಸಂಬಂಧ ಮಾಡಲನರ್ಹರೆಂದು ಹೇಳಲ್ಪಟ್ಟಿದೆ

೪೩ ಎಲೈ ವಜ್ರಭೂಪಾಲಕನೇ ! ಇದುವರಿಗೆ ಭೃಗುವಂಶೋತ್ಪನ್ನರಾದ ಮಹಾನುಭಾವರಾದ ಋಷಿಗಳ ವಿಚಾರವನ್ನು ನಿನಗೆ ತಿಳಿಸಿದೆನು ಇವರೆಲ್ಲರೂ ಗೋತ್ರಕಾರರೆಂದು ತಿಳಿದುಕೋ ಯಾವ ಪ್ರಾಣಿಯು ಈ ಋಷಿಜನರ ಹೆಸರುಗಳನ್ನು ಉಚ್ಚಾರಣೆಮಾಡುತ್ತದೆಯೋ ಅಂತಹ ಪ್ರಾಣಿಯು ಸಕಲಪಾಪಗಳನ್ನೂ ಕಳೆದುಕೊಳ್ಳಲು ಸಂದೇಹವಿಲ್ಲ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಭೃಗುವಂಶಾನುಕೀರ್ತನೆ
ಯೆಂಬ ಹೆಸರಿನ ಒಂದು ನೂರಹನ್ನೊಂದನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವಾದಶೋತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಮರೀಚಿತನಯಾ ರಾಜನ್ಸುರೂಪಾ ನಾಮ ವಿಶ್ರುತಾ ।
ಭಾರ್ಯಾ ಹ್ಯಂಗಿರಸೋ ದಿವ್ಯಾ ಯಸ್ಯಾಃ ಪುತ್ರಾ ದಶಸ್ಮೃತಾಃ ॥ ೧ ॥

ಆತ್ಮಾ ಹ್ಯಾಯುರ್ಮನುರ್ದಕ್ಷೋ ಮದಃ ಪ್ರಾಣಸ್ತಥೈವ ಚ ।
ಹವಿಷ್ಮಾಂಶ್ಚಾಗವಿಷ್ಟಶ್ಚ ಋತಃ ಸತ್ಯಶ್ಚ ತೇ ದಶ ॥ ೨ ॥

ಇತ್ಯೇತೇಽಂಗಿರಸೋ ನಾಮ ದೇವಾ ವೈ ಸೋಮಪೀಥಿನಃ ।
ಸುರೂಪಾ ಜನಯಾಮಾಸ ಋಷೀನ್ಸರ್ವೇಶ್ವರಾನಿಮಾನ್ ॥ ೩ ॥

## ಒಂದು ನೂರ ಹನ್ನೆರಡನೆಯ ಅಧ್ಯಾಯ.

೧ ಮಾರ್ಕಂಡೇಯನು ಹೇಳುತ್ತಾನೆ -- ಮರೀಚಿಬ್ರಹ್ಮನ ಮಗಳಾದ ಸುರೂಪಾದೇವಿಯು ಅಂಗಿರಾಋಷಿಯನ್ನು ಮದುವೆಯಾಗಿ ಹತ್ತುಜನ ಮಕ್ಕಳನ್ನು ಹೆತ್ತಳು.

೨ ಆ ಹತ್ತುಜನ ಮಕ್ಕಳ ಹೆಸರೇನೆಂದರೆ —ಆತ್ಮಾ, ಆಯು, ಮನು, ದಕ್ಷ, ಮದ, ಪ್ರಾಣ, ಹವಿಷ್ಮಂತ, ಆಗವಿಷ್ಟ, ಋತ, ಸತ್ಯ

೩ ಮೇಲೆ ಬರೆದ ಹತ್ತುಜನ ಮಕ್ಕಳೂ ಆಂಗಿರಸರ ಹತ್ತುಮಂದಿ ಸೋಮ ಪಾನಮಾಡಿದ ದೇವತೆಗಳಾದರು ಆ ಬಳಿಕ ಸುರೂಪಾದೇವಿಯು ಮುಂದೆ ಬರೆದ ಸರ್ವೇಶ್ವರರೆನಿಸಿದ ಋಷಿಗಳನ್ನು ಪ್ರಸುವಿಸಿದಳು

ಬೃಹಸ್ಪತಿಂ ಗೌತಮಂ ಚ ಸಂವರ್ತಂ ಚ ಮಹಾಋಷಿಂ ।
ಅಯಸ್ಯಂ ವಾಸುದೇವಂ ಚ ಉತಥ್ಯಮುಶಿಜಂ ತಥಾ ॥ ೪ ॥

ಇತ್ಯೇತೇ ಋಷಯಃ ಸರ್ವೇ ಗೋತ್ರಕಾರಾಃ ಪ್ರಕೀರ್ತಿತಾಃ ।
ತೇಷಾಂ ಗೋತ್ರಸಮುತ್ಪನ್ನಾನ್ಗೋತ್ರಕಾರಾನ್ನಿಬೋಧ ಮೇ ॥ ೫ ॥

ಉತತ್ಥ್ಯೋ ಗೌತಮಶ್ಚೈವ ತೈಲಜೋಽಭಿಜಿತಿಸ್ತಥಾ ।
ಬಾದ್ಧಿನೈಷಿಃ ಸಲೌಗಾಕ್ಷಿಃ ಕ್ಷೋರೋಜೋ ಟಾಂಕಿರೇವ ಚ ॥ ೬ ॥

ರಾಹೋಹಕಿಃ ಸೌಪುರಿಶ್ಚ ಕೈರತಿಃ ಶಾರಿಲೌಮಕಃ ।
ಪೌಣ್ಯಜಿರ್ಭಾನುಭಾವಶ್ಚ ಋಷಿಶ್ಚೈವ ಬಡೋಬಡಃ ॥ ೭ ॥

ಕರಾಟಕಶ್ಚ ಮಾಚೇಯಃ ಉಪಬಿಂದುರಥೈಷಿಣಃ ।
ರೌಹಿಣ್ಯಾಯನಿಜಾರ್ಗಾಲಿಃ ಕ್ರೋಷ್ಟಾ ಚೈವಾರುಣಾಯನೀಃ ॥ ೮ ॥

ಸೋಮೋ ಡಾಯನಿಕಾಶೇಕಃ ಕೌಟಲ್ಯಃ ಪಾರ್ಥಿವಸ್ತಥಾ ।
ರೋಹಿಣ್ಯಾಯನಿರೌವಾರ್ಯುಮೂರ್ಲಯೋಮಾಂಶುರೇವ ಚ ॥ ೯ ॥

ತಥಾ ಚ ಗುಲ್ಮಯೋಮಾಂಶುಸ್ತಂಭಯೋಷಾಂಶುರೇವ ಚ ।
ಕಾಮಾಕ್ಷಿಃ ಪುಷ್ಪಧಶ್ಚೈವ ಕ್ಷೀರಕಾರಂಡಿರೇವ ಚ ॥ ೧೦ ॥

---

೪-೫ ಬೃಹಸ್ಪತಿ, ಗೌತಮ, ಸಂವರ್ತ, ಅಯಸ್ಯ ವಾಮದೇವ, ಉತಥ್ಯ, ಉಶಿಜರೆಂಬ ಈ ಸಕಲ ಋಷಿಗಳೂ ಗೋತ್ರಕಾರರೆಂದು ಹೇಳಿಸಿಕೊಂಡರು ಅವರುಗಳ ಗೋತ್ರದಲ್ಲಿ ಹುಟ್ಟಿದ ಋಷಿಗಳ ಹೆಸರುಗಳನ್ನು ವಿವರಿಸಲಾಗುವುದು

೬-೧೨ ಉತಥ್ಯ, ಗೌತಮ, ತೈಲಜ, ಅಭಿಜಿತಿ, ಬಾದ್ದಿನೈಷಿ, ಸತೌಗಾಕ್ಷಿ, ಕ್ಷೋರೋಜ, ಟಾಂಕಿ, ರಾಹೋಹಕಿ, ಸೌಪುರಿ, ಕೈರತಿ, ಶಾರಿಲೋಮಕಿ, ಪೌಣ್ಯಜಿ, ಭಾನುಭಾವ, ಬಡೋಬಡ, ಕರಾಟಕ, ಮಾಚೇಯ, ಉಪಬಿಂದು, ರಥೈಷಿಣಿ, ರೌಹಿಣ್ಯಾಯನಿ, ಜಾರ್ಗಾಲಿ, ಕ್ರೋಷ್ಟಾ, ಸೋಮ, ಡಾಯನಿಕ, ಅಶೋಕ, ಕೌಟಿಲ್ಯ, ಪಾರ್ಥಿವ, ರೋಹಿಣ್ಯಾಯನಿ, ತಾವಾಯು, (ತೌವಾತು) ಮೂಲಯೋಮಾಂಶು, ಗುಲ್ಮಯೋಮಾಂಶು, ಸ್ತಂಭಯೋಷಾಂಶು, ಕಾಮಾಕ್ಷಿ, ಪುಷ್ಪಧ, ಕ್ಷೀರಕಾರಂಡಿ, ಕ್ಷಪಾದಿ,

ಕ್ಷಪಾದಿಶ್ಚ ಕರೇರಿಶ್ಚ ಪಾರಿಕಾರೀರಿರೇವ ಚ ।
ಇತ್ಯಾರ್ಷೇಯಾಸ್ತು ಸರ್ವೇಷಾಂ ಪ್ರವರಾಃ ಪರಿಕೀರ್ತಿತಾಃ ॥ ೧೧ ॥

ಆಂಗಿರಾಶ್ಚ ತಥೋತಥ್ಯೋ ಮುನಿರ್ದೀರ್ಘತಪಾಸ್ತಥಾ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥ ೧೨ ॥

ಉಷ್ಟಾಜಿಷ್ಟ ಅಯಸ್ಯಶ್ಚ ಕಕ್ಷೀವಾನ್ಗೌತಮಸ್ತಥಾ ।
ಆರ್ಷೇಯಾಃ ಪ್ರವರಾಶ್ಚೈವ ತೇಷಾಂ ಚ ಪ್ರವರಾನ್ಶ್ರುಣು ॥ ೧೩ ॥

ಅಂಗಿರಶ್ಚ ತತೋತಶ್ಚ ಉಷಾಜಿಶ್ಚ ಮಹಾನೃಷಿಃ ।
ಸೌಮಸ್ತಂಭಿರ್ವಿತಂಭಿಶ್ಚ ಸಾಲುಭಿರ್ವಾಲುಭಿಸ್ತಥಾ ॥ ೧೪ ॥

ಭಾರದ್ವಾಜಿಃ ಸೌಬುದ್ಧಿಶ್ಚ ಮೋಘೀ ದೇವಮತಿಸ್ತಥಾ ।
ಆದ್ರ್ಯಾಯಣಸಾವಿಷ್ಟ್ಯೌ ಹ್ಯಗ್ನಿವೇಶಃ ಶಲಾಥಲಿಃ ॥ ೧೫ ॥

ವಾಲಿಶೇಯನಿಶ್ಚೈಕೇಯೀ ವಾರಾಹಿರ್ವಾಕಲಿಸ್ತಥಾ ।
ಶಾಟಿಶ್ಚ ಋಷಿವರ್ಣಶ್ಚ ಪ್ರಾವಾಹಿಶ್ಚಾಶ್ವಲಾಯನಿಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೧೬ ॥

ಕರೇರಿ, ವಾರಿಕಾರೀರಿ—ಈರೀತಿ ಇವರೆಲ್ಲರೂ ಆರ್ಷೇಯ ಪ್ರವರರೆನಿಸಿಕೊಳ್ಳುವರು ಅಂಗಿರಾ, ಉತಥ್ಯ, ದೀರ್ಘತಪಾ ಈ ಋಷಿತ್ರಯರೂ ಸಹ ಪರಸ್ಪರವಾಗಿ ಅವೈವಾಹ್ಯರೆಂದು ಕೀರ್ತಿಸಲಾಗಿದೆ

೧೩ ಉಷ್ಟಾಜಿಷ್ಟ, ಅಯಸ್ಯ, ಕಕ್ಷೀವಂತ, ಗೌತಮರೆಂಬ ಋಷಿಗಳೆಲ್ಲರೂ ಆರ್ಷೇಯ ಪ್ರವರರೆನಿಸಿಕೊಳ್ಳುವರು ಅವರುಗಳ ಪ್ರವರಗಳನ್ನು ಹೇಳುತ್ತೇನೆ ಕೇಳು

೧೪-೧೬ ಈ ಕೆಳಗೆ ಬರೆದ ಋಷಿವಂಶದವರು ಪರಸ್ಪರ ವಿವಾಹಸಂಬಂಧವನ್ನು ಬಳೆಸಕೂಡದು ಅವರುಗಳ ಹೆಸರೇನೆಂದರೆ -ಅಂಗಿರಸ, ತತೋತ, ಉಶಿಜ, ಸಾಮಸ್ತಂಭಿ, ವಿತಂಭಿ, ಸಾಲುಭಿ, ವಾಲುಭಿ, ಭಾರದ್ವಾಜಿ, ಸೌಬುದ್ಧಿ, ಮೋಯ, ದೇವಮತಿ, ಆದ್ಯಯಾಯಣ, ಸಾವಿಷ್ಟಿ, ಅಗ್ನಿವೇಶ, ಶಲಾಥಲಿ, ವಾಲಿಶೇಯನಿ, ಕೈಶೇಯಿಾ. ವಾರಾಹೀ, ವಾಕಲಿ, ಶಾಟಿ, ಋಷಿವರ್ಣ, ಪ್ರಾವಾಹಿ, ಆಶ್ವಲಾಯನಿ, ಇವರುಗಳು

ಕಾವಾಕಿಶ್ಚ ಸಭಾಕಾಯಿಸ್ತಥಾ ಚಾಂಶುಮತಿಃ ಪ್ರಭುಃ ।
ಭಾವೀಕ್ಕೈಯೂರಿನೌಭುಲ್ವಿ ಪುಷ್ಪಾನ್ವೇಷೀ ತಥೈವ ಚ ॥ ೧೭ ॥

ಬಾಧ್ಯೋ ವಿಚ್ಚಿಂದಿಶಾಟೇಕಿಃ ಖಾರಗ್ರೀವಿಸ್ತಥೈವ ಚ ।
ದೇವಾದ್ಯಾರಿರ್ದೆವಸ್ಥಾನಿರ್ಹರಿಕರ್ಣಿಃ ಸಭ್ರಾಂಗಿಕಃ ॥ ೧೮ ॥

ಧೌವಾಯಿಃ ಸಾಭಿಮುಗ್ರಿಶ್ಚ ತಥಾ ಗೋಮುದಗಂಧಿಕಃ ।
ಮಾತ್ಸ್ಯಕ್ವಾಥಃ ಸಾಲಹರೋ ಹ್ಯಲೋ ಹಾರಸ್ತಥೈವ ಚ ॥ ೧೯ ॥

ಗಾಗೌದಯಿಃ ಕೌತಪತಿಃ ಕೌರುಕ್ಷೇತ್ರಿಸ್ತಥೈವ ಚ ।
ತಾಟಾಕಿರ್ಜೈರ್ನ್ಯದ್ರೋಣಿಶ್ಚ ಜೈಬಾಲಾಯನಿರೇವ ಚ ॥ ೨೦ ॥

ಆಪಸ್ತಥರ್ಮ್ಯೋಜಪೃಷ್ಟಿಃ ಕಾರ್ಷ್ಣಪಿಂಗಲಿರೇವ ಚ ।
ಪೌಲಶ್ಚೈವ ಮಹಾತೇಜಾಃ ಶಂಕಲಾಯನಿರೇವ ಚ ॥ ೨೧ ॥

ಆರ್ಷೇಯೋ ನಾಮತಶ್ಚೈಷಾಂ ಸರ್ವೇಷಾಂ ಪ್ರವರೋ ನೃಪ ।
ಅಂಗಿರಾಃ ಪ್ರವರಸ್ತೇಷಾಂ ದ್ವಿತೀಯಶ್ಚ ಬೃಹಸ್ಪತಿಃ ॥ ೨೨ ॥

ತೃತೀಯಶ್ಚ ಭರದ್ವಾಜಃ ಪ್ರವರಾಃ ಪರಿಕೀರ್ತಿತಾಃ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥ ೨೩ ॥

---

೧೭-೨೩ ಆಂಗಿರಸ ಪ್ರವರದ ಋಷಿಗಳ ಹೆಸರುಗಳನ್ನು ಬರೆಯುತ್ತೇವೆ — ಕಾವಾಕಿ, ಸಭಾಕಾಯಿ, ಅಂಶುಮತಿ, ಪ್ರಭು, ಭಾವೀ, ಕೈಯೂರ ನೈಭುಲ್ವಿ, ಪುಷ್ಪಾನ್ವೇಷೀ, ಬಾಧ್ಯ, ವಿಚ್ಚಿಂದಿ, ಶಾಟೇಕಿ, ಖಾರಗ್ರೀವಿ, ದೇವಾಗರಿ, ದೇವಸ್ಥಾನಿ, ಹರಿಕರ್ಣಿ, ಸಭ್ರಾಂಗಿಕ, ಧೌವಾಯಿ, ಸಾಭಿಮುಗ್ರಿ, ಗೋಮುದ, ಗಂಧಿಕ, ಮಾತ್ಸ್ಯಕ್ವಾಥ, ಸಾಲಹರ, ಹ್ಯಲ, ಹಾರ, ಗಾಗೌದಯಿ, ಕಾತಪತಿ, ಕೌರುಕ್ಷೇತ್ರಿ, ತಾಟಾಕಿ, ಜೈನ್ಯ, ದ್ರೋಣಿ, ಜೈಬಾಲಾಯನಿ, ಆಪಸ್ತಥರ್ಮ, ಓಜಪೃಷ್ಟಿ, ಕಾರ್ಷ್ಣಪಿಂಗಲಿ, ಪೌಲ, ಮಹಾತೇಜ, ಶಂಕಾಯನಿ ಇವರೆಲ್ಲರೂ ಆರ್ಷೇಯರೆನಿಸಿಕೊಳ್ಳುವರು ಎಲ್ಲರ ಪ್ರವರವೂ ಒಂದೇ ಇವರೆಲ್ಲರೂ ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ತ್ರಿಯಾರ್ಷೇಯರೆಂದು ಹೇಳಿಕೊಂಡೇ ಪ್ರವರೋಚ್ಚಾರಣೆ ಮಾಡಬೇಕು ಮೇಲೆ ಹೇಳಿದ ಗೋತ್ರಕಾರರೆಲ್ಲರೂ ಭಾರದ್ವಜರ ಗೋತ್ರದವರಾದ್ದರಿಂದ ಪರಸ್ಪರ ವಿವಾಹಕರ್ಮವನ್ನು ಮಾಡಕೂಡದು

ಕಾಣಾಯನಾಃ ಕೌಪಯವಾಸ್ತಥಾ ವಾತ್ಸ್ಯಪರಾಯಣಾಃ ।
ಭ್ರಾಷ್ಟ್ರಕೃದ್ ಭ್ರಾಷ್ಟ್ರವಿಂದೀ ಚ ನೇಂದ್ರಾಲಿಸ್ಸಯಕಾಯನಃ ॥ ೨೪ ॥

ಕ್ರೋಡಿಃ ಶಾಕ್ರೀ ಚ ಕಾರ್ಷೀ ಚ ತಾಲಕೃನ್ಮಾಥುರಾವತಾಃ ।
ಲಾಪಕೃದ್ಭಾಲವಿಪ್ರೇಷೋ ಮರ್ಕಟಿಃ ಪೈಲುಕಾಯನಃ ॥ ೨೫ ॥

ಮೃತ್ಸಂಶಶ್ಚ ತಥಾ ಚಾಕ್ರೀ ಗರ್ಗಃ ಶ್ಯಾಮಾಯನಿಸ್ತಥಾ ।
ವಾಲಲಿಃ ಸಾಹರಿಶ್ಚೈವ ಪಂಚಾರ್ಷೇಯಾಃ ಪ್ರಕೀರ್ತಿತಾಃ ॥ ೨೬ ॥

ಅಂಗಿರಾಸ್ತು ಮಹಾತೇಜಾ ದೇವಾಚಾರ್ಯೋ ಬೃಹಸ್ಪತಿಃ ।
ಭರದ್ವಾಜಸ್ತಥಾ ಗರ್ಗಶ್ಚೈತ್ಯಶ್ಚ ಭಗವಾನ್ಋಷಿಃ ॥ ೨೭ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಕಪೀತರಃ ಸ್ವಸ್ತಿತರೋ ದರ್ಭಃ ಶಕ್ತಿಃ ಪತಂಜಲಿಃ ॥ ೨೮ ॥

ಭೂಯಸೀ ಜಲಸಂಧಿಶ್ಚ ಬಿಂದುದಂಡಿಃ ಕುಶೀತಕಿಃ ।
ಭೃಗುಸ್ತು ರಾಜಕೇಶೀ ಚ ಶೌಂಬಾಟಿಃ ಶಾಂಶಿಬಿಸ್ತಥಾ ॥ ೨೯ ॥

---

೨೪-೨೭ ಇವರ ಕೆಳಗೆ ಬರೆದ ಮಹರ್ಷಿಗಳೆಲ್ಲರೂ ಪಂಚಾರ್ಷೇಯರೆಂದು ಹೇಳಿಸಿಕೊಳ್ಳುವರು ಈಗ ಅವರ ಹೆಸರೆಲ್ಲವನ್ನೂ ಬರೆದು ಕೊನೆಗೆ ಪ್ರವರವನ್ನು ಬರೆಯುತ್ತೇವೆ

ಕಾಣಾಯನ, ಕೌಪಯನ, ವತ್ಸ್ಯತರಾಯಣ, ಭ್ರಾಷ್ಟ್ರಕೃತ್, ಭಾಷ್ಟ್ರವಿಂದಿ, ನೇಂದ್ರಾಲೀ, ನಮಕಾಯನ, ಕ್ರೋಡಿ, ಶಾಕ್ರೀ, ಕಾರ್ಷೀ, ತಾಲಕೃತ್, ಮಥುರಾವತ, ಲಾವಕೃತ್, ಭಾಲವಿಪ್ರೇಷ, ಮರ್ಕಟ, ಪೈಲುಕಾಯನ, ಮತ್ಸಂಸ, ಚಾಕ್ರೀ, ಗರ್ಗ, ಶ್ಯಾಮಾಯನಿ, ವಾಲಲಿ, ಸಾಹರಿ—ಈ ಪಂಚಾರ್ಷೇಯರ ಪ್ರವರವನ್ನು ನೋಡಿರಿ ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ, ಗರ್ಗ, ಚೈತ್ಯ, ಪಂಚಾರ್ಷೇಯ, ಪ್ರವರಾನ್ವಿತ, ಚೈತ್ಯ ಅಥವಾ ಗರ್ಗಗೋತ್ರಃ ಇತ್ಯಾದಿ ಈ ಋಷಿಕನ್ಯೆಯರು ಪರಸ್ಪರ ವಿವಾಹಾರ್ಹರಲ್ಲ

೨೮–೩೧ ಈ ಕೆಳಗೆ ಬರೆದ ಋಷಿಗಳೆಲ್ಲರೂ ತ್ರಿಯಾರ್ಷೇಯರು, ಸಂಬಂಧವನ್ನು ಪರಸ್ಪರ ಮಾಡತಕ್ಕವರಲ್ಲವೆಂದು ತಿಳಿಯಬೇಕು — ಕಪೀತರ, ಸ್ವಸ್ತಿತರ,

**ಶಾಲಿಶ್ಚ ಶಕಲಃ ಕಾಣ್ವೋ ಮುನಿಃ ಕೇರೀರಯಿಸ್ತಥಾ ।**
**ಕಾದ್ಯೋ ವಾಧ್ಯಾಯನಿಶ್ಚೈವ ಸಾವಸ್ಯಾಯನಿರೇವ ಚ ॥ ೩೦ ॥**

**ತ್ರ್ಯಾರ್ಷೇಯೋ ಸಾಮುತಸ್ತೇಷಾಂ ಪ್ರವರೋ ಭೂಮಿಪೋತ್ತಮ ।**
**ಅಂಗಿರಾದಮುಪಾಹ್ಯಶ್ಚ ತಥಾ ಚೈವಾಪ್ಯತತ್ಕ್ಷಯಃ ॥ ೩೧ ॥**

**ಪರಸ್ಪರಮನ್ವೈವಾಹ್ಯಾಃ ಸರ್ವೇ ಏವ ಪ್ರಕೀರ್ತಿತಾಃ ।**
**ಸಕೃತಿಶ್ಚ ತ್ರಿಮಾರ್ಷ್ಟಿಶ್ಚ ಶೇಧೂಃ ಶೈಪವಿರೇವ ಚ ॥ ೩೨ ॥**

**ತಂಡಿಶ್ಚ ಜಾನಕಿಶ್ಚೈವ ತೈಲಕಾದ್ರವ್ಯ ಏವ ಚ ।**
**ನಾರಾಯಣಿಶ್ಚಾರ್ಷಭಿಶ್ಚ ಲೌಕ್ಷಿರ್ಗಾರ್ಗಿರ್ಹಲಸ್ತಥಾ ॥ ೩೩ ॥**

**ಗಾಲವಿಶ್ಚಾಪಿ ತ್ರ್ಯಾರ್ಷೇಯಃ ಸರ್ವೇಷಾಂ ಪ್ರವರಾ ಮತಾಃ ।**
**ಅಂಗಿರಾಃ ಸಂಸ್ಕೃತಿಶ್ಚೈವ ಗೌರಿವೀತಿಸ್ತಥೈವ ಚ ॥ ೩೪ ॥**

**ಪರಸ್ಪರಮನ್ವೈವಾಹ್ಯಾಃ ಋಷಯಃ ಪರಿಕೀರ್ತಿತಾಃ ।**
**ಕಾಣ್ವಾಯನೋ ಹರಿತಕಃ ಕೌತ್ಸ್ಯಃ ಪೌಂಗ್ಯಸ್ತಥೈವ ಚ ॥ ೩೫ ॥**

**ಹಸ್ತಿದನೋ ವಾತ್ಸ್ಯಮಾಲಿರ್ಮಾಂದ್ರಿರ್ಗಾಲಿರ್ಗವೇರಣಃ ।**
**ಭೀಮವೇಶಃ ಶಾಂಖ್ಯದರ್ಭಿಃ ಸರ್ವೇ ತ್ರಿಪ್ರವರಾ ಮತಾಃ ॥ ೩೬ ॥**

---

ದರ್ಭಿ, ಶಕ್ತಿ, ಪತಂಜಲಿ, ಭೂಯಸಿ, ಜಲಸಂಧಿ, ಬಿಂದು, ದಂತಿ, ಕುಶೀತಕಿ, ಭೃಗು, ರಾಜಕೇಶೀ, ಶಾರಿಬಾಟಿ, ಶಾಂಶಿಭಿ, ಶಾಲಿ, ಶಕಲ, ಕಾಣ್ವ, ಕೇರೀರಯಿ, ಕಾದ್ಯ, ವಾಧ್ಯಾಯನಿ, ಸಾವಸ್ಯಾಯನಿ

೩೨-೩೪ ಸಕೃತಿ, ತ್ರಿಮಾರ್ಷ್ಟಿ, ಶೇಧು, ಶೈಪವಿ, ತಂಡಿ, ಜಾನಕಿ, ತೈಲಕಾ, ದ್ರವ್ಯ, ನಾರಾಯಣಿ, ಆರ್ಷಭಿ, ಲೌಕ್ಷಿ, ಗಾರ್ಗಿ, ಹಲ, ಗಾಲವಿ, ಇವರುಗಳು ತ್ರಿಯಾರ್ಷೇಯ ಪ್ರವರರು ಅಂಗಿರ, ಸಂಕೃತಿ, ಗೌರವೀತಿ, ಈ ಋಷಿಗಳ ಗೋತ್ರಜರು ಪರಸ್ಪರ ಅನ್ವೈವಾಹ್ಯರೆಂದು ತಿಳಿಯಬೇಕು

೩೫-೩೬ ಕಾಣ್ವಾಯನ, ಹಾರಿತಕ, ಕೌತ್ಸ್ಯ, ಪೌಂಗ್ಯ, ಹಸ್ತಿದನ, ವಾತ್ಸ್ಯಮಾಲಿ, ಮಾಂದ್ರಿ, ಗಾಲಿ, ಗವೇರಣ, ಭೀಮವೇಶ, ಶಾಂಖ್ಯದರ್ಭಿ—ಇವರೆಲ್ಲರೂ ತ್ರಿಯಾರ್ಷೇಯ ಪ್ರವರರು ಅಂಗಿರರೂ, ಸುರೂಪರೂ, ರಥೀತರರೂ,

ಅಂಗಿರಸಾಸ್ತು ತಮುಸ್ಯುಶ್ಚ ಪುರುಕುತ್ಸಸ್ತಥೈವ ಚ ।
ಕುತ್ಸಾಃ ಕುತ್ಸೈರವೈವಾಹ್ಯಾ ಏವಮಾಹುಃ ಪುರಾತನಾಃ ॥ ೩೭ ॥

ರಥೀತರಾಣಾಂ ಪ್ರವರಾಃ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।
ಅಂಗಿರಾಶ್ಚ ಸುರೂಪಾಶ್ಚ ತಥೈವ ಚ ರಥೀತರಃ ॥ ೩೮ ॥

ರಥೀತರಾ ಅವೈವಾಹ್ಯಾ ನಿತರಾಂ ಚ ರಥೀತರ್ಯೈಃ ।
ವಿಷ್ಣುವೃದ್ಧಿಃ ಶಗೇ ಮದ್ರಿರ್ಜತ್ರಿಣಕಿಕತ್ರ್ಯಣಸ್ತಥಾ ॥ ೩೯ ॥

ಪ್ರಡಿವಶ್ಚ ಮಹಾತೇಜಾಸ್ತಥಾ ಚೈವ ಪರಾಯಣಃ ।
ತ್ರ್ಯಾರ್ಷೇಯಶ್ಚ ಮತಸ್ತೇಷಾಂ ಸರ್ವೇಷಾಂ ಪ್ರವರಃ ಶುಭಃ ॥ ೪೦ ॥

ಅಂಗಿರಾಶ್ಚ ವಿರೂಪಾಶ್ಚ ಪೃಥುದಶ್ವಸ್ತಥೈವ ಚ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥ ೪೧ ॥

ಸಾಂತ್ಯಮುಗ್ಧಿರ್ಮಹಾತೇಜಾ ಹಿರಣ್ಯಸ್ತಂಬಿಮುದ್ಗಲೌ ।
ತ್ರ್ಯಾರ್ಷೇಯೋಽಪಿ ಮತಶ್ಚೈಷಾಂ ಸರ್ವೇಷಾಂ ಪ್ರವರೋ ನೃಪ ॥ ೪೨ ॥

ಅಂಗಿರಾಗೃತ್ಸದಶ್ವಶ್ಚ ಮುದ್ಗಲಶ್ಚ ಮಹಾತಪಾಃ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥ ೪೩ ॥

---

ತ್ರಿಯಾರ್ಷೆಯರು ಮೇಲೆಕಂಡ ಇವರೆಲ್ಲರೂ ರಥೀತರರೊಡನೆ ಅವೈವಾಹ್ಯರು ಮತ್ತು ಅಂಗಿರ, ತಮುಸ್ಯು, ಪುರುಕುತ್ಸ, ಕುತ್ಸ ಇವರೆಲ್ಲರೂ ಅವೈವಾಹ್ಯರೆಂದು ಪ್ರಾಚೀನರು ಹೇಳಿರುವರು

೩೯-೪೧ ವಿಷ್ಣುವೃದ್ಧಿ, ಶಗೇ, ಮದ್ರಿ, ಜತ್ರಿಕಾತ್ರಿ, ಪ್ರಡಿವ, ಪರಾಯಣ, ಇವರು ತ್ರ್ಯಾರ್ಷೇಯರು ಅಂಗಿರಾ, ವಿರೂಪಾ, ಪೃಥುದಶ್ವಗೋತ್ರದವರು ಪರಸ್ಪರ ವಿವಾಹಸಂಬಂಧ ಮಾಡಕೂಡದು

೪೨-೪೩ ಸಾಂತ್ಯಮುಗ್ಧಿ, ಹಿರಣ್ಯಸ್ತಂಬಿ, ಮುದ್ಗಲ, ಇವರು ತ್ರ್ಯಾರ್ಷೇಯ ಪ್ರವರರು. ಅಂಗಿರಸ, ಗೃತ್ಸದಶ್ವ, ಮುದ್ಗಲ ಗೋತ್ರದವರು ಪರಸ್ಪರ ವಿವಾಹ ಸಂಬಂಧವನ್ನು ಬೆಳೆಸಕೂಡದು

ಮೋಹಜಿಹ್ವೋ ದೇವಜಿಹ್ವೋ ಅಗ್ನಿಜಿಹ್ವವಿರಾಡಯಃ ।
ಅಪಾನೇಯಸ್ತ್ರ್ಯಗ್ರಯಶ್ಚ ವೈರಿಣ್ಯಾಸ್ತ್ರಾವಿಮೌದ್ಗಲಾಃ ॥ ೪೪ ॥

ತ್ರ್ಯಾರ್ಷೇಯೋಽಪಿ ಮತಶ್ಚೈಷಾಂ ಸರ್ವೇಷಾಂ ಪ್ರವರಃ ಶುಭಃ ।
ಆಂಗಿರಾಶ್ಚೈವ ತಾವಿಶ್ವ ಮೌದ್ಗಲ್ಯಶ್ಚ ಮಹಾತಪಾಃ ॥ ೪೫ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಉರುಂಡಶ್ಚ ಭುರುಂಡಶ್ಚ ತೃತೀಯಃ ಶಾಕಟಾಯನಃ ॥ ೪೬ ॥

ತತಃ ಪ್ರಾಗಥರ್ಮೋ ನಾರೀ ಮರ್ಕಟೋ ರಮಣಃ ರಣಃ ।
ಕಾಣ್ವಮಾರ್ಕಟಿಯಶ್ಚೈವ ತಥಾ ರಾಮವಣೋ ಮುನಿಃ ॥ ೪೭ ॥

ಶ್ಯಾಮಾಯನಸ್ತಥೈತೇಷಾಂ ತ್ರ್ಯಾರ್ಷೇಯಃ ಪ್ರವರೋ ಮತಃ ।
ಅಂಗಿರಾಶ್ಚಾಜಮಿೀಢಶ್ಚ ಕಾಣ್ವಶ್ಚೈವ ಮಹಾತಪಾಃ ॥ ೪೮ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ತಿತ್ತಿರಿಃ ಕಪಿಭೂಶ್ಚೈವ ಗಾರ್ಗ್ಯಶ್ಚೈವ ಮಹಾನೃಷಿಃ ॥ ೪೯ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಆರ್ಷೇಯೋ ನಾಮತಶ್ಚೈಷಾಂ ಸರ್ವೇಷಾಂ ಪ್ರವರಃ ಶುಭಃ ॥ ೫೦ ॥

---

೪೪-೪೫ ಮೋಹಜಿಹ್ವ, ದೇವಜಿಹ್ವ, ಅಗ್ನಿಜಿಹ್ವ, ವಿರಾಡಯ, ಅಪಾನೇಯ, ತ್ರ್ಯಗ್ರಯ, ವೈರಣ್ಯ, ಸ್ತ್ರಾವಿ, ಮುದ್ಗಲ, ಇವರು ತ್ರಿಯಾರ್ಷೇಯರಾದಾಗ್ಯೂ ಸಕಲರ ಪ್ರವರವೂ ಶುಭಕರವಾಗಿ ಒಂದೇ ಆದುದು ಮತ್ತು ಅಂಗಿರ, ತಾವಿ, ಮೌದ್ಗಲ್ಯ, ಇವರು ಪರಸ್ಪರ ವಿವಾಹ ಸಂಬಂಧವನ್ನು ಮಾಡಲಾಗದು

೪೬-೪೮ ಉರುಂಡ, ಭುರುಂಡ, ಶಾಕಟಾಯನ, ಪ್ರಾಗಥರ್ಮ, ನಾರೀ ಮರ್ಕಟರಮಣ, ರಣ, ಕಾಣ್ವ,ಮಾರ್ಕಟ, ರಾಮವಣ, ಶ್ಯಾಮಾಯನ, ಇವರೆಲ್ಲರೂ ತ್ರಿಯಾರ್ಷೇಯ ಪ್ರವರರು ಮತ್ತು ಅಂಗಿರಾ, ಅಜಮಿೀಢ, ಕಾಣ್ವ, ಈ ಮೂರು ಋಷಿ ವಂಶದವರೂ ಅವೈವಾಹ್ಯರು

೪೯-೫೦ ತಿತ್ತಿರಿ, ಕಪಿಭೂ, ಗಾರ್ಗ್ಯ, ಈ ಋಷಿಗೋತ್ರದವರು ಪರಸ್ಪರ ವಿವಾಹ ಮಾಡಕೂಡದು ಇವರು ಹೆಸರಿನಿಂದಲೂ ಸಹ ಆರ್ಷೇಯ ಪ್ರವರರೆನಿಸಿ ಕೊಂಡವರು

**ಅಂಗಿರಾಸ್ತಿತ್ತಿರಿಶ್ಚೈವ ಕಪಿಭೂಶ್ಚ ಮಹಾನೃಷಿಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೫೧ ॥**

**ಅಂಗಿರಾಃ ಸಭರದ್ವಾಜೋ ಋಸಿರ್ವಾಂದನವಸ್ತಥಾ ॥ ೫೨ ॥**

**ಬೃಹಸ್ಪತಿರ್ಮೈತ್ರವಚಾಃ ಪಂಚಾರ್ಷೇಯಾಃ ಪ್ರಕೀರ್ತಿತಾಃ ।**
**ಅಂಗಿರಾಃ ಸಭರದ್ವಾಜಸ್ತಥಾ ಚೈವ ಬೃಹಸ್ಪತಿಃ ॥ ೫೩ ॥**

**ಋಷಿರ್ಮಿತ್ರವಚಶ್ಚೈವ ಋಷಿರ್ವಾಂದತವಸ್ತಥಾ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃಃ ॥ ೫೪ ॥**

**ಭಾರದ್ವಾಜಃ ಕಟಾಶೌಂಗಃ ಶೃಶಿರೇಯಸ್ತಥೈವ ಚ ।**
**ಇತ್ಯೇತೇ ಕಥಿತಾಃ ಸರ್ವೇ ದ್ವ್ಯಾಮುಷ್ಯಾಯಣಗೋತ್ರಜಾಃ ॥ ೫೫ ॥**

**ಪಂಚಾಗ್ನೇಯಾಸ್ತಥಾಪ್ಯೇಷಾಂ ಪ್ರವರಾಃ ಪರಿಕೀರ್ತಿತಾಃ ।**
**ಅಂಗಿರಾಃ ಸಭರದ್ವಾಜಸ್ತಥೈವ ಚ ಬೃಹಸ್ಪತಿಃ ॥ ೫೬ ॥**

**ಸೌಂಗಶ್ಚ ಶೈಶವಿಶ್ಚೈವ ಪ್ರವರಾಃ ಪರಿಕೀರ್ತಿತಾಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೫೭ ॥**

---

೫೧-೫೩ ಅಂಗಿರ, ತಿತ್ತಿರಿ, ಕಪಿಭೂ, ಈ ಋಷಿಗೋತ್ರಜರು ಪರಸ್ಪರ ಅವೈವಾಹ್ಯರು (ಕಪಿಭೂ ಅಥವಾ ಕಪಿಗೋತ್ರವೆಂದೂ ಹೆಸರುಂಟು) ಅಂಗಿರ, ಭರದ್ವಾಜ, ವಾಂದನವ, ಬೃಹಸ್ಪತಿ, ಮೈತ್ರಾವಚ, ಇವರೆಲ್ಲರೂ ಪಂಚಾರ್ಷೇಯ ಪ್ರವರರೆಂದು ಪ್ರಸಿದ್ಧರಾಗಿರುವರು ಋಷಿಶ್ರೇಷ್ಠರಾದ ಮಿತ್ರವರರೂ, ವಾಂದನವರೂ ಪರಸ್ಪರ ಅವೈವಾಹ್ಯರು

೫೪-೫೫ ಭಾರದ್ವಾಜರು, ಕಟಾಶೌಂಗರು, ಶೈಶಿರೇಯರು, ಇವರುಗಳೆಲ್ಲಾ ದ್ವ್ಯಾಮುಷ್ಯಾಯಣ ಗೋತ್ರಜರೆಂದು ಪ್ರಸಿದ್ಧರಾದವರು ಇವರು ಪಂಚಾಗ್ನೇಯಪ್ರವರರೆಂಬ ಸುಪ್ರಸಿದ್ಧ ಯಶಸ್ಸನ್ನು ಹೊಂದಿದವರು

೫೬-೫೭ ಆಂಗಿರಸರೂ, ಭಾರದ್ವಾಜರೂ, ಬೃಹಸ್ಪತಿಗಳೂ, ಸೌಂಗಶೈಶವಿಗಳೂ, ಪ್ರವರದಿಂದೈಕ್ಯರಾದ ಮಹರ್ಷಿವರ್ಯರೂ-ಈ ಋಷಿಗೋತ್ರಜರೆಲ್ಲರೂ ಪರಸ್ಪರವಾಗಿ ವಿವಾಹ ಸಂಬಂಧವನ್ನು ಮಾಡಕೂಡದು

ಏತೇ ತಪ್ರೋಕ್ತಾಂಗಿರಸಸ್ತು ವಂಶೇ
ಮಹಾನುಭಾವಾ ನೃಪ ಗೋತ್ರಕಾರಾಃ ।
ಯೇಷಾಂ ಚ ನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ಪುರುಷೋ ಜುಹಾತಿ ॥ ೫೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಂಗಿರಸೋ ವಂಶಾನುಕೀರ್ತಿವರ್ಣನಂನಾಮ
ದ್ವಾದಶಾಧಿಕಶತತಮೋಧ್ಯಾಯಃ

---

೫೮ ಎಲೈ ವಜ್ರರಾಜನೇ ಕೇಳು! ಇದುವರಿವಿಗ ನಿನ್ನ ನಂಗಡ ಹೇಳಿದ ಋಷಿಗಳುಂಟಲ್ಲಾ! ಆ ಮಹಾನುಭಾವರೆಲ್ಲರೂ ಗೋತ್ರಕಾರರು (ದಾಯಾದಿಗಳು ಅಥವಾ ದಾಯವಾದಿಗಳು) ಎಂದನಿಸಿಕೊಳ್ಳುವರು ಈ ಮಹಾನುಭಾವರಾದ ಎಲ್ಲ ಋಷಿಗಳ ನಾಮೋಚ್ಚಾರಣ ಮಾತ್ರದಿಂದಲೇ ಮನುಷ್ಯನು ತಾನು ಆದುವರಿಗ ಮಾಡಿದ್ದ ನಕಲ ಪಾಪಗಳನ್ನೂ ಕಳಿದುಕೊಂಡು ಪುಣ್ಯವಂತನಾಗುತ್ತಾನೆಂದು ಮಾರ್ಕಂಡೇಯನು ಹೇಳಿರುತ್ತಾನ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡವಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪವಾದ ಅಂಗಿರಸಋಷಿಗಳ
ವಂಶಾನುಕೀರ್ತಿವರ್ಣನೆಯೆಂಬ ಹೆಸರಿನ ಒಂದು ನೂರ
ಹನ್ನೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ॥ ತ್ರಯೋದಶಾಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತ್ರಿವಂಶಸಮುತ್ಪನ್ನಾನ್ಗೋತ್ರಕಾರಾನ್ನಿಬೋಧ ಮೇ ।
ಕರ್ಪೂರಾಯಣಶಾಖೇಯಾಸ್ತಥಾ ಶಾರಾಹಣಾಶ್ಚ ಯೇ ।
ಶೈವಾಲಕೀ ಶೌನವರ್ಣಿರಘೋಽಸೌದ್ರುತಯಶ್ಚ ಯೇ ॥ ೧ ॥

ಗೌರಗ್ರೀವಃಸಕಾರಂಜಿರಥ ಮೈತ್ರಾಯಣಾಶ್ಚ ಯೇ ।
ಆತ್ಮಯನ್ಯಾ ವಾಮರಥ್ಯಾ ಗೋಪನಾಸ್ತಾಕಿಬಿಂದವಃ ॥ ೨ ॥

ಹ್ವಾನಜಿದ್ಬಾಹುರಿಂದ್ರೋವಿರೈಂದ್ರಾಲಿಃ ಶಾಕಟಾಯನಃ ।
ತೈಲೇಯಶ್ಚೈವ ಬೌಲೇಯಶ್ಚಾತ್ರಿಗೌಣೀ ಮತಿಸ್ತಥಾ ॥ ೩ ॥

ಜಲದೋ ಭಗಪಾದಶ್ಚ ಸೌಪುಷ್ಪಿಶ್ಚ ಮಹಾತಪಾಃ ।
ಛಾಂದೋಗೇಯ ಸ್ತಥೈತೇಷಾಮಾರ್ಷೇಯಃ ಪ್ರವರೋ ಮತಃ ॥ ೪ ॥

---

## ಒಂದುನೂರ ಹದಿಮೂರನೇ ಅಧ್ಯಾಯವು

೧-೪ ಮಾರ್ಕಂಡೇಯರು ಹೇಳುತ್ತಾರೆ —ಅತ್ರಿಋಷಿಗಳ ವಂಶದಲ್ಲಿ ಹುಟ್ಟಿದ ಗೊತ್ರಕಾರರ ಹೆಸರನ್ನು ಹೇಳುತ್ತೇನೆ, ಕೇಳು ಇವರಲ್ಲಿ ಕರ್ಪೂರಾಯಣ ಶಾಖೆ, ಶಾರಾಯಣಶಾಖೆಯವರೆಂದು ಎರಡು ವಂಗಡವುಂಟು ಶೈವಾಲಕೀ-ಶೈವ ವರ್ಣಿ-ಸೌದ್ರುತಿ-ಗೌರಗ್ರೀವ-ಸಕಾರಂಜಿ - ಮೈತ್ರಾಯಣ-ಆತ್ಮಯನ್ಯ - ವಾಮರಥ್ಯ-ಗೋಪನಾ-ಸ್ತಾಕಿಬಿಂದು-ಹ್ವಾನಜಿತ್-ಬಾಹು- ಇಂದ್ರೋವಿ-ಐಂದ್ರಾಲಿ-ಶಾಕಟಾಯನ-ತೈಲೇಯ-ಬೌಲೇಯ-ಅತ್ರಿ-ಗೌಣೀಮತಿ - ಜಲದ - ಭಗಪಾದ-ಸೌಪುಷ್ಪಿ - ಛಾಂದೋ

ಧ್ಯಾರಾಶ್ವಾಶ್ಚ ತಥಾತ್ರಿಶ್ಚ ಋಚನಾನಸ ಏವ ಚ ।
ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೫ ॥

ದಕ್ಷಿರ್ಬಲಿಃ ಪಾಲಕೃಚ್ಚ ಔರ್ಣನಾಭಿಃ ಸಿಲಿರ್ಮಿಲಿಃ ।
ಬೀಜವಾಪೀ ಶಿರೀಷಶ್ಚ ಮೌಂಜಕೇಶಗವಿಷ್ಠಿರೌ ॥ ೬ ॥

ಜಲಂಧನಸ್ತಥೈತೇಷಾಂ ತ್ರ್ಯಾರ್ಷೇಯಃ ಪ್ರವರೋ ಮತಃ ।
ಅತ್ರಿರ್ಗವಿಷ್ಠಿರಶ್ಚೈವ ತಥಾ ಪೂರ್ವಾತಿಥಿಃ ಸ್ಮೃತಾಃ ॥ ೭ ॥

ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಆತ್ರೇಯಾನ್ಪುತ್ರಿಕಾಪುತ್ರಾನಥ ಊರ್ಧ್ವಂ ನಿಬೋಧ ಮೇ ॥ ೮ ॥

ಹಾಲೇಯಶ್ಚ ಸವಾಲೇಯೋ ವಾಮುಮುಥ್ಯಸ್ತಥೈವ ಚ ।
ಗೋತ್ರೇಯಶ್ಚೈವ ಗೋತ್ರೇಯಾಃ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ॥೯॥

ಅತ್ರಿಶ್ಚ ವಾಮರಥ್ಯಶ್ಚಪೌತ್ರಿಶ್ಚೈವ ಮಹಾನೃಷಿಃ ।
ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೧೦ ॥

---

ಗೇಯ-ಇವರೆಲ್ಲರೂ ಆರ್ಷೇಯ ಪ್ರವರರೆಂದು ಹೇಳಿಸಿಕೊಳ್ಳುವರು ಧ್ಯಾರಾಶ್ವರು-ಅತ್ರಿ-ಋಚನಾನಸರು ಈ ಮೂವರೂ ಅನ್ವೈವಾಹ್ಯರೆಂದು ತಿಳಿಯಬೇಕು

೬ ದಕ್ಷಿ-ಬಲಿ-ಪಾಲಕೃತ್ - ಔರ್ಣನಾಭಿ-ಸಿಲಿ-ಮಿಲಿ-ಬೀಜ-ವಾಪೀ-ಶಿರೀಷ-ಮೌಂಜಕೇಶ-ಗವಿಷ್ಠಿರ - ಜಲಂಧನರೆಂಬ ಋಷಿಗಳು ತ್ರ್ಯಾರ್ಷೇಯ ಪ್ರವರರೆಂದು ಪ್ರಸಿದ್ಧಿಹೊಂದಿರುತ್ತಾರೆ

೭-೧೧ ಹೆಣ್ಣು ಮಗಳ ಮಕ್ಕಳಾದ ಆತ್ರೇಯ ಗೋತ್ರದ ಮಹರ್ಷಿಗಳ ಪ್ರವರವನ್ನು ಹೇಳುತ್ತೇನೆ, ಕೇಳು-ಹಾಲೇಯರು-ಸವಾಲೇಯರು - ವಾಮುಮಥ್ಯರು-ಗೋತ್ರೇಯರು-ಇವರೆಲ್ಲರೂ ತ್ರಿಯಾರ್ಷೇಯರೆನಿಸಿಕೊಳ್ಳುವರು ಅತ್ರಿ-ವಾಮರಥ್ಯ-ಪೌತ್ರಿ-ಈ ಮೂರು ಮಂದಿಯೂ ಪರಸ್ಪರ ವಿವಾಹ ಸಂಬಂಧ ಬೆಳಸಕೂಡದು, ಎಲೈ ವಜ್ರಮಹಾರಾಜನೇ, ಈರೀತಿ। ನಿನ್ನೊಡನೆ ಅತ್ರಿವಂಶದಲ್ಲಿ ಹುಟ್ಟಿದ ಮಹಾನುಭಾವರಾದ ಮಹರ್ಷಿಗಳ ಗೋತ್ರಪ್ರವರವನ್ನು ಹೇಳಿರುತ್ತೇನೆ ಯಾವ ಈ ಮಹನೀ

ಇತ್ಯತ್ರಿವಂಶಪ್ರಭವಾಸ್ತವೋಕ್ತಾ
ಮಹಾನುಭಾವಾ ನೃಪ ಗೋತ್ರಕಾರಾಃ ।
ಯೇಷಾಂ ತು ನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೆಯ
ವಜ್ರಸಂವಾದೇ ಅತ್ರಿವಂಶಾನುಕೀರ್ತನಂ ನಾಮ
ತ್ರಯೋದಶಾಧಿಕಶತತಮೋಽಧ್ಯಾಯಃ

---

ಯರಾದ ಋಷಿಗಳ ಹೆಸರುಗಳನ್ನು ಉಚ್ಚಾರಮಾಡಿದ ಮಾನವರು ತಮ್ಮ ಸಕಲ ಪಾಪಗಳನ್ನೂ ಕಳೆದುಕೊಂಡು ಸುಖಪೂರ್ಣರಾಗುತ್ತಾರೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು-

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ
ರೂಪವಾದ ಅತ್ರಿ ಗೋತ್ರಾನುಕೀರ್ತನವೆಂಬ ಹೆಸರಿನ ಒಂದು ನೂರ
ಹದಿಮೂರನೇ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರ್ದಶಾಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ಅತ್ರೇರೇವಾಪರಂ ವಂಶಂ ತವ ವಕ್ಷ್ಯಾಮಿ ಪಾರ್ಥಿವ ।**
**ಅತ್ರೇಃ ಸೋಮಃ ಸುತಃ ಶ್ರೀಮಾನ್ಸ್ತಸ್ಯ ವಂಶೋದ್ಭವೋ ನೃಪಃ ॥ ೧ ॥**

**ವಿಶ್ವಾಮಿತ್ರಸ್ತು ತಪಸಾ ಬ್ರಾಹ್ಮಣ್ಯಂ ಸಮವಾಪ್ತವಾನ್ ।**
**ತಸ್ಯ ವಂಶಮಹಂ ವಕ್ಷ್ಯೇ ತನ್ಮೇ ನಿಗದತಃ ಶೃಣು ॥ ೨ ॥**

**ವಿಶ್ವಾಮಿತ್ರೋ ದೇವರಾತಸ್ತಥಾ ಚೇಕಿತಿಗಾಲವೌ ।**
**ವತಂಡಶ್ಚ ಶಲಂಗಶ್ಚ ತಥಾ ಚಾಶ್ವಾತತಾಯನಃ ॥ ೩ ॥**

---

### ಒಂದು ನೂರ ಹದಿನಾಲ್ಕನೇ ಅಧ್ಯಾಯ.

೧ ಮಾರ್ಕಂಡೇಯ ಋಷಿಗಳು ಹೇಳುತ್ತಾರೆ —ಇದೇ ಅತ್ರಿಋಷಿಗಳ ಇನ್ನೊಂದು ವಂಶವನ್ನು ನಿನ್ನೊಡನೆ ಹೇಳುತ್ತೇನೆ, ಕೇಳು ಅತ್ರಿಗೆ ಸೋಮನೆಂಬ ಮಗನಾದನು ಅವನ ವಂಶದಲ್ಲಿ ವಿಶ್ವಾಮಿತ್ರನು ಸಂಜನಿಸಿ ತನ್ನ ತಪೋಬಲದಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿದನು

೨-೭ ಆ ವಿಶ್ವಾಮಿತ್ರರ ವಂಶವನ್ನೀಗ ನಾನು ಹೇಳುತ್ತೇನೆ, ಕೇಳು-ವಿಶ್ವಾಮಿತ್ರ-ದೇವರಾತ-ಚೇಕಿನಿಕತಿ-ಗಾಲವ-ವತಂಡ-ಶಲಂಗ-ಅಶ್ವಾತತಾಯಿ-ಶ್ಯಾಮಾಯನ ಯಾಜ್ಞವಲ್ಕ್ಯ-ಜಾಬಾಲಿ-ವಾಯನ-ದಾಭ್ರವ್ಯ-ಕರೀಷಿ - ಸೌಶ್ರುತ-ಖರಬಾಧ - ವಹ

ಶಾಮಾಯನೋ ಯಾಜ್ಞ್ಯವಲ್ಕ್ಯೋ ಜಾಬಾಲಿಃ ಸೈಂಧನಾಯನಃ ।
ದಾಭ್ರವ್ಯಾಶ್ಚ ಕರೀಷೀ ಚ ಸೌಶ್ರುತ್ಯಾ ಅಥ ಸೌಶ್ರುತಾಃ ॥ ೪ ॥

ಔಲೂಷಾ ಔಪಗವಯಃ ಸಾಣ್ಯೋದರಯಮಾಂಚಯಃ ।
ಖರಬಾಧಾ ವಹಲಯಃ ಸಾಣತಂಬಃ ಸಕೌಶಿಕಾಃ ॥ ೫ ॥

ತ್ರ್ಯಾರ್ಷೇಯಾಃ ಪ್ರವರಾಸ್ತೇಷಾಂ ಸರ್ವೇಷಾಂ ಪರಿಕೀರ್ತಿತಾಃ ।
ವಿಶ್ವಾಮಿತ್ರೋ ದೇವರಾತಃ ಉದ್ದಾಲಶ್ಚ ಮಹಾಯಶಾಃ ॥ ೬ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಮಾರ್ಗಮಿತ್ರಾಸ್ತಥಾದ್ಯಾಶ್ಚ ಮಾಧುಚ್ಛಂದಸ ಏವ ಚ ॥ ೭ ॥

ತ್ರ್ಯಾರ್ಷೇಯಾಃ ಪ್ರವರಾಸ್ತ್ವೇತೇ ಋಷಯಃ ಪರಿಕೀರ್ತಿತಾಃ ।
ವಿಶ್ವಾಮಿತ್ರಸ್ತಥಾ ಜ್ಯೇಷ್ಠೋ ಮಧುಚ್ಛಂದಾಸ್ತಥೈವ ಚ ॥ ೮ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಧನಂಜಯಃ ಕಪರ್ದೇಯಃ ಪರಿತುಷ್ಟಶ್ಚ ಪಾರ್ಥಿವ ॥ ೯ ॥

ಪಾಣಿನಿಶ್ಚೈವ ತ್ರ್ಯಾರ್ಷೇಯಾಃ ಸರ್ವ ಏತೇ ಪ್ರಕೀರ್ತಿತಾಃ ।
ವಿಶ್ವಾಮಿತ್ರೋ ಮಧುಚ್ಛಂದಸ್ತಥಾ ಚೈವಾಘಮರ್ಷಣಃ ॥ ೧೦ ॥

---

ಲಯ-ವಾಣತಂಬ-ಕೌಶಿಕ - ಇವರೆಲ್ಲರೂ ತ್ರಿಯಾರ್ಷೇಯ ಪ್ರವರರೆಂದು ಹೇಳಿಸಿಕೊಳ್ಳುವರು-ವಿಶ್ವಾಮಿತ್ರ-ದೇವರಾತ-ಉದ್ದಾಲ-ಈ ಮೂವರೂ ಪರಸ್ಪರವಾಗಿ ಅವೈವಾಹ್ಯರೆಂದು ತಿಳಿಯಬೇಕು ಮಾರ್ಗಮಿತ್ರ-ಆರ್ಯ-ಮಾಧುಚ್ಛಂದ ಈ ಮೂವರೂ ತ್ರಿಯಾರ್ಷೇಯ ಪ್ರವರರೆಂದು ಪ್ರಸಿದ್ದರಾಗಿರುವರು

೮-೧೦ ವಿಶ್ವಾಮಿತ್ರ-ಜ್ಯೇಷ್ಠ-ಮಧುಚ್ಛಂದ ಈ ಮೂರು ಋಷಿಗಳೂ ಪರಸ್ಪರವಾಗಿ ಅವೈವಾಹ್ಯರೆಂದು ತಿಳಿಯಬೇಕು ಧನಂಜಯ-ಕಪರ್ದೇಯ-ಪರಿತುಷ್ಟ-ಪಾಣಿನಿ-ಇವರು ತ್ರಿಯಾರ್ಷೇಯರೆಂದು ಪ್ರಸಿದ್ಧರಾಗಿರುವರು ವಿಶ್ವಾಮಿತ್ರ - ಮಧುಚ್ಛಂದ - ಅಘಮರ್ಷಣ - ಇವರುಗಳು ಪರಸ್ಪರ ಸಂಬಂಧವನ್ನು ಮಾಡಕೂಡದು.

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಕಾಮಲಾಯನಿಜಾಶ್ಚೈವ ಆಶ್ಮರಥ್ಯಾಸ್ತಥೈವ ಚ ॥ ೧೧ ॥

ಬಂಧುಲಿಶ್ಚೈವ ತ್ರ್ಯಾರ್ಷೇಯಾಃ ಸರ್ವೇಷಾಂ ಪ್ರವರಾ ಮತಾಃ ।
ವಿಶ್ವಾಮಿತ್ರಶ್ಚಾಶ್ಮರಥೋ ಬಧುಲಿಶ್ಚ ಮಹಾತಪಾಃ ॥ ೧೨ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಪೂರಣಾಃ ಪರಿಧಾವಂತಃ ದ್ವ್ಯಾರ್ಷೇಯಾಃ ಪರಿಕೀರ್ತಿತಾಃ ॥ ೧೩ ॥

ವಿಶ್ವಾಮಿತ್ರಃ ಪೂರಣಶ್ಚ ತಯೋರ್ದ್ವೌ ಪ್ರವರೌ ಸ್ಮೃತೌ ।
ಪರಿವರ್ತಾ ಅವೈವಾಹ್ಯಾಃ ಪೂರಣಾಶ್ಚ ಪರಸ್ಪರಂ ॥ ೧೪ ॥

ಲೋಹಿತಾ ಅಷ್ಟಕಾಶ್ಚೈವ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।
ವಿಶ್ವಾಮಿತ್ರೋ ಲೋಹಿತಶ್ಚ ಅಷ್ಟಕಶ್ಚ ಮಹಾತಪಾಃ ॥ ೧೫ ॥

ಅಷ್ಟಕಾ ಲೋಹಿತೈರ್ನಿತ್ಯಮವೈವಾಹ್ಯಾಃ ಪರಸ್ಪರಂ ।
ಉದರೇಂಡಃ ಕಥಂಕಶ್ಚ ಋಷಿಶ್ಚೋದಾವಹಿಸ್ತಥಾ ॥ ೧೬ ॥

ತ್ರ್ಯಾರ್ಷೇಯೋಽಪಿ ಮತಶ್ಚೈಷಾಂ ಸರ್ವೇಷಾಂ ಪ್ರವರಃ ಶುಭಃ ।
ಋಣವಾನ್ಗ್ರಥಿತಶ್ಚೈವ ವಿಶ್ವಾಮಿತ್ರಸ್ತಥೈವ ಚ ॥ ೧೭ ॥

---

೧೧-೧೨ ಕಾಮಲಾಯನಿಜರು-ಅಶ್ಮರಥ್ಯರು-ಬಂಧುಲಿ ಈ ಮೂವರೂ ತ್ರ್ಯಾರ್ಷೇಯ ಪ್ರವರರೆನಿಸಿಕೊಳ್ಳುವರು ವಿಶ್ವಾಮಿತ್ರರು, ಆಶ್ಮರಥ್ಯರು, ಬಂಧುಲಿ, ಈ ಮೂವರೂ ಪರಸ್ಪರ ವಿವಾಹ ಸಂಬಂಧವನ್ನು ಮಾಡಕೂಡದು

೧೩-೧೪ — ಪೂರಣರು, ಪರಿಧಾವಂತರು. ಇವರಿಬ್ಬರೂ ತ್ರ್ಯಾರ್ಷೇಯರು, ವಿಶ್ವಾಮಿತ್ರರು, ಪೂರಣರಿಬ್ಬರೂ ಒಂದೇ ಪ್ರವರದವರು, ಪರಿವರ್ತರೂ ಸಹ ಸೇರಿ ಈ ಮೂವರೂ ಅವೈವಾಹ್ಯರೆಂದು ತಿಳಿಯಬೇಕು

೧೫ ಲೋಹಿತರು, ಅಷ್ಟಕರಿಬ್ಬರೂ, ತ್ರಿಯಾರ್ಷೇಯಪ್ರವರರು, ವಿಶ್ವಾಮಿತ್ರರು-ಲೋಹಿತರು-ಅಷ್ಟಕರು ಇವರುಗಳು ಅಷ್ಟಕ ಲೋಹಿತರೊಡನೆ ವಿವಾಹ ಸಂಬಂಧವನ್ನು ಪರಸ್ಪರಮಾಡಬಾರದು.

೧೬-೧೭ ಉದರೇಂಡ, ಕಥಂಕ, ಉದಾವಹಿ, ಈ ಮೂವರೂ ತ್ರಿಯಾರ್ಷೇಯರಾದಾಗ್ಯೂ ಎಲ್ಲರ ಪ್ರವರವೂ ಒಂದೇ ಆಗಿದೆ ಋಣವಂತ, ಗ್ರಥಿತ, ವಿಶ್ವಾಮಿತ್ರ, ಈ ಮೂವರೂ ಪರಸ್ಪರವಾಗಿ ಅವೈವಾಹ್ಯರು

ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಔದಂಬರಿ ಶ್ಶೈಶಿರಿಟಿರ್ಋಷಿಸ್ತಾರ್ಕ್ಷ್ಯಾಯಣಸ್ತಥಾ ॥ ೧೮ ॥

ಟೈಕಾಯನಿಸ್ತ್ರೈಕಾಯನಿಸ್ತಾರ್ಕ್ಷ್ಯಾಯಣಿರಥೈವ ಚ ।
ಕಾತ್ಯಾಯನಿಃ ಕರೀರಾಮಿಃ ಶಾಲಂಕಾಯನಿಲಾವಕೀ ॥ ೧೯ ॥

ಮೌಂಜಾಯನಿಶ್ಚ ಭಗವಾಂಸ್ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।
ಕಿಲಿಃ ಕಲಿಸ್ತಥಾ ವಿದ್ವಾನ್ವಿಶ್ವಾಮಿತ್ರಸ್ತಥೈವ ಚ ।
ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೨೦ ॥

ಏತೇ ತವೋಕ್ತಾ ಕುಶಿಕಾ ನರೇಂದ್ರ
ಮಹಾನುಭಾವಾಃ ಸತತಂ ದ್ವಿಜೇಂದ್ರಾಃ ।
ಯೇಷಾಂ ತು ನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿಶ್ವಾಮಿತ್ರವಂಶಾನುಕೀರ್ತನಂ ನಾಮ
ಚತುರ್ದಶಾಧಿಕಶತತಮೋಽಧ್ಯಾಯಃ

---

೧೮-೨೧ ಔದುಂಬರಿ, ಶೈಶಿರಿಟಿ, ತಾರ್ಕ್ಷ್ಯಾಯಣ, ಟೈಕಾಯನಿ, ತ್ರೈಕಾಯನಿ, ತಾರ್ಕ್ಷ್ಯಾಯಣಿ. ಕಾತ್ಯಾಯನಿ, ಕರೀರಾಮಿ, ಶಾಲಂಕಾಯನಿ, ಲಾವಕಿ ಮೌಂಜಾಯನಿ ಈ ಋಷಿಗಳೆಲ್ಲರೂ ತ್ರ್ಯಾರ್ಷೇಯರೆಂದು ಪ್ರಸಿದ್ಧರಾಗಿರುವರು ಕಿಲಿ, ಕಲಿ, ವಿಶ್ವಾಮಿತ್ರರೆಂಬ ಮೂವರೂ ಪರಸ್ಪರ ಅನ್ವೈವಾಹ್ಯರೆಂದು ಹೇಳಲ್ಪಟ್ಟಿರುವರು ಎಲೈ ವಜ್ರರಾಜನೇ ! ಈವಾಗ ನಿನ್ನ ಸಂಗಡ ಹೇಳಿದ ಋಷಿಗಳೆಲ್ಲರೂ ವಿಶ್ವಾಮಿತ್ರ (ಕುಶಿಕ) ಗೋತ್ರಜರಾದ ಮಹರ್ಷಿಗಳೆಂದು ತಿಳಿದುಕೋ ! ಈ ಮಹರ್ಷಿಗಳ ನಾಮಸಂಕೀರ್ತನೆಯಿಂದ ಮನುಷ್ಯನು ಸಕಲ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧನಾಗುತ್ತಾನೆಂದು ಮಾರ್ಕಂಡೇಯರು ವಜ್ರರಾಜನೊಡನೆ ಹೇಳಿದರು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ವಿಶ್ವಾಮಿತ್ರವಂಶಾನು ಕೀರ್ತನೆಯೆಂಬ ಹೆಸರಿನ ಒಂದು ನೂರ ಹದಿನಾಲ್ಕನೇ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚದಶಾಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಮರೀಚೇಃ ಕಶ್ಯಪಃ ಪುತ್ರಃ ಕಶ್ಯಪಸ್ಯ ತಥಾ ಕುಲೇ ।
ಗೋತ್ರಕಾರಾನೃಷೀನ್ವಕ್ಷ್ಯೇ ತೇಷಾಂ ನಾಮಾನಿ ಮೇ ಶೃಣು ॥ ೧ ॥

ಆಗ್ರಾಯಣಾ ಋಷಗಣಾ ಮೇಷಕೌರೀಟಿಕಾಯನಾಃ ।
ಗುರುವ್ರಜೀ ಮಾರರಶ್ಚ ಗೋಜಾವಿರಥ ಲಕ್ಷ್ಮಣಃ ॥ ೨ ॥

ಶಾಲಾಹಲೇಯಾಃ ಕೌರಿಜ್ಯಾಶ್ಚಾಕನ್ಯಾಶ್ಚಾಸುರಾಯಣಾಃ ।
ಮಂದಾನ್ಯಾವೌ ಮೃಗಾಯನೋ ಶ್ರೋತಸೋ ಭೌಸತಾಯನಾಃ ॥ ೩ ॥

---

### ಒಂದು ನೂರ ಹದಿನೈದನೆಯ ಅಧ್ಯಾಯವು.

೧ ಮಾರ್ಕಂಡೇಯ ಋಷಿಗಳು ಹೇಳುತ್ತಾರೆ —ಮರೀಚಿಬ್ರಹ್ಮನಿಗೆ ಕಶ್ಯಪ ಋಷಿಗಳು ಮಕ್ಕಳಾಗಿ ಹುಟ್ಟಿದರು ಆ ಕಶ್ಯಪರ ವಂಶದಲ್ಲಿ ಹುಟ್ಟಿದ ಗೋತ್ರಕಾರ ರಾದ ಋಷಿಗಳ ಹೆಸರನ್ನು ಹೇಳುತ್ತೇನೆ, ಕೇಳು

೨-೧೦ ಕಶ್ಯಪರ ವಂಶದಲ್ಲಿ ಅನುಕ್ರಮನಾಗಿ ಹುಟ್ಟಿದ ಋಷಿಗಳಾರಾರೆಂ ದರೆ —ಆಗ್ರಾಯಣರು, ಋಷಗಣರು, ಮೇಷ, ಕೌರೀಟಿಕಾಯನ, ಗುರುವ್ರಜೀ, ಮಾರರರು, ಗೋಜಾವಿ, ಲಕ್ಷ್ಮಣ, ಶಾಲಾಹಲೇಯ, ಕೌರಿಜ್ಯ, ಚಾಕನ್ಯ, ಆಸುರಾ ಯಣ, ಮಂದಾನ್ಯ, ಮೃಗಯನ, ಶ್ರೋತಸ, ಭೌಸತಾಯನ, ದೇವಯಾತ, ಗೋಪ

ದೇವಯಾತಾ ಗೋಪಯಾತಾ ಅಥೋಚ್ಛಾಯತಯಶ್ಚ ಯೇ ।
ತಾಕಯಾನಾಶ್ಚಿತ್ರಹಯಾ ಅಭಿಯೋಗಾ ಗದಾಯನಾಃ ॥ ೪ ॥

ಕಾತುವಂದಿರ್ಮಹಾಚಕ್ರಿರ್ದಾಕ್ಷಪಾಣಯ ಏವ ಚ ।
ಗ್ರೀವಾಯಣಾ ಹರ್ಕಿರಯೋ ಹಾಸ್ತಿದಾಸಾಸ್ತಥೈವ ಚ ॥ ೫ ॥

ವಾತ್ಸ್ಯಾ ವಾಲಿಸ್ಯಕೃತಹಾ ಹಾಸ್ತಲಾಯನಿಸಸ್ತಥಾ ।
ಆಗ್ರಾಯಣಃ ಪೇಲುಮೂಲೀರಾಶ್ವತಾತಾಯನಸ್ತಥಾ ॥ ೬ ॥

ಕೌಶೀತಕಾಶ್ಚ ಪಾಕಾಂತಾ ಅಗ್ನಿಶರ್ಮಾಯಣಾಶ್ಚ ಯೇ ।
ನೈಷಯಃ ಕೈಪಮೋಯಾಶ್ಚ ತಥಾ ಚೈವ ಸುಬಭ್ರವಃ ॥ ೭ ॥

ಪ್ರಾಚೀಥಯೋ ಚ್ಞಾನಗಯಾ ಆಗ್ರಾವಮಥ ಏವ ತು ।
ಶ್ಯಾಮೋಚರಾ ನೈಮಿಷಯಃ ತತ್ಸ್ಥಾ ಯೇ ಶಾದ್ವಲಾಯನಾಃ ॥ ೮ ॥

ಕಾಷ್ಟಹಾಯನಮಾರೀಚಾ ಡೌಜಿಹಾಯನಹಾಸ್ತಿಕಾಃ ।
ನೈಕರ್ಣೇಯಾಃ ಕಾಶ್ಯಪಾಶ್ಚ ಶಾಮಿಶಾ ಹಾರಿತಾಯನಾಃ ॥ ೯ ॥

ಮಾತಂಗಿನೋ ಬಭ್ರಸವಃ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।
ವತ್ಸರಃ ಕಶ್ಯಪಶ್ಚೈವ ನಿಧ್ರುವಶ್ಚ ಮಹಾತಪಾಃ ॥ ೧೦ ॥

---

ಯಾತ, ಉಚ್ಛಾಯತಯ, ತಾಕಯಾನ, ಚಿತ್ರಹಯ, ಅಭಿಯೋಗ, ಗದಾಯನ, ಕಾತುವಂದಿ, ಮಹಾಚಕ್ರಿ, ದಾಕ್ಷಪಾಣಿ, ಗ್ರೀವಾಯಣ, ಹರ್ಕಿರಯ, ಹಾಸ್ತಿದಾನ, ವಾತ್ಸ್ಯ,ವಾಲಿಸ್ಯಕೃತಹಾ, ಹಾಸ್ತಲಾಯನಿ, ಆಗ್ರಾಯಣ, ಜ್ಞಾನಗಯ, ಆಗ್ರಾವಮಥ, ಶ್ಯಾಮೋಚರ, ನೈಮಿಷಿ, ಶಾದ್ವಯನ, ಕಾಷ್ಠಹಾಯನ, ಮಾರೀಚ ಡೌಜಿಹಾಯನ, ಹಾಸ್ತಿಕ, ಪೈಕರ್ಣೇಯ, ಕಾಶ್ಯಪ, ಶಾಮಿಷ, ಹಾರಿತಾಯನ, ಮಾತಂಗಿನ, ಬಭ್ರಸವ, ಇವರಿಷ್ಟು ಮಂದಿಯೂ ಕ್ರಮಾನುಸಾರವಾಗಿ ತ್ರ್ಯಾರ್ಷೇಯ ಗೋತ್ರಪ್ರವರೆಂದು ಹೇಳಲ್ಪಟ್ಟಿರುವರು ವತ್ಸರ, ಕಶ್ಯಪ, ನಿಧ್ರುವ ಈ ಮೂವರ ವಂಶವೂ ಅನ್ಯೋನ್ಯ ವಂಶಗಳೆಂದು ತಿಳಿಯಬೇಕು ಕಾಶ್ಯಪ ಗೋತ್ರದವರೆಲ್ಲರೂ ಕಾಶ್ಯಪಾವತ್ಸಾರ ನೈಧ್ರುವ ತ್ರಿಯಾರ್ಷೇಯ ಪ್ರವರಾನ್ವಿತ ಕಾಶ್ಯಪಸಗೋತ್ರಃ ಎಂದು ಹೇಳುವರು

**ಪರಸ್ಪರಮವೈವಾಹ್ಯಾ ಋಷಯಃ ರಿಪಕೀರ್ತಿತಾಃ ।**
**ರೈಹಾಶ್ಚ ಸಾಂಖ್ಯಮಿತ್ರಾಶ್ಚ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ॥ ೧೧ ॥**

**ವತ್ಸಾರಃ ಕಶ್ಯಪಶ್ಚೈವ ರೈಹಾಶ್ಚೈವ ಮಹಾತಪಾಃ ।**
**ಪರಸ್ಪರಮವೈವಾಹ್ಯೌ ಗೋತ್ರೌ ದ್ವೌ ಪರಿಕೀರ್ತಿತೌ ॥ ೧೨ ॥**

**ಅತಃಪರಂ ಪ್ರವಕ್ಷ್ಯಾಮಿ ದ್ವ್ಯಾಮುಷ್ಯಾಯಣಗೋತ್ರಜಾನ್ ।**
**ಅನುಷ್ಟುಭೋ ಭಾಕ್ತುರಯಃ ಸ್ವಾತಯೋ ರಾಜವಲ್ಲಯಃ ॥ ೧೩ ॥**

**ಶೈರೇಶಿರೋ ದೇವಹಿಶ್ಚ ಸ್ಯೈರಂಧ್ರೀ ತಾಪಸೀವಕಿಃ ।**
**ಸಾಲುಲಿಃ ಕಾಟುವಂಗಾಕ್ಷಿಃ ಶತಶಂಭಿಸ್ತಥೈವ ಚ ॥ ೧೪ ॥**

**ದಿವಾ ವಸಿಷ್ಠಾ ಇತ್ಯೇತೇ ನಕ್ತಂ ಜ್ಞೇಯಾಶ್ಚ ಕಾಶ್ಯಪಾಃ ।**
**ತ್ರ್ಯಾರ್ಷೇಯಾಶ್ಚ ತಥಾ ತೇಷಾಂ ಸರ್ವೇಷಾಂ ಪ್ರವರಾಃ ಶುಭಾಃ ॥ ೧೫ ॥**

**ವತ್ಸರಃ ಕಶ್ಯಪಶ್ಚೈವ ವಸಿಷ್ಠಶ್ಚ ಮಹಾತಪಾಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೧೬ ॥**

---

೧೧-೧೨ ರೈಹರೂ, ಸಾಂಖ್ಯಮಿತ್ರರೂ ಸಹ ತ್ರ್ಯಾರ್ಷೇಯರೇ ಆಗಿರುವರು. ವತ್ಸಾರ, ಕಶ್ಯಪ, ರೈಹರೆಂಬ ತ್ರ್ಯಾರ್ಷೇಯ ಪ್ರವರಾನ್ವಿತರಾದ ರೈಹರೂ, ಕಾಶ್ಯಪರೂ, ಈ ಎರಡು ಗೋತ್ರದವರೂ ಸಹ ಪರಸ್ಪರ ವಿವಾಹ ಸಂಬಂಧವನ್ನು ಬೆಳಸಕೂಡದು

೧೩-೧೬ ಅನಂತರ ದ್ವ್ಯಾಮುಷ್ಯಾಯಣ ಗೋತ್ರಜರಾದ ಋಷಿಗಳ ಹೆಸರನ್ನು ಹೇಳುತ್ತೇನೆ, ಕೇಳು ಮಹಾರಾಜ! ಅನುಷ್ಟುಭರು, ಭಾಕ್ತುರಿ, ಸ್ವಾತೀ, ರಾಜವಲ್ಲಿ, ಶೈರೇಶಿರ, ದೇವಹಿ, ಸ್ಯೈರಂಧ್ರೀ, ರೌನಸೀವಕಿ, ಸಾಲುಲಿ, ಕಾಟುವಿಂಗಾಕ್ಷಿ, ಶತಶಂಭಿ, ದಿವಾವಸಿಷ್ಠರೆಂಬ ಹೆಸರಿನವರೆಲ್ಲರೂ ಕಾಶ್ಯಪ ಗೋತ್ರದವರೆಂದೇ ತಿಳಿಯಬೇಕಲ್ಲದೆ ತ್ರ್ಯಾರ್ಷೇಯ ಪ್ರವರರೆಂದೇ ಉಚ್ಚಾರಣೆಮಾಡಬೇಕು ವತ್ಸಾರರು, ಕಶ್ಯಪರು, ವಸಿಷ್ಠರು ಇವರೆಲ್ಲರೂ ಪರಸ್ಪರ ಅವೈವಾಹ್ಯರೆಂದು ತಿಳಿಯಬೇಕು

ಸಾ ಮಾತಾ ಬಲಿಪುತ್ರಶ್ಚ ಭೌಷ್ಯಲೋಽಥ ಜಲತ್ವರಃ ।
ಮುಂಜಾಮಯೂರಃ ಪರ್ಯಶ್ಚ ಸೊಷ್ಟಮೋ ಗರ್ದಭೀಮುಖಃ ॥ ೧೭ ॥

ಹಿರಣ್ಯಬಾಹುಃ ಕೈರಾತಃ ಉಭೌ ಕಾಶ್ಯಪಗೋಭಿಲೌ ।
ಆಹಲೋ ವೃಷತಂಡಶ್ಚ ಸೃಕೇತುಶ್ಚ ತಥೋತ್ತರಃ ॥ ೧೮ ॥

ಉದಕೇಭಸ್ತೃಣೋ ವತ್ಸ್ಯೋ ಮಹಾಕೇರಲಯುಗ್ಯಯೋ ।
ಶಾಡೀಲನ್ಯೈಶಾನವಸೌ ದ್ರಾವ್ರೋಲೇವಲಯಾತವಃ ॥ ೧೯ ॥

ಪೈಪ್ಪಲಾದಿಃ ಪೂರ್ವವರಿರ್ವರಿವಿತ್ಥಾ ವರೀನಿಕಃ ।
ತ್ರ್ಯಾರ್ಷೇಯೋಽಪಿ ಮತಶ್ಚೈಷಾಂ ಸರ್ವೇಷಾಂ ಪ್ರವರಃ ಶುಭಃ ॥ ೨೦ ॥

ಅಸಿತೋ ದೇವಲಶ್ಚೈವ ಕಶ್ಯಪಶ್ಚ ಮಹಾತಪಾಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೨೧ ॥

ಟಿಪ್ಪಣಿ—ಕಾಶ್ಯಪಗೋತ್ರ ವಸಿಷ್ಠಗೋತ್ರದವರು ಅವೈವಾಹ್ಯರೆಂದು ಇಲ್ಲಿ ಒರೆದಿದೆ ಆದರೆ ಬಹು ಕಾಲದಿಂದಲೂ ಈ ಗೋತ್ರಗಳೆರಡಕ್ಕೂ ಸಂಬಂಧವು ಬೆಳದು ಬಂದಿದೆಯೆಂದು ಅನೇಕರು ಸಂಶಯನಡಬಹುದು ಈ ಶ್ಲೋಕಗಳಲ್ಲಿ ಮೇಲ ಮೊದಲು ಬರೆದಿರುವ ದಿವಾವಸಿಷ್ಠ, ನಕ್ತಂವಸಿಷ್ಠ, ಉಪಮನ್ಯುವಸಿಷ್ಠ ಗೋತ್ರಗಳೆಂದು ಬೇರೆ ಬೇರೆ ಭಿನ್ನಗೋತ್ರಗಳೆಂದು ಇಲ್ಲಿ ನೆನಪಿನಲ್ಲಿಡಬೇಕು

೧೭-೨೨ ಸಾ, ಮಾತಾ, ಬಲಪುತ್ರ, ಭೌಷ್ಯಲ, ಜಲತ್ವರ, ಮುಂಜಾಮಯೂರ, ಪರ್ಯ, ಎಂಟನೆಯ ಗರ್ದಭೀಮುಖ, ಹಿರಣ್ಯಬಾಹು, ಕೈರಾತು, ಕಾಶ್ಯಪ, ಗೋಭಿಲ, ಆಹಲ, ವೃಷತಂಡ, ಸೃಕೇತು, ಉದಕೇಭ, ತೃಣ, ವತ್ಸ್ಯ, ಮಹಾಕೇರಲಿ, ಶಾಟೀಲ, ವೈಶಾನವಸ, ದ್ರಾಪ್ರೋಲೇಯ, ಲಯಾತು ಪೈಪ್ಪಲಾದಿ, ಪೂರ್ವವರಿ, ವರಿವಿತ್ಥಾ, ವರೀನಿಕ, ಈ ಋಷಿಗಳೆಲ್ಲರೂ ಕ್ರಮವಾಗಿ ತ್ರ್ಯಾರ್ಷೇಯ ಗೋತ್ರದವರು, ಅಸಿತ, ದೇವಲ, ಕಶ್ಯಪ, ಈ ಮೂರು ಮಂದಿ ಋಷಿವಂಶಜರೂ ಪರಸ್ಪರ ವಿವಾಹ ಸಂಬಂಧಮಾಡಕೂಡದು ದಾಕ್ಷಾಯಣಿಯ ಮಕ್ಕಳೂ ಋಷಿಸ್ರಧಾ

ಋಷಿಪ್ರಧಾನಸ್ಯ ತು ಕಶ್ಯಪಸ್ಯ
ದಾಕ್ಷಾಯಣಾಭ್ಯಃ ಸಕಲಂ ಪ್ರಸೂತಂ ।
ಜಗತ್ಸಮಗ್ರಂ ಯದುಸಿಂಹಮುಖ್ಯ
ತತ್ತೇ ಚ ವಕ್ಷ್ಯಾಮ್ಯಹಮುತ್ತರತ್ರ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಶ್ಯಪವಂಶಾನುಕೀರ್ತನಂ ನಾಮ
ಪಂಚದಶಾಧಿಕಶತತಮೋಽಧ್ಯಾಯಃ

---

ನರೂ ಆದ ಕಶ್ಯಪ ಋಷಿಗಳಿಂದಲೇ ಈ ಸಕಲ ಜಗತ್ತಿನ ಉತ್ಪತ್ತಿಯಾಯಿತೆಂಬ ವಿಚಾರವನ್ನು ಇನ್ನು ಮುಂದೆ ನಿನಗೆ ತಿಳಿಸುತ್ತೇನೆ ಕೇಳಯ್ಯ ! ವಜ್ರಮಹಾರಾಜ ! ಎಂದು ಮಾರ್ಕಂಡೇಯರು ಹೇಳಿದರೆಂಬಲ್ಲಿಗೆ —

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ
ರೂಪವಾದ ಕಶ್ಯಪ ವಂಶಾನು ಕೀರ್ತನೆಯೆಂಬ ಹೆಸರಿನ ಒಂದುನೂರ ಹದಿ
ನೈದನೇ ಅಧ್ಯಾಯ ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ।। ಷೋಡಶಾಧಿಕಶತತಮೋಽಧ್ಯಾಯಃ ।।

---

॥ ಮಾರ್ಕಂಡೇಯ ಉವಾಚ ॥

ವಸಿಷ್ಠವಂಶಜಾನ್ವಿಪ್ರಾನ್ನಿಬೋಧ ಗದತೋ ಮಮ ।
ಏಕಾರ್ಷೇಯಶ್ಚ ಪ್ರವರೋ ವಸಿಷ್ಠಾನಾಂ ಪ್ರಕೀರ್ತಿತಾಃ ॥ ೧ ॥

ವಸಿಷ್ಠ ಏವ ವಾಸಿಷ್ಠಾ ಅವಿವಾಹ್ಯಾ ವಸಿಷ್ಠಜೈಃ ।
ವ್ಯಾಘ್ರಪಾದಾ ಔಪಗವಾಃ ವೈಕ್ಲವಾ ಶಾದ್ವಲಾಯನಾಃ ॥ ೨ ॥

ಕಾಪಿಷ್ಠಲಾ ಶೌಟಲೋಮಾ ಆಶ್ವಲಾಃ ಸರ್ವಟಾಕರಾಃ ।
ಗೋಪಾಯನಾ ಬೋಧಯಶ್ಚ ದ್ವಾಕಲ್ಪಾ ಅಪವಾಹ್ಯಕೃತ್ ॥ ೩ ॥

---

### ಒಂದು ನೂರ ಹದಿನಾರನೇ ಅಧ್ಯಾಯ.

೧ ಮಾರ್ಕಂಡೇಯರು ಹೇಳುತ್ತಾರೆ — ವಸಿಷ್ಠರ ವಂಶದಲ್ಲಿ ಹುಟ್ಟಿದ ಬ್ರಾಹ್ಮಣರ (ಋಷಿಗಳ) ಹೆಸರನ್ನು ಹೇಳುತ್ತೇನೆ, ಕೇಳಯ್ಯ ! ವಸಿಷ್ಠರ ಪ್ರವರವು ಏಕಾರ್ಷೇಯವೆಂದು ಹೇಳಲ್ಪಟ್ಟಿರುವುದು

೨-೬ ವಸಿಷ್ಠರನ್ನೇ ವಾಸಿಷ್ಠರೆಂದು ಹೇಳುವರು ಇವರು ವಸಿಷ್ಠಗೋತ್ರದವರೊಡನೆ ಪರಸ್ಪರ ಸಂಬಂಧ ಬೆಳೆಸಕೂಡದು ಆ ಗೋತ್ರಜರಾರೆಂದರೆ,— ವ್ಯಾಘ್ರಪಾದ, ಔಪಗವ, ವೈಕ್ಲವ, ಶಾದ್ವಲಾಯನ, ಕಾಪಿಷ್ಠಲ, ಶೌಟಲೋಮ, ಆಶ್ವಲ, ಸರ್ವಟಾಕರ, ಗೋಪಾಯನ, ಬೋಧಾಯನ, ದ್ವಾಕಲ್ಪ, ಅಪವಾಹ್ಯಕೃತ್, ಬಾಲಿಶೇಯ, ಪಾಲಿಶಿಷ್ಯ, ಉಮಾಂಕುರವ, ಆಯಸ್ಥೂಣ, ಶೀತವೃಕ್ಷ, ಬ್ರಹ್ಮಪುರೋಹಿತ, ಲೋಮತ್ಯ, ಸ್ವಸ್ತಿಕರ, ಮಾಂಡಲಿ, ಗೌತಲಿ, ವಾಹ್ನೇಹಂಡಿ, ಸುಮನ,

ಬಾಲಶೇಯಾ ಪಾಲಿಶಿಷ್ಯಾಸ್ತಥೋಮಾಂಕುರವಶ್ಚ ಯೇ ।
ಆಯಸ್ಥೂಣಾಃ ಶೀತವೃಕ್ಷಾಸ್ತಥಾ ಬ್ರಹ್ಮಪುರೋಹಿತಾಃ　　॥ ೪ ॥

ಲೋಮತ್ಯಾಶ್ಚ ಸ್ವಸ್ತಿಕರಾಃ ಮೂಂಡಲಿಗೌತಲಿಸ್ತಥಾ ।
ವಾಹ್ನೇಹಂಡಿಶ್ಚ ಸುಮನಾ ಶ್ವಪಾದಿರ್ವಿದ್ಧಿರೇವ ಚ　　॥ ೫ ॥

ಶೌಲಿರ್ಲೋಹಿರ್ಬ್ರಹ್ಮಬಲೋ ವೈಲಿಶ್ರವಸ ಏವ ಚ ।
ಮೌಂಡವೊ ಯಾಜ್ಞವಲ್ಕ್ಯಶ್ಚ ಏಕಾರ್ಷೇಯಾಸ್ತಥಾ ನೃಪ　　॥ ೬ ॥

ವಸಿಷ್ಠ ಏಷಾಂ ಪ್ರವರ ಅವೈವಾಹ್ಯಾಃ ಪರಸ್ಪರಂ ।
ಶೈಲಾಲಯೋ ಮಹಾಕರ್ಣೋ ಕೌರವ್ಯಃ ಕ್ರೌವಣಿಸ್ತಥಾ　　॥ ೭ ॥

ಕಪಿಂಜಲೋ ಬಾಲಶಿಖಿರ್ಭಾಗವಿತ್ತಾಯನಾಶ್ಚ ಯೇ ।
ಕೌರಾಯಣಾ ಲಾಕಹಯಾ ಕೌಲಕೃದ್ಭಾಗುರಾಯಣಾಃ　　॥ ೮ ॥

ಶಾಕಹವ್ಯಾಃ ಕಶಾಪೇಯಾ ಅಥೋ ಉಲ್ವಪಯಾಶ್ಚ ಯೇ ।
ಸಾಂಖ್ಯಾಯನಾ ಅನಡುಹಾ ಅಥೋ ಮಾಷಶಿರಾಧಯಃ　　॥ ೯ ॥

ದಾಮುಕಾಯನಾ ವಾಹಯವೋ ವಾಕ್ಯಯೋಗೋರಥಸ್ತಥಾ ।
ಆಬಾಯನಾಶ್ಚ ಋಷಯಃ ಯೇ ಚ ಕ್ರೋಡಾದನಾಯನಾಃ　　॥ ೧೦ ॥

---

ಶ್ವಪಾದಿ, ವಿಧ್ಧಿ, ಶೌಲಿ, ಲೋಲಿ, ಬ್ರಹ್ಮಬಲ, ವೈಲಿಶ್ರವನ, ಮೌಂಡವ ಯಾಜ್ಞವಲ್ಕ್ಯ, – ಇವರೆಲ್ಲರೂ ಏಕಾರ್ಷೇಯ ಪ್ರವರರು ಇವರು ವಸಿಷ್ಠರ ಪ್ರವರಕ್ಕೇ ಸೇರಿದವರಾದ್ದರಿಂದ ಪರಸ್ಪರ ವಿವಾಹ ಸಂಬಂಧವನ್ನು ಬೆಳಸಕೂಡದು ಶೈಲಾಲಯ, ಮಹಾಕರ್ಣ, ಕೌರವ್ಯ ಮುಂತಾದವರನ್ನು ಮುಂದೆ ಬರಯುವೆವು

೭-೧೩ ಇದರ ಕೆಳಗೆ ಬರೆದ ಋಷಿಗಳೆಲ್ಲರೂ ತ್ರಿಯಾರ್ಷೇಯ ಪ್ರವರರೆನಿಸಿಕೊಂಡಿರುವರು ಅವರ ಹೆಸರುಗಳನ್ನಿಲ್ಲಿ ಬರಯುವೆವು ಶೈಲಾಲಯ, ಮಹಾಕರ್ಣ, ಕೌರವ್ಯ, ಕ್ರೈವಣಿ, ಕಪಿಂಜಲ, ಬಾಲಶಿಖಿ, ಭಾಗವಿತ್ತಾಯನ, ಕೌರಾಯಣ, ಲೋಕಹಯ, ಕೌಲಕೃತ್, ಭಾಗುರಾಯಣ, ಶಾಕಪವ್ಯ, ಕಶಾಪೇಯ, ಉಲ್ವಪಯ, ಸಾಂಖ್ಯಾಯನ, ಅನಡುಹ, ಮಾಷಶಿರಾಧಯ, ದಾಮುಕಾಯನ, ವಾಹಯವ, ವಾಕ್ಯಯೋಗ, ರಥ, ಆಬಾಯನ, ಕ್ರೋಡಾದನಾಯನ, ಪುಲಂಬಾಯನ, ಔಪಮನ್ಯು,

**ಪ್ರಲಂಬಾಯನಾಶ್ಚ ಋಷಯ ಔಪಮನ್ಯವ ಏವ ಚ ।**
**ಸಾಂಖ್ಯಾಯನಾಶ್ಚ ಋಷಯಸ್ತಥಾ ಯೇ ಚ ದಶೇರಕಾಃ ॥ ೧೧ ॥**

**ಪಾದಕಾಯನ ಔದ್ಗ್ರಾಹಾ ಋಷಯಶ್ಚೈವ ಲೇಖಯಃ ।**
**ಮಾಲೇಯಾ ಬ್ರಹ್ಮವಲಯಃ ಪೂರ್ಣಾಗಾರಿಸ್ತಥೈವ ಚ ॥ ೧೨ ॥**

**ತ್ರ್ಯಾರ್ಷೇಯೋಪಿ ಮತಾಶ್ಚೈಷಾಂ ಸರ್ವೇಷಾಂ ಪ್ರವರಸ್ತಥಾ ।**
**ಭಗೋ ವಸುರ್ವಸಿಷ್ಠಶ್ಚ ಇಂದ್ರಃ ಸಮ್ಮತಿರೇವ ಚ ॥ ೧೩ ॥**

**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।**
**ಔಪಸ್ವಸ್ಥಾಃ ಸ್ವಸ್ಥಲಯೋ ವಾಲೋ ಹಾಲೋ ಹಯಾಶ್ಚಯೇ ॥ ೧೪ ॥**

**ಮಧ್ಯಂದಿನಾ ಅಕ್ಷತಯಃ ಪೈಪ್ಪಲಾ ದೇವಿಚಂಕಪಿ ।**
**ತ್ರೈಶೃಂಗಾ ವನಗಾ ಆಲವಾಃ ಕುಂಡಿನಾಶ್ಚ ನರೋತ್ತಮ ॥ ೧೫ ॥**

**ತ್ರ್ಯಾರ್ಷೇಯೋಪಿ ಮತಶ್ಚೈಷಾಂ ಸರ್ವೇಷಾಂ ಪ್ರವರಃ ಶುಭಃ ।**
**ವಸಿಷ್ಠಮಿತ್ರಾವರುಣೌ ಕುಂಡಿನಶ್ಚ ಮಹಾತಪಾಃ ॥ ೧೬ ॥**

**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।**
**ಜಾತೂಕರ್ಣಾ ಯವಶ್ಚೈವ ಪಾದಪಾಶ್ಚ ತಥೈವ ಚ ॥ ೧೭ ॥**

---

ಸಾಂಖ್ಯಾಯನ, ದಶೇರಕ, ವಾದಕಾಯನ, ಔದ್ಗ್ರಾಹ, ಲೇಖಯ, ಮಾಲೇಯ, ಬ್ರಹ್ಮವಲಯ, ಪೂರ್ಣಾಗಾರಿ, ಇವರೆಲ್ಲರೂ ತ್ರ್ಯಾರ್ಷೇಯ ಪ್ರವರರು, ಭಗ, ವಸು, ವಸಿಷ್ಠ, ಇಂದ್ರ, ಸಮ್ಮತಿ, ಈ ಋಷಿಗಳೈವರೂ ಪರಸ್ಪರ ವಿವಾಹಸಂಬಂಧವನ್ನು ಬೆಳೆಸಕೂಡದು

೧೪-೧೬ ಔಪಸ್ವಸ್ಥರು, ಸ್ವಸ್ಥಲಯರು, ವಾಲ, ಹಾಲ, ಹಯ, ಮಧ್ಯಂದಿನ, ಅಕ್ಷತಯ, ಪೈಪ್ಪಲ, ಭಾವಿಚಂಪಕೀ, ತ್ರೈಶೃಂಗ, ವನಗ, ಆಲವ, ಕುಂಡಿನ, ಮುಂತಾದ ಋಷಿಗಳೆಲ್ಲರೂ ತ್ರ್ಯಾರ್ಷೇಯರಾದರೂ ಇವರ ಪ್ರವರವು ಪರಮ ಮಂಗಳ ಕರವಾದುವು. ವಸಿಷ್ಠ, ಮಿತ್ರಾವರುಣ, ಕುಂಡಿನ ಋಷಿಗಳೂ ಸಹ ಪರಸ್ಪರ ಸಂಬಂಧಮಾಡಕೂಡದು.

೧೭-೧೯. ಜಾತೂಕರ್ಣ, ಯವ, ಪಾದಪ, ಈ ಮೂವರೂ ತ್ರ್ಯಾರ್ಷೇಯ ಪ್ರವರರಾಗಿರುವರು ಮತ್ತು ಜಾತೂಕರ್ಣ, ವಸಿಷ್ಠ, ಅಂತ್ಯ ಈ ಮೂವರು ಅವೈ

ತ್ರ್ಯಾರ್ಷೇಯೋಽಪಿ ಮತಶ್ಚೈಷಾಂ ಸರ್ವೇಷಾಂ ಪ್ರವರಸ್ತಥಾ ।
ಜಾತೂಕರ್ಣೋ ವಸಿಷ್ಠಶ್ಚ ತಥೈವಾಂತ್ಯಶ್ಚ ಪಾರ್ಥಿವ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ　　　　॥ ೧೮ ॥

ವಸಿಷ್ಠವಂಶೇಽಭಿಹಿತಾ ಮಯೈತೇ
ಋಷಿಪ್ರಬರ್ಹಾ ನೃಪ ಗೋತ್ರಕಾರಾಃ ।
ಯೇಷಾಂ ತು ನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ಪುರುಷೋ ಜಹಾತಿ　　　　॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಸಿಷ್ಠವಂಶಾನುಕೀರ್ತನಂನಾಮ
ಷೋಡಶಾಧಿಕಶತತಮೋಽಧ್ಯಾಯಃ

---

ಪಾಸ್ಯ ಮಂಡಲಿಯಲ್ಲಿ ಸೇರಿದವರು ಎಲೈ ವಜ್ರನರಪತಿಯೇ! ನಾನು ಈಗ ನಿನ್ನೊಡನೆ ವಸಿಷ್ಠವಂಶದಲ್ಲಿ ಹೇಳಲ್ಪಟ್ಟ ಗೋತ್ರಕಾರರಾದ ಋಷಿಶ್ರೇಷ್ಠರ ಹೆಸರುಗಳನ್ನೆಲ್ಲಾ ಹೇಳಿರುತ್ತೇನೆ ಯಾವ ಈ ಮಹರ್ಷಿಗಳ ನಾಮಸಂಕೀರ್ತನೆಯನ್ನು ಯಾವ ಮನುಷ್ಯನು ಮಾಡುವನೋ ಅಂತಹವನು ಸಮಸ್ತ ಪಾಪಗಳನ್ನು ಕಳೆದು ಕೊಂಡು ಪವಿತ್ರನಾಗುತ್ತಾನೆಂದು ಮಾರ್ಕಂಡೇಯರು ಹೇಳಿದರು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ
ರೂಪವಾದ ವಸಿಷ್ಠವಂಶಾನು ಕೀರ್ತನೆಯೆಂಬ ಹೆಸರಿನ ಒಂದು ನೂರ
ಹದಿನಾರನೇ ಅಧ್ಯಾಯವು ಮುಗಿದುದು



ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತದಶಾಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ವಸಿಷ್ಠಸ್ತು ಮಹಾತೇಜಾ ನಿಮೇಃ ಪೂರ್ವಪುರೋಹಿತಃ ॥ ೧ ॥

ಬಭೂವ ಪಾರ್ಥಿವಶ್ರೇಷ್ಠ ಯಜ್ಞೈಸ್ತಸ್ಯ ಸಮಂತತಃ ।
ಶಾಂತಾತ್ಮಾ ಪಾರ್ಥಿವಶ್ರೇಷ್ಠ ವಿಶಶ್ರಾಮ ತದಾ ಪುರಾ ॥ ೨ ॥

ತಂ ಗತ್ವಾ ಪಾರ್ಥಿವಶ್ರೇಷ್ಠೋ ನಿಮಿರ್ವಚನಮಬ್ರವೀತ್ ।
ಭಗವನ್ಯಷ್ಟುಮಿಚ್ಛಾಮಿ ತನ್ಮಾ ಯಾಜಯ ಮಾ ಚಿರಂ ॥ ೩ ॥

---

### ಒಂದುನೂರ ಹದಿನೇಳನೇ ಅಧ್ಯಾಯವು.

೧-೨ ಮಾರ್ಕಂಡೇಯರು ಹೇಳುತ್ತಾರೆ-ಮಹಾತೇಜಸ್ವಿಯಾದ ವಸಿಷ್ಠಮಹರ್ಷಿಯು ನಿಮಿ-ಚಕ್ರವರ್ತಿಗೆ ಪುರೋಹಿತನಾಗಿದ್ದನು ಆ ರಾಜನಿಗೆ ಅನೇಕ ಯಜ್ಞಗಳನ್ನು ಮಾಡಿಸಿದ್ದನು ಬಹುಕಾಲದವರಿಗೆ ಯಜ್ಞಪೌರೋಹಿತ್ಯಮಾಡಿ ಬಳಲಿದ್ದ ವಸಿಷ್ಠರು ಕೆಲವು ದಿನಗಳವರಿಗೆ ವಿಶ್ರಾಂತಿ ಪಡೆಯಬೇಕೆಂದಿಚ್ಛಿಸಿದವರಾಗಿ ವಿಶ್ರಾಂತಿ ಸುಖವನ್ನನುಭವಿಸುತ್ತಿದ್ದರು (ನಿಮಿಯು ಬಹಳ ಕ್ರತುಗಳನ್ನು ಮಾಡಿದ್ದನು.)

೩-೫ ರಾಜಶ್ರೇಷ್ಠನಾದ ನಿಮಿಯು ವಸಿಷ್ಠಮಹರ್ಷಿಯ ಬಳಿಗೆ ಬಂದು, ಸ್ವಾಮಿ! ನಾನು ಪುನಃ ಯಜ್ಞಮಾಡುತ್ತೇನೆ ತಾವು ಬಂದು ಪೌರೋಹಿತ್ಯವನ್ನು ವಹಿಸಿ ಕ್ರತುವನ್ನು ಮಾಡಿಸಬೇಕೆನ್ನಲು, ವಸಿಷ್ಠರು ರಾಜನೊಡನೆ ಇಂತು ಹೇಳಿದರು —ಎಲೈ ರಾಜನೇ! ಸ್ವಲ್ಪಕಾಲ ಸುಮ್ಮನಿರು ಸ್ವಲ್ಪ ಕಾಲದವರಿವಿಗೆ ನಿರೀಕ್ಷಿಸಿಕೊಂಡರು ನಿನ್ನ ಎಲ್ಲ ಕ್ರತುಗಳನ್ನೂ ಸದ್ಯಕ್ಕೆ ಸ್ವಲ್ಪ ನಿಲ್ಲಿಸು, ನಾನು ನಿನಗೆ

**ತಮುವಾಚ ಮಹಾತೇಜಾ ವಸಿಷ್ಠಃ ಪಾರ್ಥಿವೋತ್ತಮಂ ।**
**ಕಂಚಿತ್ಕಾಲಂ ಪ್ರತೀಕ್ಷಸ್ವ ತವ ಯಜ್ಞೈಃ ಸಮಂತತೈಃ ॥ ೪ ॥**

**ಭೃಶಂ ಶಾಂತೋಽಸ್ಮಿ ವಿಶ್ರಮ್ಯ ಯಾಜಯಿಷ್ಯಾಮಿ ತೇ ನೃಪ ।**
**ಏವಮುಕ್ತಃ ಪ್ರತ್ಯುವಾಚ ವಸಿಷ್ಠಂ ನೃಪಸತ್ತಮಃ ॥ ೫ ॥**

**ಪಾರಲೌಕಿಕ ಕಾರ್ಯೇಷು ಕಃ ಪ್ರತೀಕ್ಷಿತುಮುತ್ಸಹೇತ್ ।**
**ನ ಯಸ್ಯ ಸೌಹೃದಂ ಬ್ರಹ್ಮನ್ಕೃತಾಂತೇನ ಬಲೀಯಸಾ ॥ ೬ ॥**

**ಧರ್ಮಕಾರ್ಯೇ ತ್ವರಾ ಕಾರ್ಯಾ ಚಲಂ ಯಸ್ಮಾದ್ಧಿ ಜೀವಿತಂ ।**
**ಧರ್ಮಮಾರ್ಗರತೋ ಜಂತುರ್ಮೃತೋಽಪಿ ಸುಖಮಶ್ನುತೇ ॥ ೭ ॥**

**ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಂ ।**
**ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ನಾಸ್ಯ ನ ವಾ ಕೃತಂ ॥ ೮ ॥**

ಕ್ರತುಗಳನ್ನು ಮಾಡಿಸಿ ಬಹಳ ಬಳಲಿದ್ದೇನೆ, ನಾನೂ ಸ್ವಲ್ಪಕಾಲದವರೆಗೆ ವಿಶ್ರಮಿಸಿಕೊಂಡು ಆ ಬಳಿಕ ನಿನಗೆ ಬೇಕಾದ ಕ್ರತುಗಳನ್ನೆಲ್ಲಾ ಮಾಡಿಸುತ್ತೇನೆಂದು ಹೇಳಲು, ಆ ಮಹಾರಾಜನು ಸುಮಿತ್ರನಿರದ ವಸಿಷ್ಠರನ್ನು ಕುರಿತು ಮತ್ತಿಂತೆಂದನು ---

೬-೧೩ ಸ್ವಾಮಿ! ವಸಿಷ್ಠರೇ! ಪರಲೋಕಸಂಬಂಧವಾದ ಪುಣ್ಯಕಾರ್ಯಗಳನ್ನು ಮಾಡಲು ಯಾರು ತಾನೇ ಕಾಲವನ್ನು ನಿರೀಕ್ಷಿಸಿಯಾರು? ಆ ರೀತಿ ಕಾಲ ಬರಲೆಂದು ಕಾದುಕೊಂಡಿರುವ ಮನುಷ್ಯನನ್ನು ಬಲಿಷ್ಠನಾದ ಕಾಲಪುರುಷನು ಸ್ನೇಹದಿಂದ ಬಿಟ್ಟುಹೋಗುವನೇನು? ಈ ಜೀವಿತಕಾಲವೆಂಬುವುದು ಬಹು ಚಂಚಲವೂ, ಕ್ಷಣಿಕವೂ ಆದುದು, ಆದ್ದರಿಂದ ಧರ್ಮಕಾರ್ಯಗಳನ್ನು ಬಹು ಜಾಗ್ರತೆಯಿಂದ ಮಾಡಿಬಿಡಬೇಕು ಧರ್ಮಮಾರ್ಗದಲ್ಲಿಯೇ ನಿರತನಾದ ಮನುಷ್ಯನು ಮೃತನಾದಾಗ್ಯೂ ಪಾರಲೌಕಿಕ ಸುಖವನ್ನು ಹೊಂದುತ್ತಾನೆ ನಾಳೆಮಾಡುವ ಕೆಲಸವನ್ನು ಇಂದೇ ಮಾಡಿಬಿಡಬೇಕು ಸಾಯಂಕಾಲ ಮಾಡಿಬಿಡಬೇಕಾದ ಕೆಲಸವನ್ನು ಮಧ್ಯಾಹ್ನದಲ್ಲಿಯೇ ಮಾಡಿಬಿಡಬೇಕು ಮೃತ್ಯುವು ಈ ಮನುಷ್ಯನಿಂದ ಈ ಕೆಲಸ ನಡೆಯಿತು ಇನ್ನು ಇವನಿಂದಾಗಬೇಕಾದ ಕೆಲಸಗಳು ಬಹಳವಿವೆಯೆಂದು ಅವನನ್ನು ದಾಕ್ಷಿಣ್ಯದಿಂದ ಬಿಟ್ಟು ಹೋಗುವುದುಂಟೆ? ಆಯುಸ್ಸು ಮುಗಿಯಿತೆಂದು ತಿಳಿದೊಡನೆ ಮೃತ್ಯುದೇವತೆಯು ಆಯುಃಪೂರ್ತಿಯಾದ ಮಾನವನನ್ನು ಬಲಾತ್ಕಾರವಾಗಿ ಅಪಹರಿಸಿ

ಕ್ಷೇತ್ರಾಪತ್ಯಗೃಹಾಸಕ್ತಮನ್ಯತ್ರ ಗತಮಾನಸಂ ।
ವೃಕೀವೋರಣಮಾಸಾದ್ಯ ಮೃತ್ಯುರಾದಾಯ ಗಚ್ಛತಿ ॥ ೯ ॥

ನ ಕಾಲಸ್ಯ ಪ್ರಿಯಃ ಕಶ್ಚಿತ್ ದ್ವೇಷ್ಯೋ ನಾಽಸ್ಯ ನ ವಿದ್ಯತೇ ।
ಆಯುಷ್ಯೇ ಕರ್ಮಣಿ ಕ್ಷೀಣೇ ಪ್ರಸಹ್ಯ ಹರತೇ ಜನಂ ॥ ೧೦ ॥

ಪ್ರಾಣೋ ವಾಯುಶ್ಚಲತ್ವಂ ಚ ವಾಯೋರ್ವಿದಿತಮೇವ ಚ ।
ಯತ್ರ ಯಜ್ಜೀವ್ಯತೇ ಬ್ರಹ್ಮನ್ಕ್ಷಣಮಾತ್ರಂ ತದದ್ಭುತಂ ॥ ೧೧ ॥

ಸೋಽಹಂ ಸಂಭೃತಸಂಭಾರೋ ಭವನ್ಮೂಲಮುಪಾಗತಃ ।
ನ ಚೇದ್ಯಾಜಯಸೇ ಮಹ್ಯಂ ಯಾಸ್ಯಾಮ್ಯನ್ಯಂ ತು ಯಾಜಕಂ ॥ ೧೨ ॥

ಏವಮುಕ್ತಸ್ತದಾ ತೇನ ನಿಮಿನಾ ಬ್ರಾಹ್ಮಣೋತ್ತಮಃ ।
ಶಶಾಪ ತಂ ನಿಮಿಂ ಕ್ರೋಧಾದ್ವಿದೇಹಸ್ತ್ವಂ ಭವಿಷ್ಯಸಿ ॥ ೧೩ ॥

ಶ್ರಾಂತಂ ಮಾಂ ತ್ವಂ ಸಮುತ್ಸೃಜ್ಯ ಯಸ್ಮಾದನ್ಯಂ ದ್ವಿಜೋತ್ತಮಂ ।
ಧರ್ಮಜ್ಞಃ ಸನ್ನರೇಂದ್ರಾದ್ಯ ಯಾಜಕಂ ಕರ್ತುಮರ್ಹಸಿ ॥ ೧೪ ॥

ನಿಮಿಸ್ತಂ ಪ್ರತ್ಯುವಾಚಾಥ ಧರ್ಮಕಾರ್ಯರತಸ್ಯ ಮೇ ।
ವಿಘ್ನಂ ಕರೋಷಿ ನಾನ್ಯೇನ ಯಾಜನಂ ಚ ತಥೇಚ್ಛಸಿ ॥ ೧೫ ॥

---

ಕೊಂಡು ಹೊರಟೇಹೋಗುತ್ತದೆ ಈ ಪ್ರಾಣವೂ, ಅದನ್ನು ಧರಿಸಿರುವ ವಾಯುವೂ, ವಾಯುವು ಅದೆಂತು ಚಂಚಲವೋ ಅದರಂತೆ ಚಂಚಲಗತಿಯುಳ್ಳದು ಎಲ್ಲಿ ಯಾವ ಪ್ರಾಣಿಯು ಕ್ಷಣಮಾತ್ರವಾದರೂ ಪ್ರಾಣವನ್ನು ಧರಿಸಿರುವುದೋ ಅದೇ ಅತ್ಯಾಶ್ಚರ್ಯ ಕರವಾದುದು. ಆದ್ದರಿಂದ, ಮಹನೀಯರಾದ ಪುರೋಹಿತರೇ ! ನಾನು ಈಗ ಸಕಲ ಯಜ್ಞಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು ಪುರೋಹಿತರಿಗಾಗಿ ಕಾದುಕೊಂಡಿದೇನೆ. ಆದ್ದರಿಂದಲೇ ನಿಮ್ಮ ಪಾದಸನ್ನಿಧಿಯಲ್ಲಿ ಈರೀತಿ ವಿಜ್ಞಾಪಿಸಿಕೊಂಡಿದೇನೆ ಈಗ ನೀವು ಬಂದು ಯಜ್ಞಮಾಡಿಸದೇ ಹೋದರೆ ನಾನು ಬೇರೇ ಪುರೋಹಿತರನ್ನು ಕರೆದು ಯಜ್ಞದ ಕೆಲಸವನ್ನು ನಡೆಯಿಸುತ್ತೇನೆ

೧೩-೧೯. ಈರೀತಿ ನಿಮಿಚಕ್ರವರ್ತಿಯು ಹೇಳಿದ ಮಾತನ್ನು ಕೇಳಿ ವಸಿಷ್ಠರಿಗೆ ಬಹಳ ಕೋಪಬಂದಿತು. ಅದನ್ನು ಸ್ವಲ್ಪವಾದರೂ ತಡೆದುಕೊಳ್ಳಲಾರದೆ ಆ ಮಹರ್ಷಿಗಳು ನೀನು ವಿದೇಹನಾಗು (ಸಾಯಿ), ಎಂದು ಮುಡುಕಿನಿಂದ ಶಾಪವನ್ನು

**ಶಾಪಂ ದದಾಮಿ ತಸ್ಮಾತ್ತ್ವಂ ವಿದೇಹೋऽದ್ಯ ಭವಿಷ್ಯಸಿ ।**
**ಏವಮುಕ್ತೇ ತು ತೌ ಜಾತೌ ವಿದೇಹೌ ದ್ವಿಜಪಾರ್ಥಿವೌ ॥ ೧೬ ॥**

**ದೇಹಹೀನೌ ತಯೋರ್ಜೀವೌ ಬ್ರಾಹ್ಮಣಮುಪಜಗ್ಮತುಃ ।**
**ಆಗತೌ ತು ಸಮೀಪೇऽಥ ಬ್ರಹ್ಮಾ ವಚನಮಬ್ರವೀತ್ ॥ ೧೭ ॥**

**ಅದ್ಯ ಪ್ರಭೃತಿ ತೇ ಸ್ಥಾನಂ ನಿಮೇ ಜೀವಂ ದದಾಮ್ಯಹಂ ।**
**ನೇತ್ರಪಕ್ಷ್ಮಸು ಸರ್ವೇಷಾಂ ಮನುಷ್ಯಾಣಾಂ ಭವಿಷ್ಯಸಿ ॥ ೧೮ ॥**

**ತ್ವತ್ಸಂಬಂಧಾಸ್ತಥಾ ತೇಷಾಂ ನಿಮೇಷಃ ಸಂಭವಿಷ್ಯತಿ ।**
**ಚಾಲಯಿಷ್ಯಂತಿ ತು ಯದಾ ನೇತ್ರಪಕ್ಷ್ಮಾಣಿ ಮಾನವಾಃ ॥ ೧೯ ॥**

---

ಕೊಟ್ಟೇಬಿಟ್ಟರು ಆಗ ನಿಮಿಯು ಶಾಂತಚಿತ್ತನಾಗಿದ್ದಾಗ್ಯೂ ವಸಿಷ್ಠರ ಬಾಯಿಂದ ಕಠಿಣ ಹೊರಟ ಮಾತನ್ನು ಕೇಳಿ ದುಃಖಸಂತಪ್ತನಾಗಿ ನಿರಪರಾಧಿಯಾದ ನನಗೆ ಇಂತಹ ಘೋರಶಾಪವನ್ನು ಕೊಡಲು ಕಾರಣವೇನೆನ್ನಲು, ವಸಿಷ್ಠರು ಹೇಳಿದರು ಅಯ್ಯಾ ! ರಾಜನೇ ! ನೀನು ಸಕಲ ಧರ್ಮವನ್ನೂ ತಿಳಿದಿದ್ದವನಾದಾಗ್ಯೂ ಬಹಳ ಬಳಲಿಕೆಯಿಂದ ಸ್ವಲ್ಪ ವಿಶ್ರಾಂತಿಯನ್ನು ಹೊಂದಲೆಳಸಿದ ಕುಲಪುರೋಹಿತನಾದ ನನ್ನನ್ನು ಬಿಟ್ಟು ಬೇರೇ ಪುರೋಹಿತನನ್ನು ಗೊತ್ತುಮಾಡಿಕೊಳ್ಳುವೆನೆಂದು ಹೇಳಿದ ತಪ್ಪಿಗಾಗಿ ಈ ಶಿಕ್ಷೆಯನ್ನನುಭವಿಸಬೇಕಾಯಿತೆನ್ನಲು , ನಿಮಿಯು ಕೋಪದಿಂದ ಪ್ರತ್ಯುತ್ತರ ಹೇಳಿದುದೇನೆಂದರೆ —ಅಯ್ಯಾ, ಬ್ರಾಹ್ಮಣೋತ್ತಮ ! ಧರ್ಮಕಾರ್ಯದಲ್ಲಿ ನಿರತನಾದ ನನಗೆ ನೀನು ವಿಘ್ನವನ್ನು ತಂದೊಡ್ಡಿದೆಯಾದ್ದರಿಂದಲೂ, ಬೇರೇ ಪುರೋಹಿತರನ್ನು ಗೊತ್ತುಮಾಡಿಕೊಳ್ಳಲು ಅವಕಾಶಕೊಡಲು ನಿರಾಕರಿಸಿದ್ದರಿಂದಲೂ ನಿನಗೆ ನಾನೂ ಶಾಪವನ್ನು ಕೊಡಬೇಕಾಗಿ ಬಂದಿದೆ ನೀನೂ ಸಹ ನನ್ನ ಹಾಗೆ ವಿದೇಹಸ್ಥಿತಿಯನ್ನು ಹೊಂದು, ಎಂದು ಪ್ರತಿಶಾಪವನ್ನು ಕೊಟ್ಟೇಬಿಟ್ಟನು ಆಕೂಡಲೆ ಆ ರಾಜನೂ ಪುರೋಹಿತನೂ (ಇಬ್ಬರೂ) ದೇಹತ್ಯಾಗಮಾಡಿಬಿಟ್ಟರು ಆದರೆ ದೇಹಹೀನವಾದ ಅವರಿಬ್ಬರ ಜೀವಗಳೂ ಕೂಡಲೆ ತಮ್ಮ ತಮ್ಮ ದೂರುಗಳನ್ನು ಹೇಳಿಕೊಳ್ಳಲು ಬ್ರಹ್ಮನ ಹತ್ತಿರಕ್ಕೆ ಹೋದುವು. ಅವರಿಬ್ಬರ ಮನೋಭಾವವನ್ನು ತಿಳಿದ ಭಗವಾನ್ ಬ್ರಹ್ಮನು, ಎಲೈ ನಿಮಿಯೇ ! ನಿನಗೆ ಈಗ ಜೀವದಾನವನ್ನು ಮಾಡುತ್ತೇನೆ ನಿನಗೆ ಒಂದು ಸ್ಥಾನವನ್ನು ಕಲ್ಪಿಸಿಕೊಡುತ್ತೇನೆ ಈ ನಿಮಿಷದಿಂದಾರಂಭಿಸಿ ನೀನು ಸಕಲ ಮನುಷ್ಯರ ಕಣ್ಣಿನ ರೆಪ್ಪೆಗಳಲ್ಲಿ ಹೋಗಿ ಸೇರಿಕೋ. ನಿನ್ನ ಸಂಬಂಧದಿಂದ ಇನ್ನು ಮುಂದೆ ಸಕಲ ಮನುಷ್ಯರೂ ನಿಮೇಷರಾಗಲಿ (ಕಣ್ಣುರೆಪ್ಪೆ ಮುಚ್ಚಿತೆಗೆಯುವ ಭಾವ)

**ಏವಮುಕ್ತೇ ಮನುಷ್ಯಾಣಾಂ ನೇತ್ರಪಕ್ಷ್ಮಸು ಸರ್ವಶಃ ।**
**ಜಗಾಮ ನಿಮಿಜೀವಂ ತು ವರದಾನಾತ್ಸ್ವಯಂಭುವಃ ॥ ೨೦ ॥**

**ವಶಿಷ್ಠಜೀವಂ ಭಗವಾನ್ಬ್ರಹ್ಮಾ ವಚನಮಬ್ರವೀತ್ ।**
**ಮಿತ್ರಾವರುಣಯೋಃ ಪುತ್ರೋ ವಸಿಷ್ಠ ತ್ವಂ ಭವಿಷ್ಯಸಿ ॥ ೨೧ ॥**

**ವಶಿಷ್ಠ ಇತಿ ತೇ ನಾಮ ತತ್ರಾಪಿ ಚ ಭವಿಷ್ಯತಿ ।**
**ಜನ್ಮದ್ವಯಮತೀತಂ ಚ ತತ್ರಾಪಿ ತ್ವಂ ಸ್ಮರಿಷ್ಯಸಿ ॥ ೨೨ ॥**

**ಏತಸ್ಮಿನ್ನೇವ ಕಾಲೇ ತು ಮಿತ್ರಶ್ಚ ವರುಣಸ್ತಥಾ ।**
**ಬದರ್ಯಾಶ್ರಮಮಾಸಾದ್ಯ ತಪಸ್ತೇಪತುರವ್ಯಯಂ ॥ ೨೩ ॥**

---

ಟಿಪ್ಪಣಿ - ದೇವತೆಗಳಿಗೆ ಅನಿಮಿಷರೆಂದು ಈ ಕಾಲದಿಂದ ಹೆಸರಾಯಿತು ದೇವತೆಗಳು ರೆಪ್ಪೆಹೊಯ್ಯುವುದಿಲ್ಲ ಮನುಷ್ಯರು ಮಾತ್ರ ಕಣ್ಣುಮುಚ್ಚಿ ಕಣ್ಣು ಬಿಡುವುದರಿಂದ ನಿಮಿಷರೆನಿಸಿದರು ಅಂದರೆ 'ನಿಮಿಚಕ್ರವರ್ತಿಯು ಎಲ್ಲರ ರೆಪ್ಪೆಗಳನ್ನೂ ಪ್ರವೇಶಿಸಿದ ಕಾರಣದಿಂದ ನಿಮಿಷರೆಂಬ ಹೆಸರು ಪ್ರಸಿದ್ಧವಾಗಿ ಮಾನವರಿಗೆ ಇಂದಿಗೂ ನಿಂತಿರುವುದು ಅದನ್ನು ಮುಂದೆ ವಿವರಿಸಲಾಗುವುದು

೨೦ ಯಾವಾಗ ಯಾವಾಗ ಜನರು ರೆಪ್ಪೆ ಮುಚ್ಚುವರೋ ಆಗಲೆಲ್ಲಾ, ನೀನು ಅವರ ಕಣ್ಣುಗಳಲ್ಲಿರುತ್ತೀ, ಹೀಗೆಂದು ಯಾವಾಗ ಬ್ರಹ್ಮನ ಬಾಯಿಯಿಂದ ಹೊರಟಿತೋ ಆಕೂಡಲೆ ನಿಮಿಯ ಜೀವವು ಬ್ರಹ್ಮವರಬಲದಿಂದ ನಕಲ ಜನರ ಕಣ್ಣುರೆಪ್ಪೆಗಳಲ್ಲಿಯೂ ಹೋಗಿ ನೇರಿಕೊಂಡಿತು

೨೧-೨೨ ಈರೀತಿ ನಿಮಿಗೆ ನೇಮಿಸಿ ಬ್ರಹ್ಮನು ವಸಿಷ್ಠಜೀವದ ಕಡೆಗೆ ತಿರುಗಿ ಇಂತೆಂದು ಹೇಳಿದನು —ಎಲೈ ವಸಿಷ್ಠನೇ ! ನೀನು ಮಿತ್ರಾ-ವರುಣ ಋಷಿಗಳ ಮಗನಾಗಿ ಹುಟ್ಟುತ್ತೀಯೆ ಆಗಲೂ ನಿನಗೆ ವಸಿಷ್ಠನೆಂದೇ ಹೆಸರಿರುವುದು ಆಗ ನಿನಗೆ ನಿನ್ನ ಹಿಂದಿನ ಎರಡು ಜನ್ಮಗಳ ನೆನಪೂ ಇರುವುದು ಹೀಗೆಂದು ವರವನ್ನು ಕೊಟ್ಟನು

೨೩-೨೮ ಇದೇ ಸಮಯಕ್ಕೆ ಸರಿಯಾಗಿ ಮಿತ್ರ-ವರುಣರಿಂಬಿಬ್ಬರು ಋಷಿಗಳು ಬದರಿಕಾಶ್ರಮದಲ್ಲಿ ಉಗ್ರ (ಶ್ರೇಷ್ಠ) ವಾದ ತಪಸ್ಸನ್ನು ಮಾಡುತ್ತಾ ಕುಳಿತಿದ್ದರು ಈ ರೀತಿ ತಪಸ್ಸುಮಾಡುತ್ತಿದ್ದ ಆ ಕಾಲವು ವಸಂತ (ಮಾಧವ) ಋತುವಿನ ಸಮಯವಾಗಿತ್ತು ಹೂಗಿಡಗಳೆಲ್ಲಾ ಹೂವಿನಿಂದ ಕೂಡಿ ಸುವಾಸನೆಯನ್ನು ಬೀರುತ್ತಿದ್ದುವು.

ತಪಸ್ಯತೋಸ್ತಯೋರೇವಂ ಕದಾಚಿನ್ಮಾಧವೇ ಋತೌ ।
ಪುಷ್ಪಿತದ್ರುಮಸಂಛಿನ್ನೇ ಶುಭೇ ದಕ್ಷಿಣಮಾರುತೇ ॥ ೨೪ ॥

ಉರ್ವಶ್ಯಥ ವರಾರೋಹಾ ಕುರ್ವತೀ ಕುಸುಮೋಚ್ಚಯಂ ।
ಸುಸೂಕ್ಷ್ಮರಕ್ತವಸನಾ ತಯೋರ್ದೃಷ್ಟಿಪಥಂ ಗತಾ ॥ ೨೫ ॥

ತಾಂ ದೃಷ್ಟ್ವಾ ಸುಮುಖೀಂ ಸುಭ್ರೂಂ ನೀಲನೀರಜಲೋಚನಾಂ ।
ಉಭೌ ಚುಕ್ಷುಭತುರ್ವೀರ್ಯಾತ್ತದ್ರೂಪಪರಿಮೋಹಿತೌ ॥ ೨೬ ॥

ಸ್ಕನ್ನಂ ರೇತಸ್ತಯೋರ್ದೃಷ್ಟ್ವಾ ಶಾಪಭೀತಾ ವರಾಪ್ಸರಾಃ ।
ಚಕಾರ ಕಲಶೇ ಸುಭ್ರೂಸ್ತೋಯಪೂರ್ಣೇ ಮನೋರಮೇ ॥ ೨೭ ॥

ತಸ್ಮಾದೃಷಿವರೌ ಜಾತೌ ತೇಜಸಾಪ್ರತಿಮೌ ಭುವಿ ।
ವಶಿಷ್ಠಶ್ಚಾಪ್ಯಗಸ್ತ್ಯಶ್ಚ ಮಿತ್ರಾವರುಣಯೋಃ ಸುತೌ ॥ ೨೮ ॥

ವಶಿಷ್ಠಸ್ತೂಪಯೇಮೇಥ ಭಗಿನೀಂ ನಾರದಸ್ಯ ತು ।
ಅರುಂಧತೀಂ ವರಾರೋಹಾಂ ತಸ್ಯಾಂ ಶಕ್ತಿಮಜೀಜನತ್ ॥ ೨೯ ॥

---

ಆಗ ದಕ್ಷಿಣದಿಕ್ಕಿನಿಂದ ತಂಗಾಳಿಯು ಬೀಸತೊಡಗಿತು ಅದೇ ಸಮಯದಲ್ಲಿ ಅಪ್ಸರಸ್ತ್ರೀಯಾದ ಊರ್ವಶಿಯು ಆ ತಪೋವನದಲ್ಲಿಯೇ ಹೂಗಳನ್ನು ಬಿಡಿಸುತ್ತಾ ನಿಂತಿದ್ದಳು ಬಹು ತೆಳುವಾದ ಒಂದು ಕೆಂಪುಬಣ್ಣದ ಸೀರೆಯನ್ನವಳು ಉಟ್ಟಿದ್ದಳು ಅದರೊಳಗಿನಿಂದ ಅವಳ ಅಂಗಾಂಗಗಳೆಲ್ಲವೂ ಕಾಣಬರುತ್ತಿದ್ದುವು ಈ ಸ್ಥಿತಿಯಲ್ಲಿದ್ದ ಊರ್ವಶಿಯು ಮಿತ್ರ-ವರುಣರ ಕಣ್ಣಿಗೆ ಗೋಚರಳಾದಳು ಅವಳನ್ನು ನೋಡಿದೊಡನೆ ಋಷಿಗಳೀರ್ವರ ಜಿತಮನಸ್ಸೂ ಕಲಕಿಹೋಯಿತು ಅವಳ ರೂಪಸೌಂದರ್ಯದಿಂದ ಮೋಹಿತರಾದ ಅವರ ಜಿತೇಂದ್ರಿಯತ್ವವು ಕರಗಿ ನೀರಾಗಿ ವೀರ್ಯರೂಪದಿಂದ ಹೊರಹೊರಟಿತು ಈ ಋಷಿಗಳ ಸ್ಥಿತಿಯನ್ನು ಊರ್ವಶಿಯು ಅರಿತಳು ಋಷಿವೀರ್ಯವು ವ್ಯರ್ಥವಾದರೆ ತನಗೆಲ್ಲಿ ಶಾಪತಟ್ಟುವುದೋ ಎಂದು ಅವಳಿಗೆ ದಿಗಿಲಾಯಿತು ಆಗ ಆ ಅಪ್ಸರಸ್ತ್ರೀಯು ಆ ಋಷಿಗಳೀರ್ವರ ರೇತಸ್ಸನ್ನು ನೀರು ತುಂಬಿದ್ದ ಕಲಶವೊಂದರಲ್ಲಿ ನೇರಿಸಿದಳು ಆ ವೀರ್ಯದಿಂದ ಆ ಕಲಶದಲ್ಲಿ ಮಹಾತೇಜಸ್ವಿಗಳಾದೀರ್ವರು ಮಹರ್ಷಿಗಳು ಸಂಜನಿಸಿದರು ಅವರಿಬ್ಬರೂ ಮಿತ್ರಾ-ವರುಣರ ಪುತ್ರರಾದ ವಸಿಷ್ಠ-ಅಗಸ್ತ್ಯ ಋಷಿಗಳೆಂದು ಪ್ರಸಿದ್ಧಿಪಡೆದ ಮಹರ್ಷಿಗಳು

೨೯-೩೧ ಅನಂತರ ವಸಿಷ್ಠರು ನಾರದನ ತಂಗಿಯಾದ ಅರುಂಧತಿಯನ್ನು ಮದುವೆಯಾಗಿ ಆಕೆಯ ಹೊಟ್ಟೆಯಲ್ಲಿ ಶಕ್ತಿಋಷಿಗಳನ್ನು ಮಗನನ್ನಾಗಿ ಪಡೆದರು.

ಶಕ್ತೇಃ ಪರಾಶರಃ ಪುತ್ರಸ್ತಸ್ಯ ವಂಶಂ ನಿಬೋಧ ಮೇ ।
ಯಸ್ಯ ದ್ವೈಪಾಯನಃ ಪುತ್ರಃ ಸ್ವಯಂ ವಿಷ್ಣುರಜಾಯತ ॥ ೩೦ ॥

ಪ್ರಕಾಶೋ ಜನಿತೋ ಯೇನ ಲೋಕೇ ಭಾರತಚಂದ್ರಮಾಃ ।
ಪರಾಶರಸ್ಯ ತಸ್ಯ ತ್ವಂ ಶೃಣು ವಂಶಮನುತ್ತಮಂ ॥ ೩೧ ॥

ಕಾರ್ದಮಯೋ ವಾಹಯಾನೋ ಜೈಮಯೋ ವ್ಯಮುತಾಯನಃ ।
ಗೋಪಾಲಃ ಪಂಚಮಶ್ಚೈಷಾಂ ಜ್ಞೇಯಾಃ ಕೃಷ್ಣಪರಾಶರಾಃ ॥ ೩೨ ॥

ಪ್ರಾರೋಹಯೋ ಬಾಹ್ಯತಪಾಃ ಪಾರ್ಷಯಃ ಕೌತುಜಾತಯಃ ।
ಹಾರ್ಯಶ್ವಿಃ ಪಂಚಮಶ್ಚೈಷಾಂ ಜ್ಞೇಯಾ ನೀಲಪರಾಶರಾಃ ॥ ೩೩ ॥

ಕಾಷ್ಣಾರ್ಯಯಣಾಃ ಕಾಪಿಸೌಧಾಃ ಕೋಕೇಯಸ್ಯಾ ತಯಾಸ್ತಪಾಃ ।
ಪುಷ್ಕರಃ ಪಂಚಮಶ್ಚೈಷಾಂ ಜ್ಞೇಯಾ ರಕ್ತಪರಾಶರಾಃ ॥ ೩೪ ॥

ಶ್ರವಿಷ್ಠಾಯನಾ ವಾರ್ಷ್ಣೇಯಾ ದಾಸೇಯಾಃ ಶ್ಲೋಕಜಾಶ್ಚ ಯೇ ।
ಇಷೀಕಹಸ್ತಃ ಪಂಚಮಶ್ಚ ಏತೇ ಶ್ವೇತಪರಾಶರಾಃ ॥ ೩೫ ॥

ವಟಿಕಾ ಬಾದರಾಶ್ಚೈವ ಸ್ಕಂಭನ್ಯಾಃ ಕ್ರೋಶಕಾತಯಃ ।
ಕ್ಷಾಮಿರೇಷಾಂ ಪಂಚಮಶ್ಚ ಏತೇ ಗೌರಪರಾಶರಾಃ ॥ ೩೬ ॥

---

ಆ ಶಕ್ತಿಗೆ ಪರಾಶರರು ಮಕ್ಕಳಾಗಿ ಹುಟ್ಟಿದರು ಆ ಪರಾಶರರ ವಂಶವನ್ನು ಈಗ ನಿನಗೆ ಹೇಳುತ್ತೇನೆ, ಕೇಳು ಆ ಪರಾಶರ ಮಹರ್ಷಿಗಳ ಹೊಟ್ಟೆಯಲ್ಲಿ ಸಾಕ್ಷಾನ್ಮಹಾವಿಷ್ಣುವೇ ದ್ವೈಪಾಯನ (ವ್ಯಾಸ) ರಾಗಿ ಹುಟ್ಟಿದರು ಈ ಮಹನೀಯರೇ ಭಾರತವನ್ನು ರಚಿಸಿದವರು ಇಂತಹ ಪರಮಪೂಜ್ಯರಾದ ಪರಾಶರ ಮಹರ್ಷಿಗಳ ವಂಶವನ್ನೀಗ ನಿನ್ನೊಡನೆ ಹೇಳುತ್ತೇನೆ, ಕೇಳು

೩೨-೩೩ ಕಾದ್ರಮಯ, ವಾಹಯನ, ಜೈಮಯ, ಮಾಮತಾಯನ, ಗೋಪಾಲಿ, ಈ ಐದು ಜನ ಋಷಿಗಳನ್ನು ಕೃಷ್ಣಪರಾಶರರೆಂದು ಹೇಳುವರು ಪ್ರಾರೋಹಯ, ಬಾಹ್ಯತಪ, ಪಾರ್ಷಯ, ಕೌತುಜಾತಯ, ಹಾರ್ಯಶ್ವಿ ಎಂಬ ಐವರೂ ನೀಲಪರಾಶರರೆಂದು ಪ್ರಸಿದ್ಧರಾಗಿರುವರು

೩೪ ಕಾಷ್ಣಾರ್ಯಯಣರು, ಕಾಪಿಸೌಧರು, ಕೋಕೇಯಸರು, ತಯಾಸ್ತಪರು, ಪುಷ್ಕರರಂಬೈವರು ಋಷಿಗಳೂ ರಕ್ತಪರಾಶರರೆನಿಸಿಕೊಂಡವರು

೩೫-೩೬

**ಖಿಲ್ವಾಯಣೀ ವಾರ್ಷ್ಣಯಣೀ ತಿಲ್ವಣೋ ಬೈಲ್ವಯೂಥಪಃ ।**
**ತಾಮಿರೇಷಾಂ ಪಂಚಮುಶ್ಚ ಏತೇ ಧೂಮ್ರಪರಾಶರಾಃ ॥ ೩೭ ॥**

**ಪರಾಶರಾಣಾಂ ಸರ್ವೇಷಾಂ ತ್ರ್ಯಾರ್ಷೇಯಃ ಪ್ರವರೋ ಮತಃ ।**
**ಪರಾಶರಶ್ಚ ಶಕ್ತಿಶ್ಚ ವಸಿಷ್ಠಶ್ಚ ಮಹಾತಪಾಃ ॥ ೩೮ ॥**

**ಪರಸ್ಪರಮವೈವಾಹ್ಯಾಃ ಸರ್ವ ಏವ ಪರಾಶರಾಃ ॥ ೩೯ ॥**

**ಉಕ್ತಾಸ್ತ್ವೇತೇ ನೃಪ ವಂಶಮುಖ್ಯಾಃ**
**ಪಾರಾಶರಾಃ ಸೂರ್ಯಸಮಪ್ರಭಾವಾಃ ।**
**ಯೇಷಾಂ ತು ನಾಮ್ನಾಂ ಪರಿಕೀರ್ತನೇನ**
**ಪಾಪಂ ಸಮಗ್ರಂ ಪುರುಷೋ ಜಹಾತಿ ॥ ೪೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಪರಾಶರವಂಶಾನುಕೀರ್ತನಂ ನಾಮ**
**ಸಪ್ತದಶಾಧಿಕಶತತಮೋಽಧ್ಯಾಯಃ**

---

೩೭ ಖಿಲ್ವಾಯಣೀ, ವಾರ್ಷ್ಣಯಣೀ, ಕಿಲ್ವಣ, ಬೈಲ್ವಯೂಥಪ, ಕಾಮಿ, ಈ ಐದು ಮಂದಿ ಋಷಿಗಳೂ ಧೂಮ್ರಪರಾಶರರೆನಿಸಿಕೊಳ್ಳುವರು.

೩೮-೩೯ ಈ ಎಲ್ಲಾ ವಿಧವಾದ ಪರಾಶರರಿಗೂ ತ್ರಿಯಾರ್ಷೇಯಪ್ರವರರೆಂದೇ ಹೆಸರು ಪರಾಶರ, ವಸಿಷ್ಠ, ಶಕ್ತಿ ಇವರೆಲ್ಲರೂ ಪರಾಶರರಗುಂಪಿಗೇ ಸೇರಿದವರಾದ್ದರಿಂದ ಪರಸ್ಪರ ಅವೈವಾಹ್ಯರಾಗಿರುವರು

೪೦ ಎಲೈ ವಜ್ರರಾಜೇಂದ್ರನೇ! ಸೂರ್ಯನಿಗೆ ಸಮನಾದ ಪ್ರಭಾವವುಳ್ಳ ಪರಾಶರರ ವಂಶದಲ್ಲಿ ಮುಖ್ಯರಾದ ಋಷಿಗಳ ಹೆಸರನ್ನು ನಿನಗೆ ತಿಳಿಸಿರುತ್ತೇನೆ. ಯಾರು ಈ ಋಷಿಗಳ ನಾಮವನ್ನುಚ್ಚರಿಸುವರೋ ಅಂತಹ ಮಹನೀಯರು ತಮ್ಮ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧರಾಗುತ್ತಾರೆ

ಇಂತೆಂಬಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಪರಾಶರವಂಶಾನುಕೀರ್ತನೆಯೆಂಬ ಹೆಸರಿನ
ಒಂದುನೂರ ಹದಿನೇಳನೆಯ ಅಧ್ಯಾಯವು
ಮುಗಿದುದು

ಶ್ರೀ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಅಷ್ಟಾದಶಾಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತಃಪರಮಗಸ್ತ್ಯಸ್ಯ ವಕ್ಷ್ಯೇ ವಂಶೋದ್ಭವಾನ್ದ್ವಿಜಾನ್ ।
ಆಗಸ್ತ್ಯೇಯಃ ಕರಂಭೋ ಯಃ ಕೌಸಲ್ಯಾಕುಲಿಜಾಸ್ತಥಾ ॥ ೧ ॥

ಸ್ವಮೇಧಸೋ ಮಯೋಭುವಸ್ತಥಾ ಗಾಂಧಾರಕಾಯನಿಃ ।
ಪೌಲಸ್ತ್ಯಾಃ ಪುಲಹಾಶ್ಚೈವ ಕ್ರತುವಂಶಭವಾಸ್ತಥಾ ॥ ೨ ॥

ವಾರ್ಷ್ಣೇಯೋಽಪಿ ಮತಶ್ಚೈಷಾಂ ಸರ್ವೇಷಾಂ ಪ್ರವರಾಃ ಶುಭಾಃ ।
ಅಗಸ್ತ್ಯಶ್ಚ ಮಹೇಂದ್ರಶ್ಚ ಋಷಿಶ್ಚೈವ ಮಯೋಭುವಃ ॥ ೩ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಪೌರ್ಣಮಾಸಾಃ ಪಾರಣಾಶ್ಚ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ॥ ೪ ॥

---

### ಒಂದುನೂರ ಹದಿನೆಂಟನೆಯ ಅಧ್ಯಾಯವು.

೧-೪ ಇನ್ನು ಮುಂದಕ್ಕೆ ಅಗಸ್ತ್ಯವಂಶದಲ್ಲಿ ಹುಟ್ಟಿದ ಋಷಿಗಳ ಹೆಸರನ್ನು ಹೇಳುತ್ತೇನೆ ಕೌಸಲ್ಯಾಕುಲಜರಾದ ಆಗಸ್ತ್ಯೇಯರು, ಕರಂಭರು, ಸ್ವಮೇಧಸರು, ಮಯೋಭವರು, ಗಾಂಧಾರಕಾಯನಿಗಳು, ಪೌಲಸ್ತ್ಯರು, ಪುಲಹರು, ಇವರೆಲ್ಲರೂ ವಾರ್ಷ್ಣೇಯರಾದಾಗ್ಯೂ ಸಕಲರ ಪ್ರವರಗಳೂ ಶುಭಕರವಾದುವುಗಳು ಆಗಸ್ತ್ಯ, ಮಹೇಂದ್ರ, ಮಯೋಭುವರು, ಪರಸ್ಪರ ಅವೈವಾಹ್ಯರೆಂದು ತಿಳಿದುಕೊಳ್ಳಬೇಕು ಪೌರ್ಣಮಾಸ್ಯರು, ವಾರಣರು ಸಹ ತ್ರಿಯಾರ್ಷೇಯ ಪ್ರವರರೆಂದು ತಿಳಿಯಬೇಕು.

ಅಗಸ್ತ್ಯಃ ಪೌರ್ಣಮಾಸಶ್ಚ ಪಾರಣಶ್ಚ ಮಹಾತಪಾಃ ।
ಪರಸ್ಪರಮನ್ವೈವಾಹ್ಯಾ ಪೌರ್ಣಮಾಸಾಶ್ಚ ಪಾರಣಂ ॥ ೫ ॥

ಏತದುಕ್ತಮೃಷೀಣಾಂ ತೇ ವಂಶಮುಕ್ತಮಪೌರುಷಂ ।
ಅತಃಪರಂ ಪ್ರವಕ್ಷ್ಯಾಮಿ ಕಿಂ ತವಾನಘ ಕಥ್ಯತಾಂ ॥ ೬ ॥

॥ ವಜ್ರ ಉವಾಚ ॥
ಪುಲಹಸ್ಯ ಪುಲಸ್ತ್ಯಸ್ಯ ಕ್ರತೋಶ್ಚೈವ ಮಹಾತ್ಮನಃ ।
ಅಗಸ್ತ್ಯಸ್ಯ ತಥಾ ಚೈಕಂ ಕಥಂ ವಂಶಂ ತದುಚ್ಯತೇ ॥ ೭ ॥

॥ ಮಾರ್ಕಂಡೇಯ ಉವಾಚ ॥
ಕ್ರತುಃ ಖಲ್ವನಪತ್ಯೋಽಸ್ತಿ ರಾಜನ್ವೈವಸ್ವತೇಽಂತರೇ ।
ಇಧ್ಮವಾಹಂ ಸ ಪುತ್ರತ್ವೇ ಜಗ್ರಾಹ ನೃಪಸತ್ತಮ ॥ ೮ ॥

---

೫ ಅಗಸ್ತ್ಯ, ಪೌರ್ಣಮಾಸ, ಪಾರಣ ಋಷಿಗಳು ಈ ಮೂವರೂ ಅನ್ವೈವಾಹ್ಯರೆಂದು ತಿಳಿಯಬೇಕು

೬ ಎಲೈ ವಜ್ರರಾಜನೇ ! ಈ ಅಪೌರುಷೇಯವಾದ ಋಷಿಗಳ ವಂಶ ಚರಿತ್ರೆಯನ್ನು ನಿನಗೆ ತಿಳಿಸಿದ್ದಾಯಿತು ಇನ್ನು ಮುಂದೆ ಏನು ಹೇಳಬೇಕೆಂದು ಕೇಳುತ್ತೀಯೋ ಅದನ್ನು ತಿಳಿಸು

೭ ವಜ್ರಮಹಾರಾಜನು ಕೇಳುತ್ತಾನೆ —ಸ್ವಾಮಿ ! ಮಾರ್ಕಂಡೇಯರೇ ! ನೀವು ಪುಲಹ, ಪುಲಸ್ತ್ಯ, ಕ್ರತು, ಅಗಸ್ತ್ಯ ಇವರೆಲ್ಲರೂ ಒಂದೇ ವಂಶದವರೆಂದು ಹೇಳಿಬಿಟ್ಟಿರಿ ಅದು ಹೇಗೆ ? ಎಲ್ಲರೂ ಒಂದೇ ವಂಶದವರೆಂತಾದರೋ, ತಿಳಿಸಿರಿ

೮-೧೨ ಅದಕ್ಕೆ ಮಾರ್ಕಂಡೇಯರು ಉತ್ತರ ಹೇಳುತ್ತಾರೆ —ವೈವಸ್ವತ ಮನ್ವಂತರದಲ್ಲಿ ಕ್ರತುಮಹರ್ಷಿಗೆ ಮಕ್ಕಳಾಗಲಿಲ್ಲವಾದ್ದರಿಂದ ಇಧ್ಮವಾಹನನ್ನು ಪುತ್ರನನ್ನಾಗಿ ಸ್ವೀಕರಿಸಿ (ದತ್ತನನ್ನಾಗಿ ಮಾಡಿಕೊಂಡು) ದನು ಈ ಇಧ್ಮವಾಹನನು ಅಗಸ್ತ್ಯರ ಮಗನು ಈ ಇಧ್ಮವಾಹನನಿಂದ ಕ್ರತುಗೋತ್ರೋದ್ಭವರುಗಳು ಹುಟ್ಟಿದರು ಪುಲಸ್ತ್ಯಮಹರ್ಷಿಗೆ ತಿರಶ್ಚನೆಂಬ ಮಗನು ಹುಟ್ಟಿದನು. ಎಲೈ ವಜ್ರರಾಜೇಂದ್ರನೇ ! ಇವರ ಜನ್ಮವೃತ್ತಾಂತವನ್ನು ಮುಂದೆ ನಾನು ಯಥಾವಿಧಿಯಾಗಿ ನಿನಗೆ ತಿಳಿಸುತ್ತೇನೆ ಪುಲಹಋಷಿಗೂ ಮಕ್ಕಳಾಗಲಿಲ್ಲ ತಾನು ಸಂತಾನರಹಿತನಾದುದನ್ನು ನೋಡಿ ಪುಲಹಋಷಿಯು ಅಗಸ್ತ್ಯನ ಮಗನಾದ ದೃಢಸ್ಯುವನ್ನು

ಅಗಸ್ತ್ಯಪುತ್ರಂ ಧರ್ಮಜ್ಞ ಆಗಸ್ತ್ಯಾತ್ಕ್ರತವಸ್ತಥಾ ।
ಪುಲಹಸ್ಯ ತಥಾ ಪುತ್ರಃ ತಿರಶ್ಚಃ ಪೃಥಿವೀಪತೇ ॥ ೯ ॥

ತೇಷಾಂ ತೇ ಜನ್ಮ ವಕ್ಷ್ಯಾಮಿ ಉತ್ತರತ್ರ ಯಥಾ ವಿಧಿ ।
ಪುಲಹಸ್ತ್ವಪ್ರಜಾಂ ದೃಷ್ಟ್ವಾ ನಾತಿಪ್ರೀತಮನಾ ಹ್ಯಭೂತ್ ॥ ೧೦ ॥

ಅಗಸ್ತ್ಯಜಂ ದೃಢಸ್ಯುಂ ತಂ ಪುತ್ರತ್ವೇ ಕೃತವಾಂ ಸ್ತದಾ ।
ಪೌಲಹಾಶ್ಚ ತಥಾ ರಾಜನ್ನಾಗಸ್ತ್ಯಾಃ ಪರಿಕೀರ್ತಿತಾಃ ॥ ೧೧ ॥

ಏತೇ ತವೋಕ್ತಾಃ ಪ್ರವರಾ ದ್ವಿಜಾನಾಂ
ಮಹಾನುಭಾವಾ ನೃಪ ಗೋತ್ರಕಾರಾಃ
ಯೇಷಾಂ ಚ ನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಗಸ್ತ್ಯವಂಶಾನುಕೀರ್ತನಂ ನಾಮ
ಅಷ್ಟಾದಶಾಧಿಕಶತತಮೋಽಧ್ಯಾಯಃ

---

ದತ್ತಮಗನನ್ನಾಗಿ ಅಂಗೀಕರಿಸಿದನು ಆದ್ದರಿಂದಲೇ ಪೌಲಹರೂ ಸಹ ಅಗಸ್ತ್ಯ ಗೋತ್ರಜರೆಂದೇ ವ್ಯವಹರಿಸಲ್ಪಟ್ಟಿರುವರು. ಎಲೈ ವಜ್ರನರಪತಿಯೇ! ಇದುವರಿಗೆ ನಿನ್ನೊಡನೆ ಋಷಿಶ್ರೇಷ್ಠರಾದ ಅಗಸ್ತ್ಯಗೋತ್ರಜರ ವೃತ್ತಾಂತವನ್ನು ತಿಳಿಸಿರುತ್ತೇನೆ ಯಾವ ಮನುಷ್ಯರು ಈ ಮಹರ್ಷಿಗಳ ಹೆಸರುಗಳನ್ನು ಬಾಯಲ್ಲಿ ಹೇಳುತ್ತಾರೆಯೋ ಅಂತಹ ಮನುಷ್ಯರು ತಮ್ಮ ಸಕಲ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧಾತ್ಮ ರಾಗುತ್ತಾರೆಂದು ಮಾರ್ಕಂಡೇಯ ಮುನಿಗಳು ವಜ್ರರಾಜೇಂದ್ರನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಅಗಸ್ತ್ಯವಂಶಾನುಕೀರ್ತನೆಯೆಂಬ
ಹೆಸರಿನ ಒಂದುನೂರ ಹದಿನೆಂಟನೇ ಅಧ್ಯಾಯವು
ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನವಿಂಶಾಧಿಕಶತತಮೋಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅಸ್ಮಿನ್ವೈವಸ್ವತೇ ಪ್ರಾಪ್ತೇ ಶೃಣು ಧರ್ಮಸ್ಯ ಪಾರ್ಥಿವ ।
ದ್ರಾಕ್ಷಾಯಣ್ಯಾಶ್ಚ ಸಕಲಂ ಶೃಣು ತ್ವಂ ವಂಶಮುತ್ತಮಂ ॥ ೧ ॥

ಏವಂ ತಾನಿ ಮಹೀದುರ್ಗಶರೀರಾಣಿ ನರಾಧಿಪ ।
ಅರುಂಧತ್ಯಾ ಪ್ರಸೂತಾನಿ ಧರ್ಮೋ ವೈವಸ್ವತೇಂತರೇ ॥ ೨ ॥

ಅಷ್ಟೌ ಚ ವಸವಃ ಪುತ್ರಾಃ ಸೋಮಪಾಶ್ಚ ವಸೋಸ್ತಥಾ ।
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಲಾನಿಲೌ ॥ ೩ ॥

---

### ಒಂದುನೂರ ಹತ್ತೊಂಭತ್ತನೆಯ ಅಧ್ಯಾಯವು.

೧ ಮಾರ್ಕಂಡೇಯರು ಹೇಳುತ್ತಾರೆ —ಈ ವೈವಸ್ವತಮನ್ವಂತರವು ಬರಲಾಗಿ ಧರ್ಮ (ಯಮ) ರಾಜನಿಗೆ ದಕ್ಷನ ಹೆಣ್ಣು ಮಗಳ ಹೊಟ್ಟೆಯಲ್ಲಿ ಉತ್ಪತ್ತಿಯಾದ ಮಹನೀಯರ ವಂಶಾನುಕ್ರಮವನ್ನು ಹೇಳುತ್ತೇನೆ, ಕೇಳು

೨, ಈ ವೈವಸ್ವತ ಮನ್ವಂತರದಲ್ಲಿ ಪರ್ವತವೇ ಮೊದಲಾದ ದುರ್ಗ (ಶರೀರ) ಗಳು ಅರುಂಧತೀದೇವಿಯಿಂದ ಪ್ರಸುವಿಸಲ್ಪಟ್ಟವುಗಳೆಂದು ತಿಳಿಯಯ್ಯ ! ಮಹಾರಾಜ !

೩ ಧರ್ಮನಿಗೆ ಅಷ್ಟವಸುಗಳು ಪುತ್ರರಾಗಿ ಹುಟ್ಟಿದರು ವಸುವಿಗೆ ಸೋಮಪನು ಮಗನಾದನು ಆ ಅಷ್ಟವಸುಗಳ ಹೆಸರೇನೆಂದರೆ —ಧರ, ಧ್ರುವ, ಸೋಮ, ಆಪ, ಅನಲ, ಅನಿಲ, ಪ್ರತ್ಯೂಷ, ಪ್ರಭಾಸ, ಇವರೆಂಟು ಮಂದಿಯೂ ವಸುಗಳು

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ಧರಸ್ಯ ಪುತ್ರೋಽಂಬುನಿಧಿಃ ಕಾಲಃ ಪುತ್ರೋ ಧ್ರುವಸ್ಯ ಚ ॥ ೪ ॥

ಕಾಲಸ್ಯಾವಯವಾನಾಂ ತು ಶರೀರಾಣಿ ನರಾಧಿಪ ।
ಮುಹೂರ್ತವರ್ಜಂ ಕಾಲಾದ್ಧಿ ಪ್ರಸೂತಾನ್ಯವಿಶೇಷತಃ ॥ ೫ ॥

ಸೋಮಸ್ಯ ಭಗವಾನ್ವರ್ಚಾಃ ಶ್ರಮಸ್ತ್ವಸ್ಯ ಕೀರ್ತ್ಯತೇ ।
ಅನೇಕಜನ್ಮಾ ಜನವಃ ಕುಮಾರಶ್ಚಾನಲಸ್ಯ ತು ॥ ೬ ॥

ಪುರೋಜಿವಾಶ್ಚಾನಿಲಸ್ಯ ಪ್ರತ್ಯೂಷಸ್ಯ ಚ ದೇವಲಃ ।
ವಿಶ್ವಕರ್ಮಾ ಪ್ರಭಾಸಸ್ಯ ತ್ರಿದಶಾನಾಂ ಸ ವಾರ್ಧಕಿಃ ॥ ೭ ॥

ಜಾಮಿಾ ದುಹಿತರಃ ಪ್ರೋಕ್ತಾ ನಾಗವೀಥ್ಯಾದಯೋ ನವ ।
ಲಂಬಾಪುತ್ರಃ ಸ್ಮೃತೋ ಘೋಷೋ ಭಾನೋಃ ಪುತ್ರಶ್ಚ ಭಾನವಃ ॥ ೮ ॥

ಗ್ರಹರ್ಕ್ಷಾಣಾಂ ತು ಸರ್ವೇಷಾಂ ಚಾನ್ಯೇಷಾಮಪಿ ತೇಜಸಾಂ ।
ಮರುತ್ವತ್ಯಾಂ ಮರುತ್ವಂತಃ ಸರ್ವೇ ಪುತ್ರಾಃ ಪ್ರಕೀರ್ತಿತಾಃ ॥ ೯ ॥

---

೪-೫ ಈ ವಸುಗಳಲ್ಲಿ ಮೊದಲನೆಯ ಧರನಿಗೆ ಅಂಬುನಿಧಿಯು (ಸಮುದ್ರ) ಮಗನಾದನು. ಧ್ರುವನಿಗೆ ಕಾಲನು ಮಗನಾದನು ಕಾಲನ ಅವಯವಗಳಿಗೆ ಶರೀರ ರೂಪವಾಗಿ ಮುಹೂರ್ತಾದಿಗಳು ಹುಟ್ಟಿದುವು

೬ ಸೋಮನಿಗ ಭಗವಾನ್ ವರ್ಚನೇ ಮಗನು ಆವನಿಗೆ ಶ್ರಮನೇ ಮಗನು ಅನಲನಿಗೆ ಕುಮಾರರಾಗಿ ಅನೇಕ ಜನರಾದರು (ಅಗ್ನಿಜ್ವಾಲೆಗಳಿಗೆ ಮಕ್ಕಳೆಂದು ಇಲ್ಲಿ ವ್ಯವಹಾರವು )

೭ ಅನಿಲನ ಮಗ ಪುರೋಜವ, (ಮುಂದೆ ಮುಂದ ವೇಗವಾಗಿ ಬೀಸುವ ಗಾಳಿಗೆ ಈ ವ್ಯವಹಾರ) ಪ್ರತ್ಯೂಷನಿಗೆ ದೇವಲ, ಪ್ರಭಾಸನಿಗೆ ವಿಶ್ವಕರ್ಮ ನೆಂಬ ಮಕ್ಕಳಾದರು ಈ ವಿಶ್ವಕರ್ಮನೇ ದೇವತೆಗಳ ಬಡಗಿಯೆಂದು ತಿಳಿಯ ಬೇಕು

೮-೯ ಈ ಧರ್ಮನಿಗೆ ಜಾಮಿಯ ಹೊಟ್ಟೆಯಲ್ಲಿ ನಾಗವೀಥ್ಯಾದಿ ಒಂಭತ್ತು ಮಂದಿ ಹೆಣ್ಣುಮಕ್ಕಳು ಹುಟ್ಟಿದರು ಲಂಬೆಯ ಹೊಟ್ಟೆಯಲ್ಲಿ ಘೋಷನೂ, ಭಾನು ವಿನ ಹೊಟ್ಟೆಯಲ್ಲಿ ಭಾನವನೂ ಹುಟ್ಟಿದರು ಸಕಲ ಗ್ರಹ ನಕ್ಷತ್ರಗಳಿಗೂ, ಇತರ

**ಸಂಕಲ್ಪಾಯಾಶ್ಚ ಸಂಕಲ್ಪಾಸ್ತಥಾ ಪುತ್ರಾಃ ಪ್ರಕೀರ್ತಿತಾಃ ।**
**ಮುಹೂರ್ತಾಶ್ಚ ಮುಹೂರ್ತಾಯಾಃ ಸಾಧ್ಯಾತ್ಸಾಧ್ಯಾಸುತಾಃ ಸ್ಮೃತಾಃ ॥**

**ಮತ್ತೋನ್ಮತ್ತಶ್ಚ ಪ್ರಾಣಶ್ಚ ನರೋಽಪಾಣಶ್ಚ ವೀರ್ಯವಾನ್ ।**
**ಚಿತ್ತಿರ್ನರೋ ಹಯಶ್ಚೈವ ಹಂಸೋ ನಾರಾಯಣಸ್ತಥಾ　　　　॥ ೧೧ ॥**

**ವಿಭುಶ್ಚಾಪಿ ಪ್ರಭುಶ್ಚಾಪಿ ಸಾಧ್ಯಾ ದ್ವಾದಶ ಕೀರ್ತಿತಾಃ ।**
**ವಿಶ್ವಾಯಾಶ್ಚ ತಥಾ ಪುತ್ರಾ ವಿಶ್ವೇದೇವಾಃ ಪ್ರಕೀರ್ತಿತಾಃ　　　　॥ ೧೨ ॥**

**ಕ್ರತುರ್ದಕ್ಷೋ ವಸುಃ ಸತ್ಯಃ ಕಾಲಃ ಕಾಮೋ ಧುನಿಸ್ತಥಾ ।**
**ಊರವಾನ್ಮನುಜೋ ವಿಶ್ವೇರೋಮಾಯಾಶ್ಚ ಹಿ ತೇ ದಶ　　　　॥ ೧೩ ॥**

**ಏತಾವದುಕ್ತಂ ತವ ಧರ್ಮವಂಶಂ**
**ಸಂಕ್ಷೇಪತಃ ಪಾರ್ಥಿವಸಂಘಮುಖ್ಯ ।**

---

ಸಕಲ ತೇಜೋರಾಶಿ, ಮಂಡಲಗಳಿಗೂ ಧರ್ಮನೇ ಮೂಲನು ಈ ಧರ್ಮನಿಗೆ ಮರುತ್ವತಿಯಲ್ಲಿ ಮರುತ್ವಂತನೂ, ಇದೇ ರೀತಿ ಅನೇಕ ಮಕ್ಕಳೂ ಆದರು

೧೦-೧೪ ಧರ್ಮರಾಜನಿಗೆ ಸಂಕಲ್ಪೆಯ ಹೊಟ್ಟೆಯಲ್ಲಿ ಸಂಕಲ್ಪರೂ, ಮುಹೂರ್ತೆಯ ಹೊಟ್ಟೆಯಲ್ಲಿ ಮುಹೂರ್ತರೂ ಮಕ್ಕಳಾದರು ಸಾಧ್ಯೆಯ ದೆಸೆಯಿಂದ ಸಾಧ್ಯರು ಮತ್ತರು, ಉನ್ಮತ್ತರು, ಪ್ರಾಣ, ನರ, ಅಪಾನ, ಚಿತ್ತ, ನರ, ಹಯ, ಹಂಸ, ನಾರಾಯಣ, ವಿಭು, ಪ್ರಭು, ಈರೀತಿ ಸಾಧ್ಯರು ಹನ್ನೆರಡು ಮಂದಿಗಳೆಂದು ಸುಪ್ರಸಿದ್ಧರಾಗಿರುವರು ವಿಶ್ವಾದೇವಿಯ ಹೊಟ್ಟೆಯಲ್ಲಿ ವಿಶ್ವೇದೇವರುಗಳು, ಈ ವಿಶ್ವೇದೇವರು ಹತ್ತುಮಂದಿ ಈ ಹತ್ತು ಮಂದಿಗಳ ಹೆಸರನ್ನು ಇಲ್ಲಿ ಬರೆಯುವೆವು ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಧುನಿ, ಊರರ್ವಾ, ಮನುಜ, ಲೋಮ, ಇವರೇ ಆ ಹತ್ತು ಮಂದಿ ವಿಶ್ವೇದೇವತೆಗಳು ಎಲೈ ವಜ್ರಭೂಪಾಲಕನೇ ! ಇಲ್ಲಿಯವರಿಗೆ ನಿನಗೆ ಸಂಕ್ಷೇಪವಾಗಿ ಧರ್ಮರಾಜನ (ಯಮನ) ವಂಶವನ್ನು ತಿಳಿಸಿರುತ್ತೇನೆ ಈ ಸಂಕ್ಷೇಪ ವೃತ್ತಾಂತವನ್ನಲ್ಲದ ಇದನ್ನೆಲ್ಲಾ ವಿಸ್ತಾರವಾಗಿ ತಿಳಿಸಲು

ವ್ಯಾಸೇನ ವಕ್ತುಂ ನ ಹಿ ಶಕ್ತಿರಸ್ತಿ
ರಾಜನ್ವಿನಾ ವರ್ಷಶತೈರನೇಕೈಃ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಧರ್ಮವಂಶಾನುಕೀರ್ತನಂ ನಾಮೈಕೋನ
ವಿಂಶಾಧಿಕಶತತಮೋಽಧ್ಯಾಯಃ

---

ಅನೇಕ ನೂರಾರು ವರ್ಷಗಳು ಕಷ್ಟಪಟ್ಟಾಗ್ಯೂ ವ್ಯಾಸರ ಹೊರತಾಗಿ ಮತ್ತೊಬ್ಬನಿಗೆ ಸುತರಾಂ ಶಕ್ತಿಯಿಲ್ಲವೆಂದು ತಿಳಿದುಕೊಳ್ಳಯ್ಯ ! ವಜ್ರರಾಜ ! ಹೀಗೆಂದು ಮಾರ್ಕಂಡೇಯರು ವಜ್ರರಾಜನೊಡನೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಧರ್ಮವಂಶಾನು ಕೀರ್ತನೆಯೆಂಬ
ಹೆಸರಿನ ಒಂದುನೂರ ಹತ್ತೊಂಭತ್ತನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ವಿಂಶತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತಃ ಪರಂ ಕಶ್ಯಪಸ್ಯ ಶೃಣು ವಂಶಂ ನರಾಧಿಪ ।
ಯತ್ರ ಪ್ರಾಯೇಣ ಸಂಭೂತಂ ಜಗತ್ಸ್ಥಾವರಜಂಗಮಂ ॥ ೧ ॥

ಅದಿತೇರ್ದ್ವಾದಶಾದಿತ್ಯಾ ದೇವಪುತ್ರಾಃ ಪ್ರಕೀರ್ತಿತಾಃ ।
ಧಾತಾ ಪುತ್ರೋಽರ್ಯಮಾ ಪೂಷಾ ಶಕ್ರೋಽಂಶೋ ವರುಣೋ ಭಗಃ ॥ ೨ ॥

ತ್ವಷ್ಟಾ ವಿವಸ್ವಾನ್ಸವಿತಾ ವಿಷ್ಣುರ್ದ್ವಾದಶಮಸ್ತಥಾ ।
ವಿಷ್ಣೋರಂಶೇನ ಸಂಭೂತಾಃ ಸಾಧ್ಯಾ ದೇವಗಣಾ ನೃಪ ॥ ೩ ॥

---

### ಒಂದು ನೂರ ಇಪ್ಪತ್ತನೇ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಇನ್ನು ಮುಂದೆ ಕಶ್ಯಪರ ವಂಶವನ್ನು ಹೇಳುತ್ತೇನೆ ಕೇಳಯ್ಯಾ ವಜ್ರರಾಜ ಈ ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚವೂ ಪ್ರಾಯಶಃ ಕಶ್ಯಪರಿಂದಲೇ ಉತ್ಪತ್ತಿಯಾಯಿತೆಂದು ತಿಳಿದುಕೋ

೨ ಅದಿತಿಯ ಹೊಟ್ಟೆಯಲ್ಲಿ ಕಶ್ಯಪರಿಗೆ ಹನ್ನೆರಡುಜನ ಸೂರ್ಯರು ಸಂಜನಿಸಿದರು. ಇವರೆಲ್ಲರೂ ದೇವಪುತ್ರರೆನಿಸಿಕೊಂಡರು ಅವರ ಹೆಸರುಗಳು —ಧಾತೃ, ಪುತ್ರ, ಅರ್ಯಮ, ಪೂಷ, ಶಕ್ರ, ಅಂಶ, ವರುಣ, ಭಗ, ತ್ವಷ್ಟಾ, ವಿವಸ್ವಾನ್ ವರುಣ, ವಿಷ್ಣು, ಇಂತು ಹನ್ನೆರಡುಮಂದಿ

೩-೪ ವಿಷ್ಣುವಿನ ಅಂಶದಿಂದ ಸಾಧ್ಯರೆಂಬ ದೇವತಾಗಣಗಳು ಉತ್ಪನ್ನರಾದರು ಅವರೇ ಅರ್ಧತೇಜಸ್ಸಿನಿಂದ ಅದಿತಿಯ ಮಕ್ಕಳಾಗಿ ಹುಟ್ಟಿದವರು ನಾನು ಹಿಂದೆ ನಿನಗೆ ಹೇಳಿರುವೆನಲ್ಲಾ ! ಆ ನರನಾರಾಯಣರೂ ಸಹ ಆಗಲೇ ಹುಟ್ಟಿದರು.

ತ ಏವ ತೇಜಸೋಽರ್ಧೇನ ಜಾತಾಶ್ಚೈವಾದಿತೇಃ ಸುತಾಃ ।
ನರನಾರಾಯಣೌ ಚೋಭೌ ಯೌ ತೇ ರಾಜನ್ಮಯೇರಿತೌ ॥ ೪ ॥

ಇಂದ್ರಾವಿಷ್ಣೂ ತಥೈವೋಕ್ತಾ ವಾದಿತ್ಯೇಷು ನರಾಧಿಪ ।
ಮನೋರಂತರಮಾಸಾದ್ಯ ಸರ್ವತ್ರೈವ ಜನಾರ್ದನಃ ॥ ೫ ॥

ಅಂಶೇನೈಕೇನ ಭವತಿ ಸಗಣಃ ಸೋಮಪಾಯಿನಾಂ ।
ತಸ್ಮಿನ್ಗಣೇ ದೇವವರೋ ವಿಷ್ಣುಲೋಕ ನಮಸ್ಕೃತಃ ॥ ೬ ॥

ತೇಜಸಾಭ್ಯಧಿಕೋ ನ್ಯೆಕೊ ಭವತೀತಿ ನ ಸಂಶಯಃ ।
ಯಸ್ತೇಷಾಮಾರ್ತಿಶಮನಂ ಕರೋತಿ ವಸುಧಾಧಿಪ ॥ ೭ ॥

ಕರ್ಮಾಣ್ಯತೀತೇಷು ತಥಾಽಂತರೇಷು
ವಕ್ಷ್ಯೇ ಭವಿಷ್ಯೇಷು ತಥಾ ನರೇಂದ್ರ ।
ಮನ್ವಂತರಾಣಾಂ ಪರಿಕೀರ್ತನೇಷು
ಶೃಣುಷ್ವ ತಾವದ್ದಿತಿವಂಶಮುಗ್ರಂ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಆದಿತ್ಯೋತ್ಪತ್ತಿರ್ನಾಮ ವಿಂಶತ್ಯಧಿಕಶತತಮೋಧ್ಯಾಯಃ

---

೫-೭ ಆದಿತ್ಯರುಗಳಲ್ಲಿ ಇಂದ್ರವಿಷ್ಣುಗಳು ಹುಟ್ಟಿದರು ಬೇರೆಬೇರೆ ಮನ್ವಂತರಗಳಲ್ಲ ಎಲ್ಲಾಕಡೆಗಳಲ್ಲಿಯೂ ಸಾಕ್ಷಾಜ್ಜನಾರ್ದನನೇ ತನ್ನ ಒಂದಂಶದಿಂದ ಬೇರ ಬೇರೆ ರೂಪಗಳಲ್ಲವತರಿಸಿರುವನು ಸೋಮಪಾಯಿ (ಅಗ್ನಿಯಾಗ ಮಾಡಿದವರು) ಗಳ ಗುಂಪಿನಲ್ಲೂ ಇವನು ಹುಟ್ಟುವನು ಈರೀತಿ ತನ್ನ ತೇಜಸ್ಸಿನಿಂದ ಅಧಿಕವಾಗಿ ಪ್ರಕಾಶಿಸುತ್ತಾ ಮಹಾವಿಷ್ಣುವು ಬೇರಬೇರೆ ಸಮಯಗಳಲ್ಲಿ ಅವತರಿಸಿ ದೇವತೆಗಳಿಗೊದಗುವ ದುಃಖವನ್ನು ನಿವಾರಣೆಮಾಡುವನು

೮ ಮುಂದೆಮುಂದೆ ನಾನಾ ಕರ್ಮಗಳು ಕಳೆದುಹೋಗುತ್ತಾಬರುತ್ತಿರಲು ಬೇರೆಬೇರೆ ಮನ್ವಂತರಗಳ ಹೆಸರು ಕೇಳಿಬರುತ್ತಿರಲು, ಭಯಂಕರವಾದ ದಿತಿವಂಶದ ಚರಿತ್ರೆಯನ್ನು ತಿಳಿಸುತ್ತೇನೆ ಕೇಳಯ್ಯಾ, ವಜ್ರರಾಜೇಂದ್ರ !

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಆದಿತ್ಯೋತ್ಪತ್ತಿಯೆಂಬ ಹೆಸರಿನ ಒಂದುನೂರ ಇಪ್ಪತ್ತನೇ ಅಧ್ಯಾಯವು ಮುಗಿದುದು

॥ ಶ್ರೀಃ ॥

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕವಿಂಶತ್ಯಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ದಿತಿಃ ಪುತ್ರದ್ವಯಂ ರಾಜನ್ಜನಯಾಮಾಸ ವಿಶ್ರುತಂ ।**
**ಹಿರಣ್ಯಾಕ್ಷಂ ಚ ದುರ್ಧರ್ಷಂ ಹಿರಣ್ಯಕಶಿಪುಂ ತಥಾ ॥ ೧ ॥**

**ಹಿರಣ್ಯಾಕ್ಷೋ ಹತೋ ರಾಜನ್ನೃವರಾಹೇಣ ಸಂಯುಗೇ ।**
**ಹಿರಣ್ಯಕಶ್ಯಪೂ ರಾಜನ್ನೃಸಿಂಹೇನ ನಿಪಾತಿತಃ ॥ ೨ ॥**

**ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋರಿಕುಲಾಂತಕಃ ।**
**ಕಾಲನೇಮಿಶ್ಚ ದುರ್ಧರ್ಷೋ ವಿಷ್ಣುನಾ ಘಾತಿತೋ ಯುಧಿ ॥ ೩ ॥**

---

### ಒಂದು ನೂರ ಇಪ್ಪತ್ತೊಂದನೇ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರರಾಜನೇ ಕೇಳು! ದಿತಿಯು ಮಹಾಪ್ರಸಿದ್ಧನಾದ ಹಿರಣ್ಯಾಕ್ಷನೆಂಬುವನನ್ನೂ, ಮಹಾಪರಾಕ್ರಮಶಾಲಿಯಾದ ಹಿರಣ್ಯಕಶಿಪುವನ್ನೂ ಮಕ್ಕಳನ್ನಾಗಿ ಹೊಂದಿದಳು

೨ ಹಿರಣ್ಯಾಕ್ಷನು ನೃವರಾಹರೂಪಿಯಾದ ಮಹಾವಿಷ್ಣುವಿನಿಂದಲೂ, ಹಿರಣ್ಯಕಶಿಪುವು ನೃಸಿಂಹರೂಪಿಯಾದ ಮಹಾವಿಷ್ಣುವಿನಿಂದಲೂ ಈರೀತಿ ಈರ್ವರು ಸಹೋದರರೂ ಯುದ್ಧದಲ್ಲಿ ಸಂಹೃತರಾದರು

೩ ಹಿರಣ್ಯಕಶಿಪುವಿಗೆ ಶತ್ರುಕುಲಾಂತಕನಾದ ಪ್ರಹ್ಲಾದನೆಂಬ ಮಗನೂ, ಮಹಾಧೈರ್ಯಶಾಲಿಯಾದ ಕಾಲನೇಮಿಯೆಂಬ ಮಗನೂ ಹುಟ್ಟಿದರು ಕಾಲನೇಮಿಯು ಯುದ್ಧದಲ್ಲಿ ವಿಷ್ಣುವಿನಿಂದ ಸಂಹೃತನಾದನು.

**ಆರಾಧ್ಯ ಕೇಶವಂ ದೇವಂ ಪ್ರಹ್ಲಾದಶ್ಚ ಮಹಾಬಲಃ ।**
**ಪ್ರಾಪ್ತವಾನ್ ಜೀವಿತಂ ದೀರ್ಘಂ ಬ್ರಾಹ್ಮಂ ದಿನಮನುತ್ತಮಂ ॥ ೪ ॥**

**ಕಾಲನೇಮಿಶ್ಚ ದುರ್ಧರ್ಷೋ ಮಹಾಬಲ ಪರಾಕ್ರಮಃ ।**
**ನಿಹತೋ ವಾಸುದೇವೇನ ನಿವೃತ್ತೇ ತಾರಕಾಮಯೇ ॥ ೫ ॥**

**ಪ್ರಹ್ಲಾದಸ್ಯ ಸುತಃ ಶ್ರೀಮಾನ್ರಾಜನ್ನಾಮ್ನಾ ವಿರೋಚನಃ ।**
**ವಿರೋಚನಸುತಃ ಶ್ರೀಮಾನ್ಬಲಿರಿತ್ಯೇವ ವಿಶ್ರುತಃ ॥ ೬ ॥**

**ವಾಮನಂ ರೂಪಮಾಸ್ಥಾಯ ಬದ್ಧೋ ಯೋ ವಿಷ್ಣುನಾ ಪುರಾ ।**
**ಬಲೇರ್ಬಾಣಃ ಸುತೋ ರಾಜನ್ಸ್ಮೃತೋ ಬಾಹುಸಹಸ್ರವಾನ್ ॥ ೭ ॥**

**ಪಿತುಸ್ತೇ ಶ್ವಶುರಃ ಶ್ರೀಮಾನ್ಪಿತುರರ್ಥೇ ತವಾನಘ ।**
**ವಿವಾಹಂ ಕೃತವಾನ್ಕೃಷ್ಣೋ ನಗರೇ ಶೋಣಿತಾಹ್ವಯೇ ॥ ೮ ॥**

---

೪ ಮಹಾಬಲಶಾಲಿಯಾದ ಪ್ರಹ್ಲಾದನು ಮಹಾವಿಷ್ಣುವನ್ನು ತಪಸ್ಸಿನಿಂದ ಮೆಚ್ಚಿಸಿ ದೀರ್ಘಜೀವಿತ್ವವನ್ನು ಹೊಂದಿದನು ಅಂದರೆ ಒಂದು ಬ್ರಹ್ಮನ ದಿವಸಕಾಲ ಬದುಕೆಂಬ ವರವನ್ನು ಪಡೆದನು (ಬ್ರಹ್ಮನ ಒಂದು ದಿನದ ವಿವರಣೆ ಹಿಂದೆಯೇ ಬಂದಿದೆ )

೫ ತಾರಕಾಸುರನು ಸಂಹೃತನಾದ ಬಹುದಿನಗಳಮೇಲೆ ಮಹಾಬಲಪರಾಕ್ರಮಶಾಲಿಯಾದ ಕಾಲನೇಮಿಯು ಶ್ರೀಮನ್ನಾರಾಯಣನೊಡನೆ ಯುದ್ಧಮಾಡಿ ಆ ಯುದ್ಧದಲ್ಲಿ ಭಗವಂತನಿಂದಲೇ ಸಂಹೃತನಾದನು

೬-೭ ಪ್ರಹ್ಲಾದನ ಮಗನೇ ವಿರೋಚನ ವಿರೋಚನನ ಮಗನೇ ಬಲಿಚಕ್ರವರ್ತಿ ಈ ಬಲಿಚಕ್ರವರ್ತಿಯೇ ವಾಮನರೂಪಧಾರಿಯಾದ ಮಹಾವಿಷ್ಣುವಿನ ಮಾತಿಗೆ ಕಟ್ಟುಬಿದ್ದು ಸಕಲ ಭೂಮಿಯನ್ನೂ ದಾನಮಾಡಿದವನು ಈ ಬಲಿಯ ಮಗನಿಗೆ ಬಾಣಾಸುರನೆಂದು ಹೆಸರು ಇವನಿಗೆ ಸಹಸ್ರಬಾಹು (ತೋಳು) ಗಳಿದ್ದುವು

೮-೯ ನಿನ್ನ ತಂದೆಯ ಮಾವನು ನಿನ್ನ ತಂದೆಗೋಸ್ಕರ ಶೋಣಿತನಗರದಲ್ಲಿ (ಕೃಷ್ಣನು) ಮದುವೆಯನ್ನು ಮಾಡಿದನು ಈ ವಿವಾಹ ಸಮಯದಲ್ಲಿ ದೇವಶ್ರೇಷ್ಠ

ಯಸ್ಮಿನ್ಸ ವೈ ದೇವವರಃ ಪ್ರಸಹ್ಯ
ಸ್ಕಂದಂ ಚ ರುದ್ರಂ ದಿತಿಜೈಃಸಮೇತಂ ।
ರಣೇ ವಿಜಿಗ್ಯೇ ನೃಪತಿಪ್ರಧಾನ
ಸಹಾನುಗಂ ವೀರ್ಯಬಲೋಪಪನ್ನಂ　　　　॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ದಿತಿವಂಶಾನುಕೀರ್ತನಂ ನಾಮೈಕವಿಂಶತ್ಯಧಿಕ
ಶತತಮೋಧ್ಯಾಯಃ

---

ನಾದ ಕೃಷ್ಣನು ಬಲತ್ಕಾರದಿಂದ ಸ್ಕಂದ, ರುದ್ರರನ್ನು ಅವರ ತಮ್ಮಂದಿರ ಸಹಿತವಾಗಿ ಯುದ್ಧದಲ್ಲಿ ಎಂತುಜಯಿಸಿದನೋ ಆಚರಿತ್ರೆಯನ್ನು ನಿನಗೆ ಹೇಳುತ್ತೇನೆ ಕೇಳು ವಜ್ರ ರಾಜ ! ಹೀಗೆಂದು ಮಾರ್ಕಂಡೇಯರು ಹೇಳಿದರೆಂಬಲ್ಲಿಗೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ದಿತಿವಂಶಾನುಕೀರ್ತನೆ
ಯೆಂಬ ಹೆಸರಿನ ಒಂದು ನೂರಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

**ಹಿರಣ್ಯಕಶಿಪೋಃ ಪುತ್ರೋ ಕಾಲನೇಮಿರ್ಮಹಾಸುರಃ ।**
**ಕಥಂ ಕೃಷ್ಣೇನ ನಿಹತಸ್ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಯದಾ ದೈತ್ಯವಧೇ ವೃತ್ತೇ ದೈತ್ಯಾಃ ಪಾತಾಲಮಾಶ್ರಿತಾಃ ।**
**ಮಯತಾರೌ ಸಮಾಶ್ರಿತ್ಯ ಭೂಯೋ ದೇವಾನ್ಪ್ರದುದ್ರುವುಃ ॥ ೨ ॥**

**ತತ್ರ ದೇವಗಣಾಃ ಸರ್ವೇ ಮಯತಾರಪುರಃಸ್ಸರೈಃ ।**
**ದಾನವೈರ್ನಿಹತಾಯುದ್ಧೇ ದೇವಾಚಾರ್ಯಂ ಬೃಹಸ್ಪತಿಂ ॥ ೩ ॥**

---

**ಒಂದು ನೂರ ಇಪ್ಪತ್ತೆರಡನೆಯ ಅಧ್ಯಾಯವು.**

೧ ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ —ಹಿರಣ್ಯಕಶಿಪುವಿನ ಮಗನಾದ ಕಾಲನೇಮಿಯೆಂಬ ಮಹಾರಾಕ್ಷಸನು ಕೃಷ್ಣನಿಂದ ಅದೆಂತು ಸಂಹೃತನಾದನೆಂಬ ವೃತ್ತಾಂತವನ್ನು ತಿಳಿಸೈ ಋಷಿವರ !

೨-೫ ಮಾರ್ಕಂಡೇಯನು ಹೇಳುತ್ತಾನೆ —ಯಾವಾಗ ದೈತ್ಯರೆಲ್ಲರೂ ನಾಶವಾಗತೊಡಗಿದರೋ ಆ ಸಮಯದಲ್ಲಿ ಎಲ್ಲ ದಾನವರೂ ಪಾತಾಳಲೋಕಕ್ಕೆ ಓಡಿಹೋಗಿ ಹೊಕ್ಕಿಕೊಂಡರು ಆದರೆ ಮಯನೂ, ತಾರನೂ ಪುನಃ ದೇವತೆಗಳನ್ನಾಕ್ರಮಿಸಿ ಯುದ್ಧವನ್ನು ಹೂಡಿದರು ಆ ಯುದ್ಧದಲ್ಲಿ ಅನೇಕಮಂದಿ ದೇವತೆಗಳು ಸತ್ತುಹೋದರು ಆಗ ದೇವತೆಗಳು ದಿಕ್ಕುಕಾಣದೆ ದೇವಗುರುವಾದ ಬೃಹಸ್ಪತ್ಯಾ

ಸಂಪ್ರಾಪ್ತಾಃ ಶರಣಂ ವಿಪ್ರಂ ತಾನುವಾಚ ಬೃಹಸ್ಪತಿಃ ।
ತಾರಕಶ್ಚ ಮಯಶ್ಚೈವ ಮಹಾಬಲ ಪರಾಕ್ರಮೌ ॥ ೪ ॥

ಯಯುರ್ಜೇತುಂ ದೇವಗಣಾಂಸ್ತಾವಿಮೌ ಚೋದಯಾಮ್ಯಹಂ ।
ಏವಮುಕ್ತ್ವಾ ದೇವಗಣಾನ್ದೇವಾಚಾರ್ಯೋಬೃಹಸ್ಪತಿಃ ।
ತುಷ್ಟಾವ ದೇವದೇವೇಶಂ ಬಹುರೂಪಂ ಹುತಾಶನಂ ॥ ೫ ॥

॥ ಬೃಹಸ್ಪತಿರುವಾಚ ॥

ತ್ವಮಗ್ನೇ ಸರ್ವಭೂತಾನಾಮಂತಶ್ಚರಸಿ ಪಾವಕ ।
ವೇದಾಸ್ತ್ವದರ್ಥಂ ಜಾತಾಶ್ಚ ಜಾತವೇದಸ್ತಥಾ ಹ್ಯಸಿ ॥ ೬ ॥

ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಂ ಹವೀಂಷಿ ಮಹಾದ್ಯುತೇ ।
ತ್ವಂ ಸ ದೇವ ಚರಸ್ಯಾತ್ಮಾ ವಿಷ್ಣೋರಮಿತತೇಜಸಃ ॥ ೭ ॥

ತ್ವಂ ಮುಖಂ ಸರ್ವದೇವಾನಾಂ ಸರ್ವಸ್ಯಾತ್ಮಾ ತಥಾ ಭವಾನ್ ॥
ಊಷ್ಮಾ ತ್ವಂ ದೇಹಿನಾಂ ದೇಹೇ ಭುಕ್ತಪೀತವತಸ್ತಥಾ ॥ ೮ ॥

ಚಾರ್ಯನ ಬಳಿಗೆ ಬಂದು ಶರಣಾಗತರಾದರು ಆಗ ಗುರುವು ಅವರನ್ನು ಸಮಾಧಾನ ಮಾಡಿ ನೀವೆಲ್ಲರೂ ಪುನಃ ಮಯ ತಾರರನ್ನು ಯುದ್ಧಕ್ಕೆ ಕರೆಯಿರಿ ಅವರು ಮಹಾ ಪರಾಕ್ರಮಶಾಲಿಗಳಾಗಿದ್ದಾಗ್ಯೂ ಸೋಲುವ ಉಪಾಯವನ್ನು ಹೇಳುತ್ತೇನೆಂದು ದೇವತೆಗಳನ್ನು ಯುದ್ಧಕ್ಕೆ ಕಳುಹಿಸಿ ತಾನು ಬಹುರೂಪನಾದ ದೇವದೇವೋತ್ತಮ ನಾದ ಯಜ್ಞೇಶ್ವರನನ್ನು ಸ್ತೋತ್ರಮಾಡತೊಡಗಿದನು

೬-೧೪ ಎಲೈ ಅಗ್ನಿಯೇ ! ನೀನು ಸಕಲ ಭೂತಗಳ ಹೃದಯದೊಳಗೂ ವಾಸಮಾಡುತ್ತಾ ಇರುತ್ತೀಯೆ ! ವೇದಗಳು ನಿನಗೋಸ್ಕರವಾಗಿಯೇ ಹುಟ್ಟಿರುವುದ ರಿಂದ ನಿನಗೆ ಜಾತವೇದನೆಂಬ ಹೆಸರು ಬಂದಿದೆ ನೀನೇ ಯಜ್ಞಸ್ವರೂಪನು ವಷ ಟ್ಕಾರವೂ ನೀನೆ ಎಲೈ ಮಹಾಜಾಜ್ವಲ್ಯಮಾನನಾದ ಯಜ್ಞೇಶ್ವರನೇ ! ಹವಿಸ್ಸು ಗಳೂ ನೀನೆ ಆಗಿದ್ದೀಯೆ ಅತ್ಯಂತ ತೇಜಸ್ವಿಯಾದ ಮಹಾವಿಷ್ಣುವಿನ ಆತ್ಮಸ್ವರೂ ಪನಾಗಿ ನೀನು ಸರ್ವತ್ರ ಸಂಚರಿಸುತ್ತಿದ್ದೀಯೆ ಸಕಲ ದೇವತೆಗಳಿಗೂ ನೀನೇ ಮುಖ್ಯ ಸ್ವರೂಪನು (ಅಗ್ನಿಮುಖಾ ವೈದೇವಾಃ ಎಂದು ವೇದದಲ್ಲಿ ಹೇಳಿದೆ) ಆದ್ದರಿಂದ ಸಕಲ ಪ್ರಾಣಿಗಳ ದೇಹದಲ್ಲೂ ಆತ್ಮಸ್ವರೂಪನಾಗಿರುವವನೂ ನೀನೇ ನೀನು ಸಕಲ

**ಯಚ್ಛಕ್ತಿಃ ಸರ್ವದೇವಾನಾಂ ತ್ವದೀಯಾ ಭೂತಭಾವನ ।**
**ಪ್ರಾಪ್ತಾ ತ್ವಯಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ॥ ೯ ॥**

**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ।**
**ಸರ್ವದೇವವರೇಶಾನಃ ಸರ್ವಲೋಕನಮಸ್ಕೃತಃ ॥ ೧೦ ॥**

**ತ್ರೈಲೋಕ್ಯಸ್ಯ ಸಮುತ್ಪತ್ತಾವೇಕಃ ಕಾರಣತಾಂ ಗತಃ ।**
**ಕಾಲಾಗ್ನಿರುದ್ರೋ ಭಗವಾನ್ಜಗತ್ಸಂಹಾರಕಾರಕಃ ॥ ೧೧ ॥**

**ಸ್ಥಿತೌ ನಿಮಿತ್ತಂ ಚ ಭವಾನ್ಸರ್ವೇಷಾಂ ದೇಹಿನಾಂ ಶಮಃ ।**
**ಅತೀವ ದುರ್ಧರಂ ದೇವ ತವ ತೇಜಃ ಸುದಾರುಣಂ ॥ ೧೨ ॥**

**ತೇಜಸಾ ತೇನ ದೈತ್ಯೇಂದ್ರಾನ್ಜಹಿ ಮಾ ತ್ವಂ ಚಿರಂ ಕೃಥಾಃ ।**
**ಸಖಾಚ ತೇ ರಣೇ ದೇವ ಭವಿಷ್ಯತಿ ಸಮೀರಣಃ ॥ ೧೩ ॥**

---

ಪ್ರಾಣಿಗಳ ದೇಹದಲ್ಲೂ ವಾಸಮಾಡುತ್ತಾ (ಜಠರಾಗ್ನಿರೂಪದಿಂದ) ಜನರು ತಿಂದು ಕುಡಿದ ಆಹಾರವನ್ನು ಜ್ವಲನ (ಊಷ್ಮ) ಗೊಳಿಸಿ (ಪಚನಮಾಡಿಸಿ ಅರಗಿಸಿ) ಪ್ರಾಣಗಳಿಗೆ ಬಲವನ್ನುಂಟುಮಾಡುತ್ತಿರುವೆ ಸಕಲ ದೇವತೆಗಳಿಗೂ ಯಾವ ಶಕ್ತಿಯುಂಟೊ ಆ ಶಕ್ತಿಯು ನಿನ್ನ ಸಂಬಂಧವಾದುದು ಎಲೈ ಮಹಾತ್ಮನಾದ ಅಗ್ನಿಯೇ ! ನಿನ್ನಲ್ಲಿ ಹೋಮಮಾಡಲ್ಪಟ್ಟ ಸಕಲವಿಧವಾದ ಆಹುತಿ (ಹೋಮದ್ರವ್ಯ) ಗಳನ್ನೂ ನೀನು ಆದಿತ್ಯ (ಸೂರ್ಯ) ನಿಗೆ ಕಳುಹಿಸಿ ಆ ಮೂಲಕ ಸಕಲ ದೇವತೆಗಳಿಗೂ ಹಂಚುತ್ತಿದ್ದೀಯೆ ಅದರಿಂದ ತೃಪ್ತರಾದ ದೇವತೆಗಳು ಆದಿತ್ಯರಿಂದ ವೃಷ್ಟಿ (ಮಳೆ)ಯನ್ನು ಸುರಿಸುತ್ತಾರೆ ಮಳೆಯಾಯಿತೆಂದರೆ ಸಕಲ ಧಾನ್ಯಗಳೂ ಬೆಳೆದು ಜನರಿಗೆ ಅನ್ನವು ದೊರೆಯುತ್ತದೆ ಆ ಅನ್ನವನ್ನು ಭುಜಿಸಿ ಅದರಿಂದ ಪ್ರಜೆಗಳು ಮಕ್ಕಳನ್ನು ಪಡೆಯುತ್ತಾರೆ ಎಲೈ ಅಗ್ನಿಯೇ ! ನೀನು ಸಕಲ ದೇವತಾಶ್ರೇಷ್ಠರಿಗೂ ಅಧಿಪತಿಯಾಗಿದ್ದೀಯೆ ! ನೀನು ಸಕಲ ಲೋಕಪೂಜ್ಯನೂ, ನಮಸ್ಕೃತನೂ, ಆಗಿರುತ್ತೀಯೆ ! ಮೂರು ಲೋಕದ ಉತ್ಪತ್ತಿಗೂ ನೀನೊಬ್ಬನೇ ಕಾರಣನು ಕಾಲಾಗ್ನಿ ರುದ್ರನೆಂಬ ಭಗವಂತನೂ ನೀನೇ ಜಗತ್ತನ್ನು ಸಂಹರಿಸುವುದಕ್ಕೂ ಸಂರಕ್ಷಿಸುವುದಕ್ಕೂ ನೀನೇ ಕಾರಣನಾಗಿದ್ದೀಯೆ ಸಕಲ ದೇಹಧಾರಿಗಳಿಗೂ ಶಾಂತಿಯನ್ನು ಉಂಟುಮಾಡತಕ್ಕವನೂ ನೀನೆ ಆಗಿರುತ್ತೀಯೆ ನಿನ್ನ ತೇಜಸ್ಸೆಂಬುದು ಭಯಂಕರವಾದುದು ಮತ್ತು ಧರಿಸಲಸಾಧ್ಯವಾದುದು ಅಂತಹ ಭಯಂಕರ ಜ್ವಾಲೆಯನ್ನು ಉದ್ದೀಪನಗೊಳಿಸಿ

ಇತ್ಯೇವಮುಕ್ತೋಽಂಗಿರಸಾ ಮಹಾತ್ಮಾ
ತಥೇತಿ ತಂ ಪ್ರಾಹ ನೃಪೇಂದ್ರ ಪೂಜ್ಯಂ ॥
ಜೀವೋಽಪಿ ಗತ್ವಾ ಪವನಂ ಜಗಾದ
ದೇವೇಶ್ವರಸ್ಯಾನಘಸಿದ್ಧಿಮಿಚ್ಛನ್ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇಽಗ್ನಿಸ್ತೋತ್ರಂ ನಾಮ ದ್ವಾವಿಂಶತ್ಯಧಿಕ ಶತತಮೋಽಧ್ಯಾಯಃ ॥

---

ಅದರ ಮಹಿಮೆಯಿಂದ ದೇವತೆಗಳಿಗೆ ತೊಂದರೆಕೊಡುತ್ತಲಿರುವ ಸಕಲ ದೈತ್ಯರನ್ನೂ ಸುಟ್ಟು ಬೂದಿಮಾಡು ಈ ಕೆಲಸವನ್ನು ಮಾಡಲು ಸ್ವಲ್ಪವೂ ಸಾವಕಾಶಮಾಡಬೇಡ ನೀನು ರಣರಂಗವನ್ನು ಪ್ರವೇಶಿಸಿ ರಾಕ್ಷಸರನ್ನು ಸುಡಲಾರಂಭಿಸಿದೊಡನೆಯೇ ನಿನ್ನ ಸಹಾಯಕ್ಕೆ ವಾಯುದೇವರೂ ಸಹ ಬರುತ್ತಾರೆ ಈರೀತಿಯಾಗಿ ಬೃಹಸ್ಪತ್ಯಾಚಾರ್ಯರು ಅಗ್ನಿಯನ್ನು ಸ್ತೋತ್ರಮಾಡಲು ಹಾಗೆಯೇ ಆಗಲೆಂದು ಅಗ್ನಿಯು ಒಪ್ಪಿಕೊಂಡನು ಕೇಳಯ್ಯಾ ವಜ್ರಭೂಪತಿ ! ಇಷ್ಟು ಕೆಲಸಮಾಡಿದೊಡನೆ ಬೃಹಸ್ಪತ್ಯಾಚಾರ್ಯನು ದೇವತೆಗಳ ಜಯವನ್ನು ಸ್ಥಿರಪಡಿಸುವುದಕ್ಕಾಗಿಯೂ, ಅಗ್ನಿಯ ಸಹಾಯಕ್ಕಾಗಿಯೂ, ವಾಯುವನ್ನು ಪ್ರಾರ್ಥಿಸಲು, ವಾಯುಲೋಕಕ್ಕೆ ಹೋಗಿ ವಾಯುವನ್ನು ಕುರಿತು ಇಂತೆಂದು ಹೇಳಿದನೆಂದು ವಜ್ರಭೂಪಾಲಕನೊಡನೆ ಮಾರ್ಕಂಡೇಯರು ಹೇಳಿದರೆಂಬಲ್ಲಿಗೆ,

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಅಗ್ನಿಸ್ತೋತ್ರವೆಂಬ ಹೆಸರಿನ ಒಂದು ನೂರ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ ॥

---

॥ ಬೃಹಸ್ಪತಿರುವಾಚ ॥

ಜಗದಾಯುರ್ಭವಾನ್ವಾಯೋ ಶರೀರಸ್ಥಃ ಶರೀರಿಣಾಂ ॥
ಅನಂತಮೂರ್ತಿರ್ಧರ್ಮಾತ್ಮಾ ದೇವೋ ನಾರಾಯಣಃ ಪ್ರಭುಃ ॥ ೧ ॥

ಅಚಿಂತ್ಯವೀರ್ಯಃ ಪುರುಷಃ ಸದಾಧಾರಃ ಸನಾತನಃ ।
ಸಾಕ್ಷಿಭೂತಶ್ಚ ಸರ್ವೇಷಾಂ ಕರ್ಮಣಾಂ ಶುಭಪಾಪಯೋಃ ॥ ೨ ॥

ಘ್ರಾಣಸ್ತ್ವಂ ದೇಹಿನಾಂ ದೇಹೇ ಚೇಷ್ಟಿತಂ ಚ ತಥಾ ಭವಾನ್ ।
ಭವಾನ್ರುದ್ರೋ ಭವಾನ್ಬ್ರಹ್ಮಾ ಭವಾನ್ವಿಷ್ಣುಃ ಸನಾತನಃ ॥ ೩ ॥

---

### ಒಂದು ನೂರ ಇಪ್ಪತ್ತಮೂರನೆಯ ಅಧ್ಯಾಯವು.

೧-೬ ಬೃಹಸ್ಪತ್ಯಾಚಾರ್ಯರು ವಾಯುದೇವರನ್ನು ಸ್ತೋತ್ರಮಾಡುತ್ತಾರೆ ಅದೆಂತೆಂದರೆ —ಎಲೈ ವಾಯುದೇವನೇ ! ಪ್ರಪಂಚದ ಆಯುಸ್ಸೆಲ್ಲವೂ ನಿನ್ನ ಅಧೀನ ದಲ್ಲಿದೆ ನೀನು ಸಕಲ ಶರೀರಗಳ ಶರೀರದಲ್ಲಿಯೂ ಇದ್ದೀಯೆ ಅನಂತಮೂರ್ತಿ ಯಾಗಿಯೂ, ಧರ್ಮಾತ್ಮನಾಗಿಯೂ, ಸಾಕ್ಷಾನ್ನಾರಾಯಣರೂಪನಾಗಿಯೂ, ಲೋಕ ಪ್ರಭುವಾಗಿಯೂ, ಅಚಿಂತ್ಯವೀರ್ಯನಾಗಿಯೂ, ಪುರುಷೋತ್ತಮನಾಗಿಯೂ, ಸದಾಧಾರ ನಾಗಿಯೂ, ಸನಾತನನಾಗಿಯೂ, ಸಕಲರಿಗೂ ಸಾಕ್ಷಿಭೂತನಾಗಿಯೂ, ಸಕಲ ಶುಭಾ ಶುಭ (ಪಾಪಪುಣ್ಯ) ಕರ್ಮಗಳನ್ನು ನೋಡತಕ್ಕವನಾಗಿಯೂ ಇದ್ದೀಯೆ ದೇಹಿಗಳ ದೇಹದಲ್ಲಿ ನೀನಿದ್ದುಕೊಂಡು ನೀನು ಸಕಲ ಪದಾರ್ಥಗಳನ್ನೂ ಮೂಸಿನೋಡುವ ಘ್ರಾಣೇಂದ್ರಿಯನಾಗಿರುತ್ತೀಯೆ ಹಾಗೂ ಚಲನವಲನಾದಿಗಳು ನಿನ್ನ ಅಧೀನ

**ತವಾಯತ್ತಂ ಹಿ ಜಗತಾಂ ವರ್ಷಾವರ್ಷಂ ಶುಭಾಶುಭಂ ।**
**ಭವಾನ್ವಿಸೃಜಸೇ ಮೇಘಾನ್ಭವಾನ್ಸಂಹರಸೇ ಪುನಃ ॥ ೪ ॥**

**ಭವಾನ್ಧಾರಯುಸೇ ಮೇಘಾನ್ವರ್ಷಮಾಣಾಂಸ್ತಥಾ ದಿವಿ ।**
**ಆದಿತ್ಯರಶ್ಮಿಪೀತಸ್ಯಮೇಘೋ ದರ ಗತಸ್ಯ ಚ ॥ ೫ ॥**

**ರಸಸ್ಯ ಭಂಕ್ತಾ ಸತತಂ ಭವಾನೇವ ನಭಸ್ತಲೇ ।**
**ತಡಿಲ್ಲತಾನಾಂ ಚ ತಥಾ ಭವಾನ್ಕರ್ತಾ ಜಗತ್ರಯೇ ॥ ೬ ॥**

**ಅಂಭಸಾಂ ಭೇದಕಾಲೇ ತು ಸರ್ವಾಧಾರಃ ಸಮಿರಾಣಃ ।**
**ಪರಸ್ಪರಂ ಹಿ ಭವತಸ್ತಥಾ ಸಂಘುಟನಾತ್ಪ್ರಭೋ ॥ ೭ ॥**

**ಗರ್ಜಿತಂ ಜಾಯತೇ ಲೋಕೇ ಮೇಘೋದರಗತಂ ಮಹತ್ ॥**
**ಬಲೇನ ತ್ವತ್ಸಮಂ ನಾನ್ಯಂ ಭೂತಂ ಪಶ್ಯಾಮಿ ಭೂತಲೇ ॥ ೮ ॥**

**ತಸ್ಮಾತ್ತ್ವಂ ಕುರು ಸಾಹಾಯ್ಯಂ ವೇದಮೂರ್ತಿರ್ತಭಾವಸೋಃ ॥ ೯ ॥**

---

ದಲ್ಲಿಯೇ ಇವೆ ನೀನೇ ಪರಮೇಶ್ವರನೂ, ಬ್ರಹ್ಮನೂ, ಸನಾತನನಾದ ಮಹಾವಿಷ್ಣುವೂ ಆಗಿರುತ್ತೀಯೆ ಪಾಪಪುಣ್ಯಗಳೂ ದುರ್ಭಿಕ್ಷಕಾಲಗಳೂ ನಿನ್ನ ಅಧೀನದಲ್ಲಿವೆ ನೀನೇ ಮೇಘಗಳನ್ನು ಚದುರಿಸಿ ಮಳೆ ಕೊಡತಕ್ಕವನು ಮಳೆ ಹೊಯ್ಯುವಂತೆ ಮೇಘಸಂಕ್ತಿಗಳನ್ನು ಚಲ್ಲಾಪಿಲ್ಲಿಮಾಡತಕ್ಕ ಶಕ್ತಿಯೂ ನಿನಗಿದೆ ಮೇಘಗಳನ್ನು ಧರಿಸಿರುವವನೂ ನೀನೇ ಆಕಾಶದಲ್ಲಿದ್ದುಕೊಂಡು ಸುವೃಷ್ಟಿಯನ್ನು ಮಾಡತಕ್ಕ ಶಕ್ತನೂ ನೀನೆ ಆಗಿದ್ದೀಯೆ ನೀನು ಸೂರ್ಯಕಿರಣಗಳಿಂದ ಕುಡಿಯಲ್ಪಟ್ಟ ಮೇಘೋದರದಲ್ಲಿರುವ ನೀರನ್ನು ಭೇದಿಸುತ್ತಾ ಆಕಾಶದಲ್ಲಿ ಯಾವಾಗಲೂ ಇದ್ದುಕೊಂಡು ಆ ನೀರನ್ನು ಮಿಂಚು ಗುಡುಗು ಸಿಡಿಲುಗಳ ಸಹಾಯದಿಂದ ಭೂಲೋಕಕ್ಕೆ ಕಳುಹಿಸುವ ಶಕ್ತಿಯನ್ನು ಹೊಂದಿರುವಿ! ಈ ಶಕ್ತಿನಿನಗೊಬ್ಬನಿಗಲ್ಲದೆ ಬೇರೊಬ್ಬರಿಗಿಲ್ಲ ಲೋಕತ್ರಯಕರ್ತೃವೂ ನೀನೇ ಆಗಿರುತ್ತೀಯೆ

೭-೧೦ ನೀರನ್ನು ಮೋಡದಿಂದ ಚದುರಿಸಿ ಸಣ್ಣಸಣ್ಣ ಧಾರೆ (ಹನಿ) ಯನ್ನಾಗಿ ಮಾಡುವ ಶಕ್ತಿಯು ಸರ್ವಾಧಾರನಾದ ನಿನಗೊಬ್ಬನಿಗೇ ಇರುವುದು ನೀನು ಮೋಡಗಳನ್ನು ಒಂದಕ್ಕೊಂದು ತಾಕಿಸಿ ಭಯಂಕರವಾದ ಸದ್ದನ್ನು(ಗುಡುಗು ಸಿಡಿಲು) ಉಂಟುಮಾಡಿ ಮೇಘೋದರದಲ್ಲಿರುವ ನೀರನ್ನು ಹೊರಕ್ಕೆ ಬರಿಸತಕ್ಕ ಶಕ್ತಿಯನ್ನು

ಏತಾವದುಕ್ತ್ವೋಂಗಿರಸಾ ಮಹಾತ್ಮಾ
ತಥೇತಿ ತಂ ಪ್ರಾಹ ಸಮೀರಣೋಽಪಿ ॥
ಜಗಾಮ ಯುದ್ಧಂ ಸಹ ಪಾವಕೇನ ।
ದೈತ್ಯೇಶ್ವರಾನ್ದೇವರಿಪೂನ್ಮಹಾತ್ಮಾ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಾಯುಸ್ತೋತ್ರಂ ನಾಮ ತ್ರಯೋವಿಂ
ಶತ್ಯುತ್ತರಶತತಮೋಽಧ್ಯಾಯಃ ॥

---

ಹೊಂದಿರುತ್ತೀಯೆ ಪಂಚಭೂತಗಳೊಳಗೆ (ವಾಯು) ನಿನ್ನ ಭೂತಕ್ಕೆ ಸಮನಾದ ಶಕ್ತಿಯುಳ್ಳ ಭೂತವುಮತ್ತೊಂದಿಲ್ಲವಯ್ಯ ಆದ್ದರಿಂದ ನೀನು ದೇವಾಸುರರಯುದ್ಧದಲ್ಲಿ ವೇದಮೂರ್ತಿಯಾದ ಅಗ್ನಿಭಗವಾನನಿಗೆ ಸಹಾಯಮಾಡಿ ದೈತ್ಯರನ್ನು ವಿನಾಶಗೊಳಿಸಿ ದೇವತೆಗಳಿಗೆ ಜಯವನ್ನುಂಟುಮಾಡಬೇಕೆಂಬುದಾಗಿ ಪ್ರಾರ್ಥಿಸಿದ ಗುರುವಿನ ಸ್ತೋತ್ರಕ್ಕೆ ಮೆಚ್ಚಿ ಆ ವಾಯುವು ಹಾಗೆಯೇ ಆಗಲಿ, ಎಂದು ಒಪ್ಪಿಕೊಂಡು ದೇವ ಶತ್ರುಗಳಾದ ದೈತ್ಯರ ವಿನಾಶಕ್ಕಾಗಿ ರಣರಂಗವನ್ನು ಪ್ರವೇಶಿಸಿ ಅಗ್ನಿಯ ಜತೆಗೆ ಸೇರಿ ಕೊಂಡನೆಂಬಲ್ಲಿಗೆ,

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ವಾಯುಸ್ತೋತ್ರವೆಂಬ
ಹೆಸರಿನ ಒಂದು ನೂರ ಇಪ್ಪತ್ತಮೂರನೆಯ ಅಧ್ಯಾಯವು
ಮುಗಿದುದು



ಶ್ರೀ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಚತುರ್ವಿಂಶತ್ಯಧಿಕಶತತಮೋಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ವಾಯ್ವಗ್ನೀ ಸಹಿತೌ ಗತ್ವಾ ಮಯತಾರಪುರೋಗಮಾನ್ ।
ಜಿಗ್ಯತುಃ ಸಮರೇ ದೈತ್ಯಾನ್ನಾನಾಪ್ರಹರಣೋದ್ಯತಾನ್ ॥ ೧ ॥

ವಿಜಿತಾಸ್ತೇ ರಣೇ ದೈತ್ಯಾ ಮಯತಾರಪುರೋಗಮಾಃ ।
ತ್ಯಕ್ತ್ವಾದೇವಾಲಯಾಃ ಸರ್ವೇ ವರುಣಾಲಯಮಾಗತಾಃ ॥ ೨ ॥

ಏತಸ್ಮಿನ್ನೇವ ಕಾಲೇ ತು ಹಿರಣ್ಯಕಶಿಪೋಃ ಸುತಃ ।
ಕಾಲನೇಮಿರಿತಿ ಖ್ಯಾತಃ ಶೀತಶೀರ್ಷೋನುದೃಶ್ಯತೇ ॥ ೩ ॥

### ಒಂದು ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾರೆ —ವಾಯು ಮತ್ತು ಅಗ್ನಿಗಳು ಯುದ್ಧರಂಗಕ್ಕೆ ಪ್ರವೇಶಿಸಿ ನಾನಾವಿಧ ಆಯುಧಗಳಿಂದ ಕೂಡಿದ್ದ ಮಯ, ತಾರ ಮುಂತಾದ ರಾಕ್ಷಸವೀರರನ್ನು ಜಯಿಸುವಂಥವರಾದರು

೨ ಮಯ, ತಾರರೇ ಮುಂತಾದ ಮಹಾಮಹಾವೀರರು ನೋತು (ಸುಟ್ಟು) ಹೋದುದನ್ನು ನೋಡಿ ದಗ್ಧಾ (ಹತಾ) ವಶಿಷ್ಟರಾದ ಹೇಡಿ ರಾಕ್ಷಸರೆಲ್ಲರೂ ರಣರಂಗ ದಿಂದ ಓಡಿಹೋಗಿ ಪಾತಾಳಲೋಕವನ್ನು ಸೇರಿಕೊಂಡರು

೩ ಇದೇ ಕಾಲದಲ್ಲಿ ಹಿರಣ್ಯಕಶಿಪುವಿನ ಮಗನಾದ ಕಾಲನೇಮಿಯೆಂಬ ಮಹಾವೀರನು ತಂಪಾದ ತಲೆಯುಳ್ಳವನಾಗಿ ಮಹಾಪ್ರಖ್ಯಾತಿಯನ್ನು ಹೊಂದಿ ರಾರಾಜಿಸುತ್ತಲಿದ್ದನು

**ಶತಬಾಹುರ್ಮಹಾಕಾಯಃ ಪರ್ವತಾಕಾರದರ್ಶನಃ ।**
**ಬ್ರಹ್ಮಲಬ್ಧವರೋ ರೌದ್ರೋ ದಗ್ಧಶೈಲಸಮುಚ್ಛ್ರಿತಿಃ ॥ ೪ ॥**

**ಏಕೋದರೋ ದ್ವಿಪಾದಶ್ಚ ಏಕಗ್ರೀವಃ ಸುರಾಂತಕಃ ।**
**ಅಂಗದೀ ಬದ್ಧಮುಕುಟಃ ಕುಂಡಲಾಂಬರಭೂಷಣಃ ॥ ೫ ॥**

**ಸರ್ವಾಯುಧಧರೋ ರೌದ್ರೋ ಗದಾಪಾಣಿರ್ವಿಭೀಷಣಃ ।**
**ದತ್ವಾಽಭಯಂ ಸ ದೈತ್ಯಾನಾಂ ತಸ್ಮೈ ಮೇರುಂ ಸುರಾಲಯಂ ॥ ೬ ॥**

**ಗತ್ವಾ ವಿಜಿಗ್ಯೇ ತ್ರಿದಶಾನ್ಸ್ಥಾನೇಭ್ಯಶ್ಚಾವರೋಪಯತ್ ।**
**ತ್ರೈಲೋಕ್ಯಮಾತ್ಮಸಾತ್ಕೃತ್ವಾ ಸುಖಮಾಸ್ತೇ ತ್ರಿವಿಷ್ಟಪೇ ॥ ೭ ॥**

**ತಸ್ಯ ತೇ ಹ್ಯನುಗಾಃ ಸರ್ವೇ ಲೋಕಾಃ ಸ್ಥಾವರಜಂಗಮಾಃ ।**
**ತದಾಜ್ಞಾಕಾರಿಣಃ ಸರ್ವೇ ತದ್ಭಾವಸ್ಯಾನುವರ್ತಕಾಃ ॥ ೮ ॥**

**ಪಂಚ ತತ್ರಾಭ್ಯವರ್ತಂತ ವಿಪರೀತೇನ ಕರ್ಮಣಾ ।**
**ವೇದೋ ಧರ್ಮಃ ಕ್ಷಮಾ ಸತ್ಯಂ ಶ್ರೀಶ್ಚ ನಾರಾಯಣಾಶ್ರಯಾ ॥ ೯ ॥**

---

೪-೯ ಆ ಕಾಲನೇಮಿಗೆ ನೂರು ತೋಳುಗಳುಂಟು, ಪರ್ವತದಂತೆ ಆಕಾರವುಳ್ಳ ದೊಡ್ಡ ಶರೀರವುಂಟು ಇಂತಹ ಈ ಕಾಲನೇಮಿಯು ಬ್ರಹ್ಮನಿಂದ ವರವನ್ನು ಪಡೆದುಕೊಂಡು ಮಹಾಭಯಂಕರನಾಗಿದ್ದನು ಇವನಿಗೆ ಒಂದು ಹೊಟ್ಟೆ, ಎರಡು ಕಾಲು, ಒಂದು ಕತ್ತು ಇವನು ಅಂಗದಕಿರೀಟಾದಿಗಳಿಂದಲಂಕೃತನಾಗಿ ಸಕಲವಿಧವಾದ ಆಯುಧಗಳನ್ನೂ ಧರಿಸಿದವನಾಗಿ ಕೈಯ್ಯಲ್ಲಿ ಗದೆಯನ್ನು ಹಿಡಿದು ಲೋಕಭಯಂಕರನಾಗಿಪರಿಣಮಿಸಿದನು ಈ ಕಾಲನೇಮಿಯು ಮಯ, ತಾರಕರ ಯುದ್ಧದಲ್ಲಿ ಸೋತ ರಾಕ್ಷಸರೆಲ್ಲರಿಗೂ ಅಭಯವನ್ನು ಕೊಟ್ಟು ದೇವತೆಗಳಿಗೆ ವಾಸಸ್ಥಾನವಾದ ಮೇರು ಪರ್ವತಕ್ಕೆ ದಂಡೆತ್ತಿಹೋಗಿ ಅಲ್ಲಿದ್ದ ದೇವತೆಗಳೆಲ್ಲರನ್ನೂ ಗೆದ್ದು ಅವರನ್ನೆಲ್ಲಾ ಆ ಸ್ಥಳದಿಂದೋಡಿಸಿದನು ಈರೀತಿ ಆ ಕಾಲನೇಮಿಯು ಸ್ವರ್ಗವನ್ನು ಸಹಾ ಗೆದ್ದು ತ್ರಿಲೋಕವನ್ನೂ ತನ್ನ ಅಧೀನಪಡಿಸಿಕೊಂಡವನಾಗಿ ಸ್ವರ್ಗದಲ್ಲಿ ಸುಖವಾಗಿ ವಾಸಮಾಡಲಾರಂಭಿಸಿದನು ಸ್ಥಾವರಜಂಗಮಾತ್ಮಕವಾದ ಸಕಲ ಲೋಕಗಳೂ ಆ ಕಾಲನೇಮಿಯ ವಶವರ್ತಿಗಳಾಗಿ ಅವನ ಆಜ್ಞಾನುಸಾರವಾಗಿ ನಡೆಯತೊಡಗಿದುವು ಮತ್ತು ಅವನ ಮನೋಭಿಪ್ರಾಯದಂತೆ ಪ್ರವರ್ತಿಸಲಾರಂಭಿಸಿದುವು ಇಷ್ಟಲ್ಲಾ ಲೋಕಕ್ಕೆ ಲೋಕವೇ ಅವನ ಅಧೀನದಲ್ಲಿದ್ದಾಗ್ಯೂ ಐದು ವಸ್ತುಗಳು ಮಾತ್ರ ಇವನದಾಗಲಿಲ್ಲ ಅವಾವುವೆಂದರೆ —ವೇದ, ಧರ್ಮ, ಕ್ಷಮಾ, ಸತ್ಯ, ಶ್ರೀ (ಐಶ್ವರ್ಯ) ಈ ಐದು ವಸ್ತುಗಳೂ ಶ್ರೀಮನ್ನಾರಾಯಣನನ್ನು ಆಶ್ರಯಿಸಿಕೊಂಡು ಸಂತುಷ್ಟ

ಸರ್ವೇಷಾ ಮನುಸಂಧಾನಾತ್ಸರೋಷೋ ದಾನವೇಶ್ವರಃ ।
ವೈಷ್ಣವಂ ಪದಮನ್ವಿಚ್ಛನ್ನ್ಯಯೌ ನಾರಾಯಣಾಂತಿಕಂ ॥ ೧೦ ॥

ಜ್ಞಾತ್ವಾ ದೈತ್ಯಮಥಾಯಾಂತಂ ದೇವೋಽಪಿ ಮಧುಸೂದನಃ
ತಾರ್ಕ್ಷ್ಯಮಾವಾಹಯಾಂಚಕ್ರೇ ಆರುರೋಹ ಚ ತಂ ಹರಿಃ ।
ಸ ದದರ್ಶ ಹರಿಂ ದೇವಂ ತಾರ್ಕ್ಷ್ಯಸ್ಥಂ ದೈತ್ಯರಾಟ್ ತದಾ ॥ ೧೧ ॥

ಸಜಲಜಲದನೀಲಂ ಪದ್ಮಪತ್ರಾಯತಾಕ್ಷಂ ।
ಖಗಪತಿಮುಪರೂಢಂ ಕಲ್ಪವೃಕ್ಷೋಪಮಾನಂ ॥
ಹಲಮುಸಲಗದಾಭಿಃ ಶೋಭಿತಂ ದೇವದೇವಂ
ವರಪುರುಷಮಜೇಯಂ ಶಾರ್ಙ್ಗಚಕ್ರಾಸಿಪಾಣಿಂ ॥ ೧೨ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ಕಾಲನೇಮ್ಯುಪಾಖ್ಯಾನೇ ಶ್ರೀ ಭಗವದ್ದರ್ಶನೋನಾಮ
ಚತುರ್ವಿಂಶತ್ಯಧಿಕ ಶತತಮೋಧ್ಯಾಯಃ

---

೧೦-೧೨ ಆಗ ಆ ಕಾಲನೇಮಿಯು ಸಕಲ ವಸ್ತುಗಳೂ ತನಗೆ ದಕ್ಕಬೇಕೆಂಬ ಅನುಸಂಧಾನದಿಂದ ಬಹಳ ಕೋಪದಿಂದೊಡಗೂಡಿದವನಾಗಿ ವಿಷ್ಣುಪದವಿಯೂ ತನಗೆ ಲಭ್ಯವಾಗಬೇಕೆಂಬ ಉದ್ದೇಶ್ಯದಿಂದ ಶ್ರೀಮನ್ನಾರಾಯಣನ ಸಮೀಪಕ್ಕೆ ಬಂದನು ಈರೀತಿ ತನ್ನ ಬಳಿಗೆ ಬರುತಲಿರುವ ದೈತ್ಯನ ದುರಾಲೋಚನೆಯನ್ನು ತಿಳಿದವನಾಗಿ ಮಧುಸೂದನನು ಗರುಡನನ್ನು ಕರೆದನು ಕರೆದಕ್ಷಣವೇ ಗರುತ್ಮಂತನು ಸ್ವಾಮಿಯ ಬಳಿಗೆ ಬರಲು ಪರಮಾತ್ಮನು ಅವನಮೇಲೆ ಹತ್ತಿ ಕುಳಿತುಕೊಂಡನು ಈರೀತಿ ಗರುಡನನ್ನೇರಿ ಕುಳಿತ ಶ್ರೀಮನ್ಮಹಾವಿಷ್ಣುವನ್ನು ದೈತ್ಯೇಂದ್ರನಾದ ಕಾಲನೇಮಿಯು ನೋಡಿದನು ಆಗ ಪರಮಾತ್ಮನು ಇಂತು ಪ್ರಕಾಶಿಸುತ್ತಲಿದ್ದನು -ನೀರಿನಿಂದ ತುಂಬಿರುವ ಮೇಘದಂತೆ ನೀಲವರ್ಣನಾಗಿಯೂ, ಪದ್ಮದಳದಂತ ನೇತ್ರಗಳುಳ್ಳವನಾಗಿಯೂ, ಗರುಡವಾಹನನಾಗಿಯೂ, ಕಲ್ಪವೃಕ್ಷಕ್ಕೆ ಸಮನಾದವನಾಗಿಯೂ, ಹಲ-ಮುಸಲ-ಗದಾದ್ಯಾಯುಧಗಳನ್ನೂ, ಶಾರ್ಙ್ಗ ಚಕ್ರ ಖಡ್ಗಾದಿಗಳಿನ್ನು ಹಸ್ತಗಳಲ್ಲಿ ಧರಿಸಿದವನಾಗಿಯೂ ಭಗವಂತನು ವಿರಾಜಿಸುತ್ತಲಿದ್ದನೆಂಬಲ್ಲಿಗೆ,

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿಮಾರ್ಕಂಡೇಯ ವಜ್ರಸಂವಾದರೂಪವಾದ ಕಾಲನೇಮಿಯ ಉಪಾಖ್ಯಾನದಲ್ಲಿ ಭಗವಂತ ದರ್ಶನವೆಂಬ ಹೆಸರಿನಒಂದು ನೂರ ಇಪ್ಪತ್ತನಾಲ್ಕನೇ ಅಧ್ಯಾಯವುಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚವಿಂಶತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ದೃಷ್ಟ್ವಾ ಸ ಪುರತೋ ದೇವಂ ದಾನವಾನಭ್ಯಭಾಷತ ।
ಅಯಂ ಸ ದೃಶ್ಯತೇ ವಿಷ್ಣುರ್ದಾನವಾ ಯೇನ ಘಾತಿತಾಃ ॥ ೧ ॥

ಕುತ್ಪ್ಷ್ಣಯೇವ ಶಕ್ರಾರ್ಥೇ ಬಭೂವ ಕಿಲ ವಾಮನಃ ।
ಯದಾ ವಂಚಿತವಾನ್ಪುತ್ರಂ ಭ್ರಾತೃವ್ಯಸ್ಯ ಬಲಿಂ ಮಮ ॥ ೨ ॥

ನೃವರಾಹವಪುಃ ಕೃತ್ವಾ ಲೋಕಚಿತ್ತಹರಂ ಪುರಾ ।
ಹಿರಣ್ಯಾಕ್ಷಂ ಜಘಾನೈವ ಪಿತೃವ್ಯಂ ಮಮ ವಿಸ್ಮಿತಂ ॥ ೩ ॥

### ಒಂದು ನೂರ ಇಪ್ಪತ್ತೈದನೇ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ತನ್ನ ಮುಂದ ಪ್ರಕಾಶಮಾನನಾಗಿ ನಿಂತುಕೊಂಡ ಮಹಾವಿಷ್ಣುವನ್ನು ನೋಡಿ ಕಾಲನೇಮಿಯು ತನ್ನ ಕಡೆಯ ದಾನವ ರನ್ನು ಕುರಿತು ಹೀಗೆ ಹೇಳಿದನು ಸಕಲ ದೈತ್ಯರನ್ನೂ ನಾಶಗೊಳಿಸಿದ ಮಹಾವಿಷ್ಣು ವೆನ್ನುವವನಾವನುಂಟೋ ಅವನು ಈಗ ನಮ್ಮ ಮುಂದೆ ಬಂದು ನಿಂತುಕೊಂಡಿರು ವನು ನೋಡಿ

೨ ಈ ವಿಷ್ಣುವು ಇಂದ್ರನಿಗೋಸ್ಕರವಾಗಿ ಬಲುಕೆಟ್ಟ ಆಶೆಯಿಂದ ವಾಮನ ರೂಪವನ್ನು ಧರಿಸಿ ನನ್ನ ಅಣ್ಣನ ಮಗನಾದ ಬಲಿಚಕ್ರವರ್ತಿಯನ್ನು ಯಜ್ಞಕಾಲ ದಲ್ಲಿ ವಂಚಿಸಿದ ಪುಣ್ಯಾತ್ಮನು

೩ ಇದೇ ಈ ನಮ್ಮ ಕಣ್ಣುಮುಂದೆ ನಿಂತಿರುವ ಈ ಮಹಾವಿಷ್ಣುವೇ ಜನರ ಮನಸ್ಸನ್ನೆಳೆಯುವ ಅತ್ಯಾಶ್ಚರ್ಯಕರವಾದ ನೃವರಾಹ (ಮನುಷ್ಯ ಮತ್ತು ಹಂದಿ) ರೂಪ ವನ್ನು ಧರಿಸಿ ನನ್ನ ದೊಡ್ಡಪ್ಪನಾದ ಹಿರಣ್ಯಾಕ್ಷನನ್ನು ಸಂಹಾರಮಾಡಿದವನು

**ಅಪೂರ್ವಂ ರೂಪಮಾಸ್ಥಾಯ ನರಸಿಂಹಸ್ಯ ದಾನವಾಃ ।**
**ಪಿತರಂ ಯೋ ಜಘಾನೈವ ಹಿರಣ್ಯಕಶಿಪುಂ ರಣೇ ॥ ೪ ॥**

**ವರಾಹರೂಪಿಣಾsನೇನ ಪಾತಾಲತಲಮಾಸ್ಥಿತಾಃ ।**
**ಅಸಂಭಾವ್ಯಭಯೇನಾಜೌ ದಾನವಾ ವಿನಿಪಾತಿತಾಃ ॥ ೫ ॥**

**ನರಾಶ್ವವಪುಷಾ ಯೇನ ಮಧುಕೈಟಭಯೋಃ ಪುರಾ ।**
**ಪಾತಾಲಾದಾಹೃತಾ ವೇದಾಸ್ತತಸ್ತೌ ಯುಧಿ ಘಾತಿತೌ ॥ ೬ ॥**

**ಅಸ್ಯಾಜ್ಞಾಕಾರಿಣೋ ದೇವಾ ನ ಸಂತಿಷ್ಠಂತಿ ಶಾಸನೇ ।**
**ಅಯಂ ಸ ರಕ್ಷಾಂ ದೇವಾನಾಮಸ್ಮಾಭಿರ್ವಿಪ್ರಕೃಷ್ಯತಾಂ ॥ ೭ ॥**

**ತ್ರೈಲೋಕ್ಯೇ ದೈತ್ಯಮುದ್ಭೂತಂ ಯುದ್ಧೇನೈವ ಪುನಃ ಪುನಃ ।**
**ದೇವಸಾದ್ಗಮ ಇತ್ಯೇವ ತೇನ ವಧ್ಯೋsಥ ಮೇ ರಿಪುಃ ॥ ೮ ॥**

---

೪ ಎಲೈ ರಾಕ್ಷಸರೇ ! ಕೇಳಿರಿ ಇದೇ ವಿಷ್ಣುವೇ ಬಹಳ ಅಪೂರ್ವವಾದ ನರಸಿಂಹಾವತಾರವನ್ನು ಮಾಡಿ ನನ್ನ ತಂದೆಯಾದ ಹಿರಣ್ಯಕಶಿಪುವನ್ನು ಸಂಹರಿಸಿ ಬಿಟ್ಟಿರುವನು.

೫-೬ ಈ ವಿಷ್ಣುವು ವರಾಹರೂಪವನ್ನು ಧರಿಸಿದ್ದ ಕಾಲದಲ್ಲಿ ಪಾತಾಳದಲ್ಲಿ ವಾಸವಾಗಿದ್ದ ರಾಕ್ಷಸರು ಕೆಲಸಕ್ಕೆ ಬಾರದ ದಿಗಿಲನ್ನು ತಂದುಕೊಂಡು ಯುದ್ಧರಂಗ ದಲ್ಲಿ ವ್ಯರ್ಥವಾಗಿ ಸತ್ತರು ಮತ್ತು ಇದೇ ವಿಷ್ಣುವೇ ಕುದುರೆ ಮತ್ತು ಮನುಷ್ಯ ರೂಪವನ್ನು ಧರಿಸಿ ಪಾತಾಳದಲ್ಲಿದ್ದ ವೇದಗಳನ್ನು ಮೇಲಕ್ಕೆತ್ತಿ ಆ ಬಳಿಕ ಮಧು ಕೈಟಭರನ್ನು ಸಂಹರಿಸಿದನು

೭-೮ ಈ ವಿಷ್ಣುವಿನ ಹಿಂದೆಯೇ ಇದ್ದುಕೊಂಡಿರುವ ದೇವತೆಗಳೆಲ್ಲರೂ ನಾವು ಮಾಡುವ ಶಾಸನ (ಅಪ್ಪಣೆ) ವನ್ನು ಪಾಲಿಸುವಂತೆ ಕಾಣುವುದಿಲ್ಲ ಆದ್ದರಿಂದ ಮೊದಲು ಇವನನ್ನು ಮುಗಿಸಿಬಿಡಬೇಕು ಮೂರು ಲೋಕದಲ್ಲಿ ಯಾವಾಗ ಶೂರ ರಾದ ರಾಕ್ಷಸರು ಉತ್ಪನ್ನರಾದಾಗ್ಯೂ ಅವರೆಲ್ಲರನ್ನೂ ಈ ವಿಷ್ಣುವೆಂಬುವನು ಯುದ್ಧ ದಲ್ಲಿ ಸಾಯಿಸಿ ಮೂರು ಲೋಕವನ್ನೂ ದೇವತೆಗಳ ಅಧೀನವನ್ನಾಗಿಯೇ ಮಾಡುತ್ತ ಒರುತಲಿದಾನೆಯಾದುದರಿಂದ ಈ ಶತ್ರುವನ್ನು ನಾವು ಈಗ ಸಂಹರಿಸಿಬಿಡಬೇಕು

**ಅತೀತಸ್ಯಾದ್ಯ ಕಾಲಸ್ಯ ದುರ್ನಯಸ್ಯ ಕೃತಸ್ಯ ಚ ।**
**ಭೋಕ್ಷ್ಯತೇಯಂ ಫಲಂ ದೈತ್ಯಾಃ ಸರ್ವೇ ಪಶ್ಯಂತ ಮಾ ಚಿರಂ ॥ ೯ ॥**

**ಇತ್ಯೇತದ್ದೈತ್ಯನಾಥಸ್ಯ ವಾಕ್ಯಂ ಶ್ರುತ್ವೈವ ದಾನವಾಃ ।**
**ಜಯಶಬ್ದಂ ತತಶ್ಚಕ್ರುಃ ಸಿಂಹನಾದರವಂ ತಥಾ ॥ ೧೦ ॥**

**ವಾಚಶ್ಚ ಪ್ರತಿಕೂಲಾಸ್ತಾಸ್ತೇನ ದುಷ್ಟೇನ ಚೇತಸಾ ।**
**ತಚ್ಛ್ರುತ್ವಾ ಚ ಹರಿರ್ದೇವಃ ಕ್ರುದ್ಧೋ ನಾಮೇದಮಬ್ರವೀತ್ ॥ ೧೧ ॥**

**ಕಿಮಿದಂ ಗರ್ಜಸೇ ದೈತ್ಯ ಶಾರದಾಂಬುದವದ್ವೃಥಾ ।**
**ಪ್ರಜಾಪತಿಕೃತಂ ಸೇತುಂ ಕಥಂ ಲಂಘಿತುಮಿಚ್ಛಸಿ ॥ ೧೨ ॥**

**ಏವಂ ತು ಕಥತೋರ್ದೇವದೈತ್ಯಯೋಃ ಪಾರ್ಥಿವೋತ್ತಮ ।**
**ಪ್ರಾವರ್ತತ ರಣೋ ಘೋರೋ ಗದಾಪಾತವಿಭೀಷಣಃ ॥ ೧೩ ॥**

---

೯ ಈ ವ್ಯಕ್ತಿಯು ಹಿಂದೆ ನಮಗೆ ಮಾಡಿರುವ ಅಪಾರವಾದ ಅಪಕಾರಕ್ಕೂ ಈಗ ಹೊರಟಿರುವ ಅವಿಧೇಯ ಕೃತ್ಯಕ್ಕೂ ತಕ್ಕ ಫಲವನ್ನು ಈಗ ಹೊಂದಬೇಕಾಗಿ ಬಂದಿದೆ ನೋಡುತಲಿರಿ ರಾಕ್ಷಸರಿರಾ ! ಇವನ ಗತಿಯನ್ನು

೧೦-೧೧ ತಮ್ಮೊಡೆಯನಾದ ಕಾಲನೇಮಿಯು ಈ ಉತ್ತೇಜನಕರವಾದ ಮಾತುಗಳು ಕಿವಿಗಳಿಗೆ ಬಿದ್ದೊಡನೆಯೇ ರಾಕ್ಷಸರೆಲ್ಲರೂ ಒಂದೇ ಧ್ವನಿಯಿಂದ ಜಯ ಶಬ್ದವನ್ನುಚ್ಚರಿಸುತ್ತಾ ಸಿಂಹನಾದವನ್ನು ಮಾಡುತ್ತಾ ಮುಂದೆ ಹೊರಟರು ಮಹಾ ವಿಷ್ಣುವು ಕೆಟ್ಟಮನಸ್ಸಿನಿಂದ ಕೂಡಿದ ಆ ರಾಕ್ಷಸನ ಪ್ರತಿಕೂಲವಚನಗಳನ್ನು ಕೇಳಿ ಮಹತ್ತಾದ ಕೋಪದಿಂದೊಡಗೂಡಿ ಈ ಮಾತನ್ನು ಹೇಳಿದನು ಅದೇನೆಂದರೆ —

೧೨ ಎಲೋ ನೀಚ ರಾಕ್ಷಸಾ ! ಶರದೃತುವಿನಲ್ಲಿ ಮೋಡವು ಗುಡುಗುವಂತೆ ವ್ಯರ್ಥವಾಗಿ ಅದೇಕೆ ಬೊಗಳುತಲಿರುವೆಯೋ ! ಬ್ರಹ್ಮನು ಕಟ್ಟಿದ ಸೇತುವೆಯನ್ನಾರು ತಾನೆ ದಾಟಲು (ಮೀರಲು) ಸಮರ್ಥರಾದಾರು?

೧೩-೧೫ ಎಲೈ ವಜ್ರರಾಜನೇ ಕೇಳು ಈರೀತಿಯಾಗಿ ದೇವದಾನವರಿಗೆ ಭಯಂಕರವಾದ ಕಾಳಗಕ್ಕೆ ಮೊದಲಾಯಿತು ಆ ಯುದ್ಧವು ಗದೆಯ ಏಟುಗಳಿಂದ ಭಯಂಕರವಾಗಿ ಪರಿಣಮಿಸಿತು ದೇವಾದಿದೇವನಾದ ಮಹಾವಿಷ್ಣುವೂ ಕೂಡ ಕಾಲನೇಮಿಯೇ ಮೊದಲಾದ ರಾಕ್ಷಸರೊಡನೆ ತಾನೇ ಯುದ್ಧಮಾಡಲು ನಿಂತನು

**ದಾನವೈರ್ದೇವದೇವೋಽಪಿ ಕಾಲನೇಮಿಪುರಸ್ಸರೈಃ ।**
**ಸಂಛಾದ್ಯತೇ ಮಹಾಸ್ತ್ರಾದ್ಯೈರ್ಮೇಘೈರಿವ ನಭಸ್ತಲಮ್ ॥ ೧೪ ॥**

**ಸಂಛಾದ್ಯಮಾನೋ ದೈತ್ಯೇಂದ್ರೈರ್ದೇವದೇವೋ ನ ವಿವ್ಯಥೇ ।**
**ಯೋಧಯಾಮಾಸ ಸ ರಣೇ ಗದಯಾ ದಾನವಾನ್ಬಹೂನ್ ॥ ೧೫ ॥**

**ತಸ್ಯ ದೈತ್ಯಪ್ರಸಕ್ತಸ್ಯ ಕಾಲನೇಮಿರ್ಮಹಾಸುರಃ ।**
**ಪಾತಯಾಮಾಸ ವೇಗೇನ ಗದಾಂ ಗರುಡಮೂರ್ಧನಿ ॥ ೧೬ ॥**

**ಗದಾಘಾತೇನ ರೌದ್ರೇಣ ತೇನ ತಾರ್ಕ್ಷ್ಯಸ್ಯ ಮಾನದ ।**
**ನಾಸಾ ಭಗ್ನಾ ವ್ಯಥಾ ಜಾತಾ ರಕ್ತೈಶ್ಛರ್ದಿಶ್ಚ ದಾರುಣಾ ॥ ೧೭ ॥**

**ವ್ಯಥಿತಂ ಗರುಡಂ ದೃಷ್ಟ್ವಾ ದೇವೇನ ಹರಿಮೇಧಸಾ ।**
**ಕ್ಷಿಪ್ರಂ ದೈತ್ಯವಿನಾಶಾಯ ತದಾ ಚಕ್ರಂ ಸುದಾರುಣಂ ॥ ೧೮ ॥**

**ಯತ್ತತ್ಸುದರ್ಶನಂ ನಾಮ ಸೂರ್ಯತೇಜಃ ಸಮುದ್ಭವಂ ।**

---

ಆಗ ರಾಕ್ಷಸರ ವೃಂದವು ಭಗವಂತನಮೇಲೆ ಬಾಣಗಳ ಮಳೆಯನ್ನೇ ಕರೆದವರಾಗಿ ಆ ಪರಮಾತ್ಮನನ್ನು ಬಾಣಗಳಿಂದ ಮುಚ್ಚಿಬಿಟ್ಟರು ಇಷ್ಟಾದಾಗ್ಯೂ ಆ ಮಹಾನುಭಾವನು ಸ್ವಲ್ಪವಾದರೂ ವ್ಯಥೆಪಡಲೇ ಇಲ್ಲ ಆಗ ದೇವದೇವೋತ್ತಮನು ತನ್ನ ಕೈಯಲ್ಲಿದ್ದ ಮೇರುಪರ್ವತಕ್ಕೆ ಸಮನಾದ ಬಲವುಳ್ಳ ಕೌಮೋದಕೀ ಎಂಬ ಗದೆಯಿಂದ ರಾಕ್ಷಸ ರನ್ನು ಸದೆಬಡಿಯುತ್ತಾ ಯುದ್ಧಮಾಡಲಾರಂಭಿಸಿದನು

೧೬-೧೮ ಆ ದೇವಾಸುರರ ಮಹಾಯುದ್ಧದಲ್ಲಿ ಕಾಲನೇಮಿಯು ತನ್ನ ಕೈಯ ಲ್ಲಿದ್ದ ಗದೆಯನ್ನು ಗರುಡನ ತಲೆಗೆ ಗುರಿಯಿಟ್ಟು ತಿರುಗಿಸಿ ಎಸೆದನು. ಅದು ವೇಗದಿಂದ ಹೋಗಿ ಗರುಡನ ತಲೆಗೆ ಬಡಿಯಲು ಆ ಭಯಂಕರವಾದ ಗದೆಯ ಏಟಿನಿಂದ ಗರುಡನ ಮೂಗು ಮುರಿದುಹೋಯಿತು ಆ ಏಟಿನಿಂದ ಮೂಗೆಲ್ಲಾ ರಕ್ತಮಯವಾಗಿ ಗರುಡ ನಿಗೆ ಬಹಳ ವ್ಯಥೆಯುಂಟಾಯಿತು ಇವನ್ನು ನೋಡಿ ಪರಮಾತ್ಮನು ವ್ಯಸನಾಕ್ರಾಂತ ನಾಗಿ ತನ್ನ ಚಕ್ರಾಯುಧವನ್ನು ಕಾಲನೇಮಿಯ ಸಂಹಾರಕ್ಕಾಗಿ ಪ್ರಯೋಗಿಸಿದನು.

ವಜ್ರನಾಭಂ ಸಹಸ್ರಾರಂ ಕ್ಷುರಪರ್ಯಂತಮಂಡಲಂ ॥ ೧೯ ॥

ಚ್ಯುತಂ ಚಕ್ರಿಕರಾಚ್ಚಕ್ರಂ ಕಾಲನೇಮಿಂ ಮಹಾಸುರಂ ।
ಶೀಘ್ರಂ ವಿಶಿರಸಂ ಚಕ್ರೇ ವಿಬಾಹುಂ ಚ ತಥಾ ನೃಪ ॥ ೨೦ ॥

ವಿಬಾಹುಶಿರಸಂ ಕೃತ್ವಾ ದೇವಹಸ್ತ ಮುಪೇಯಿವಾನ್ ।
ವಿಬಾಹುಶಿರಸಂ ಕಾಯಂ ಕ್ಷರಚ್ಛೋಣಿತನಿರ್ಝರಂ ॥ ೨೧ ॥

ನ ಪಪಾತಾಸ್ಯ ಮೇದಿನ್ಯಾಂ ಯದಾ ತಾರ್ಕ್ಷ್ಯಸ್ತತೋ ರಯಾತ್ ।
ಉರಸಾ ಪಾತಯಾಮಾಸ ದೇವಾನಾಂ ಪಶ್ಯತಾಂ ತದಾ ॥ ೨೨ ॥

ಪತತಾ ದೈತ್ಯಕಾಯೇನ ಸಶೈಲವನಕಾನನಾ ।
ಕಂಪಿತಾ ವಸುಧಾ ಸರ್ವಾ ಪತಿತಾಶ್ಚ ಶಿಲೋಚ್ಚಯಾಃ ॥ ೨೩ ॥

ದಾನವೇಂದ್ರಂ ಹತಂ ದೃಷ್ಟ್ವಾ ಮಯತಾರಪುರೋಗಮಾಃ ।
ತುಷ್ಟುವುರ್ದೇವದೇವೇಶಂ ವರಚಕ್ರಾಸಿಪಾಣಿನಂ ॥ ೨೪ ॥

---

೧೯-೨೦ ಕಾಲನೇಮಿಯಮೇಲೆ ಪ್ರಯೋಗಿಸಲ್ಪಟ್ಟ ಆ ಚಕ್ರವು ಸೂರ್ಯ ತೇಜಸ್ಸಿನಿಂದುತ್ಪನ್ನವಾದುದು ಅದಕ್ಕೆ ಸುದರ್ಶನವೆಂದು ಹೆಸರು ಅದು ವಜ್ರಾಯುಧದಂತೆ ಇರತಕ್ಕುದು ಒಂದು ಸಹಸ್ರ ಮೊನೆಗಳು (ಕತ್ತಿಯ ಅಲಗು) ಅದಕ್ಕುಂಟು ಇಂತಹ ಚಕ್ರವು ಮಹಾವಿಷ್ಣುವಿನಿಂದ ಪ್ರಯೋಗಿಸಲ್ಪಟ್ಟೊಡನೆಯೇ ಮೊದಲು ಕಾಲನೇಮಿಯ ತಲೆಯನ್ನು ಕತ್ತರಿಸಿ, ಬಳಿಕ ತೋಳುಗಳನ್ನೂ ಸಹ ಚೂರು ಚೂರಾಗಿ ಕತ್ತರಿಸಿಹಾಕಿತು

೨೧-೨೨ ಈರೀತಿ ಆ ಚಕ್ರವು ಕಾಲನೇಮಿಯನ್ನು ಬಾಹುಶಿರೋರಹಿತನನ್ನಾಗಿ ಮಾಡಿ ಭಗವಂತನ ಹಸ್ತವನ್ನಲಂಕರಿಸಿತು ಶಿರೋಬಾಹುಗಳಿಂದ ರಹಿತವಾದ ಮುಂಡವು ರಕ್ತವೃಷ್ಟಿಯನ್ನು ಸುರಿಸುತ್ತಾ ಭೂಮಿಯಮೇಲೆ ಕುಳಿತಿರಲು ಆ ಕೂಡಲೆ ಗರುಡನು ವೇಗದಿಂದ ಅದರಮೇಲೆ ಬಿದ್ದು ತನ್ನ ಎದೆಯಿಂದ ಅದನ್ನು ದೇವತೆಗಳು ನೋಡುತ್ತಿರಲು ಕೆಳಕ್ಕೆ ಉರುಳಿಸಿದಂಥಾಗುವುದು

೨೩-೨೭ ಆ ಕಾಲನೇಮಿಯ ದೇಹವು ಕೆಳಗೆ ಬಿದ್ದಾಗ ಬೆಟ್ಟ ಗುಡ್ಡ ಕಾಡುಗಳಿಂದ ಕೂಡಿದ ಭೂಮಿಯು ನಡುಗಿಹೋಯಿತು ದೊಡ್ಡದೊಡ್ಡ ಬಂಡೆಗಳು

ತುಷ್ಟಾವ ಚ ತದಾ ದೇವೋ ಬ್ರಹ್ಮಾ ಶುಭಚತುರ್ಮುಖಃ ।
ಸ್ತುತಶ್ಚ ಬ್ರಹ್ಮಣಾ ದೇವೋ ಲೋಕಪಾಲಾನ್ಯಥಾ ಪುರಾ　　॥ ೨೫ ॥

ಸ್ಥಾನೇಷು ಯೋಜಯಾಮಾಸ ಯಜ್ಞಂ ದೇವಮುಖೇ ತಥಾ ।
ಜಗಾಮ ಬ್ರಹ್ಮಣಾ ಸಾರ್ಧಂ ಬ್ರಹ್ಮಲೋಕಂ ತದಾ ವಿಭುಃ　　॥ ೨೬ ॥

ತತ್ರಾತ್ಮಾನಂ ಯಜ್ಞಮೂರ್ತಿಮಿಜ್ಯಮಾನಂ ದ್ವಿಜೋತ್ತಮೈಃ ।
ದೃಷ್ಟ್ವಾ ಸ್ವಯಂ ತು ಜಗ್ರಾಹ ಯಜ್ಞಭಾಗಂ ಮಹಾತ್ಮನಾಂ　　॥ ೨೭ ॥

ತತ್ರ ಪೂಜಾಮುಪಾದಾಯ ಜಗಾಮ ಸ ಹಿರಣ್ವತೀಂ ।
ಅಸ್ತ್ರೈರನುಗತಸ್ತತ್ರ ಸುಷ್ವಾಪ ಕಿಲ ಯೋಗವಿತ್　　॥ ೨೮ ॥

ಏವಂ ಸ ದೈತ್ಯಪ್ರವರೋ ನರೇಂದ್ರ
ಕೃಷ್ಣೇನ ಚಕ್ರೇಣ ಪುರಾ ನಿರಸ್ತಃ ।

---

ಉರುಳಿಹೋದುವು ಈರೀತಿ ದಾನವೇಂದ್ರನು ಹತನಾದುದನ್ನು ನೋಡಿ ಮಯ, ತಾರಾದಿ ಪ್ರಭೃತಿಗಳು ಚಕ್ರಪಾಣಿಯಾದ ಪರಮಪುರುಷನನ್ನು ನಾನಾವಿಧವಾಗಿ ಸ್ತೋತ್ರಮಾಡಿದರು ಆಗ ಬ್ರಹ್ಮನೂ ಕೂಡ ಪರಮಾತ್ಮನನ್ನು ಹೊಗಳಿದನು ಪೂರ್ವದಲ್ಲಿ ಲೋಕಪಾಲಕರನ್ನೆಂತು ತಮ್ಮತಮ್ಮ ಸ್ಥಾನದಲ್ಲಿರಿಸಿದ್ದನೋ ಅದರಂತೆ ಈಗಲೂ ಅವರವರ ಪದವಿಯನ್ನು ಅವರವರಿಗೆ ಕೊಡಿಸಿದನು ದೇವತೆಗಳಿಗೆ ಯಜ್ಞಗಳಲ್ಲಿ ಕೊಡಲ್ಪಡುವ ಹವಿರ್ಭಾಗವು ಅವರವರಿಗೆ ಸಲ್ಲುವಂತೆ ಮಾಡಿ ಬ್ರಹ್ಮನೊಡನೆ ಭಗವಂತನು ಬ್ರಹ್ಮಲೋಕಕ್ಕೆ ಪ್ರಯಾಣಮಾಡಿದನು ಅಲ್ಲಿ ಯಜ್ಞಪತಿಯಾದ ತನ್ನನ್ನು ಕುರಿತು ಹೋಮಮಾಡುತ್ತಿದ್ದ ಬ್ರಾಹ್ಮಣೋತ್ತಮರನ್ನು ನೋಡಿ ತಾನೂ ಸಹ ಆ ಮಹಾತ್ಮರು ಕೊಟ್ಟ ಯಜ್ಞಭಾಗವನ್ನು ಸ್ವೀಕರಿಸಿದನು

೨೮-೨೯ ಈರೀತಿ ಪೂಜೆಯನ್ನಂಗೀಕರಿಸಿ ಮಹಾವಿಷ್ಣುವು ಯೋಗನಿದ್ರೆಯನ್ನು ಮಾಡುತ್ತಾ ವೈಕುಂಠದಲ್ಲಿ ಪವಡಿಸಿದನು, ಅವನ ಅನುಚರರು ಅಸ್ತ್ರಶಸ್ತ್ರಧಾರಿಗಳಾಗಿ ಅವನನ್ನೋಲೈಸುತ್ತಿದ್ದರು ಎಲೈ ವಜ್ರರಾಜನೇ ! ಇದುವರಿಗೆ ಕೃಷ್ಣಚಕ್ರದಿಂದ ಹತನಾದ ಕಾಲನೇಮಿಯ ವೃತ್ತಾಂತವನ್ನು ತಿಳಿಸಿರುತ್ತೇನೆ ಇನ್ನು

**ಅತಃಪರಂ ಕಿಂ ಕಥಯಾಮಿ ತುಭ್ಯಂ**
**ತನ್ಮೇ ವದಸ್ವಾಯತಲೋಹಿತಾಕ್ಷ** ॥ ೨೯ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಕಾಲನೇಮಿವಧೋ ನಾಮ**
**ಪಂಚವಿಂಶತ್ಯಧಿಕಶತತಮೋಽಧ್ಯಾಯಃ**

---

ಮುಂದೆ ಏನು ಕೇಳಬೇಕೆಂದಿರುವೆಯೋ ಅದನ್ನು ಕೇಳೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರೆಂಬಲ್ಲಿಗೆ,

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಕಾಲನೇಮಿವಧೆಯೆಂಬ
ಹೆಸರಿನ ಒಂದು ನೂರ ಇಪ್ಪತ್ತೈದನೇ ಅಧ್ಯಾಯವು
ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಟ್ತ್ರಿಂಶತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಯದುಕ್ತಂ ದೈತ್ಯನಾಥೇನ ದೈತ್ಯಾನಾಂ ಕಾಲನೇಮಿನಾ ।
ಪಾತಾಲದೈತ್ಯಶಮನಂ ವಪುರ್ದೇವಸ್ಯ ಚಕ್ರಿಣಃ ॥ ೧ ॥

ತದಹಂ ಶ್ರೋತುಮಿಚ್ಛಾಮಿ ತತ್ರ ಮೇ ಸಂಶಯೋ ಮಹಾನ್ ।
ಚರಿತಂ ತಸ್ಯ ದೇವಸ್ಯ ಭವಾನ್ವೇತ್ತಿ ಯಥಾತಥಂ ॥ ೨ ॥

॥ ಮಾರ್ಕಂಡೇಯ ಉವಾಚ ॥

ವಿಷ್ಣುನಾ ತು ಬಲೌ ಬದ್ಧೇ ಪಾತಾಲತಲಮಾಶ್ರಿತಾಃ ।
ಜಘ್ನುರ್ದೈತ್ಯಗಣಾ ಲೋಕಾನ್ಬ್ರಾಹ್ಮಣಾಂಶ್ಚ ವಿಶೇಷತಃ ॥ ೩ ॥

### ಒಂದು ನೂರ ಇಪ್ಪತ್ತಾರನೇ ಅಧ್ಯಾಯವು.

೧-೨ ವಜ್ರರಾಜನು ಹೇಳುತ್ತಾನೆ —ದೈತ್ಯನಾಥನಾದ ಕಾಲನೇಮಿಯಿಂದ ದೈತ್ಯರಿಗೆ ಯಾವಯಾವ ವಿಜಯಗಳು ಹೇಳಲ್ಪಟ್ಟುವೋ, ಚಕ್ರಪಾಣಿಯಾದ ಪರಮಾತ್ಮನಿಂದ ಪಾತಾಳವಾಸಿಗಳಾದ ದೈತ್ಯರ ಶಮನವೆಂತಾದುದೋ, ಆ ವಿಚಾರವನ್ನು ವಿಸ್ತಾರವಾಗಿ ಕೇಳಬೇಕೆಂದು ಕುತೂಹಲವುಂಟಾಗಿದೆ ಈ ವಿಷಯದಲ್ಲಿ ನನಗೆ ಬಹಳ ಸಂಶಯವುಂಟಾಗಿದೆ ನೀನಾದರೆ ಆ ಪರಮಾತ್ಮನ ಸಕಲ ಚರಿತ್ರೆಗಳನ್ನೂ ಬಲ್ಲವನಾಗಿರುವೆಯಾದ್ದರಿಂದ ಅವನ್ನೆಲ್ಲಾ ನಿನ್ನ ಮುಖದಿಂದ ಕೇಳಬೇಕೆಂದು ಆಶಿಸುತ್ತಲಿದ್ದೇನೆ

೩-೧೦ ಮಾರ್ಕಂಡೇಯನು ಉತ್ತರ ಹೇಳುತ್ತಾನೆ -- ಮಹಾವಿಷ್ಣುವು ಬಲಿಚಕ್ರವರ್ತಿಯಿಂದ ಯಾವಾಗ ಜಯಿಸಲ್ಪಟ್ಟನೋ ಆ ಸಮಯದಲ್ಲಿ ಪಾತಾಳದಲ್ಲಿ

ಭೂತಲೇ ಹನ್ಯಮಾನೇ ತು ಯಜ್ಞೇ ನಾಶಮುಪಾಗತೇ ।
ಕ್ಷುತ್‌ಕ್ಷಾಮೈಸ್ತ್ರಿದಶೈರ್ಬ್ರಹ್ಮಾ ದೈತ್ಯಹೇತೋಃ ಪ್ರಚೋದಿತಃ ॥ ೪ ॥

ಬ್ರಹ್ಮಾಪಿ ಚೋದಯಾಮಾಸ ದೇವದೇವಂ ಜನಾರ್ದನಂ ।
ಬ್ರಹ್ಮಣಾ ಚೋದಿತೋ ದೇವಃ ಪಾತಾಲಗಮನೇಚ್ಛಯಃ ॥ ೫ ॥

ಚಕಾರ ರೂಪಂ ವಾರಾಹಂ ಭಿನ್ನಾಂಜನಚಯಂಪ್ರಭುಂ ।
ಶಶಾಂಕಲೇಖಾದಂಷ್ಟ್ರಾಗ್ರಂ ವಜ್ರಪ್ರೋಥಖುರಂ ತಥಾ ॥ ೬ ॥

ವಜ್ರಸಂಹನನಂ ಭೀಮಂ ತ್ರೈಲೋಕ್ಯಸ್ಯೋಭಕಾರಕಂ ।
ಪೀನವೃತ್ತಾಯತಸ್ಕಂಧಂ ಮಹಾಪೀನಶಿರೋಧರಂ ॥ ೭ ॥

ವಿವೃತ್ತಾಸ್ಯಂ ಮಹಾಕಾಯಂ ಭೀಮಾಕ್ಷಂ ಭೀಮನಿಸ್ವನಂ ।
ಆವರ್ತರೋಮಸಂಘಾತಂ ತೇನ ವಿಗ್ರಹಮೂರ್ತಿಜಂ ॥ ೮ ॥

ಸ ಸಮುದ್ರೇಣ ಪಾತಾಲಂ ಪ್ರವಿಶ್ಯ ಮಧುಸೂದನಃ ।
ದೈತ್ಯಾನಾಂ ದರ್ಶನೇ ತಸ್ಥೌ ಮಹಾಬಲಪರಾಕ್ರಮಃ ॥ ೯ ॥

---

ವಾಸವಾಗಿದ್ದ ರಾಕ್ಷಸರೆಲ್ಲರೂ ಲೋಕದ ಜನರನ್ನೂ ಅವರಲ್ಲೂ ವಿಶೇಷವಾಗಿ ಬ್ರಾಹ್ಮಣರನ್ನೂ ಬಾಧಿಸತೊಡಗಿದರು ಯಾವಾಗ ಬ್ರಾಹ್ಮಣರು ನಾಶವಾಗುತ್ತಾಬಂದರೊ ಅಗ ಯಜ್ಞಯಾಗಾದಿಗಳೆಲ್ಲವೂ ನಿಂತುಹೋದುವು ದೇವತೆಗಳಿಗೆ ಹವಿರ್ಭಾಗವಿಲ್ಲದೆ ಹಸಿವಿನಿಂದ ಪೀಡಿತರಾಗಿ ಬ್ರಹ್ಮನ ಬಳಿಗೆ ಹೋಗಿ ಮೊರೆಯಿಟ್ಟರು ಆಗ ದೇವತಾಕಾರ್ಯದಲ್ಲಿ ಬದ್ಧಕಂಕಣನಾದ ಬ್ರಹ್ಮನು ಮಹಾವಿಷ್ಣುವನ್ನು ಪ್ರೇರಿಸಿದನು ಬ್ರಹ್ಮನಿಂದ ಪ್ರಚೋದಿತನಾದ ಪರಮಾತ್ಮನು ಪಾತಾಳಲೋಕಕ್ಕೆ ಹೋಗಲಿಚ್ಛೆಯಿಂದ ವರಾಹರೂಪವನ್ನು ಧಾರಣೆಮಾಡಿದನು ಆ ರೂಪವನ್ನುನೋಡಿದರೆ ಕಾಡಿಗೆಯ (ಕತ್ತಲೆ)ಬೆಟ್ಟದಂತೆ ಕಾಣುತ್ತಿತ್ತು ಅದರ ಕೋರೆಹಲ್ಲುಗಳು ಚಂದ್ರನ ಗೆರೆಯಂತೆ ಕಾಣುತ್ತಿತ್ತು ಅದರ ಗೊರಸುಗಳು ವಜ್ರಾಯುಧದಂತೆ ದೃಢವಾಗಿದ್ದುವು. ಅದರ ಎದೆಯು ಭೂಲೋಕಾದಿ ತ್ರಿಲೋಕಕ್ಕೂ ಭಯವನ್ನುಂಟುಮಾಡುತಲಿದ್ದಿತು ಅದರ ಮುಖವು ಗುಂಡಗಿತ್ತು ಪರ್ವತಾಕಾರವುಳ್ಳ ದೇಹದ ಆ ಮೂರ್ತಿಯ ಭಯಂಕರವಾದ ಕಣ್ಣುಗಳೂ, ಭಯಂಕರವಾದ ಕೂಗೂ ಲೋಕವನ್ನೇ ನಡುಗಿಸುತ್ತಿತ್ತು ಇಂತಹ ವಿಗ್ರಹವನ್ನು ಧರಿಸಿ ಮಹಾವಿಷ್ಣುವು ಸಮುದ್ರಮಾರ್ಗದಿಂದ ಪಾತಾಳಲೋಕ

ಪಾತಾಲೇ ಸೂಕರಂ ದೃಷ್ಟ್ವಾ ಪ್ರೋಥದಾರಿತಭೂತಲಂ ।
ಸುಮುಸ್ತಗರ್ಭಕವಲಂ ಶುಂಶುಂಕಾರಕೃತಾನನಂ ॥ ೧೦ ॥

ಪಂಕಾನುಲಿಪ್ತಸರ್ವಾಂಗಂ ನಿರ್ಯಯುರ್ದಾನವಾಸ್ತದಾ ।
ಸತತಂ ಮೃಗಯಾಶೀಲಾ ಜಘ್ನುಸ್ತಂ ಚ ವರಾಯುಧೈಃ ॥ ೧೧ ॥

ಸ ಹನ್ಯಮಾನೋ ದೈತ್ಯಾ ಸ್ತೈಃ ಪೃಷತ್ಕೈರಿವ ಪರ್ವತಃ।
ಸ್ಕಂಧಕಂಡೂಚ್ಛಲೇನಾಜೌ ದೈತ್ಯಾಧಿಪನಿವೇಶನಂ ॥ ೧೨ ॥

ಪಾತಯಾಮಾಸ ವೇಗೇನ ಮಹಾದ್ರಿಶಿಖರೋಪಮಂ ।
ವೇಶ್ಮನಶ್ಚ ನಿಪಾತೇನ ದೇವದೇವಸ್ಯ ಮಾಯಯಾ ॥ ೧೩ ॥

ಹನ್ಯಂತೆ ದಾನವಾ ಘೋರಾಃ ಶತಶೋಽಥ ಸಹಸ್ರಶಃ ।
ತೇ ಕ್ಷಯಾದ್ದೈತ್ಯಮುಖ್ಯಾನಾಂ ದೈತ್ಯಮುಖ್ಯಕ್ಷಯಂಕರಾಃ ॥ ೧೪ ॥

ವನ್ನು ಪ್ರವೇಶಿಸಿದನು ಅಲ್ಲಿದ್ದ ರಾಕ್ಷಸರನ್ನು ನೋಡಿ ಮಹಾಬಲಶಾಲಿಯಾದ ಭಗವಂತನು ಸುಮ್ಮನ ನಿಂತುಬಿಟ್ಟನು ಭೂಮಿಯನ್ನೂ ನಮುದ್ರವನ್ನೂ ಭೇದಿಸಿ ಕೊಂಡು ಪಾತಾಳಕ್ಕೆ ಪ್ರವೇಶಿಸಿದ ಆ ವರಾಹಮೂರ್ತಿಯು ಮುಖದಿಂದ ಶುಂಶುಂ ಎಂದು ಸದ್ದುಮಾಡುತ್ತಾ ಮೈಗೆಲ್ಲಾ ಕೆಸರುಬಳಿದುಕೊಂಡು ನಿಂತಿರುವುದನ್ನುನೋಡಿ ರಾಕ್ಷಸರೆಲ್ಲರೂ ಮನೆಯಿಂದ ಹೊರಟು ಈ ವರಾಹವಿದ್ದ ಸ್ಥಳಕ್ಕೆ ಬಂದರು

೧೧-೧೩ ಯಾವಾಗಲೂ ಬೇಟೆಯಲ್ಲಾಸಕ್ತರಾದ ಆ ದಾನವರು ಈ ಹಂದಿ ಯನ್ನು ಬೇಟೆಯಾಡಬೇಕೆಂದು ಯೋಚಿಸಿ ಅವನ್ನು ಶ್ರೇಷ್ಠವಾದ ಆಯುಧಗಳಿಂದ ಹೊಡೆದರು ಆರೀತಿ ಹೂಡದ ಆಯುಧದ ಏಟುಗಳು ಆ ವರಾಹಮೂರ್ತಿಯಮೇಲೆ ಬೆಟ್ಟದಮೇಲೆ ನೀರಿನ ಹನಿಗಳು ಬಿದ್ದಂತೆ ಪರಿಣಮಿಸಿದುವು ಆಗ ಯುದ್ಧಕ್ಕೆ ಆರಂ ಭವಾಯಿತು ಆ ಯುದ್ಧದಲ್ಲಿ ಆ ವರಾಹವು ಹೆಗಲನ್ನು ತುರಿಸಿ (ಕೆರೆದು) ಕೊಳ್ಳು ವುದಕ್ಕಾಗಿ ವೇಗದಿಂದ ಮೇರುಪರ್ವತಕ್ಕೆ ಸಮನಾದ ದೈತ್ಯರಾಜನ ಅರಮನೆಯ ಬಳಿಗೆ ಹೋಗಿ ಹೆಗಲು ಕೆರೆದುಕೊಳ್ಳುವ ನೆಪದಿಂದ ಆ ಅರಮನೆಯನ್ನು ಕೆಡವಿ ಬಿಟ್ಟಿತು ಮಹಾಪರ್ವತದಂತೆ ಅತ್ಯುನ್ನತವಾದ ಆ ರಾಜಗೃಹವು ಬಿದ್ದೊಡನೆ ಭಗವಂತನ ಮಾಯೆಯಿಂದ ಅನೇಕ ಮಂದಿ ರಾಕ್ಷಸರು ಸತ್ತುಹೋದರು ನೂರಾರು ಸಾವಿರಾರುಮಂದಿ ರಾಕ್ಷಸರು ಪ್ರತಿಕ್ಷಣವೂ ಸಂಹೃತರಾಗುತ್ತಿದ್ದರು

೧೪-೧೮ ಭಯಂಕರರಾದ ದೈತ್ಯರೆಲ್ಲರೂ ಈರೀತಿ ಕ್ಷಣೇಕ್ಷಣೇ ಮಡಿಯುತ್ತ ಬಂದರು ಈ ಕ್ಷಯವು ಭಯಂಕರಾಕಾರವನ್ನು ತಳೆದು ಪಾತಾಳಲೋಕವೇ ನಾಶ

ಯಥಾರ್ಥಕ್ಷಯತಾಂ ಜಗ್ಮುಃ ಕ್ಷಯೇ ರೌದ್ರ ಉಪಸ್ಥಿತೇ ।
ಕ್ಷೀಯಮಾಣಾಃ ಕ್ಷಯೈರ್ದೃಷ್ಟ್ವಾ ಕ್ಷತಜೋತ್ಥಿತಮೂರ್ಧಜಾನ್ ॥

ಕ್ಷ್ಮಾತಲಸ್ಥಾಃ ಕ್ಷತೈರ್ಗೋತ್ರೈಃ ಕ್ಷಣೇನ ಕ್ಷಣದಾಚರಾನ್ ।
ಪ್ರಧಾನಾ ದೈತ್ಯಮುಖ್ಯಾ ಯೇ ಔರಸೇನ ಬಲೇನ ಚ ॥ ೧೬ ॥

ಜಗ್ಮುರ್ವರಾಯುಧೈರ್ದೇವಂ ಶತಶೋಽಥ ಸಹಸ್ರಶಃ ।
ಸ ಹನ್ಯಮಾನೋ ದೈತ್ಯೇಂದ್ರೈಃ ಪ್ರೋಥೇನ ದಿತಿಜೋತ್ತಮಾನ್ ॥ ೧೭ ॥

ವಿದಾರಯಾಮಾಸ ರಣೇ ದಂಷ್ಟ್ರಾಗ್ರೇಣ ತಥಾಪರಾನ್ ।
ಏವಂ ವರಾಹೇಣ ರಣೇ ಹತಾರ್ದೃಷ್ಟ್ವಾ ದಿತೇಃ ಸುತಾನ್ ॥ ೧೮ ॥

ಹರಿಂ ವಿಜ್ಞಾತವಾನ್ದೇವಂ ಪ್ರಹ್ಲಾದೋ ದೈತ್ಯಸತ್ತಮಃ ।
ಸ ಪ್ರಣಮ್ಯ ಹರಿಂ ದೇವಂ ತುಷ್ಟಾವ ವರವೀರಹಾ ॥ ೧೯ ॥

ತಂ ಜಗಾದ ಮಹಾತೇಜಾ ದೇವದೇವೋ ಜನಾರ್ದನಃ ।
ಅನುಗ್ರಾಹ್ಯೋಽಸಿ ಮೇ ದೈತ್ಯ ಭಕ್ತೋಽಸಿ ಸತತಂ ಯತಃ ॥ ೨೦ ॥

ತವಾಜ್ಞಾಲಂಘಕಾ ಘೋರಾಃ ಪ್ರಾಯೇಣ ನಿಹತಾ ಮಯಾ ।
ತವಾಜ್ಞಾಕಾರಿಣೋ ದೈತ್ಯಾ ನಮೇ ವಧ್ಯಾ ದಿತೇಃ ಸುತಾಃ ॥ ೨೧ ॥

ಶಾಸನಂ ಪಾಲಯಾಸ್ಮಾಕಂ ಪಾತಾಲೇ ತ್ವಂ ಸುಖೀ ಭವ ।
ಮಾರ್ಗೇ ಸ್ಥಾಪಯ ದೈತ್ಯಾಂಸ್ತ್ವಂ ತ್ವದಾಜ್ಞಾಪರಿಬೃಂಹಿತಾನ್ ॥ ೨೨ ॥

---

ವಾಗುವ ಸ್ಥಿತಿಬಂತು ವರಾಹಮೂರ್ತಿಯು ಈರೀತಿ ಸಂಹರಿಸಿ ರಾಕ್ಷಸರ ಮೂಲಬಲ ವನ್ನು ನಾಶಗೊಳಿಸಿದನು ಇವರ ಕೋರೆಹಲ್ಲುಗಳ ಮತ್ತು ಮೂತಿಯ ದೆಸೆಯಿಂದ ಅನೇಕ ಶಸ್ತ್ರಾಸ್ತ್ರಗಳು ತುಂಡುತುಂಡಾಗಿ ಹೋದುವು ಈ ಸಂಘಟನೆಯನ್ನು ನೋಡಿ ದೈತ್ಯರಾಜನಾದ ಪ್ರಹ್ಲಾದನು ಇದು ವಿಷ್ಣುವಿನ ಮಾಯೆಯೇ ಸರಿಯೆಂದು ನಿರ್ಧರಿಸಿ ದವನಾಗಿ ಭಗವಂತನ ಮುಂದ ನಿಂತುಕೊಂಡು ನಾನಾವಿಧವಾಗಿ ಸ್ತೋತ್ರಮಾಡಿದನು

೨೦-೨೧ ಆಗ ಭಗವಂತನು ಪ್ರಸನ್ನನಾಗಿ ಎಲೈ ಪ್ರಹ್ಲಾದನೇ ! ನೀನು ನನ್ನ ಅನುಗ್ರಹಕ್ಕೆ ಪಾತ್ರನಾಗಿದ್ದೀಯೆ ನೀನು ನನ್ನ ಪರಮಭಕ್ತ ನಿನ್ನ ಆಜ್ಞೆಯನ್ನು ಮೀರಿದ ರಾಕ್ಷಸರೆಲ್ಲರೂ ನನ್ನಿಂದ ಹತರಾದರು ನಿನಗೆ ವಿಧೇಯರಾಗಿ ಆಜ್ಞಾಧಾರಿ ಗಳಾದ ರಾಕ್ಷಸರೊಬ್ಬರನ್ನೂ ನಾನು ಕೊಲ್ಲುವುದಿಲ್ಲ

೨೨-೨೩. ಎಲೈ ಪ್ರಹ್ಲಾದನೇ ! ನಮ್ಮ ಅಪ್ಪಣೆಯನ್ನು ಪರಿಪಾಲಿಸುತ್ತಾ ನೀನು ಪಾತಾಳಲೋಕದಲ್ಲಿ ಸುಖವಾಗಿರು ನಿನ್ನ ಅಪ್ಪಣೆ ಮೀರುವವರನ್ನು ಸರಿ

ಆಭೂತಸಂಪ್ಲವಂ ದೈತ್ಯ ಜೀವಂ ತ್ವಂ ನ ವಿಮೋಕ್ಷ್ಯಸೇ ।
ಧರ್ಮಿಷ್ಠಾನಾಂ ಚ ದೈತ್ಯಾನಾಂ ಸದಾ ರಾಜಾ ಭವಿಷ್ಯಸಿ ॥ ೨೩ ॥

ಮದ್ಭಕ್ತ್ಯಾ ಪರಯಾ ವತ್ಸ ಪುತ್ರಸ್ತವ ವಿರೋಚನಃ ।
ಮಾರ್ಗಚ್ಯುತೋಽಪಿ ನ ಹತಃ ಕಲ್ಪಾಯುಶ್ಚ ತಥಾ ಕೃತಃ ॥ ೨೪ ॥

ಬಲಿರ್ವೈರೋಚನಶ್ಚೈವ ಮಯಾ ಬದ್ಧಃ ಕೃತೇ ತವ ।
ಕರಿಷ್ಯತಿ ಸ ಶಕ್ರತ್ವಂ ಪ್ರಾಪ್ತೇ ಸಾವರ್ಣಿಕೇಂತರೇ ॥ ೨೫ ॥

ಬಾಣಂ ಚ ತನಯಂ ತಸ್ಯ ಮಮ ವಿಪ್ರಿಯಕಾರಕಂ ।
ತ್ವತ್ಕೃತೇ ನ ಹನಿಷ್ಯಾಮಿ ತಸ್ಯ ಚ್ಛೇತ್ಸ್ಯಾಮಿ ದೋರ್ದ್ರುಮಾನ್ ॥ ೨೬ ॥

ಛಿನ್ನಬಾಹುರ್ಮಯಾ ಯುದ್ಧೇ ಹರಸ್ಯಾನುಚರೋ ಬಲೀ ।
ಮಹಾಕಾಲ ಇತಿ ಖ್ಯಾತೋ ಕಲ್ಪಸ್ಥಾಯೀ ಭವಿಷ್ಯತಿ ॥ ೨೭ ॥

---

ಯಾದ ದಾರಿಗೆ ಬರುವಂತೆ ಶಿಕ್ಷಿಸು ಎಲ್ಲಿಯವರೆಗೆ ಪಂಚಭೂತಗಳಿರುವುವೋ ಅಲ್ಲಿಯ ತನಕ ನೀನು ಚಿರಂಜೀವಿಯಾಗಿ ಬಾಳು ಧರ್ಮಿಷ್ಠರಾದ ದೈತ್ಯರಿಗೆಲ್ಲಾ ನೀನು ರಾಜನಾಗಿರುತ್ತೀಯೆ

೨೪-೨೫ ಎಲೈ ಮನುನೇ ! ನಿನ್ನ ಮಗನಾದ ವಿರೋಚನನೂ ನಹ ನಿನ್ನಂತೆಯೇ ನನಗೆ ಪರಮಭಕ್ತನಾದ್ದರಿಂದ ಅವನು ದಾರಿತಪ್ಪಿದಾಗ್ಯೂ ಅವನನ್ನು ಬಿಟ್ಟುಬಿಟ್ಟಿದ್ದೇನೆ ಮತ್ತು ಕಲ್ಪಾಂತ್ಯ (ಪ್ರಳಯ) ದ ವರಿಗೂ ಬದುಕಿರುವಂತೆ ವರವನ್ನು ಕೊಟ್ಟಿದ್ದೇನೆ ಮತ್ತು ವಿರೋಚನನ ಮಗನಾದ ಬಲಿಯನ್ನೂ ಸಹ ನಿನಗೋಸ್ಕರ ಬಿಟ್ಟುಬಿಟ್ಟಿದ್ದೇನೆ ಅವನು ಸಾವರ್ಣಿಕಮನ್ವಂತರದಲ್ಲಿ ಇಂದ್ರನವನಿಯನ್ನನುಭವಿಸುತ್ತಾನೆ

೨೬ ಬಲಿಚಕ್ರವರ್ತಿಯ ಮಗನಾದ ಬಾಣಾಸುರನು ನನಗೆ ಅಹಿತವನ್ನುಂಟು ಮಾಡಿದಾಗ್ಯೂ ನಿನಗೋಸ್ಕರ ಅವನನ್ನು ಸಂಹರಿಸುವುದಿಲ್ಲವಾದರೂ ಅವನ ಸಹಸ್ರ ಬಾಹುಗಳನ್ನು ಮಾತ್ರ ಕತ್ತರಿಸಿಬಿಡುತ್ತೇನೆ

೨೭ ಮಹಾಯುದ್ಧದಲ್ಲಿ ಬಾಣನ ತೋಳುಗಳು ಹೋದಬಳಿಕ ಅವನು ಈಶ್ವರನ ಮಹಾಭಕ್ತನಾಗಿ ಅವನ ಹತ್ತಿರದಲ್ಲೇ ಸದಾ ಇದ್ದುಕೊಂಡು ಮಹಾಕಾಳ ನೆಂಬ ಹೆಸರಿನಿಂದ ಕಲ್ಪಾಂತ್ಯದವರಿಗೂ ಇರುತ್ತಾನೆ

ಟಿಪ್ಪಣಿ —ದೇವತಾರ್ಚನೆಯಾದಮೇಲೆ, ಬಲಿಹರಣ ನಿವೇದನಮಾಡುವಾಗ " ಬಾಣರಾವಣ ಚಂಡೀಚ ನ್ಯಂದಿ ಭೃಂಗಿರಿಟಾದಯಃ । ಸದಾಶಿವ ಪ್ರಸಾದೇನ ಸರ್ವೇ ಗೃಹ್ಣಂತು ಶಾಂಭವಾಃ ॥ ಎಂದು ಹೇಳುವ ರೂಢಿ ಈಗಲೂ ಇದೆ

ಏಕನೇಕಂ ತು ದೈತ್ಯೇಂದ್ರ ಸಂತಾನೇ ಸತತಂ ತವ ।
ನಾಹಂ ವಧಿಷ್ಯೇ ಧರ್ಮಜ್ಞ ತ್ವತ್ಕೃತೇ ವ್ಯೇತು ತೇ ಭಯಂ ॥ ೨೮ ॥

ಭವಾನ್ಭಕ್ತಸ್ತಥಾ ಮಹ್ಯಂ ಭಕ್ತೇಷ್ವಪಿ ತಥಾ ಮಮ ।
ನಾಸ್ತ್ಯದೇಯಂ ಮಹಾಭಾಗ ತಸ್ಮಾತ್ತ್ವಂ ಗಚ್ಛ ನಿರ್ವೃತಃ ॥ ೨೯ ॥

ಹತಶೇಷಾನುಪಾದಾಯ ದೈತ್ಯಾನ್ಸ್ವಪಥಮಾಶ್ರಿತಾನ್ ।
ಏತಾವದುಕ್ತ್ವಾ ಪ್ರಹ್ಲಾದಂ ತತ್ರೈವಾಂತರಧೀಯತ ॥ ೩೦ ॥

ಏತದ್ವರಾಹಚರಿತಂ ತವ ರಾಜಸಿಂಹ ।
ಪ್ರೋಕ್ತಂಮಯಾ ಸಕಲಕಲ್ಮಷನಾಶಕಾರಿ॥
ಉದ್ವೃತ್ತದೈತ್ಯಶಮನಸ್ಯ ಋಷಿಸ್ತುತಸ್ಯ ।
ಕಂಡೂವಿನೋದನಹತಾಸುರಪುಂಗವಸ್ಯ ॥ ೩೧ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಪಾತಾಲೇ ವರಾಹಪ್ರಾದುರ್ಭಾವೋ ನಾಮ ಷಡ್ವಿಂಶತ್ಯಧಿಕಶತತಮೋಽಧ್ಯಾಯಃ ॥

---

೨೮ ಪ್ರಹ್ಲಾದ ! ನೀನು ನನ್ನ ಪರಮಭಕ್ತ ಆದ್ದರಿಂದ ನಿನ್ನ ಸಂತಾನ ವನ್ನೇ ಉದ್ಧಾರಮಾಡಿಬಿಡುತ್ತೇನೆ ನಿನಗೋಸ್ಕರ ನಿನ್ನ ಸಂತಾನದಲ್ಲಿ ಒಬ್ಬೊಬ್ಬ ರನ್ನು ಬದುಕಿಸಿಕೊಡುತ್ತೇನೆ, ಹೆದರಬೇಡ ನೀನು ಮಹಾಧರ್ಮಜ್ಞನಯ್ಯ !

೨೯-೩೦ ಅಯ್ಯಾ ಪ್ರಹ್ಲಾದ ! ನೀನು ಭಕ್ತರೊಳಗೆ ಪರಮಭಕ್ತನಯ್ಯ ! ನಿನಗೆ ಕೊಡಬೇಕಾದ ವರವಿನ್ನೇನಿದೆ ? ಹೇಳು ನನ್ಮಾರ್ಗಗಾಮಿಗಳಾಗಿರುವ ಈ ಹತಶೇಷ ರಾಕ್ಷಸರನ್ನು ಕರೆದುಕೊಂಡು ಊರಿಗೆ ಹೋಗಿ ಸುಖವಾಗಿರು ಈರೀತಿ ಪ್ರಹ್ಲಾದನಿಗೆ ಹೇಳಿ ಪರಮಾತ್ಮನು ಅಲ್ಲಿಯೇ ಅಂತರ್ಧಾನನಾದನು ಎಲೈ ವಜ್ರ ಮಹಾರಾಜನೇ ! ಸಕಲ ಪಾಪಪರಿಹಾರಕವಾದ ಈ ವರಾಹಚರಿತ್ರೆಯನ್ನು ನಿನಗೆ ಹೇಳಿದೇನೆ ಈ ವರಾಹಾವತಾರದಲ್ಲಿ ಮೈಕೆರೆದುಕೊಳ್ಳುವ ವಿನೋದದಿಂದ ಸಕಲ ದೈತ್ಯರೂ ಸಂಹೃತರಾದ ವಿಷಯವೂ ಋಷಿಗಳಿಂದ ಸ್ತುತ್ಯನಾದ ಮಹಾವಿಷ್ಣುವಿನ ಭಕ್ತೋದ್ಧಾರ ಸಂಗತಿಯೂ ನಿನಗೆ ನಿರೂಪಣೆಮಾಡಲ್ಪಟ್ಟಿತೆಂದು ಮಾರ್ಕಂಡೇಯ ಋಷಿಗಳು ವಜ್ರರಾಜನಿಗೆ ಹೇಳಿದರೆಂಬಲ್ಲಿಗೆ,

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪನಾದ ಪಾತಾಳದಲ್ಲಿ ವರಾಹಾವ ತಾರವಾಯಿತೆಂಬ ಸಂಗತಿಯನ್ನೊಳಗೊಂಡ ಒಂದುನೂರ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ದಿತಿರ್ವಿನಷ್ಟಪುತ್ರಾ ಚ ಯಚ್ಚಕಾರ ದ್ವಿಜೋತ್ತಮ ।
ತನ್ಮಮಾಚಕ್ಷ್ವ ಸಂಕ್ಷೇಪಾತ್ತತ್ರ ಮೇ ಸಂಶಯೋ ಮಹಾನ್ ॥ ೧ ॥

॥ ಮಾರ್ಕಂಡೇಯ ಉವಾಚ ॥

ದಿತಿರ್ವಿನಷ್ಟಪುತ್ರಾ ಚ ತಪಸಾ ಮಹತಾ ನೃಪ
ಆರಾಧಯಾಮಾಸ ತದಾ ಭರ್ತಾರಂ ಕಶ್ಯಪಂ ಮುನಿಂ ॥ ೨ ॥

ಆರಾಧಿತಃ ಸುತಪಸಾ ಛಂದಯಾಮಾಸ ಭಾಮಿನೀಂ ।
ವರೇಣ ಚ ವಚಃ ಕಾಲೇ ಪುತ್ರವ್ಯಸನಕರ್ಶಿತಾಂ ॥ ೩ ॥

---

### ಒಂದು ನೂರ ಇಪ್ಪತ್ತೇಳನೆಯ ಅಧ್ಯಾಯವು.

೧ ವಜ್ರಮಹಾರಾಜನು ಪುನಃ ಕೇಳುತ್ತಾನೆ --ಎಲೈ ಮಾರ್ಕಂಡೇಯ ಋಷಿಗಳೇ ! ಇಷ್ಟುಜನ ಮಕ್ಕಳು ಮೃತರಾದಾಗ ಅವರ ತಾಯಿಯಾದ ದಿತೀದೇವಿಗೆ ಎಷ್ಟು ದುಃಖವಾಯಿತೋ ಏನೋ ? ಅವಳು ತನ್ನ ಪುತ್ರರು ಮೃತರಾದ ಸಮಯದಲ್ಲಿ ಏನುಮಾಡಿದಳೋ ? ಸಂದೇಹಬಂದಿದ ಆ ಸಂಗತಿಯನ್ನು ದಯಮಾಡಿ ತಿಳಿಸಿ

೨ ಮಾರ್ಕಂಡೇಯರು ಹೇಳುತ್ತಾರೆ -ದಿತಿಯು ಶೂರರಾದ ತನ್ನ ಮಕ್ಕಳು ಮೃತರಾದುದನ್ನು ನೋಡಿ ದುಃಖಿತಳಾಗಿ ತನ್ನ ಗಂಡನಾದ ಕಶ್ಯಪಋಷಿಯನ್ನು ಮಹತ್ತಾದ ತಪಸ್ಸಿನಿಂದ ಆರಾಧಿಸಿದಳು.

೩ ತನ್ನ ಹೆಂಡತಿಯ ತಪಸ್ಸಿಗೆ ಮೆಚ್ಚಿ ಕಶ್ಯಪರು ಪುತ್ರವ್ಯಸನದಿಂದ ಕೃಶಳಾಗಿದ್ದ ಆಕೆಯನ್ನು ವರದಿಂದ ಸಮಾಧಾನಪಡಿಸಿದರು

॥ ಕಶ್ಯಪ ಉವಾಚ ॥

ವರಂ ವರಯ ಸುಶ್ರೋಣಿ ವರದೋಽಹಮುಪಸ್ಥಿತಃ ।
ಏವಮುಕ್ತ್ವಾ ವರಂ ವವ್ರೇ ದೇವೀ ಪುತ್ರವಿನಾಕೃತಾ ॥ ೪ ॥

॥ ದಿತಿರುವಾಚ ॥

ಶಕ್ರಹಂತಾರಮಿಚ್ಛಾಮಿ ಪುತ್ರಂ ಬ್ರಹ್ಮನ್ಯಶಸ್ವಿನಂ ।
ಯದಿ ತುಷ್ಟೋಽಸಿ ಮೇ ಬ್ರಹ್ಮಂಸ್ತ್ವಂ ಪ್ರಯಚ್ಛ ಸುತಂ ಮಮ ॥ ೫ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತಸ್ತದಾ ಭರ್ತಾ ನಾತಿಪ್ರೀತೋಽಬ್ರವೀದ್ವರಂ ।
ಏವಂ ತೇ ಭವಿತಾ ಭದ್ರೇ ಶುಚಿ ತ್ವಂ ಚೇದ್ಭವಿಷ್ಯಸಿ . ॥ ೬ ॥

ಪೂರ್ಣಂ ವರ್ಷಸಹಸ್ರಂ ಚ ನಾನ್ಯಥಾ ತದ್ಭವಿಷ್ಯತಿ ।
ಏವಮುಕ್ತ್ವಾ ತಯಾ ಸಾರ್ಧಮುವಾಸ ರಜನೀಂ ದ್ವಿಜಃ ॥ ೭ ॥

---

೪ ಕಶ್ಯಪರು ಹೇಳುತ್ತಾರೆ – ಎಲೌ ಮಂಗಳಾಂಗಿಯೇ ! ನಿನಗೆ ಬೇಕಾದ ವರವನ್ನು ಕೇಳಿಕೋ ನಿನಗೆ ವರವನ್ನು ಕೊಡುವುದಕ್ಕೆ ಸಿದ್ಧವಾಗಿದ್ದೇನೆ ಈರೀತಿ ಕಶ್ಯಪರು ಹೇಳಲು ದಿತಿಯು ವರವನ್ನು ಕೇಳುತ್ತಾಳೆ

೫ ದಿತಿಯು ಹೇಳುತ್ತಾಳೆ —ಬ್ರಹ್ಮಸ್ವರೂಪರೇ ! ನನ್ನ ಭಕ್ತಿಗೆ ಮೆಚ್ಚಿರುವಿರಾದರೆ ಇಂದ್ರನನ್ನು ಜಯಿಸತಕ್ಕ ಶಕ್ತಿಯುಳ್ಳ ಯಶಸ್ವಿಯಾದೊಬ್ಬ ಮಗನನ್ನು ನನಗೆ ದಯವಿಟ್ಟು ಅನುಗ್ರಹಿಸಿರಿ

೬-೭ ಮಾರ್ಕಂಡೇಯನು ಹೇಳುತ್ತಾನೆ —ಈರೀತಿ ಹೇಳಿದ ಹೆಂಡತಿಯ ಮಾತನ್ನು ಕೇಳಿ ಆ ಮಾತಿನಲ್ಲಿ ಅಷ್ಟು ವಿಶ್ವಾಸವಿಡದೆ ಕಶ್ಯಪರು ಇಂತು ಹೇಳಿದರು ಎಲೌ ಮಂಗಳಾಂಗಿಯೇ ! ನೀನು ಒಂದು ಸಾವಿರ ವರ್ಷದವರೆಗೆ ಶುಚಿ (ಆಚಾರ ಶೀಲೆ) ಯಾಗಿದ್ದರೆ ನಿನ್ನ ಮಾತಿನಂತೆ ನಡೆಯುತ್ತದ ಹಾಗಲ್ಲದೆ ಸ್ವಲ್ಪ ವ್ಯತ್ಯಾಸವಾದರೂ ಅದು ಬೇರರೀತಿಯಾಗಿ ನಡೆಯುತ್ತದಂದು ಹೇಳಿ ಆ ರಾತ್ರಿಯಲ್ಲಿ ಆಕೆಯೊಡನೆ ವಾಸವಾಗಿದ್ದು ಆ ದಿನವನ್ನು ಕಳೆದರು

**ತತೋ ಜಗಾಮ ಧರ್ಮಾತ್ಮಾ ತಪಸೇ ದೃಢನಿಶ್ಚಯಃ ।**
**ಆತಸ್ಥೌ ನಿಯಮಂ ದೇವೀ ಸಗರ್ಭಾ ಚ ದಿತಿಸ್ತದಾ ।**
**ನಿಯಮಸ್ಥಾಂ ತು ತಾಂ ದೃಷ್ಟ್ವಾ ಶಕ್ರೋ ವಚನಮಬ್ರವೀತ್ ॥ ೮ ॥**

**॥ ಶಕ್ರ ಉವಾಚ ॥**

**ಅಹಂ ದೇವಿ ಕರಿಷ್ಯಾಮಿ ತವ ಶುಶ್ರೂಷಣಂ ಸದಾ ।**
**ಸ್ಥಿತಾಯಾ ನಿಯಮೇ ಘೋರೇ ತದನುಜ್ಞಾತುಮರ್ಹಸಿ ॥ ೯ ॥**

**॥ ಮಾರ್ಕಂಡೇಯ ಉವಾಚ ॥**

**ಬಾಢಮಿತ್ಯೇವ ತ್ಯಥೋಕ್ತಸ್ತು ತಯಾ ದೇವಃ ಪುರಂದರಃ ।**
**ತತ್ರೋವಾಸ ಚ್ಛಲಾನ್ವೇಷೀ ಶುಶ್ರೂಷುರ್ಮಾತರಂ ಸದಾ ॥ ೧೦ ॥**

**ತದಾಬ್ದಶೇಷೇ ಕಾಲೇ ಚ ದಿವಾಸುಪ್ತಾದಿತಿರ್ನೃಪ ।**
**ಮಧ್ಯಾಹ್ನಸಮಯೇ ರಾಜನ್ಪಾದಯೋಃ ಕೃತಮೂರ್ಧಜಾ ॥ ೧೧ ॥**

೮　ಅನಂತರ ಕಶ್ಯಪನು ತಪಸ್ಸುಮಾಡಬೇಕೆಂದು ದೃಢವಾಗಿ ನಿಶ್ಚಯಿಸಿ ಅರಣ್ಯಕ್ಕೆ ಹೊರಟುಹೋದನು ಕಶ್ಯಪರೊಡನೆ ಆ ರಾತ್ರಿ ವಾಸವಾಗಿದ್ದ ದಿತಿಯು ಗರ್ಭಿಣಿಯಾಗಿ ಕಶ್ಯಪರ ಮಾತಿನಂತ ನಿಯಮದಿಂದ ಆಚಾರಶೀಲಳಾಗಿದ್ದಳು ಆರೀತಿ ನಿಯಮದಲ್ಲಿದ್ದ ದಿತಿಯನ್ನು ನೋಡಿ (ಶಕ್ರನು ತನ್ನನ್ನು ಕೊಲ್ಲುವ ಶತ್ರು ಹುಟ್ಟುವ ನೆಂಬ ಭಯದಿಂದ) ದಿತಿಯ ಬಳಿಗೆ ಬಂದು ಈ ಮಾತನ್ನು ಹೇಳಿದನು

೯　ಎಲೌ ದಿತಿದೇವಿಯೆ ' ನೀನು ಘೋರನಿಯಮವನ್ನು ಧರಿಸಿರುತ್ತೀಯೆ ಈ ಕಾಲದಲ್ಲಿ ನಿನ್ನ ಶುಶ್ರೂಷೆಯಲ್ಲಿರಬೇಕೆಂದು ಅಪೇಕ್ಷಿಸುತ್ತೇನೆ ಅದಕ್ಕೆ ದಯ ವಿಟ್ಟು ಅಪ್ಪಣೆಕೊಡಮ್ಮಾ '

೧೦　ಮಾರ್ಕಂಡೇಯನು ಹೇಳುತ್ತಾನೆ --ಆಗ ಆಕೆಯಿಂದ ಹಾಗೆಯೇ ಆಗಲೆಂದು ಅಪ್ಪಣೆಯನ್ನು ಪಡೆದ ದೇವೇಂದ್ರನು ಆ ದೃತ್ಯಮಾತೆಯನ್ನು ಶುಶ್ರೂಷ ಮಾಡುತ್ತಾ ಅಶುಚಿ ಸಮಯವನ್ನು ಕಾದು ತನ್ನ ಛಲವನ್ನು (ಹಠ) ಸಾಧಿಸುವ ಸಮಯವನ್ನು ಹುಡುಕುತ್ತಿದ್ದನು

೧೧　ಹೀಗೆ ಒಂದು ವರ್ಷ ಮುಗಿಯುವುದರೊಳಗಾಗಿ ಒಂದು ದಿನ ದಿತಿಯು ಹಗಲು ಹೊತ್ತು ಮಲಗಿಕೊಂಡು ನಿದ್ದೆಮಾಡುತ್ತಿದ್ದುದಲ್ಲದೆ, ತಲೆಯ ಜುಟ್ಟು ಗಂಟು ಹಾಕಿಕೊಳ್ಳದೆ ಆ ಕೂದಲಮೇಲೆ ಕಾಲುಗಳನ್ನು ಸೋಕಿಸಿಕೊಂಡು ಮಲಗಿಕೊಂಡಿ ದ್ದಳು

ಧ್ಯಾಃ ಸಂಪ್ರಾಪ್ಯ ತಚ್ಛಿದ್ರಂ ವಜ್ರೀ ಪರಪುರಂಜಯಃ ।
ವಿವೇಶ ಗರ್ಭಮಾರ್ಗೇಣ ವಿವೃತೇನ ನರೇಶ್ವರ ॥

ಸಂಪ್ರವಿಶ್ಯೈವ ತಂ ಗರ್ಭಂ ವಜ್ರೇಣ ಶತಪರ್ವಣಾ ।
ಕೃತವಾನ್ಸಪ್ತಧಾ ವಜ್ರೀ ಭಾಗಂಭಾಗಂ ತತಃ ಪುನಃ ॥ ೧೩ ॥

ಏಕೈಕಂ ಸಪ್ತಧಾ ಚಕ್ರೇ ಗರ್ಭೇಽಪಿ ಪ್ರಾದ್ರವತ್ತದಾ ।
ಮಾ ರುದಸ್ವೇತಿ ತಂ ವಜ್ರೀ ಪ್ರಾಹ ಕಾರ್ಯೇ ಸ್ವಕೇ ಸ್ಥಿತಃ ॥ ೧೪ ॥

ಏತಸ್ಮಿನ್ನೇವ ಕಾಲೇ ಚ ದೈತ್ಯೇಂದ್ರಜನನೀ ತದಾ ।
ವಿಬುದ್ಧಾ ವಾರಯಾಮಾಸ ಶಕ್ರಂ ದಶಶತೇಕ್ಷಣಂ ॥ ೧೫ ॥

ವಜ್ರಗರ್ಭಾಂಜಲಿಃ ಶಕ್ರೋ ಮಾತುರ್ವಚನಯಂತ್ರಿತಃ ।
ನಿಶ್ಚಕ್ರಾಮೋದರಾತ್ತಸ್ಯಾಃ ಸಹ ಬಾಲೈರ್ಮಹಾತ್ಮಭಿಃ ॥ ೧೬ ॥

---

೧೨ ಆ ತಪ್ಪನ್ನು ಕಂಡು ಶತ್ರುಭಯಂಕರನಾದ ಇಂದ್ರನು ದಿತಿಯ ವಿಸ್ತಾರ ಗರ್ಭಮಾರ್ಗದಿಂದ ಉದರವನ್ನು ಪ್ರವೇಶಿಸಿದನು

೧೩. ಈರೀತಿ ಗರ್ಭವನ್ನು ಹೊಕ್ಕು ಶತಧಾರೆಯುಳ್ಳ (ನೂರು ಅಲುಗುಗಳುಳ್ಳ) ವಜ್ರಾಯುಧದಿಂದ ಆಕೆಯ ಗರ್ಭವನ್ನು (ಹೊಟ್ಟೆಯಲ್ಲಿದ್ದ ಮಗುವನ್ನು) ಏಳುಪಾಲಾಗಿ ಕತ್ತರಿಸಿ ಅವನ್ನು ಪುನಃ ಏಳೇಳಾಗಿ ಸೀಳಿದನು

೧೪ ಈರೀತಿ ಏಳೇಳುಪಾಲುಮಾಡುತ್ತಿದ್ದಾಗ ಆ ಗರ್ಭ (ಶಿಶು) ವು ಘಟ್ಟಿಯಾಗಿ ಅಳತೊಡಗಿತು ಆಗ ಇಂದ್ರನು ಆ ಗರ್ಭವನ್ನು ಮಾರುದಸ್ವ (ಅಳಬೇಡ) ಎಂದು ಹೇಳಿದವನಾಗಿ ತನ್ನ ಕಾರ್ಯದಲ್ಲಿ ತಾನಿದ್ದನು

೧೫-೧೬ ಈರೀತಿ ಇರುವಲ್ಲಿ ದಿತಿಯು ಎಚ್ಚರಗೊಂಡವಳಾಗಿ ಇಂದ್ರನನ್ನು ಕೂಗಿದಳು ಆಗ ಸಹಸ್ರಾಕ್ಷನು ತಾಯಿಯು ಕರೆದುದನ್ನು ಕೇಳಿ ಕೂಡಲೆ ಒಂದು ಕೈಯಲ್ಲಿ ಗರ್ಭಗತ ಶಿಶುಗಳನ್ನೂ, ಮತ್ತೊಂದು ಕೈಯಲ್ಲಿ ವಜ್ರಾಯುಧವನ್ನೂ ಹಿಡಿದುಕೊಂಡು ಆಕೆಯ ಗರ್ಭದಿಂದ ಹೊರಗೆ ಬಂದು ತಾಯಿಯ ಮುಂದೆ ಕೈಮುಗಿದುಕೊಂಡು ನಿಂತನು

**ತಂ ಜಗಾದ ದಿತಿಃ ಶಕ್ರಂ ಪ್ರಾಂಜಲಿಃ ಪುರತಃ ಸ್ಥಿತಂ ।**
**ನ ತೇ ಶಕ್ರಾಪರಾಧೋಽಸ್ತಿ ಮಮ ಗರ್ಭನಿಕೃಂತನೇ ॥ ೧೭ ॥**

**ಸರ್ವೋಽಪಾಯೈರ್ನಿಯಂತವ್ಯಃ ಶತ್ರುರ್ನಯವಿದಾ ಸದಾ ।**
**ಮಮಾಪರಾಧಗರ್ಭೋಽಯಂ ತ್ವಯಾದ್ಯ ಬಹುಧಾ ಕೃತಃ ॥ ೧೮ ॥**

**ಭವಂತು ಮರುತೋ ನಾಮ ಸರ್ವೇ ದೇವಾ ಪೃಥಕ್ಪೃಥಕ್ ।**
**ಮಾ ರುದದ್ಧ್ವಮಿತಿ ಪ್ರೋಕ್ತೋ ಯತಃ ಶಕ್ರ ತ್ವಯಾ ಸುತಃ ॥ ೧೯ ॥**

**ತತಶ್ಚ ಮರುತೋ ನಾಮ ಭವಿಷ್ಯಂತಿ ಜಗತ್ರಯೇ ।**
**ತ್ವತ್ಸಹಾಯಾ ಭವಿಷ್ಯಂತಿ ತ್ವದಾಜ್ಞಾವಶವರ್ತಿನಃ ॥ ೨೦ ॥**

**ನ ಚೈತೇಭ್ಯೋ ಭಯಂಕಿಂಚಿತ್ಕದಾಚಿತ್ತೇ ಭವಿಷ್ಯತಿ ।**
**ಏಷಾಂ ನಾಮವಿಭಾಗಾಂಸ್ತು ಸ್ಥಾನಾನಿ ಚ ತಥಾ ಕುರು ॥ ೨೧ ॥**

---

೧೭-೨೦ ಆರೀತಿ ಕೈಜೋಡಿಸಿಕೊಂಡು ನಿಂತಿರುವ ಇಂದ್ರನನ್ನು ನೋಡಿ ದಿತಿಯು, ಎಲೈ ಇಂದ್ರನೇ ! ಈರೀತಿ ಮಾಡಿಮದು ನಿನ್ನ ತಪ್ಪಲ್ಲ ನನ್ನ ಅಶ್ರದ್ಧೆಯ ಅನಾಚಾರದ ತಪ್ಪು ನನ್ನ ಗರ್ಭವನ್ನು ಕತ್ತರಿಸಿದುದರಿಂದ ನಿನ್ನ ಶತ್ರುಗಳು ನಾಶ ವಾಗಲಾರರು ಶತ್ರುವಾದವನು ಯಾವಾಗಲೂ ನೀತಿವಂತನಾದ ಮನುಷ್ಯನಿಂದ ಶಿಕ್ಷಿತನಾಗಲೇಬೇಕು ನನ್ನ ತಪ್ಪಿನಿಂದ ಈ ಗರ್ಭವು ನಿನ್ನಿಂದ ಚೂರುಚೂರಾಗಿ ಕತ್ತರಿಸುದುದರಿಂದ ನಿನ್ನ ಶತ್ರುಗಳು ನಾಶವಾಗಲಾರರು ಶತ್ರುವಾದವನು ಯಾವಾ ಗಲೂ ನೀತಿವಂತನಾದ ಮನುಷ್ಯನಿಂದ ಶಿಕ್ಷಿತನಾಗಲೇಬೇಕು ನನ್ನ ತಪ್ಪಿನಿಂದ ಈ ಗರ್ಭವು ನಿನ್ನಿಂದ ಚೂರುಚೂರಾಗಿ ಕತ್ತರಿಸಲ್ಪಟ್ಟಿತು ಇವರೆಲ್ಲರೂ (ಈ ಚೂರು ಗಳೆಲ್ಲಾ ದೇವತೆಗಳಾಗಿ ಮರುದ್ದೇವತೆಗಳೆನಿಸಿಕೊಂಡು ಪ್ರಸಿದ್ಧರಾಗಲಿ) ನೀನು ಮಾರುದಧ್ವಂ (ಅಳಬೇಡಿರಿ) ಎಂದು ಆ ಮಕ್ಕಳನ್ನು ಕುರಿತು ಹೇಳಿದುದರಿಂದ ಇವರ ಹೆಸರು ಸಪ್ತಮರುತ್ತುಗಳೆಂದಾಗಲಿ, ಇವರೆಲ್ಲರೂ ಲೋಕತ್ರಯದಲ್ಲೂ ಪ್ರಸಿದ್ಧರಾಗಿ ನಿನ್ನ ಅಧೀನದಲ್ಲಿದ್ದುಕೊಂಡು ನಿನಗೆ ಸಹಾಯಕರಾಗಿರುತ್ತಾರೆ

೨೧ ಈ ಸಪ್ತಮರುದ್ದೇವತೆಗಳಿಗಂದರೋ ಯಾವಾಗಲೂ ಯಾವ ಪ್ರಾಣಿ ಯಿಂದಲೂ ಭಯವುಂಟಾಗುವುದಿಲ್ಲ ಇವರುಗಳ ಹೆಸರನ್ನೂ, ಇರಬೇಕಾದ ಸ್ಥಳ ಗಳನ್ನೂ ಈರೀತಿ ಗೊತ್ತುಮಾಡು

ಏಕಜ್ಯೋತಿಶ್ಚ ದ್ವಿಜ್ಯೋತಿಸ್ತ್ರಿಚತುರ್ಜ್ಯೋತಿರೇವ ಚ ।
ಏಕಶಕ್ರೋ ದ್ವಿಶಕ್ರಶ್ಚ ತ್ರಿಶಕ್ರಶ್ಚ ಮಹಾಬಲಃ ॥ ೨೨ ॥

ಪ್ರಥಮೋ ಪವನಸ್ಕಂಧೇ ಗಣೋಽಯಂ ಸುರಥಃ ಸ್ಮೃತಃ ।
ಇಂದ್ರಶ್ಚ ಗವ್ಯೋ ದೃಶ್ಯಶ್ಚ ತತಃ ಪ್ರತಿಶಿರಾಸ್ತಥಾ ॥ ೨೩ ॥

ಮಿತಶ್ಚ ಸಂಮಿತಶ್ಚೈವ ಅಭಿತಶ್ಚ ಮಹಾಬಲಃ ।
ದ್ವಿತೀಯೋ ಪವನಸ್ಕಂಧೇ ಗಣೋ ನಾಮ ಪ್ರಘೋಷಣಃ ॥ ೨೪ ॥

ಋತಜಿತ್ಸತ್ಯಜಿಚ್ಚೈವ ಸುಷೇಣಃ ಸೇನಜಿತ್ತಥಾ ।
ಅತಿಮಿತ್ರೋ ನಾಮಿತ್ರಶ್ಚ ಪುರುಮಿತ್ರೋಽಪರಾಜಿತಃ ॥ ೨೫ ॥

ತೃತೀಯೋ ಪವನಸ್ಕಂಧೇ ಗಣಃ ಸಂತಾಪನಃ ಸ್ಮೃತಃ ।
ಋತೇಶ್ಚ ಋತವಾನ್ಧಾತಾ ವಿಧಾತಾ ಧರಣೋ ಧ್ರುವಃ ॥ ೨೬ ॥

ವಿಧಾರಣಃ ಚತುರ್ಥಸ್ತು ಗೃಹಮೇಧೋ ಗಣಃ ಸ್ಮೃತಃ ।
ಇದೃಕ್ಷಶ್ಚ ಸದೃಕ್ಷಶ್ಚ ನಿತಾಪ್ಯೃಗನ್ಯುತಾಶನಃ ॥ ೨೭ ॥

---

೨೨-೨೬ ಸಪ್ತಮರುತ್ತುಗಳ ಹೆಸರೇನೆಂದರೆ —ಏಕಜ್ಯೋತಿ, ದ್ವಿಜ್ಯೋತಿ, ತ್ರಿಜ್ಯೋತಿ, ಚತುರ್ಜ್ಯೋತಿ, ಏಕಶಕ್ರ, ದ್ವಿಶಕ್ರ, ತ್ರಿಶಕ್ರ —ಇದೇ ೭ ಹೆಸರುಗಳು ಮೊದಲನೆಯ ಮರುತ್ತಿನ ಸ್ಕಂಧದಲ್ಲಿ ಸುರಥಗಣವೆಂದು ಹೆಸರನ್ನಿಡಬೇಕು ಈ ಗಣಗಳ ಹೆಸರುಗಳು —ಇಂದ್ರ, ಗವ್ಯ, ದೃಶ್ಯ, ಪ್ರತಿಶಿರ, ಮಿತ, ಸಮ್ಮಿತ, ಅಮಿತ, ಇದು ಪ್ರಥಮ ಸಪ್ತಮರುದ್ಗಣಗಳು ಎರಡನೆಯ ಮರುತ್ತಿನ ಸ್ಕಂಧದಲ್ಲಿರುವುದಕ್ಕೆ ಪ್ರಘೋಷಣಗಣವೆಂದು ಹೆಸರು ಅವುಗಳ ಹೆಸರುಗಳಿವು —ಋತಜಿತ್, ಸತ್ಯಜಿತ್, ಸುಷೇಣ, ಸೇನಜಿತ್, ಅತಿಮಿತ್ರ, ಅನಾಮಿತ್ರ, ಪುರುಮಿತ್ರ, ಅಪರಾಜಿತ, ಇವು ಎರಡನೆಯ ಮರುದ್ಗಣಗಳು ಮೂರನೆಯದಾದ ಮರುದ್ಗಣದ ಸ್ಕಂಧದಲ್ಲಿ ಸಂತಾಪನಗಣವೆಂದು ಹೆಸರಿರಬೇಕು ಆ ಹೆಸರುಗಳು !—ಋತಿ, ಋತವಾನ್, ಧಾತಾ, ವಿಧಾತಾ, ಧರಣ, ಧ್ರುವ, ಈ ಆರೂ ಸಂತಾಪನಮಾರುತಗಳು

೨೭-೨೮ ನಾಲ್ಕನೆಯ ಮರುತ್ತಾದ ವಿಧಾರಣನ ಸ್ಕಂಧದಲ್ಲಿರುವ ಗಣಕ್ಕೆ ಗೃಹಮೇಧವೆಂದು ಹೆಸರು ಅವುಗಳ ಹೆಸರುಗಳೇನೆಂದರೆ —ಇದೃಕ್ಷ, ಸದೃಕ್ಷ,

ಕ್ರೀತನಃ ಪ್ರಸೃಕ್ಷಶ್ಚ ಸರಭಶ್ಚ ಮಹಾಯಶಾಃ ।
ಗೃಹೇ ಚ ರೋಷಣಾ ನಾಮ ವಾಯುಸ್ಕಂಧೇ ಚ ಪಂಚಮೇ ॥ ೨೮ ॥

ಧರ್ತಾ ದುರ್ಗಧ್ವನಿರ್ಭೀಮೋ ಹ್ಯಭಿಯುಕ್ತಃ ಕೃಪಾ ಸಹಃ ॥
ಷಷ್ಠೇ ತು ಪವನಸ್ಕಂಧೇ ಸಾಸ್ವೀ ನಾಮ ಗಣಃ ಸ್ಮೃತಃ ॥ ೨೯ ॥

ದ್ಯುತಿರ್ವಪುರನಾದಶ್ಯೋ ವಾಸಃ ಕಾಮೋ ಜಯೋ ವಿರಾಟ್ ।
ಪ್ರೇಜೇಷಣೋ ಗಣೋ ನಾಮ ವಾಯುಸ್ಕಂಧೇ ಚ ಸಪ್ತಮೇ ॥ ೩೦ ॥

ಏಷಾಂ ನಾಮವಿಭಾಗಂತು ದತ್ವಾ ಸ್ಥಾನಾನಿ ಚಾಚ್ಯುತಃ ।
ಜಗಾಮ ಸ್ವಗೃಹಂ ಪ್ರೀತ್ಯಾ ದಿತಿಶ್ಚ ಸ್ವಗೃಹಂ ಯಯೌ ॥ ೩೧ ॥

ಏತತ್ತ್ವಪ್ರೋಕ್ತಂ ಮರುತಾಂ ನೃವೀರ
ಜನ್ಮೋತ್ತಮಂ ಪಾಪಭಯಾಪಹಾರಿ ।
ಯಸ್ಮಿಂಶ್ರುತೇನ್ನೈವ ಜನಸ್ಯ ಲೋಕೇ
ಭಯಂತು ವೃತ್ಯಾ ನ ಭವಿಷ್ಯತೀಹ ॥ ೩೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮರುದುತ್ಪತ್ತಿರ್ನಾಮ
ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ

---

ಏತಾದೃಕ್, ಅಮೃತಾಶನ, ಕ್ರೀತನ, ಪ್ರಸಪ್ಪಕ್ಷ, ಸರಭ, ರೇಷಣಾ ಎಂಬ ಹೆಸರಿನ ಐದನೆಯ ಮರುದ್ಗಣದ ಹೆಸರುಗಳು —ಧಾರ್ತಾ, ದುರ್ಗಧ್ವನಿ, ಭೀಮ, ಅಭಿಯುಕ್ತಾ, ಕೃಪಾಸಹ

೨೯-೩೨ ಆರನೇ ಮರುದ್ಗಣಸ್ಕಂಧದ ಗಣನಾಯಕನ ಹೆಸರು ಸಾಸ್ವೀ, ಈ ಗಣಗಳ ಹೆಸರುಗಳು —ದ್ಯುತಿ, ವಪು, ಅನಾದೃಶ್ಯ, ವಾಸ, ಕಾಮಜಯ, ವಿರಾಟ್ ಏಳನೇ ಮರುದ್ಗಣಕ್ಕೆ ಪ್ರೇಜೇಷಣ ಗಣನೆಂದು ಹೆಸರು ಈರೀತಿ ಸಪ್ತಮರುದ್ಗಣಕ್ಕೂ ನಾಮಗಳನ್ನಿಟ್ಟು ಅವರಿಗೆಲ್ಲಾ ಸ್ಥಾನಗಳನ್ನು ಕಲ್ಪಿಸಿ ಇಂದ್ರನು ಸ್ವರ್ಗಕ್ಕೆ ಹೊರಟನು ದಿತಿಯು ತನ್ನ ಮನೆಗೆ ಹೋದಳು ಈರೀತಿ ಸಪ್ತಮರುತ್ತುಗಳ ಜನ್ಮವೃತ್ತಾಂತವನ್ನು ನಿನಗೆ ಹೇಳಿದ್ದೇನೆ ಇವುಗಳ ಚರಿತ್ರೆಯನ್ನು ಕೇಳಿದವರಿಗೆ ಪಾಪಭಯವೇನೂ ಇಲ್ಲ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಮರುದುತ್ಪತ್ತಿಯೆಂಬ ಹೆಸರಿನ
ಒಂದುನೂರ ಇಪ್ಪತ್ತೇಳನೇ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಾವಿಂಶತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಜನಯಾಮಾಸ ರಾಜೇಂದ್ರ ದನುರ್ದಾನವಪುಂಗವಾನ್ ।
ವಿಪ್ರಚಿತ್ತಿಮುಖಾನ್ವೀರಾನ್ದೈತ್ಯಪಕ್ಷಮುಪಾಶ್ರಿತಾನ್ ॥ ೧ ॥

ಕಾಲಂ ಚ ಜನಯಾಮಾಸ ಕಾಲಕೇಯಾನ್ಸುದಾರುಣಾನ್ ।
ದೈತ್ಯಪಕ್ಷಾಶ್ರಿತಾನ್ಕ್ರೂರಾನ್ವಿರುದ್ಧಾಂದೇವತಾಗಣೇ ॥ ೨ ॥

ದನಾಯುಷಾಯಾಃ ಪುತ್ರಸ್ತು ವೃತ್ರೋ ನಾಮ ಮಹಾಸುರಃ ।
ವಿರುದ್ಧಸ್ತು ಸದಾ ದೇವೈರ್ದೈತ್ಯಪಕ್ಷಮುಪಾಶ್ರಿತಃ ॥ ೩ ॥

### ಒಂದುನೂರ ಇಪ್ಪತ್ತೆಂಟನೇ ಅಧ್ಯಾಯ.

೧-೨ ಮಾರ್ಕಂಡೇಯರು ಹೇಳುತ್ತಾರೆ —ವಜ್ರನರಪತಿಯೇ ಕೇಳು ದನುವೆಂಬುವಳು ದೈತ್ಯಪಕ್ಷವನ್ನು ಆಶ್ರಯಿಸಿದ್ದ ವಿಪ್ರಚಿತ್ತಿ ಮುಂತಾದ ವೀರರಾಕ್ಷಸರನ್ನೂ, ಕಾಲನೆಂಬ ರಾಕ್ಷಸನನ್ನೂ ಬಹಳ ಭಯಂಕರರಾಗಿ ದಿತಿಯ ಪಕ್ಷವನ್ನನುಸರಿಸಿ ದೇವತಾಗಣಕ್ಕೆ ವಿರೋಧವಾಗಿದ್ದ ಕಾಲಕೇಯರೆಂಬ ರಾಕ್ಷಸರನ್ನೂ ಸಹ ಮಕ್ಕಳನ್ನಾಗಿ ಪಡೆದಳು.

೩-೪ —ದನಾಯುಷಯೆಂಬುವಳ ಮಗನಾದ ವೃತ್ರಾಸುರನೆಂಬುವನು ದೈತ್ಯರ ಪಕ್ಷದಲ್ಲಿಯೇ ಇದ್ದುಕೊಂಡು ಯಾವಾಗಲೂ ದೇವತೆಗಳಿಗೆ ವಿರೋಧವಾಗಿಯೇ ಇದ್ದನು ಸಿಂಹಿಕೆಯೆಂಬುವಳು ರಾಹು, ಸಾಲ್ವ ಮುಂತಾದ ಮಹಾಪ್ರಕಾಶವಾನ

ಸಿಂಹಿಕಾ ಜನಯಾಮಾಸ ಸೈಂಹಿಕೇಯಾನಹಾಸುರಾನ್ ।
ರಾಹುಸಾಲ್ವಮುಖಾನ್ವೀರಾನ್ಬಹೂನಮಿತತೇಜಸಃ ॥ ೪ ॥

ಗಂಧರ್ವಾಪ್ಸರಸೋ ದಿವ್ಯಾ ಮುನಯಸ್ತಾನ್ನಿಬೋಧ ಮೇ ।
ಚಿತ್ರಸೇನೋಗ್ರಸೇನೌ ಚ ಊರ್ಣಾಯುರನಘಸ್ತದಾ ॥ ೫ ॥

ಧೃತರಾಷ್ಟ್ರಶ್ಚ ಗೋಪಶ್ಚ ಸೂರ್ಯವರ್ಚಾಸ್ತಥೈವ ಚ ।
ಯುಗಸ್ತೃಣಪಃ ಪಾರ್ಷ್ಣಿರರ್ಥಶ್ಚಿತ್ರರಥಸ್ತಥಾ ॥ ೬ ॥

ಕಲಿಃ ಶಾಲಿಶಿರಾಶ್ಚೈವ ಪರ್ಜನ್ಯೋ ನಾರದಸ್ತಥಾ ।
ತೇಷಾಂ ಚೈವ ಯವೀಯಸ್ಯೋ ದಿವ್ಯಾಶ್ಚಾಪ್ಸರಸಃ ಶುಭಾಃ ॥ ೭ ॥

ಅನೂಚಾನಾನವದ್ಯಾ ಚ ಪ್ರಿಯಮುಖ್ಯಾ ಗಣೇಚರೀ ।
ಮಿಶ್ರಕೇಶೀ ತಥಾ ಚಾಪಿ ಪರ್ಣಾಶಾ ಪುಂಜಿಕಸ್ಥಲಾ ॥ ೮ ॥

ಮರೀಚಿಃ ಶುಚಿಕಾ ಚೈವ ವಿದ್ಯುತ್ಪರ್ಣೀ ತಿಲೋತ್ತಮಾ ।
ಅಟ್ಟಿಕಾ ಲಕ್ಷ್ಮಣಾ ಕ್ಷೇಮಾ ದೇವೀ ರಂಭಾ ಮನೋರಮಾ ॥ ೯ ॥

ಅಸಿತಾ ಚ ಸುಬಾಹುಶ್ಚ ಸುವ್ರತಾ ಸುವಪುಸ್ತಥಾ ।
ಪುಂಡರೀಕಾ ಸುಗಂಧಾ ಚ ಸುದಾರಾ ಸುರಸಾ ತಥಾ ॥ ೧೦ ॥

---

ರಾದ ಅಧಿಕ ತೇಜಶ್ಶಾಲಿಗಳಾದ ಸ್ಯಂಹಿಕೇಯರೆಂಬ ಹೆಸರಿನ ಮಹಾಸುರರನ್ನು ಪ್ರಸವಿಸಿದಳು.

೫-೧೧ ಇನ್ನು ದೇವಲೋಕದಲ್ಲಿ ಹುಟ್ಟಿದ ಗಂಧರ್ವರ ಮತ್ತು ಅಪ್ಸರ ಸ್ತ್ರೀಯರ ಹೆಸರುಗಳನ್ನು ಹೇಳುತ್ತೇನೆ, ಕೇಳು. ಚಿತ್ರಸೇನ, ಉಗ್ರಸೇನ, ಊರ್ಣಾಯು, ಅನಘ, ಧೃತರಾಷ್ಟ್ರ, ಗೋಪ, ಸೂರ್ಯವರ್ಚ, ಯುಗಸ, ತೃಣಪ, ಪಾರ್ಷ್ಣಿರಥ, ಚಿತ್ರರಥ, ಕಲಿ, ಶಾಲಿಶಿರ, ಪರ್ಜನ್ಯ, ನಾರದ—ಇವರೆಲ್ಲರೂ ಗಂಧರ್ವರು ಇವರೆಲ್ಲರಿಗಿಂತ ವಯಸ್ಸಿನಲ್ಲಿ ಚಿಕ್ಕವರಾದ ದೇವಲೋಕೋತ್ಪನ್ನರಾದ ಅಪ್ಸರ ಸ್ತ್ರೀಯರ ಹೆಸರನ್ನು ಹೇಳು. ಅನೂಚಾನಾ, ಅನವದ್ಯಾ, ಪ್ರಿಯಮುಖ್ಯಾ, ಗಣೇಚರಾ, ಮಿಶ್ರಕೇಶೀ, ಪರ್ಣೀಶಾ, ಪುಂಜಿಕಸ್ಥಲಾ, ಮರೀಚಿ, ಶುಚಿಕಾ, ವಿದ್ಯುತ್ಪರ್ಣೀ, ತಿಲೋತ್ತಮಾ, ಅಟ್ಟಿಕಾ, ಲಕ್ಷ್ಮಣೀ, ಕ್ಷೇಮಾ, ದೇವೀ, ರಂಭಾ, ಮನೋರಮಾ,

ಹೇಮಾ ಶರದ್ವತೀ ಚೈವ ಪ್ರಸೂತಾ ಕಮಲಾ ಚ ಯಾ ।
ಸುಮುಖೀ ಹಂಸಮಾರ್ಗಾ ಚ ಸೌರೇಯಾಪ್ಸರಸಃ ಸ್ಮೃತಾಃ ॥ ೧೧ ॥

ಕದ್ರೂಶ್ಚ ಜನಯಾಮಾಸ ನಾಗಾಂಸ್ತೀವ್ರಪರಾಕ್ರಮಾನ್ ।
ಯೇಷಾಂ ರೋಷಃ ಪ್ರಧಾನಸ್ತು ವಿಷ್ಣುರ್ನಾಗವಪುರ್ಧರಃ ॥ ೧೨ ॥

ಯೇನೇಯಂ ಧಾರ್ಯತೇ ಭೂಮಿಃ ಸಶೈಲವನಕಾನನಾ ।
ಆಹೇಯೀ ವಾಸುದೇವಸ್ಯ ಪೂರ್ವಂ ಮೂರ್ತಿರ್ಮಯೇರಿತಾ ॥ ೧೩ ॥

ಅನಂತ ಇತಿ ವಿಖ್ಯಾತಾ ಮಹಾಕಲ್ಪವಿನಾಶಿನೀ ।
ಮಹಾಕಲ್ಪೇ ಮಹಾಸತ್ವೇ ಸ್ವಯಂ ಭವತಿ ಯಾ ಸದಾ ॥ ೧೪ ॥

ತಸ್ಯಾಂಶೇನ ಸಮುತ್ಪನ್ನಃ ಶೇಷೋ ಹಿ ಧರಣೀಧರಃ ।
ತಸ್ಯಾನುಜಾಂಸ್ತು ನಾಗೇಂದ್ರಾನ್ಪ್ರಾಧಾನ್ಯೇನ ವದಾಮ್ಯಹಂ ॥ ೧೫ ॥

ವಾಸುಕಿಸ್ತಕ್ಷಕಶ್ಚೈವ ಐಲಾಪುತ್ರೋ ಧನಂಜಯಃ ।
ಐರಾವತೋ ಮಹಾಪದ್ಮಃ ಕಂಬಲಾಶ್ವತರಾವುಭೌ ॥ ೧೬ ॥

---

ಅಸಿತಾ, ಸುಬಾಹು, ಸುವ್ರತಾ, ಸುವಪು, ಪುಂಡರೀಕಾ, ಸುಗಂಧ, ಸುದಾರಾ, ಸುರಸಾ, ಹೇಮಾ, ಶರದ್ವತೀ, ಪ್ರಸೂತಾ, ಕಮಲಾ, ಸುಮುಖೀ, ಹಂಸಮಾರ್ಗಾ, ಸೌರೇಯಾ, ಇವರೆಲ್ಲರೂ ಅಪ್ಸರಸ್ತ್ರೀಯರುಗಳು

೧೨-೧೮ ಕದ್ರುವು ತೀವ್ರ ಪರಾಕ್ರಮಶಾಲಿಗಳಾದ ಸರ್ಪಶ್ರೇಷ್ಠರನ್ನು ಪ್ರಸವಿಸಿದಳು ಅವರ ಹೆಸರನ್ನು ಹೇಳುತ್ತೇವೆ —ಇವರುಗಳೆಲ್ಲಾ ಕ್ರೋಧಪ್ರಧಾನ (ಕೋಪಿಷ್ಠ) ರಾದವರು ಮಹಾವಿಷ್ಣುವೇ ಈ ಸರ್ಪರೂಪವಾಗಿ ಬೆಟ್ಟ ಗುಡ್ಡ ಕಾಡುಗಳಿಂದೊಡಗೂಡಿದ ಈ ಭೂಲೋಕವನ್ನು ಹೊತ್ತಿದಾನೆಂದು ತಿಳಿಯಬೇಕು ಈ ಆಹೇಯೀ (ಸರ್ಪ) ರೂಪವು ಮೊದಲೇ ವಿಷ್ಣುವಿನ ಅಂಶವೆಂದು ನಿನಗೆ ಹೇಳಿದೆನಷ್ಟೆ ? ಇದಕ್ಕೆ ಅನಂತನೆಂಬ ನಾಮವು ಪ್ರಸಿದ್ಧವಾಗಿದೆ ಇದು ಮಹಾಪ್ರಳಯ (ಮಹಾಕಲ್ಪ) ಕಾಲದಲ್ಲಿ ಮಾತ್ರ ನಾಶವಾಗಿ ಪುನಃ ಕಲ್ಪಾರಂಭ ಸಮಯದಲ್ಲಿ ತಾನೇ ತಾನಾಗಿ ಉತ್ಪನ್ನವಾಗತಕ್ಕ ಸ್ವಭಾವವುಳ್ಳದ್ದು ಆ ಅನಂತನ (ಮಹಾವಿಷ್ಣುವಿನ) ಅಂಶದಿಂದ ಶೇಷನು (ಆದಿಶೇಷ) ಉತ್ಪನ್ನನಾದನು ಇವನೇ ಭೂಮಿಯನ್ನು ಹೊತ್ತಿರುವ ಮಹಾನುಭಾವನಾದ ಸರ್ಪರಾಜನು ಬಾಕಿ ಉಳಿದ ಸರ್ಪ ರಾಜರೆಲ್ಲಾ

**ಶಂಖಪದ್ಮೌ ಮಹಾಪದ್ಮೋ ಧೃತರಾಷ್ಟ್ರಬಲಾಹಕೌ ।**
**ನೀಲಾಶ್ವಃ ಪುಷ್ಪದಂತಶ್ಚ ಸುಮುಖೋ ದುರ್ಮುಖಸ್ತಥಾ ॥ ೧೭ ॥**

**ನಹುಷಃ ಕರರೋಮಾ ಚ ಕುರುಶ್ಚ ಕುಲಿಕಸ್ತಥಾ ।**
**ಕ್ರೋಧಶ್ಚ ಜನಯಾಮಾಸ ದಶ ಕನ್ಯಾ ನರಾಧಿಪ ॥ ೧೮ ॥**

**ಪುಲಹಾಯ ಚ ತಾ ದತ್ತಾಃ ಕಶ್ಯಪೇನ ಮಹಾತ್ಮನಾ ।**
**ಮೃಗಾ ಚ ಮೃಗಮಂದಾ ಚ ಹರಿಭದ್ರಾ ಮನೋಹರಾ ॥ ೧೯ ॥**

**ಭೂತಾ ಚ ಕಶಿಪಾ ದಂಷ್ಟ್ರಾ ಸರಸಾ ಸುರಸಾ ತಥಾ ।**
**ಇರಾ ಚೈವ ತೃಣಂ ಸರ್ವಂ ಜನಯಾಮಾಸ ಭಾಮಿನೀ ॥ ೨೦ ॥**

**ಪಂಚಪ್ರಕಾರಂ ಧರ್ಮಜ್ಞ ತಂ ಮೇ ನಿಗದತಃ ಶೃಣು ।**
**ವೃಕ್ಷಗುಲ್ಮಲತಾವಲ್ಯಸ್ತ್ವಕ್ಸಾರತೃಣಜಾತಯಃ ॥ ೨೧ ॥**

---

ಶೇಷನ ತಮ್ಮಂದಿರೆಂದು ತಿಳಿದುಕೋ. ಅವರಲ್ಲಿ ಮುಖ್ಯರಾದ ಕೆಲವರ ಹೆಸರನ್ನು ಮಾತ್ರ ಹೇಳುತ್ತೇನೆ—ವಾಸುಕಿ, ತಕ್ಷಕ, ಐಲಾಪತ್ರ, ಧನಂಜಯ, ಮಹಾಪದ್ಮ, ಕಂಬಳ, ಅಶ್ವತರ, ಶಂಖಪದ್ಮ, ಮಹಾಪದ್ಮ, ಧೃತರಾಷ್ಟ್ರ, ಬಲಾಹಕ, ನೀಲಾಶ್ವ, ಪುಷ್ಪದಂತ, ಸುಮುಖ, ದುರ್ಮುಖ, ನಹುಷ, ಕರರೋಮ, ಕುರು, ಕುಲಿಕ, ಕ್ರೋಧ, ಇವರೇ ಪ್ರಮುಖರು. ಇವರುಗಳಲ್ಲಿ ಕ್ರೋಧನೆಂಬುವನಿಗೆ ಹತ್ತು ಮಂದಿ ಹೆಣ್ಣು ಮಕ್ಕಳಾದರು.

೧೯-೨೦ ಈರೀತಿ ಹುಟ್ಟಿದ ಹತ್ತುಜನ ಹೆಣ್ಣು ಹುಡುಗಿಯರನ್ನೂ ಪುಲಹನಿಗೆ ಕಶ್ಯಪರ ಮಗನಾದ ಕ್ರೋಧನು ಮದುವೆಮಾಡಿಕೊಟ್ಟನು. ಆ ಕನ್ಯೆಯರ ಹೆಸರುಗಳೇನೆಂದರೆ —ಮೃಗ, ಮೃಗಮಂದಾ, ಹರಿಭದ್ರಾ, ಮನೋಹರಾ, ಭೂತಾ, ಕಶಿಪಾ, ದಂಷ್ಟ್ರಾ, ಸರಸಾ, ಸುರಸಾ, ಇರಾ. ಈ ಪೈಕಿ ಇರೆಯೆಂಬ ಭಾಮಿನಿಯು ಸಕಲ ವಿಧವಾದ ತೃಣ (ಹುಲ್ಲು) ಗಳನ್ನೂ ಉತ್ಪತ್ತಿ ಮಾಡಿದಳು.

೨೧-೨೨ ಆ ಹುಲ್ಲುಗಳಲ್ಲಿ ಐದು ವಿಧಗಳು. ಅದರ ವಿವರವನ್ನು ಹೇಳುತ್ತೇನೆ, ಕೇಳು. ಮರ, ಪೊದೆ, ಬಳ್ಳಿ, ಗಿಡ, ತೊಗಟೆ, ಈ ಐದು ವಿಧವಾದ ತೃಣ ಜಾತಿಗಳೂ ಅಂತಸ್ಸಾರಗಳುಳ್ಳವುಗಳೇ ಹೊರತು, ಹೊರಗಡೆ ಇವುಗಳಿಗೆ ಜ್ಞಾನವಿಲ್ಲ

**ಅಂತಃಸಂಜ್ಞಾ ಭವಂತ್ಯೇತಾ ಘೋರೇಣ ತಮಸಾ ವೃತಾಃ ।**
**ಏತೇಷಾಮಭಿಮಾನಿನ್ಯೋ ದೇವತಾ ಯದುನಂದನ ॥ ೨೨ ॥**

**ಜನಯಾಮಾಸ ಧರ್ಮಜ್ಞ ಇರಾ ದಾಕ್ಷಾಯಣೀ ಶುಭಾ ।**
**ಪ್ರಾಧಾ ಪ್ರಸೂತಾಪ್ಸರಸಸ್ತಾಸಾಂ ನಾಮಾನಿ ಮೇ ಶೃಣು ॥ ೨೩ ॥**

**ಅನವದ್ಯಾ ಅನೂಕಾ ಚ ಮೂನೂಕಾ ಕರುಣಪ್ರಿಯಾ ।**
**ಮನೂನಾ ಸುಭಗಾ ಚೈವ ಸಹಜನ್ಯಾ ಚ ಮೇನಕಾ ॥ ೨೪ ॥**

**ಘೃತಸ್ಥೂಲಾ ಘೃತಾಚೀ ಚ ವಿಷೂಚೀ ಪೂರ್ವಚಿತ್ತ್ಯಪಿ ।**
**ಪ್ರಮ್ಲೋಚೀತ್ಯಪ್ಸರಾಶ್ಚೈವ ನಿಮ್ಲೋಚಂತೀ ತಥೈವ ಚ ॥ ೨೫ ॥**

**ಅನೇನೈವ ಪ್ರಸಂಗೇಣ ತಥಾನ್ಯಾಸಾಂ ಮಹೀಪತೇ ।**
**ಜನ್ಮ ತೇಽಪ್ಸರಸಾಂ ವಕ್ಷ್ಯೇ ತನ್ಮೇ ನಿಗದತಃ ಶೃಣು ॥ ೨೬ ॥**

**ಸುಂದೋಪಸುಂದನಾಶಾಯ ನಿರ್ಮಿತಾ ವಿಶ್ವಕರ್ಮಣಾ ।**
**ತಿಲಂತಿಲಂ ಸಮಾದಾಯ ಸರ್ವರತ್ನೈಸ್ತಿಲೋತ್ತಮಾ ॥ ೨೭ ॥**

---

ವಾಗಿ ಘೋರವಾದ ಅಜ್ಞಾನದಿಂದ ಇವುಗಳು ಆವೃತವಿವೆ ಎಲೈ ವಜ್ರರಾಜನೇ! ಇವುಗಳ ಅಭಿಮಾನಿಗಳಾದ ದೇವತೆಗಳ ಹೆಸರನ್ನು ಹೇಳುವೆನು, ಕೇಳು ಈ ಅಭಿಮಾನಿ ದೇವತೆಯರನ್ನು ಶುಭಕರಳಾದ ಇರಾವತೀದೇವಿಯು ಪ್ರಸವಿಸಿದಳು ಇವರು ಅಪ್ಸರಸ್ತ್ರೀಯರ ಗುಂಪಿಗೆ ಸೇರಿದವರು ಇವರುಗಳ ಹೆಸರನ್ನು ಹೇಳುತ್ತೇನೆ, ಕೇಳು

೨೪-೨೬ ಅನವದ್ಯಾ, ಅನೂಕಾ, ಸೌಮುಕಾ, ಕರುಣಪ್ರಿಯಾ, ಮನೂನಾ, ಸುಭಗಾ, ಸಹಜನ್ಯಾ, ಮೇನಕಾ, ಘೃತಸ್ಥೂಲಾ, ಘೃತಾಚೀ, ವಿಷೂಚೀ, ಪೂರ್ವಚಿತ್ತಿ, ಪ್ರಮ್ಲೋಚೀ, ನಿಮ್ಲೋಚಂತೀ, ಅಯ್ಯ! ವಜ್ರರಾಜ! ಇದೇ ಸಂದರ್ಭದಲ್ಲಿಯೇ ಇನ್ನೂ ಇತರ ಕೆಲವು ಅಪ್ಸರಸ್ತ್ರೀಯರ ಜನ್ಮವನ್ನು ತಿಳಿಸುತ್ತೇನೆ, ಕೇಳು

೨೭-೩೦ ಸುಂದೋಪಸುಂದರೆಂಬ ದುಷ್ಟರಾಕ್ಷಸರ ನಾಶಕ್ಕೋಸ್ಕರ ವಿಶ್ವಕರನಿಂದ ತಿಲೋತ್ತಮೆಯೆಂಬ ಅಪ್ಸರಸ್ತ್ರೀ ನಿರ್ಮಿತಳಾದಳು ಎಳ್ಳಿನ ಕಾಳಿನಷ್ಟು ಸಣ್ಣ ಸಣ್ಣ ರತ್ನಗಳನ್ನೇ ಕೂಡಿಸಿ ಅವಳನ್ನು ನಿರ್ಮಿಸಿದುದರಿಂದ ತಿಲೋತ್ತಮೆಯೆಂಬ

ಯಸ್ಯಾಂಃ ಪ್ರದಕ್ಷಿಣಾಜ್ಞಾತಶ್ಚತುರ್ವಕ್ತ್ರಃ ಪಿನಾಕಭೃತ್ ।
ಸಹಸ್ರನಯನಃ ಶ್ರೀಮಾನ್ವಜ್ರೀ ಶಕ್ರಶ್ಚ ಪಾಕಹಾ　　॥ ೨೮ ॥

ಶೇಷೈರ್ದೇವಗಣೈರ್ದೃಷ್ಟಾ ಭ್ರಮದ್ವಕ್ತ್ರೈಃ ಪ್ರದಕ್ಷಿಣೈಃ ।
ಕೃತೇ ಕರ್ಮಣಿ ಸಾ ಪ್ರಾಪ್ತಾ ಸೂರ್ಯಲೋಕಂ ವರಾಂಗನಾ　　॥ ೨೯ ॥

ಏಕಸ್ಥಂ ರೂಪಸೌಂದರ್ಯಂ ದ್ರಷ್ಟುಮಿಚ್ಛನ್ಪಿತಾಮಹಃ ।
ಅಹಲ್ಯಾಂ ನಾಮ ಕೃತವಾಂಸ್ತ್ರೈಲೋಕಸ್ಯೈಕಸುಂದರೀಂ　　॥ ೩೦ ॥

ಗೌತಮಾಯ ಚ ತಾಂ ಪ್ರಾದಾದ್ಬ್ರಹ್ಮಾ ಶುಭಚತುರ್ಮುಖಃ ।
ಯಸ್ಯಾಃ ಕೃತೇ ಗೌತಮೇನ ಶಕ್ರೋ ನಿರ್ವೃಷಣಃ ಕೃತಃ　　॥ ೩೧ ॥

ನಾರಾಯಣೋರುಸಂಭೂತಾ ತಥಾ ಚೈವೋರ್ವಶೀ ಶುಭಾ ।
ಸಂತ್ಯಕ್ತ್ವಮಾನಾಸಾ ವವ್ರೇ ಭರ್ತಾರಂ ಬುಧಜಂ ನೃಪಂ　　॥ ೩೨ ॥

ಹೆಸರು ಬಂತು ಬ್ರಹ್ಮ, ಈಶ್ವರ, ಇಂದ್ರ ಮೊದಲಾದವರೂ ಉಳಿದ ದೇವತಾ ವೃಂದವೂ ಮತ್ತೆ ಮತ್ತೆ ಇವಳನ್ನು ನೋಡತೊಡಗಿದರು ಅನೇಕ ಪುಣ್ಯಗಳಿಂದ ಲಭ್ಯವಾಗತಕ್ಕ ಈ ತಿಲೋತ್ತಮೆಯು ಸೂರ್ಯಲೋಕಕ್ಕೆ ಹೊರಟುಹೋದಳು ಬ್ರಹ್ಮನು ಲೋಕದಲ್ಲಿರುವ ಸೌಂದರ್ಯವನ್ನೆಲ್ಲಾ ಒಂದೇ ಕಡೆ ಜೋಡಿಸಿ ನೋಡ ಬೇಕೆಂದು ಆಶೆಪಟ್ಟವನಾಗಿ ತ್ರಿಲೋಕಸುಂದರಿಯಾದ ಅಹಲ್ಯೆಯೆಂಬ ಸ್ತ್ರೀಯನ್ನು ನಿರ್ಮಾಣಮಾಡಿದನು

೩೧ ಮಂಗಳಕರನಾದ ಚತುರ್ಮುಖ ಬ್ರಹ್ಮನು ಆ ಅಹಲ್ಯೆಯನ್ನು ಗೌತಮ ನಿಗೆ ಲಗ್ನಮಾಡಿಕೊಟ್ಟನು ಈ ಅಹಲ್ಯೆಗಾಗಿಯೇ ಇಂದ್ರನು ನಿರ್ವೃಷಣ (ಬೀಜ ವಿಲ್ಲದವ) ನಾದನು.

೩೨-೩೪ ಶ್ರೀಮನ್ನಾರಾಯಣನ ತೊಡೆಯಿಂದ ಹುಟ್ಟಿದ ಮಂಗಳಕರಳಾದ ಊರ್ವಶಿಯು ಮಾನಸಸರೋವರವನ್ನು ಬಿಟ್ಟು ಬುಧನ ಮಗನಾದ ಮಹಾಸುಂದರ ನಾದ ಪುರೂರವಸ್ಸೆಂಬ ರಾಜನನ್ನು ಮೋಹಿಸಿ ಈಗಲೂ ಅವನೊಡನೆ ಸ್ವರ್ಗಲೋಕ

ಪುರೂರವಸನಾಮಾನಂ ರೂಪೇಣಾಪ್ರತಿಮಂ ಭುವಿ ।
ತೇನೈವ ಸಾರ್ಧಮದ್ಯಾಪಿ ದಿವಂ ಪ್ರಾಪ್ತಾ ಚ ತಿಷ್ಠತಿ ॥ ೩೩ ॥

ಆಹೂತ್ಯ ಇತಿ ವಿಖ್ಯಾತಾ ತಥೈವಾಪ್ಸರಸಃ ಶುಭಾ ।
ಬ್ರಹ್ಮಣಾ ಮನಸಾ ಸೃಷ್ಟಾ ದೇವರಾಮಾ ಮನೋರಮಾಃ ॥ ೩೪ ॥

ಮನೋಃ ಸುತಾಃ ಶೌಚವತ್ಯೋ ವಿದ್ಯುಜ್ಜ್ವಾಲರುಚಃ ಸ್ಮೃತಾಃ ।
ಭೀರವಶ್ಚ ಸುತಾ ಮೃತ್ಯೋರ್ಭೂಮಿಜಾತಾ ಭುವಃ ಸ್ಮೃತಾಃ ॥ ೩೫ ॥

ಅಮೃತಾಖ್ಯಾಶ್ಚ ಸಂಭೂತಾಸ್ತಥೈವಾಮೃತಮಂಥನೇ ।
ವಹ್ನಿಜಾತಾ ಸುರಾ ನಾಮ ಸೋಮಾದ್ಭೇಕುರಯಾಸ್ತಥಾ ॥ ೩೬ ॥

ಆಯುರ್ವರ್ತ್ಯಸ್ತಥಾ ಪ್ರೋಕ್ತಾಃ ಸೂರ್ಯರಶ್ಮಿಸಮುದ್ಭವಾಃ ।
ಯಜ್ಞೋತ್ಪನ್ನಾಸ್ತಥಾ ನಾಮ ಖುಕ್ಸಾಮಭ್ಯಸ್ತಥೇಷ್ಟಯಃ ॥ ೩೭ ॥

ದಲ್ಲ ಸುಖವಾಗಿರುತ್ತಾಳೆ ಆಹೂತ್ಯಳೆಂಬ ಅಪ್ಸರಸ್ತ್ರೀಯು ಲೋಕವಲ್ಲೆಲ್ಲಾ ಪ್ರಸಿದ್ಧಳಾಗಿ ಪರಮಮಂಗಳಕರಳಾದ ಅಪ್ಸರಸ್ಸೆಂದನಿಸಿಕೊಂಡಿರುವಳು, ಇವಳು ಬ್ರಹ್ಮನ ಮನಸ್ಸಿಂದ ಸೃಷ್ಟಿಹೊಂದಿದವಳು ಹೀಗೆಯೇ ಮನೋಹರರಾದ ಅನೇಕ ಮಂದಿ ದೇವತಾಸ್ತ್ರೀಯರುಂಟು

೩೫ ಮನುಸುತೆಯರು, ಶೌಚವತಿಯರು, ವಿದ್ಯುಜ್ಜ್ವಾಲರುಚಿಗಳು, ಭೀರುಗಳು, ಇವರೆಲ್ಲರೂ ಮೃತ್ಯುವಿನ ಹೆಣ್ಣುಮಕ್ಕಳಾದವರು ಇವರು ಭೂಮಿಯಲ್ಲಿ ಉತ್ಪನ್ನರಾದವರು

೩೬-೩೭ ಅಮೃತವನ್ನು ಕಡೆದಾಗ ಅಮೃತೆಯೂ, ಬೆಂಕಿಯಿಂದ ಸುರೆಯೂ, ಚಂದ್ರನಿಂದ ಭೇಕುರಯೆ-ಎಂಬುವಳು, ಸೂರ್ಯರಶ್ಮಿಯಿಂದ ಆಯುರ್ವತಿಯರೂ, ಯಜ್ಞಕಾಲದಲ್ಲಿ ಯಜ್ಞೇಶ್ವರನಿಂದ ಖುಕ್ಸಾಮಗಳೂ ಇಷ್ಟಿಗಳೆಂಬ ಸ್ತ್ರೀಯರೂ ಸಹ ಉತ್ಪನ್ನರಾದರು

ಟಿಪ್ಪಣಿ —ಈ ಕಥೆಗಳೆಲ್ಲವೂ ವೇದವಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

ವಾಯುೂತ್ಪನ್ನಾ ಸುದಾ ನಾಮ ದೇವರಾವಾಃ ಪ್ರಕೀರ್ತಿತಾಃ ।
ಇತ್ಯೇತೇ ಬಹುಸಾಹಸ್ರಾ ವಿಜ್ಞೇಯಾಪ್ಸರಸಾಂ ಗಣಾಃ ॥ ೩೮ ॥

ದೇವತಾನಾಮೃಷೀಣಾಂ ಚ ಪತ್ನ್ಯಸ್ತಾ ಮಾತರಶ್ಚ ವೈ ।
ಸುಗಂಧಾಶ್ಚಾಪ್ಯನಿಷ್ಯಂದಾ ಸರ್ವಾ ಹ್ಯಪ್ಸರಸಃ ಶುಭಾಃ ॥ ೩೯ ॥

ತಾಸಾಮುಪ್ಯಾಯತೇ ಸ್ಪರ್ಶಾದಾನಂದಂ ಚಾಶ್ನುತೇ ಮಹತ್ ।
ವಿನತಾ ಜನಯಾಮಾಸ ರುದ್ರಾನ್ವೈ ಸೋಮಪೀಥಿನಃ ॥ ೪೦ ॥

ಅಂಗಾರಕಂ ತಥಾ ಸೂರ್ಯಂ ನಿಋತಿಂ ಚ ಖಗಂ ತಥಾ ।
ಅಜೈಕಪಾದಾಹಿರ್ಬುಧ್ನ್ಯಧೂಮಕೇತುಧ್ವಜಾಸ್ತಥಾ ॥ ೪೧ ॥

ಹವನಂ ನೃಶ್ವರಂ ಸ್ವಭ್ಯಂ ಕಪಾಲಮಥ ಕಿಂಕಿಣೀಂ ।
ಏಕಾದಶ್ಯೇತೇ ಕಥಿತಾಸ್ತವ ರುದ್ರಾ ಮಹಾಬಲಾಃ ॥ ೪೨ ॥

ಯೇಷಾಂ ಚ ಜನಯಾಮಾಸ ದ್ವೌ ಪುತ್ರೌ ಯಕ್ಷರಾಕ್ಷಸೌ ।
ಯಯೋಃ ಸಂತಾನಸಂಭೂತಾ ರಾಜನ್ವೈ ಯಕ್ಷರಾಕ್ಷಸಾಃ ॥ ೪೩ ॥

---

೩೮-೩೯ ವಾಯುವಿನಿಂದ ಸುಧಾನಾಮಕ ದೇವತಾಸ್ತ್ರೀಯರು ಹುಟ್ಟಿದರು ಇದೇ ವಿಧವಾಗಿ ಅಪ್ಸರಸ್ತ್ರಿ (ದೇವತಾಸ್ತ್ರೀ) ಯರು ಅನೇಕ ಸಹಸ್ರಮಂದಿ ಉತ್ಪನ್ನರಾಗಿ ದೇವತೆಗಳಿಗೂ ಋಷಿಗಳಿಗೂ ಪತ್ನಿಯರಾಗಿ ಪರಮಪವಿತ್ರವಾದ ದೇವರ್ಷಿವೃಂದವನ್ನು ಉತ್ಪತ್ತಿಮಾಡಿ ಮಕ್ಕಳಿಗೆ ತಾಯಿಯರಾಗಿ ಪ್ರಸಿದ್ಧರಾದರು ಸಕಲರಾದ ಅಪ್ಸರಸ್ತ್ರೀಯರೂ ಸುಗಂಧದೇಹವುಳ್ಳವರು, ಮಂಗಳಾಂಗಿಯರು, ಜಿತೇಂದ್ರಿಯರು ಅವರುಗಳನ್ನು ಸ್ಪರ್ಶಮಾಡಿದ ಮಾತ್ರದಿಂದಲೇ ಮಹತ್ತಾದ ಆನಂದವುಂಟಾಗುವುದು

೪೦-೪೩ ವಿನತಾದೇವಿಯು ಸೋಮರಸಪಾನಮಾಡಿದ ಏಕಾದಶ ರುದ್ರರನ್ನು ಕಶ್ಯಪರಿಂದ ಪಡೆದಳು ಅವರುಗಳ ಹೆಸರುಗಳೇನೆಂದರೆ —ಅಂಗಾರಕ, ಸೂರ್ಯ, ನಿಋತಿ, ಖಗ (ಗರುಡ), ಅಜ, ಏಕಪಾದ, ಅಹಿರ್ಬುಧ್ನ್ಯ, ಧೂಮ, ಕೇತುಧ್ವಜ, ಹವನ, ನೃಶ್ವರ, ಸ್ವಭ್ಯ, ಕಪಾಲ. ಕಿಂಕಿಣಿ, ಈ ಹನ್ನೊಂದು ಜನ ಮಹಾಬಲರೂ ಏಕಾದಶರುದ್ರರೆನಿಸಿಕೊಳ್ಳುವರು ಆ ಬಳಿಕ ಆ ವಿನತೆಯು ಮತ್ತಿಬ್ಬರು ಮಕ್ಕಳನ್ನೂ ಹಡೆದಳು ಅವರೇ ಯಕ್ಷರು, ರಾಕ್ಷಸರು ಎಂಬುವವರು ಇವರ

**ಇಮಂ ಚ ವಂಶಂ ನಿಯಮೇನಯಃ ಪಠೇ**
**ನ್ಮಹಾತ್ಮನಾಂ ಬ್ರಾಹ್ಮಣದೇವಸನ್ನಿಧೌ**
**ಅಪತ್ಯಲಾಭಂ ಲಭತೇ ಸು ಪುಷ್ಕಲಾಂ**
**ಶ್ರಿಯಂ ತಥಾ ಪ್ರೇತ್ಯ ಚ ಶೋಭನಾಂ ಗತಿಂ ॥ ೪೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಕಶ್ಯಪಸರ್ಗೋನಾಮಾಷ್ಟಾವಿಂಶತ್ಯಧಿಕ ಶತತಮೋಽಧ್ಯಾಯಃ**

---

ಸಂತಾನಗಳೇ ಮುಂದೆ ಯಕ್ಷ—ರಾಕ್ಷಸ ವಂಶವಾಗಿ ಪ್ರಸಿದ್ಧವಾಯಿತು ಆದುದ ರಿಂದ ಎಲೈ ಮಹಾರಾಜನೇ! ಯಾರಾದರೆ ನಿಯಮದಿಂದ ಈ ವಂಶ ವೃತ್ತಾಂತ ವನ್ನು ಮಹಾತ್ಮರಾದ ದೇವಬ್ರಾಹ್ಮಣರ ಸನ್ನಿಧಿಯಲ್ಲಿ ಪಾರಾಯಣಮಾಡುವರೋ ಅವರುಗಳೆಲ್ಲರೂ ಪುತ್ರಸಂತಾನವನ್ನೂ, ಅಪರಿಮಿತವಾದ ಐಶ್ವರ್ಯವನ್ನು ಹೊಂದಿ ಕಡೆಯಲ್ಲಿ ಶಾಶ್ವತವಾದ ಪರಲೋಕ ಸುಖವನ್ನನುಭವಿಸುತ್ತಾರೆಂದು ಮಾರ್ಕಂಡೇಯ ಋಷಿಯು ವಜ್ರರಾಜನಿಗೆ ಹೇಳಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಕಶ್ಯಪಸರ್ಗವೆಂಬ ಹೆಸರಿನ
ಒಂದುನೂರಿಪ್ಪತ್ತೆಂಟನೇ ಅಧ್ಯಾಯವು
ಮುಗಿದುದು



ಶ್ರೀ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕೋನತ್ರಿಂಶದಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಉರ್ವಶೀ ಚ ಕಥಂ ಜಾತಾ ಬುಧಜಂ ಪಾರ್ಥಿವಂ ಕಥಂ ।
ಪತಿಂ ಕೃತವತೀ ದೇವೀ ಮಾನುಷಂ ತತ್ಪ್ರಕೀರ್ತಯ ॥ ೧ ॥

॥ ಮಾರ್ಕಂಡೇಯ ಉವಾಚ ॥

ಸಾಧ್ಯೌ ಧರ್ಮಸುತೌ ಪ್ರೋಕ್ತೌ ನರನಾರಾಯಣಾವೃಷೀ ।
ಯೌ ತೌ ಪೂರ್ವಂ ಮಹೀಪಾಲ ತಾವುಭೌ ಯದುನಂದನ ॥ ೨ ॥

ವಿಷ್ಣೋರಂಶೌ ಮಹಾವೀರ್ಯೌ ತಪಸ್ಯಭಿರತೌ ಸದಾ ।
ತಯೋಸ್ತದಾಶ್ರಮಂ ರಮ್ಯಂ ಸುಗಂಧಿವಿಟಪದ್ರುಮಂ ॥ ೩ ॥

### ಒಂದುನೂರಿಪ್ಪತ್ತೊಂಭತ್ತನೆಯ ಅಧ್ಯಾಯವು.

೧ ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ—ಊರ್ವಶಿಯು ಹೇಗೆ ಹುಟ್ಟಿದಳು? ಬುಧನ ಮಗನಾದ ಮನುಷ್ಯರಾಜನನ್ನು ಏತಕ್ಕೆ ಮದುವೆಯಾದಳು? ಈ ವೃತ್ತಾಂತವನ್ನು ದಯವಿಟ್ಟು ತಿಳಿಸಬೇಕು.

೨-೫ ಧರ್ಮನ ಮಕ್ಕಳಾದ ನರನಾರಾಯಣರೆಂಬ ಮಹರ್ಷಿಗಳಿಬ್ಬರ ವಿಷಯವನ್ನು ಈ ಮೊದಲು ನಿನಗೊಮ್ಮೆ ತಿಳಿಸಿರುವೆನಷ್ಟೆ? ಅವರು ಸಾಧ್ಯರ ಗುಂಪಿನಲ್ಲಿ ಸೇರಿದವರು ಅವರು ಹಿಂದೆ ರಾಜರಾಗಿ ಜನಿಸಿದವರು ಅವರಿಬ್ಬರೂ ಮಹಾವಿಷ್ಣುವಿನ ಅಂಶೋತ್ಪನ್ನರು, ಮಹಾಪರಾಕ್ರಮಶಾಲಿಗಳು ಮತ್ತು ಸರ್ವದಾ ತಪಸ್ಸಿನಲ್ಲೇ ನಿರತರಾದವರು ಅವರು ತಪಸ್ಸುಮಾಡುತ್ತಿದ್ದ ಆಶ್ರಮಕ್ಕೆ ಬದರಿಕಾ

**ಬದರ್ಯಾಶ್ರಮಮಿತ್ಯುಕ್ತಂ ಮೃದುಸ್ಪರ್ಶಹಿಮಂ ಶುಭಂ ।**
**ಉಷ್ಣತೋಯವಹಾ ಗಂಗಾ ಶೀತತೋಯವಹಾ ಪರಾ ॥ ೪ ॥**

**ಸುವರ್ಣಸಿಕತಾ ರಮ್ಯಾ ಕಾಂಚನೋತ್ಪಲಮಾಲಿನೀ ।**
**ತತ್ರ ಸಾ ಬದರೀ ರಮ್ಯಾ ನಿತ್ಯಪುಷ್ಪಫಲೋಪಗಾ ॥ ೫ ॥**

**ತತ್ರ ತೌ ಮುನಿಶಾರ್ದೂಲೌ ಘೋರಂ ತಪ ಉಪಾಶ್ರಿತೌ ।**
**ಭವಾಯ ಸರ್ವಲೋಕಸ್ಯ ಸರ್ವಲೋಕೇಶ್ವರಾವುಭೌ ॥ ೬ ॥**

**ತಯೋಸ್ತಪಸ್ಯತೋರೇವಂ ಮೌನೇಯಾಪ್ಸರಸೋ ದಶ ।**
**ತಯೋಸ್ತು ತಪಸೋ ವಿಘ್ನಂ ಸಂಭೂಯ ಕೃತನಿಶ್ಚಯಾಃ ॥ ೭ ॥**

**ತಂ ಪ್ರದೇಶಮನುಪ್ರಾಪ್ತಾ ನಾನಾಭರಣಭೂಷಣಾಃ ।**
**ಪಿತಾಮಹಾನ್ನ ಸೌಮ್ಯೋಽಸ್ತಿ ಕಶ್ಚಿದ್ರಾಜನ್ ಜಗತ್ತ್ರಯೇ ॥ ೮ ॥**

**ತಾಸಾಂ ದರ್ಶನಮಾಸಾದ್ಯ ನರಃ ಕಾಮವಶೋ ಭವೇತ್ ।**
**ಕುಸುಮಾನಿ ವಿಚಿನ್ವಂತ್ಯೋ ಲಲಂತ್ಯಶ್ಚ ಯಥಾಸುಖಂ ॥ ೯ ॥**

---

ಶ್ರಮವೆಂದು ಹೆಸರು ಅದು ಬಹು ಮನೋಹರವಾದುದು, ಮತ್ತು ಮೃದುಸ್ಪರ್ಶವುಳ್ಳ ಮಂಜಿನಿಂದ ಕೂಡಿದುದು ಅಲ್ಲಿರುವ ಮರಗಳೆಲ್ಲಾ ಸುಗಂಧಪೂರಿತವಾದುವು ಅಲ್ಲಿ ಒಂದು ಬಿಸಿನೀರಿನ ಹೊಂಡವೂ, ಮತ್ತೊಂದು ತಣ್ಣೀರಿನ ಹೊಂಡವೂ (ಕೊಳ) ಇರುವುದು ಅಲ್ಲಿನ ಮರಳು - ಚಿನ್ನದ ಹುಡಿಗಳು ಅಲ್ಲ ಚಿನ್ನದ ತಾವರೆಹೂ ಬಿಡುವುದು ಆ ಆಶ್ರಮದ ಗಿಡಗಳು ಯಾವಾಗಲೂ ಹೂಹಣ್ಣುಗಳಿಂದ ತುಂಬಿರುತ್ತವೆ

೬-೧೧. ಆ ಬದರಿಕಾಶ್ರಮದಲ್ಲಿ ಸರ್ವಲೋಕೇಶ್ವರರಾದ ಆ ಋಷಿಗಳೀರ್ವರೂ ಲೋಕಕ್ಷೇಮಕ್ಕೋಸ್ಕರವಾಗಿ ಘೋರ ತಪಸ್ಸನ್ನು ಮಾಡುತ್ತಾ ಕುಳಿತಿದ್ದರು ಆ ಸಮಯದಲ್ಲಿ ಹತ್ತುಜನ ಮುನಿ ಕನ್ಯೆಯರು (ಅಪ್ಸರಯರು) ಅಲ್ಲಿಗೆ ಬಂದು ಅವರ ತಪಸ್ಸಿಗೆ ವಿಘ್ನವನ್ನುಂಟುಮಾಡಬೇಕೆಂದು ಆಲೋಚಿಸಿದರು ಈರೀತಿ ನಿಶ್ಚಯಿಸಿ ಅವರು ನಾನಾಭರಣಗಳಿಂದಲಂಕೃತರಾಗಿ ಆ ತಪೋವನಕ್ಕೆ ಪ್ರವೇಶಿಸಿದರು ಎಲೈ **ರಾಜನೇ ಕೇಳು** ! ಮೂರು ಲೋಕದಲ್ಲಿಯೂ ಬ್ರಹ್ಮನಿಗಿಂತ ಸೌಮ್ಯಸ್ವಭಾವದವರು ಮತ್ತಾರೂ ಇಲ್ಲ ಹೀಗಿರಲು ಆ ದೇವಕನ್ಯೆಯರನ್ನು ನೋಡಿ ನರನು ಕಾಮಕ್ಕೆ

**ದೃಷ್ಟ್ವಾ ನಾರಾಯಣೇನಾಥ ಸರ್ವಾ ಬಾಲಮೃಗೇಕ್ಷಣಾಃ ।**
**ತಾಸಾಮಂತರ್ಗತಂ ಭಾವಂ ಜ್ಞಾತ್ವಾ ವೇದವಿದಾಂ ವರಃ ॥ ೧೦ ॥**

**ಜಿತಕ್ರೋಧೋ ಮಹಾತೇಜಾಃ ಜಿತಕಾಮೋಽರ್ಥಧರ್ಮವಿತ್ ।**
**ಆದಾಯ ಸಹಕಾರಸ್ಯ ರಸಂ ಮದನದೀಪನಂ ॥ ೧೧ ॥**

**ಊರ್ವೋಶ್ಚಿತ್ರೇಣ ಚಾರ್ವಂಗೀಂ ನಿರ್ಮಮೇಽಪ್ಸರಸಂ ಶುಭಾಂ ।**
**ಊರ್ವೋಃ ಕೃತಾ ಸಾ ಚಿತ್ರೇಣ ಚಿತ್ರಾಕರಣಶಾಲಿನೀ ॥ ೧೨ ॥**

**ತಸ್ಮಿನ್ನೇವ ಕ್ಷಣೇ ನಾರೀ ಬಭೂವಾಯತಲೋಚನಾ ।**
**ನ ದೇವೀ ನ ಚ ಗಂಧರ್ವೀ ನಾಸುರೀ ನ ಚ ಪನ್ನಗೀ ॥ ೧೩ ॥**

**ತಾದೃಗ್ವಿಧಾ ತ್ರಿಲೋಕೇಸ್ಮಿನ್ಯಾದೃಶೀ ಸಾ ವರಾಂಗನಾ ।**
**ತಾಂ ದೃಷ್ಟ್ವಾ ವ್ರೀಡಿತಾಸ್ಸರ್ವಾ ಮೌನೇಯಾನ್ಸರಸೋ ದಶ ॥ ೧೪ ॥**

ಅಧೀನನಾದನು ಆ ಸಮಯದಲ್ಲಿ ಆ ಲಲನೆಯರು ಹೂಗಳನ್ನು ಕುಯ್ಯುತ್ತಾ ಸ್ವೇಚ್ಛೆಯಾಗಿ ಆಟವಾಡುತ್ತಲಿದ್ದರು ಆ ಲಲನೆಯರನ್ನು ನಾರಾಯಣನೂ ನಹ ನೋಡಿ. ಅವರ ಅಂತರಂಗಾಭಿಪ್ರಾಯವನ್ನು ಆ ಜ್ಞಾನೇಶ್ವರನು ಕಂಡುಕೊಂಡನು ಅರಿಷಡ್ವರ್ಗವನ್ನು ಜಯಿಸಿದ ಆ ಮಹಾನುಭಾವನು ಮದನೋದ್ದೀಪಕವಾದ ಶೀಮಾವಿನಹಣ್ಣಿನ ರಸವನ್ನು ತೆಗೆದುಕೊಂಡು ತೊಡೆಯಮೇಲೆ ಅದರಿಂದ ಸುಂದರ ವಾದೊಂದು ಅಪ್ಸರಪ್ರತಿಮೆಯನ್ನು ಬರೆದನು.

೧೨ ಈರೀತಿ ತೊಡೆಯ ಮೇಲೆ ಬರೆದ ಆ ಚಿತ್ರವು ಮಂಗಳಾಂಗಿಯಾದ ಅಪ್ಸರಸ್ತ್ರೀಯಾಯಿತು ಚಿತ್ರದಿಂದ ಹುಟ್ಟಿದ ಕಾರಣ ಆ ಅಪ್ಸರಸೆಯು ಜನರ ಚಿತ್ತವನ್ನ ಳೆಯುವ ಸ್ವಭಾವವನ್ನು ಹೊಂದಿದಳು

೧೩-೧೯ ಆ ಕೂಡಲೇ ಆ ಸುಂದರಾಂಗಿಯು ವಿಸ್ತಾರವಾದ ಕಣ್ಣುಗಳುಳ್ಳವ ಳಾದಳು ಅವಳು ದೇವತಾಸ್ತ್ರೀಯಂತೆಯಾಗಲೀ, ಗಂಧರ್ವನಾರಿಯರಂತಾಗಲಿ, ಅಸುರ ಕನ್ಯೆಯಂತಾಗಲಿ, ನಾಗಕನ್ಯೆಯಂತಾಗಲಿ, ಕಾಣಬರಲಿಲ್ಲ ಅವಳು ಎಂತಹ ಸೌಂದರ್ಯಶಾಲಿನಿಯಾಗಿದ್ದಳೋ ಅಂತಹ ಸುಂದರಾಂಗಿಯು ಮೂರು ಲೋಕದಲ್ಲಿಯೂ ಕಾಣಿಸುತ್ತಿರಲಿಲ್ಲ ಅಂತಹ ಮನೋಹರ ನಾರಿಯನ್ನು ನೋಡಿ ಆ ಹತ್ತುಮಂದಿ ಮುನಿಕುಮಾರ್ತಿಯರಾದ ಅಪ್ಸರಸ್ತ್ರೀಯರೂ ನಾಚಿಕೊಂಡು ಹೇಳದ ಕೇಳದೆ ಆ

ಜಗ್ಮುರ್ಯಥಾಗತಂ ರಾಜಂಸ್ತಚ್ಛುಶ್ರಾವ ಪುರಂದರಃ ।
ದ್ರಷ್ಟುಂ ಕೌತೂಹಲಾತ್ತಾಂ ಚ ಬದರ್ಯಾಶ್ರಮಮಾಗತಃ ॥ ೧೫ ॥

ಪಾದಯೋರ್ನ್ಯಪತದ್ವಜ್ರೀ ಸಾಧ್ಯಯೋರ್ಧರ್ಮನಿತ್ಯಯೋಃ ।
ದದರ್ಶ ಚ ಶುಭಾಗೀಂ ತಾಂ ಶ್ರಿಯಂ ದೇವೀಮಿವಾಪರಾಂ ॥ ೧೬ ॥

ತಮುವಾಚ ಹಸನ್ಸಾಧ್ಯಸ್ತದಾ ನಾರಾಯಣಃ ಪ್ರಭುಃ ।
ಮಮೋರುಜಾತಾ ಧರ್ಮಜ್ಞ ಉರ್ವಶೀಯಂ ಭವೇದಿತಿ ॥ ೧೭ ॥

ನಯಸ್ವತ್ರಿದಿವಂ ಚೈನಾಂ ಭವತ್ವಪ್ಸರಸಾಂ ಶುಭಾ ।
ಏವಮುಕ್ತೇ ಮುದಂ ಪ್ರಾಪ್ಯ ಅಭಿವಾದ್ಯ ಚ ತಾವೃಷೀ ॥ ೧೮ ॥

ಅನಯತ್ತಾಂ ತತಃ ಸ್ವರ್ಗಂ ದೇವೀಂ ಬಾಲಮೃಗೇಕ್ಷಣಾಂ ।
ಶಿಷ್ಯತ್ವೇ ಪ್ರದದೌ ಚೈನಾಂ ಗಂಧರ್ವಸ್ಯ ಚ ತುಂಬುರೋಃ ॥ ೧೯ ॥

---

ಆಶ್ರಮವನ್ನು ಬಿಟ್ಟು ಹೊರಟುಹೋದರು ಮತ್ತು ಆ ವೃತ್ತಾಂತವನ್ನು ದೇವೇಂದ್ರನಿಗೆ ತಿಳಿಸಿದರು ಈ ಸೂತನ್ನು ಕೇಳಿ ಇಂದ್ರನು ಆ ಸ್ತ್ರೀಯನ್ನು ನೋಡಬೇಕೆಂಬ ಕುತೂಹಲದಿಂದ ಬದರಿಕಾಶ್ರಮಕ್ಕೆ ಬಂದನು ಆಶ್ರಮಕ್ಕೆ ಬಂದೊಡನೆಯೇ ಸಾಧ್ಯರಿಬ್ಬರ (ನರನಾರಾಯಣರ) ಪಾದಗಳಿಗೆ ಅಡ್ಡಬಿದ್ದನು ಮತ್ತು ಅವರ ಸಮೀಪದಲ್ಲಿದ್ದ ಮಹಾಲಕ್ಷ್ಮಿಯ ಅಪರಾವತಾರದಂತಿದ್ದ ಆ ಸುಂದರಾಂಗಿಯನ್ನು ನೋಡಿದನು ಆಗ ಪ್ರಭುವಾದ ನಾರಾಯಣ ಸಾಧ್ಯ (ಋಷಿ) ನು ನಗುತ್ತಾ ಇಂದ್ರನನ್ನು ಕುರಿತಿಂತೆಂದನು—ಅಯ್ಯಾ ! ಮಹೇಂದ್ರ ! ಇವಳು ನನ್ನ ತೊಡೆಯಮೇಲೆ ಬರೆದ ಚಿತ್ರದಿಂದ ಹುಟ್ಟಿದವಳಾದ್ದರಿಂದ ಇವಳನ್ನು ಊರ್ವಶೀ ಎಂದು ಕರೆಯಬೇಕು ಇವಳು ಅತ್ಯುತ್ತಮಳಾದ ಅಪ್ಸರಸ್ತ್ರೀಯಾಗಿರುವಳು ಇವಳನ್ನು ದೇವಲೋಕಕ್ಕೆ ಕರೆದುಕೊಂಡುಹೋಗು ಮತ್ತು ಇವಳನ್ನು ಗಾನಾಚಾರ್ಯನಾದ ತುಂಬುರುವಿನ ವಂಶದಲ್ಲಿ ಬಿಟ್ಟು ಅವನಲ್ಲಿ ಶಿಷ್ಯವೃತ್ತಿಯಿಂದಿದ್ದು ಸಂಗೀತಾಭ್ಯಾಸವಂ ಮಾಡಿಸುವ ಪ್ರಯತ್ನಮಾಡು ಹೀಗೆಂದು ಹೇಳಿದೊಡನೆ ಇಂದ್ರನು ಆ ಊರ್ವಶಿಯನ್ನು ಸಂಗಡ ಕರೆದುಕೊಂಡು ಹೋಗಿ ತುಂಬುರುವಿನ ಶಿಷ್ಯವೃತ್ತಿಯಲ್ಲಿರಿಸಿದನು

ತತಃ ಕದಾಚಿಚ್ಛಕ್ರಸ್ಯ ನನರ್ತ ಪುರತಸ್ತು ಸಾ ।
ಉಪದೇಶಮತಿಕ್ರಮ್ಯ ತುಂಬುರೋಶ್ಚಾರುಹಾಸಿನೀ ॥ ೨೦ ॥

ತಾಂ ಶಶಾಪ ಸ ಗಂಧರ್ವೋ ಮಾನುಷ್ಯೇ ವತ್ಸ್ಯಸೇ ಶುಭೇ ।
ದೇವಲೋಕಮಿಮಂ ತ್ಯಕ್ತ್ವಾ ಮಾನುಷೇಣ ಸಹಾನಘೇ ॥ ೨೧ ॥

ಕಂಚಿತ್ಕಾಲಮುಪಾಸ್ಯೈವಂ ಮಾನುಷಂ ತಂ ಶುಚಿಸ್ಮಿತೇ ।
ಆಗಮ್ಯ ತ್ರಿದಿವೇ ತಾವತ್ತಸ್ಮಾದಭ್ಯಸ್ಯಸೇ ತತಃ ॥ ೨೨ ॥

ತೇನೈವ ಸಾರ್ಧಂ ತ್ರಿದಿವೇ ರಂಸ್ಯಸೇ ತ್ವಂ ಶುಭಾನನಾ ।
ವೈವಸ್ವತಾಖ್ಯಸ್ಯ ಮನೋರ್ಯಾವದಂತರಮುಚ್ಯತೇ ॥ ೨೩ ॥

ಏವಂ ಹಿ ಶಪ್ತಾ ನೃಪವರ್ಯ ತೇನ
ಪಪಾತ ರಾಜನ್ಗುರುಣಾನ್ಯಲೋಕೇ ।

೨೦-೨೪ ಒಂದಾನೊಂದು ಕಾಲದಲ್ಲಿ ಇಂದ್ರನಸಭೆಯಲ್ಲಿ ಇಂದ್ರನ ಮುಂದೆ ಈ ಊರ್ವಶಿಯು ನರ್ತನವಾಯಿತು ನರ್ತನಮಾಡುವಾಗ ಗುರುವಿನಿಂದಾದ ಉಪದೇಶಕ್ರಮವನ್ನು ಮೀರಿ ಈ ಚಾರುಹಾಸಿನಿಯು ನರ್ತನಮಾಡಿಬಿಟ್ಟಳು ಆ ಸಮಯದಲ್ಲಿ ನರ್ತನಾಚಾರ್ಯನಾದ ತುಂಬುರುಗಂಧರ್ವನಿಗೆ ಕೋಪಬಂದು ಅವಳಿಗೆ ಶಾಪಕೊಟ್ಟನು—ನೀನು ದೇವಲೋಕದಲ್ಲಿರಲು ಅರ್ಹಳಲ್ಲ ನೀನು ಮನುಷ್ಯಲೋಕದಲ್ಲಿ ಮುಂದೆ ವಾಸಮಾಡು ಅಲ್ಲಿ ಮನುಷ್ಯನೊಬ್ಬನ ವಾಸಮಾಡಿಕೊಂಡಿದ್ದು ಆ ಬಳಿಕ ಸ್ವರ್ಗಲೋಕಕ್ಕೆ ಬಂದು ಮುಂದಕ್ಕೆ ನರ್ತನವಿದ್ಯೆಯನ್ನು ಕಲಿತುಕೊ ನೀನು ದೇವಲೋಕಕ್ಕೆ ಬಂದಮೇಲೂ ಸಹ ಮನುಷ್ಯಲೋಕದಲ್ಲಿದ್ದ ಮನುಷ್ಯಪತಿಯೊಡನೆಯೇ ಸ್ವರ್ಗಲೋಕದಲ್ಲಿಯೂ ಸಹ ಸುಖಪಡುತ್ತಾ ಇರು ವೈವಸ್ವತ ಮನ್ವಂತರದಲ್ಲಿ ಈರೀತಿ ನಡೆಯಬೇಕಾಗಿದೆ ಈ ರೀತಿಯಾಗಿ ತುಂಬುರುಗಂಧರ್ವನು ತನ್ನ ಶಿಷ್ಯಳಾದ ಊರ್ವಶಿಗೆ ಶಾಪವನ್ನು ಕೊಟ್ಟನು ಈರೀತಿ ಗುರುಶಾಪಕ್ಕೊಳಗಾದ ಊರ್ವಶಿಯು ಆ ಕೂಡಲೆ ಮನುಷ್ಯಲೋಕಕ್ಕೆ ಬಂದುಬಿಟ್ಟಳು ಅಲ್ಲಿ ಪುರೂರುವ

ಉವಾಸ ರಾಜ್ಞಾ ಸಹಿತಾ ತು
ತಸ್ಮಾತ್ಸ್ವರ್ಗಂ ಸಮಾಸಾದ್ಯ ತಥೈವ ತೇನ ॥ ೨೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಊರ್ವಶೀ ಸಂಭವೋ ನಾಮ
ಏಕೋನತ್ರಿಂಶದಧಿಕಶತತಮೋಽಧ್ಯಾಯಃ

---

ರಾಜನೊಡನೆ ವಾಸಮಾಡಿಕೊಂಡಿದ್ದು ಬಳಿಕ ಮನುಷ್ಯಲೋಕದಿಂದ ಸ್ವರ್ಗಲೋಕಕ್ಕೆ ಅದೇ ರಾಜನೊಡನೆ ಪ್ರಯಾಣಮಾಡಿದಳು ಎಂಬಲ್ಲಿಗೆ

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಊರ್ವಶೀಸಂಭವವೆಂಬ ಹೆಸರಿನ
ಒಂದುನೂರಿಪ್ಪತ್ತೊಂಭತ್ತನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಿಂಶದುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ

ನಾಕಂ ತ್ಯಕ್ತ್ವೋರ್ವಶೀ ಬಹ್ಮನ್ಬುಧಪುತ್ರಂ ಕಥಂ ಗತಾ ।
ಕ್ವ ಚ ಸಾ ತಂ ನರೇಂದ್ರೇಂದ್ರಂ ದೃಷ್ಟವತ್ಯಪರಾಜಿತಂ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮನೋರ್ವೈವಸ್ವತಸ್ಯಾಸ್ಯ ದ್ವಾಪರೇ ಪ್ರಥಮೇ ಪುರಾ ।
ವೃತ್ತೇ ದೇವಾಸುರೇ ಯುದ್ಧೇ ವೃತ್ತೇ ಚಾಮೃತಮಂಥನೇ ॥ ೨ ॥

ಸಂಗ್ರಾಮೇ ಕೃತಕರ್ಮಾಣಂ ತಸ್ಮಿನ್ನೇವ ನರಾಧಿಪಂ ।
ಶಕ್ರಸ್ಯಾರ್ಧಾಸನಗತಂ ರೂಪೇಣಾಪ್ರತಿಮಂ ತದಾ ॥ ೩ ॥

---

### ಒಂದುನೂರ ಮೂವತ್ತನೆಯ ಅಧ್ಯಾಯವು

೧ ವಜ್ರಮಹಾರಾಜನು ಕೇಳುತ್ತಾನೆ --ಎಲೈ ಮಾರ್ಕಂಡೇಯನೇ ! ಊರ್ವಶಿಯು ಸ್ವರ್ಗವನ್ನು ಬಿಟ್ಟುಹೋದಮೇಲೆ ಬುಧಪುತ್ರನಾದ ಪುರೂರವನನ್ನು ಹೇಗೆ ಸಂಧಿಸಿದಳು ? ಎಲ್ಲಿ ಅವನನ್ನು ನೋಡಿದಳು ? ದಯವಿಟ್ಟು ತಿಳಿಸು

೨-೧೩ ಮಾರ್ಕಂಡೇಯನು ಹೇಳುತ್ತಾನೆ --ಪುರೂರವಚಕ್ರವರ್ತಿಯ ಕಥೆ —ಈ ವೈವಸ್ವತ ಮನ್ವಂತರದ ಮೊದಲನೇ ದ್ವಾಪರಯುಗದಲ್ಲಿ ಅಮೃತವನ್ನು ಕಡೆಯುವ ಕಾಲದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಭಯಂಕರವಾದ. ಯುದ್ಧವು ಅಮೃತಪಾನಕ್ಕಾಗಿ ನಡೆದುದು ಸರಿಯಷ್ಟೆ ? ಆ ಕಾಲದಲ್ಲಿ ದೇವತೆಗಳಿಗೆ ವಿಶೇಷ ಸಹಾಯವನ್ನು ಮಾಡಿ ಕಾದಿದ ಪುರೂರವರಾಜನಿಗೆ ಇಂದ್ರನು ತನ್ನ ಅರ್ಧಾಸನ ವನ್ನು ಕೊಟ್ಟು ಪುರಸ್ಕರಿಸಿದನು ಈ ಪುರೂರವನು ಮಹಾಸೌಂದರ್ಯಶಾಲಿಯು

**ಸಂಪೂಜ್ಯಮಾನಂ ತ್ರಿದಶೈರ್ದದರ್ಶಾಯತಲೋಚನಾ ।**
**ಬುಧಪುತ್ರಂ ನರೇಂದ್ರೇಂದ್ರಂ ತದಾ ನಾರಾಯಣಾತ್ಮಜಾ ॥ ೪ ॥**

**ದೃಷ್ಟ್ವಾ ಬಭೂವ ಚಾಸ್ವಸ್ಥಾ ಕಾಮಮಾರ್ಗಣತಾಡಿತಾ ।**
**ತತಃ ಪ್ರಭೃತಿ ಭವ್ಯೇಷು ಮೇರುಕುಂಜೇಷು ಭಾಮಿನೀ ॥ ೫ ॥**

**ಆಕಾರಂ ಗೂಹಮಾನಾ ಸಾ ಕಾಲಂ ನಯತಿ ಕಾಮಿನೀ ।**
**ಚಿಂತಯಂತೀ ನರೇಂದ್ರೇಂದ್ರಂ ಕಂದರ್ಪಪ್ರತಿಮಂ ಸದಾ ॥ ೬ ॥**

**ನ ಸಾ ಭುಕ್ತೇ ನ ಸ್ವಪಿತಿ ಶ್ರಾಂತಾ ಸ್ವಪೀತಿ ವಾ ಯದಾ ।**
**ತದಾ ಪಶ್ಯತಿ ತಂ ಸ್ವಪ್ನೇ ನೀಲನೀರಜಲೋಚನಾ ॥ ೭ ॥**

**ಮನೋರಥಾಂಶ್ಚ ಕುರುತೇ ಯಾಂಶ್ಚ ತಂ ಪ್ರತಿ ಭೂಮಿಪಂ ॥ ೮ ॥**

**ತಾನಿ ಸಾ ಪಶ್ಯತಿ ಸ್ವಪ್ನೇ ಕಥಂಚಿತ್ಸ್ವಪ್ನಮೋಹಿತಾ ।**
**ಕದಾಚಿತ್ಕ್ರೀಡತೇ ರಾಜ್ಞಾ ಕದಾಚಿದನುನೀಯತೇ ॥ ೯ ॥**

---

ಇಂತಹ ಸುಂದರನರಪತಿಗೆ ಸಕಲ ದೇವತೆಗಳೂ ಮರ್ಯಾದಮಾಡಿ ನಮಸ್ಕರಿಸಿದರು ಈ ರಾಜನು ಬುಧನ ಮಗನು ಇಂತಹ ಮಹಾನುಭಾವನನ್ನು ನಾರಾಯಣಸಾಧ್ಯ(ಋಷಿ)ರ ಮಗಳಾದ ಊರ್ವಶಿಯು ನೋಡಿದಳು ಆ ರಾಜನನ್ನು ನೋಡಿದೊಡನೆ ಊರ್ವಶಿಯ ಮನಸ್ಸು ವಿಕಲ್ಪವಾಗಿ ದೇಹದಲ್ಲಿ ಅಸ್ವಸ್ಥವುಂಟಾಯಿತು. ಇದೇ ಸಮಯದಲ್ಲಿ ಮದನನ ಬಾಣಗಳೂ ಇವಳನ್ನು ಪೀಡಿಸುತ್ತ ಬಂದುವು ಈ ರೀತಿ ಕಾಮಬಾಣಪೀಡಿತಳಾದ ಊರ್ವಶಿಯು ಮನೋಹರವಾದ ಲತಾಕುಂಜ (ಬಳ್ಳಿಯಮನೆ) ಗಳಲ್ಲಿ ತನ್ನ ಆಕಾರವನ್ನು ಮರೆಮಾಡಿಕೊಂಡು ವಾಸಮಾಡಲಾರಂಭಿಸಿದಳು ಯಾವಾಗಲೂ ಮನಸ್ಸಿನಲ್ಲಿ ಮನ್ಮಥನಿಗಿಂತಲೂ ಸುಂದರನಾದ ಪುರೂರವನನ್ನು ಧ್ಯಾನಿಸುತ್ತ, ಊಟವನ್ನೂ ನಿದ್ರೆಯನ್ನೂ ಬಿಟ್ಟುಬಿಟ್ಟಳು ಯಾವಾಗಲೂ ಬಳಲಿ ಮಲಗಿಬಿಡುತ್ತಿದ್ದಳು ಯಾವಾಗ ಮಲಗುವಳೋ ಆ ಕೂಡಲೆ ಅವಳ ಕಣ್ಣಿಗೆ ಪುರೂರವನು ಗೋಚರನಾಗುತ್ತಿದ್ದನು ಸ್ವಪ್ನದಲ್ಲೂ ಸಹ ಅದೇ ರಾಜನ ದರ್ಶನವೇ ಆಗುತ್ತಿತ್ತು ಅವನನ್ನು ನೋಡಿದಾಗಲೆಲ್ಲಾ ಆ ರಾಜನನ್ನು ಕುರಿತು ವಿವಿಧವಾದ ಮನೋರಥಗಳನ್ನು ಕಲ್ಪಿಸಿಕೊಳ್ಳುತ್ತಿದ್ದಳು ಹಾಗೂ ಆ ಮನೋರಥಗಳನ್ನೆಲ್ಲಾ ಕನಸುಕಾಣುತ್ತಲಿದ್ದಳು ಒಂದೊಂದು ಸಮಯದಲ್ಲಿ ಅವನೊಡನೆ ಕನಸಿನಲ್ಲಿಯೇ ಆಟವಾಡುವಳು ಒಂದು ವೇಳೆ ಅವನನ್ನು ಸಮಾಧಾನಮಾಡುವಳು.

**ಸುಪ್ತಾ ಕದಾಚಿದ್ರಾಜೇಂದ್ರ ವದತೀ ಪ್ರತಿಬುಧ್ಯತೇ ।**
**ಕಂಠೇ ಗೃಹೀತಾ ಸಾ ರಾಜ್ಞಾ ತಯಾ ಚಾಸೌ ಮಹೀಪತಿಃ　　　॥ ೧೦ ॥**

**ಏವಂ ದೃಷ್ಟ್ವಾ ತು ಸಾ ಸ್ವಪ್ನೇ ನಿದ್ರಾಮೋಹಮುಪಾಗತಾ ।**
**ತಥೈವ ಬಾಹುಪಾಶೇನ ರಚಿತೇನ ವಿಬುಧ್ಯತೇ　　　॥ ೧೧ ॥**

**ಸ್ವಪ್ನಸಂಸ್ಥಂ ಯದಾ ದೃಷ್ಟ್ವಾ ಮೋಹಮಾಯಾತಿ ಸಾ ಚಿರಂ ।**
**ಕೃತ್ವಾ ಚಿತ್ರಗತಂ ಪಟ್ಟೇ ಕದಾಚಿಚ್ಚ ನಿರೀಕ್ಷತೇ　　　॥ ೧೨ ॥**

**ಏವಂ ನರೇಂದ್ರೇ ಗತಸರ್ವಭಾವಾಂ**
**ವಿಜ್ಞಾಯ ತಾಂ ಚಾರುತರಾಂಗಯಷ್ಟಿಂ ।**
**ಆಪಾಂಡುರಕ್ಷಾಮಕಪೋಲಭಿತ್ತಿಂ ।**
**ದೃಷ್ಟ್ವೈವ ರಂಭಾಂ ತ್ವರಿತಂ ಜಗಾದ　　　॥ ೧೩ ॥**

**ಯತ್ನೇನ ಚಾರ್ವಂಗಿ ನಿಗೂಹ್ಯಮಾನಾ**
**ಭಾವಂ ಮಯಾ ತ್ವಂ ವಿದಿತಾಸಿ ಸುಭ್ರೂಃ ।**

ಒಂದೊಂದು ವೇಳೆ ಮಲಗುವಳು ಕೂಡಲೆ ಏಳುವಳು ಏನೇನೋ ಮಾತ ನಾಡುವಳು ರಾಜನು ತನ್ನನ್ನು ಆಲಂಗಿಸಿಕೊಂಡಂತೆಯೂ ತಾನೂ ಸಹ ಅವನನ್ನು ಆಲಂಗಿಸುತ್ತಿರುವಂತೆಯೂ ಭಾವಿಸುವಳು ಹೀಗೆಲ್ಲಾ ಸ್ವಪ್ನವನ್ನು ಅನುಭವಿಸುತ್ತಾ ಹಾಗೆಯೇ ಸ್ವಲ್ಪ ನಿದ್ದೆಯನ್ನು ಮಾಡುವಳು ಹಾಗೆಯೇ ಬಾಹು ಪಾಶದಿಂದ ರಾಜ ನನ್ನು ಬಿಗಿದುಬಿಟ್ಟಂತೆ ಮೇಲಕ್ಕೆ ಅದೇ ಸ್ಥಿತಿಯಲ್ಲಿ ಏಳುವಳು ಎದ್ದೊಡನೆಯೇ ಇದೆಲ್ಲವೂ ಸ್ವಪ್ನದಲ್ಲಾದ ಭ್ರಮೆಯೆಂದು ತಿಳಿದೊಡನೆಯೇ ಬಹಳ ಹೊತ್ತು ಜ್ಞಾನ ವಿಲ್ಲದೆ ಬಿದ್ದಿರುವಳು, ಆ ಬಳಿಕ ಆ ರಾಜನ ಚಿತ್ರವನ್ನು ತಾನೇ ಕೈಯಲ್ಲಿ ಬರೆದು ಅದನ್ನೇ ನೋಡುತ್ತಾ ಧ್ಯಾನಮಾಡುತ್ತಾ ಇರುವಳು ಈ ರೀತಿಯಾಗಿ ಆ ಪುರೂ ರವನಲ್ಲಿಯೇ ತನ್ನ ಮನಸ್ಸನ್ನೆಲ್ಲಾ ನಿಲ್ಲಿಸಿದವಳಾದ ಆ ಊರ್ವಶಿಗೆ ಕೂಡಲೆ ತನ್ನ ಸಖಿಯಾದ ರಂಭೆಯ ಜ್ಞಾಪಕ ಬರಲು, ಆಕೆಯನ್ನು ನೋಡಬೇಕೆಂದು ಹೊರಟು ಆ ರಂಭೆಯ ಸಮೀಪಕ್ಕೆ ಬಂದವಳಾಗಿ ಆಕೆಯನ್ನು ಕುರಿತಿಂತೆಂದಳು —

೧೩-೧೯ ಎಲೌ ಮನೋಹರಾಂಗಿಯೆ ! ನನ್ನ ಮನಸ್ಸಿನ ಸಂತಾಪವನ್ನು ನೀನು ಊಹಿಸಬಲ್ಲೆಯಷ್ಟೆ ? ನನ್ನ ಹೃದಯವ್ಯಥೆಯು ನಿನಗೆ ಗೊತ್ತಿಲ್ಲವೆ ? ಎನಲು, ಆ ರಂಭೆಯು ಊರ್ವಶಿಯ ಭಾವವನ್ನು ತಿಳಿದವಳಾಗಿ, ಸಮರವೀರನಾದ ಆ ಪುರೂ

ತಸ್ಮಿನ್ನರೇಂದ್ರೇ ಹೃದಯಂ ತವೇದಂ
ಯೋಽಸೌ ಮಹಾತ್ಮಾ ಸಮರೇಷ್ವಜೇಯಃ ॥ ೧೪ ॥

ಪುರೂರವಾ ನಾಮ ಜಗತ್ತ್ರಯೇಽಸ್ಮಿ ।
ನ್ಖ್ಯಾತಿಂ ಗತಃ ಸಚ್ಚರಿತ್ರೈರ್ನೃವೀರಃ ॥
ರೂಪೇಣ ಕಾಮಂ ವ್ಯತಿರಿಚ್ಯ ಭಾತಿ ।
ಶೌರ್ಯೇಣ ಶಕ್ರಾದತಿರಿಚ್ಯತೇ ಸಃ ॥ ೧೫ ॥

ದಾನೇ ಸಮಸ್ತಸ್ಯ ಚ ನಾಸ್ತಿ ಕಶ್ಚಿ
ತ್ಸತ್ಯೇಽಪ್ಯನೌಪಮ್ಯಗುಣೇ ನೃವೀರಃ ।
ದೇವಾಸುರೇಽಸ್ಮಿನ್ಸಮರೇ ಹತಾನಿ ।
ತೇನಾಸುರಾಣಾಂ ನಿಯುತಾನಿ ಪಂಚ ॥ ೧೬ ॥

ಕೇಶೀ ವಿಶಾಲೋ ಮದನಸ್ತಥೋಗ್ರೋ ।
ಮಹಾಬಲಸ್ತೇನ ತಥಾಪ್ರಿ ಶಸ್ತಃ ।
ಚಂದ್ರಸ್ಯ ಪೌತ್ರಶ್ಚ ಬುಧಸ್ಯ ಪುತ್ರೋ
ಮಾತಾಪಿ ತಸ್ಯಾರ್ಕಸುತಸ್ಯ ಧಾತ್ರೀ ॥ ೧೭ ॥

---

ರವಮಹಾರಾಜನಲ್ಲಿ ನಿನ್ನ ಮನಸ್ಸು ವ್ಯಾಪ್ತನಾಗಿದೆಯೆಂದು ತಿಳಿದಿದೇನೆ ಆ ಮಹಾನುಭಾವನು ಲೋಕೈಕವೀರನೆಂದು ಪ್ರಸಿದ್ಧನಾದ ಪುರೂರವಚಕ್ರವರ್ತಿ ಯೆಂಬುದನ್ನು ನಾನೂ ತಿಳಿದಿರುತ್ತೇನೆ ಅವನು ಮಹಾಸಚ್ಚರಿತ್ರನು ಸೌಂದರ್ಯ ದಲ್ಲಿ ಮನ್ಮಥನನ್ನೂ ಮೀರಿಸಿದವನು ಶೌರ್ಯದಲ್ಲಿ ಇಂದ್ರಾದಿ ದೇವತೆಗಳನ್ನೂ ಮೀರಿಸಿದವನು ದಾನದಲ್ಲಿ ಅವನ ಸಮರಾದ ರಾಜರಾರೂ ಇಲ್ಲ ಸತ್ಯದಲ್ಲೂ, ಇತರ ಉತ್ತಮಗುಣಗಳಲ್ಲೂ ಅವನನ್ನು ಬಿಟ್ಟರೆ ಬೇರೆ ದೊಡ್ಡವರಿಲ್ಲವೇ ಇಲ್ಲ ದೇವದಾನವರ ಯುದ್ಧದಲ್ಲಿ ಆ ಮಹಾರಾಜನು ಐದು ಲಕ್ಷ ಜನ ರಾಕ್ಷಸರನ್ನು ಸಂಹರಿ ಸಿದನು. ಆ ಮಹಾರಾಜನು ಚಂದ್ರನ ಮೊಮ್ಮಗನು ಬುಧನ ಮಗನು ಅವನ ತಾಯಿಯು ಸೂರ್ಯಪುತ್ರನ ಪೋಷಕಳು ಮಾನಾಭಿಮಾನಗಳನ್ನು ತ್ಯಾಗಮಾಡಿ ನೀನು ಆ ಮಹಾರಾಜನ ಹತ್ತಿರಕ್ಕೆ ಹೋಗು ನಿನ್ನನ್ನು ಹೊಂದುವ ವಿಷಯದಲ್ಲಿ ಅವನು ಪ್ರಯತ್ನಮಾಡಿಲ್ಲ ದೇವತಾಸ್ತ್ರೀಯರು ಅವನಿಗೆ ಸಿಕ್ಕುವುದೂ ದುರ್ಲಭ ವಾದುದು ಸುರಾಸುರರೆಲ್ಲರೂ ನಿನ್ನನ್ನು ಹೊಂದಲು ಬಹಳ ಪ್ರಯತ್ನಪಟ್ಟು ವಿಫಲ

ಮಾನಂ ಸಮುತ್ಸೃಜ್ಯ ವಿಶಾಲನೇತ್ರಂ
ತಂ ಗಚ್ಛ ಬಾಲೇ ನೃಪತಿಂ ಪ್ರತೀತಂ ।
ತ್ವದಾಪ್ತಯೇ ತಸ್ಯ ಚ ನಾಸ್ತಿ ಯತ್ನಃ
ಸುದುರ್ಲಭತ್ವಂ ಖಲು ದೇವತಾನಾಂ ॥ ೧೮ ॥

ಮನೋರಥಾನಾಂ ತ್ವಮಗಮ್ಯಭೂಮಿ
ರ್ಯಸ್ಮಾದ್ವಿಶಾಲಾಕ್ಷಿ ಸುರಾಸುರಾಣಾಂ ॥
ಮೃಣಾಲಶಯ್ಯಾ ಸುತನು ತ್ವಯೇವಂ
ಸಂಕ್ಲೇಶಿತಾ ಚಂದನಪಂಕಯುಕ್ತಾ ॥ ೧೯ ॥

ತಸ್ಯಾಂಕಮಾರುಹ್ಯ ಭವಸ್ವ ಕಾಂತೇ
ವಿಮುಕ್ತತಾಪಾ ತಪನೀಯವರ್ಣೇ ।
ಯಾಸ್ಯಾಮ ಏಹ್ಯೇಹಿ ನರೇಶ್ವರಸ್ಯ
ತಸ್ಯಾಶು ಭೋ ವೇಶ್ಮ ವರಪ್ರಯೋಗೇ ॥ ೨೦ ॥

---

ರಾಗಿರುತ್ತಾರೆ ಕೋಮಲಾಂಗಿಯಾದ ನೀನು ತಾವರೇದಂಟಿನ ಹಾಸಿಗೆಯಲ್ಲಿ ಮಲಗಲು ಯೋಗ್ಯಳು ಇಂತಹ ಮೃದುಗಾತ್ರಿಯಾದ ನೀನು ಈರೀತಿ ಕ್ಲೇಶಪಡುತ್ತಿರುವುದನ್ನು ನಾನು ನೋಡಿ ವ್ಯಸನಪಡುತ್ತೇನೆ

೨೦-೨೪ ಎಲೌ ಊರ್ವಶಿಯೆ ! ಆ ಪುರೂರವರಾಜನ ತೊಡೆಯಮೇಲೆ ಕುಳಿತು ನೀನು ಅವನ ಧರ್ಮಕಾಂತೆಯಾಗು ನಿನ್ನ ತಾಪವು ಪರಿಹಾರವಾಗಲಿ ಏಳು, ನಡಿ ಆ ಮಹಾರಾಜನ ಬಳಿಗೆ ಈಗಲೇ ಹೋಗೋಣ ಅವನ ಮನೆಗೆ ಹೋಗಿ ಅವನು ನಿನ್ನನ್ನು ವರಿಸುವಂತೆ ಪ್ರಯೋಗಮಾಡೋಣ ನಡಿ ಆ ರಾಜನಾದರೋ ಪ್ರತಿಷ್ಠಾನಪುರವೆಂಬ ಊರಿನಲ್ಲಿ ವಾಸವಾಗಿದ್ದಾನೆ ಆ ಪಟ್ಟಣವು ಅವನ ಮಾತಾಮಹನಿಂದ ಅವನಿಗೆ ಬಂದಿದೆ ಹೀಗೆ ಆ ಪುರೂರವನ ವೃತ್ತಾಂತವನ್ನು ನಿರೂಪಿಸಿದ ರಂಭೆಯ ವಾಕ್ಯವನ್ನು ಕೇಳಿ ಊರ್ವಶಿಯು ಬಹಳ ನಾಚಿಕೆಪಟ್ಟವಳಾಗಿ ರಂಭೆಯನ್ನು ಕುರಿತು ಈ ಮಾತನ್ನು ಹೇಳಿದಳು —ಎಲೌ ಪ್ರಿಯಸಖಿಯೇ ! ನೀನು ಸತ್ಯವಾದ ಮಾತನ್ನೇ ಹೇಳಿರುತ್ತೀಯೆ ನೀನು ಹೇಳಿದ ಮಾತೇ ನನಗೂ ಇಷ್ಟವಾಗಿದೆ, ನಡೆ ಈಗಲೇ ಆ ಮಹಾರಾಜನ ಪಟ್ಟಣಕ್ಕೆ ಹೊರಡೋಣ ಆ ಹರಿಣನೇತ್ರನ ಮನೆಯನ್ನು ಸೇರೋಣ ಒಂದು ವೇಳೆ ನೀನು ನನ್ನ ಜತೆಯಲ್ಲಿ ಬಾರದೆ ಆ ಮಹಾರಾಜನನ್ನು ನನಗೆ ಸಂಘಟನೆ ಮಾಡಿಸದೆ ಹೋದರೆ, ಅವನಮುಖ

ಪುರಂ ಪ್ರತಿಷ್ಠಾನಮಿತಿ ಪ್ರತೀತಂ
ಮಾತಾಮಹಾದ್ಯತ್ಸಮವಾಪ ರಾಜಾ ।
ಇತ್ಯೇವಮುಕ್ತ್ವಾ ತಪನೀಯವರ್ಣಾ
ತಥ್ಯಂ ವಿದಿತ್ವಾ ತ್ರಪಿತಾ ಬಭೂವ ॥ ೨೧ ॥

ಉವಾಚ ರಂಭಾಂ ಸಖಿ ತಥ್ಯಮುಕ್ತಂ
ತ್ವಯಾ ಮತಂ ತದ್ರುಚಿತಂ ಭೃಶಂ ಮೇ ।
ಯಾಸ್ಯಾವ ಅದ್ಯೈವ ನರೇಶ್ವರಸ್ಯ
ತಸ್ಯಾಂತಿಕಂ ಬಾಲಮೃಗಾಭನೇತ್ರೇ ॥ ೨೨ ॥

ಯದ್ಯದ್ಯ ತಂ ನೀಲಸರೋಜನೇತ್ರಂ
ಸಂಪೂರ್ಣಚಂದ್ರಾಭಮುಖಂ ನರೇಂದ್ರಂ ।
ಪಶ್ಯಾಮಿ ನಾಹಂ ಪೃಥುದೀರ್ಘಬಾಹುಂ
ತತೋ ಗಮಿಷ್ಯಾಮ್ಯವಶಾವಸಾನಂ ॥ ೨೩ ॥

ಪಂಚೈವ ಕಾಮಸ್ಯ ಜನಃ ಪೃಷತ್ಕಾ
ನ್ಯದಾಹ ರಂಭೇ ತದಲಂ ಮೃಷೈವ ।
ಮಮಾನಿಶಂ ಬಾಣಭರೈಸ್ತು ವಿಧ್ಯ
ನ್ಯಶಾಮ್ಯತೇ ತ್ವಕ್ಷಿನಿಮೇಷಮಾತ್ರಂ ॥ ೨೪ ॥

ಕಾಮಾಗ್ನಿಮಧ್ಯೇ ಪರಿವರ್ತಮಾನಂ
ನ ಯಾತಿ ಭಸ್ಮತ್ವಮಿದಂ ಶರೀರಂ ।

---

ವನ್ನು ನಾನು ನೋಡದೆ ಇರುವೆನಾದರ, ನಾನು ಜ್ಞಾನತಪ್ಪಿ ಮರಣವನ್ನೇ ಹೊಂದು ತ್ತೇನೆ. ಮನ್ಮಥನು ಐದು ಬಾಣಗಳನ್ನು ಜನರ ಮೇಲೆ ಪ್ರಯೋಗಿಸಿ ನಾರೀಪರವಶ ರನ್ನಾಗಿ ಮಾಡುವನೆಂದು ಜನರಾಡುವ ಮಾತು ಸುಳ್ಳು ಈಗ ಯೋಚಿಸಿದರೆ ಆ ಮದನನು ಅನೇಕ ಬಾಣಗಳನ್ನು ಒಂದು ಕ್ಷಣವೂ ವಿರಾಮವಿಲ್ಲದೆ ನನ್ನ ಮೇಲೆ ಪ್ರಯೋಗಿಸಿರುವನೆಂದು ತೋರುತ್ತಲಿದೆ

೨೫-೨೭ ಎಲೇ ! ರಂಭೆಯೇ ! ಕಾಮಾಗ್ನಿ ಮಧ್ಯದಲ್ಲಿ ಕುಳಿತಿರುವ ಈ ನನ್ನ ಶರೀರವು ಇನ್ನೂ ಭಸ್ಮವಾಗದೆ ಇದೆ ಆ ದೇಹವು ನನ್ನ ಹೃದಯವನ್ನು ಹೊಕ್ಕಿ ರುವ ಆ ಮಹಾರಾಜನ ಮುಖಚಂದ್ರ ದರ್ಶನದಿಂದಲೇ ಸಂರಕ್ಷಿಸಲ್ಪಡಬೇಕಾಗಿದೆ

ತಸ್ಯೈವ ರಾಜ್ಞೋ ವದನೇಂದುನಾತ
ತ್ಸಂರಕ್ಷ್ಯತೇ ಮೇ ಹೃದಯಸ್ಥಿತೇನ ॥ ೨೫ ॥

ನಯಸ್ವ ಮಾಂ ತಸ್ಯ ವಿಶಾಲನೇತ್ರೇ
ಸಮೀಪಮದ್ಯೈವ ನರೇಶ್ವರಸ್ಯ ।
ಇತ್ಯೇವಮುಕ್ತಾ ಕರುಣಂ ಹಿ ರಂಭಾ
ಪಾಣಾವುಪಾದಾಯ ವಿಶಾಲನೇತ್ರಾಂ ॥ ೨೬ ॥

ಬುಧ್ಯಾ ಸಮುತ್ಪ್ಲುತ್ಯ ತತೋಂತರಿಕ್ಷಂ
ಜಗಾಮ ರಾಜ್ಞೋ ಭವನಂ ಪ್ರಹೃಷ್ಟಾ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಊರ್ವಶೀರಂಭಾಸಂವಾದೋ ನಾಮ
ತ್ರಿಂಶದುತ್ತರ ಶತತಮೋಧ್ಯಾಯಃ

---

ಆದ್ದರಿಂದ ನನ್ನನ್ನು ಆ ಮಹಾರಾಜನ ಹತ್ತಿರಕ್ಕೆ ಈಗಲೇ ಕರೆದುಕೊಂಡು ನಡೆ ಹೀಗೆಂದು ಹೇಳಲು ಆ ಮಾತನ್ನು ಕೇಳಿ ರಂಭೆಯು ಊರ್ವಶಿಯ ಕೈಯನ್ನು ಹಿಡಿದುಕೊಂಡು ಬುದ್ಧಿ (ಸಾಧ್ಯ) ಮಾರ್ಗದಿಂದಲೇ ಆಕಾಶಮಾರ್ಗಕ್ಕೆ ಹಾರಿ ಪುರೂರವರಾಜನ ಮನೆಯನ್ನು ಸಂತೋಷದಿಂದ ಪ್ರವೇಶಿಸಿದರು

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಊರ್ವಶೀ-ರಂಭಾಸಂವಾದವೆಂಬ
ಹೆಸರಿನ ಒಂದುನೂರು ಮೂವತ್ತನೆಯ ಅಧ್ಯಾಯವು
ಮುಗಿದುದು



ಶ್ರೀಃ

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕತ್ರಿಂಶತ್ಯಧಿಕಶತತಮೋಽಧ್ಯಾಯಃ ॥

---

**॥ ಮಾರ್ಕಂಡೇಯ ಉವಾಚ ॥**

**ಉರ್ವಶೀ ರಂಭಯಾ ಸಾರ್ಧಂ ಜಗಾಮ ತ್ವರಿತಂ ತದಾ ।**
**ಕಾಮಾರ್ತಾ ಸಿದ್ಧಮಾರ್ಗೇಣ ಸಾ ದದರ್ಶಾಥ ನಾರದಂ ॥ ೧ ॥**

**ವ್ರಜಂತಂ ಸಿದ್ಧಮಾರ್ಗೇಣ ದೇವಲೋಕಾದುಪಾಗತಂ ।**
**ಸಂಪೂಜ್ಯ ನಾರದಂ ಸುಭ್ರೂಃ ಪ್ರಯಯಾವೇವ ಸತ್ವರಾ ॥ ೨ ॥**

**ತಾಮಾಹ ನಾರದೋ ರಂಭೇ ಕೇಯಂ ತೇ ಪ್ರಸ್ಥಿತಾ ಸಖೀ ।**
**ರಂಭಾ ಶಾಪಭಯಾತ್ತಸ್ಯಾಃ ಸರ್ವಮೇವ ನ್ಯವೇದಯತ್ ॥ ೩ ॥**

---

### ಒಂದುನೂರ ಮೂವತ್ತೊಂದನೆಯ ಅಧ್ಯಾಯವು

೧ ಮಾರ್ಕಂಡೇಯನು ಹೇಳುತ್ತಾನೆ —ಊರ್ವಶಿಯು ರಂಭೆಯೊಡನೆ ಕೂಡಿದವಳಾಗಿ ಕಾಮಾರ್ತಳಾಗಿ ಸಿದ್ಧಪುರುಷರು ಸಂಚರಿಸುವ (ಆಕಾಶ) ಮಾರ್ಗದಿಂದ ಹೊರಟು ಬರುತ್ತಿರುವಾಗ ದಾರಿಯಲ್ಲಿ ನಾರದನನ್ನು ಕಂಡಳು

೨ ಸಿದ್ಧಮಾರ್ಗದಿಂದ ಸಂಚರಿಸುತ್ತಾ ದೇವಲೋಕದಿಂದ ಬರುತ್ತಲಿದ್ದ ನಾರದನನ್ನು ಊರ್ವಶೀ ರಂಭೆಯರಿಬ್ಬರೂ ಪೂಜಿಸಿ ಬಹು ಜಾಗ್ರತೆಯಾಗಿ ಮುಂದ ಹೊರಟರು

೩ ಆಗ ಬೇಗ ಬೇಗ ಹೋಗುತ್ತಿದ್ದ ಆ ರಂಭೆಯನ್ನು ಕುರಿತು ನಾರದನು, ಎಲೌ ರಂಭೆಯೇ! ಇದೇನು ಇಷ್ಟು ಅವಸರವಾಗಿ ಪ್ರಯಾಣಮಾಡುತ್ತಲಿದೀಯೇ? ನಿನ್ನ ಜತೆಯಲ್ಲಿರುವ ಈ ಸ್ತ್ರೀಯು ಯಾರು? ಎಂದು ಕೇಳಲು ರಂಭೆಯು ನಾರದನಿಗೆ ಈ ವೃತ್ತಾಂತವನ್ನು ಹೇಳದೆ ಹೋದರೆ ಶಾಪಕೊಡುವನೆಂಬ ಭೀತಿಯಿಂದ ಆ ಊರ್ವಶಿಯ ಸಕಲ ವೃತ್ತಾಂತವನ್ನೂ ತಿಳಿಸಿದಳು

ತಾಮಾಹ ನಾರದೋ ಭೂಯಃ ಶೃಣುಷ್ವ ವಚನಂ ಮಮ ।
ಉರ್ವಶೀಗತಭಾವೇಯಂ ಮಾನುಷಂ ತಂ ನರೇಶ್ವರಂ　　॥ ೪ ॥

ಶಾಪೇನ ತುಂಬುರೋರ್ಮೋಹಾದುಚಿತಂ ತತ್ರ ವತ್ಸ್ಯತಿ ।
ಯಥಾ ಶುಭಂ ತಥಾ ಕಾರ್ಯಂ ತ್ವಯಾ ಮೇ ವಚನಂ ಶುಭಂ　　॥ ೫ ॥

ಸಮಯೇನೋರ್ವಶೀ ತಸ್ಯ ವಸತ್ವಸಿತಲೋಚನಾ ।
ಸಮಯಶ್ಚಾನಯಾ ಕಾರ್ಯೋ ಯೋ ರಾಜ್ಞಸ್ತಂ ನಿಬೋಧ ಮೇ　　॥ ೬ ॥

ಮೇಷದ್ವಯಂ ತು ಪುತ್ರತ್ವೇ ಪುರಾ ಕೃತವತೀ ಶುಭಾ ।
ತನ್ನಿತ್ಯಂ ಶಯನಾಭ್ಯಾಶೇ ಸ್ಥಾಪನೀಯಂ ಸುಲೋಚನೇ　　॥ ೭ ॥

ಆಹಾರಂ ಘೃತಮಾತ್ರಂ ಚ ಕರ್ತವ್ಯಮನಯಾ ತಥಾ ।
ನ ದ್ರಷ್ಟವ್ಯಸ್ತಥಾ ನಗ್ನೋ ರಾಜಾ ರಂಭೇ ಪುರೂರವಾಃ　　॥ ೮ ॥

ನ ಕರ್ತವ್ಯಮಕಾಮಾಯಾಸ್ತಥಾ ತೇನ ಚ ಮೈಥುನಂ ।
ಏಕಸ್ಮಿನ್ನಪ್ಯಥೋ ಭಗ್ನೇ ಸಮಯೇ ಚಾರುಲೋಚನಾ　　॥ ೯ ॥

೪-೧೦　ಆ ಮಾತನ್ನು ಕೇಳಿ ನಾರದನು ಪುನಃ ಹೇಳಿದನು. ಎಲೈ ಊರ್ವಶಿಯೇ! ನನ್ನ ಮಾತನ್ನು ಕೇಳು. ನೀನು ತುಂಬುರು ಗಂಧರ್ವನ ಶಾಪದಿಂದ ಮನುಷ್ಯರಾಜನ ಬಳಿ ಇರಲು ಹೋಗುತ್ತಲಿದೀಯೇ! ನೀನು ತುಂಬುರು ವಚನದಂತೆ ಅಲ್ಲಿ ವಾಸಮಾಡುವುದು ಯೋಗ್ಯವಾಗಿಯೇ ಇದೆ. ನಿನಗೆ ಹೇಗೆ ಶುಭವಾಗುವುದೋ ಅಂತಹ ಒಂದು ಮಾರ್ಗವನ್ನು ಹೇಳುತ್ತೇನೆ, ಕೇಳು. ನೀನು ಆ ಪುರೂರವ ರಾಜನ ಬಳಿಯಲ್ಲಿ ಇರಬೇಕಾದರೆ ಒಂದು ಸಮಯ (ಶಪಥ) ಸಂಕೇತವನ್ನು ಮಾಡಿಕೊಂಡು ಇರು. ಯಾವ ರೀತಿ ಶಪಥಮಾಡಬೇಕೆಂಬುವುದನ್ನು ನಾನು ಹೇಳುತ್ತೇನೆ, ಕೇಳು. ನೀನು ಪೂರ್ವದಲ್ಲಿಯೇ ಎರಡು ಆಡುಗಳನ್ನು ಮಕ್ಕಳಂತೆ ಸಾಕಿಕೊಂಡಿರುವುದು ಸರಿಯಷ್ಟೆ! ಆ ಆಡುಗಳನ್ನು ಪ್ರತಿದಿನವೂ ನೀನು ನಿನ್ನ ಹಾಸಿಗೆಯ ಬಳಿ ಕಟ್ಟಿಹಾಕು. ನೀನು ಪ್ರತಿದಿನವೂ ಆಹಾರಕ್ಕಾಗಿ ತುಪ್ಪವನ್ನು ಮಾತ್ರ ಉಪಯೋಗಿಸುತ್ತಾ ಇರು. ಪುರೂರವನು ಯಾವಾಗಲೂ ನಿನ್ನನ್ನು ಬರೀಬೆತ್ತಲೆಯಲ್ಲಿ ನೋಡಕೂಡದು. ಮತ್ತು ನೀನಾಗಿ ಅಪೇಕ್ಷಿಸದೆ ಇದ್ದಾಗ ನಿನ್ನಲ್ಲಿ ಸಂಭೋಗಮಾಡಕೂಡದು. ಇದಕ್ಕೆ ಯಾವುದಕ್ಕಾದರೂ ರಾಜನು ತಪ್ಪಿದಾಗ ನೀನು ಅವನನ್ನು ಬಿಟ್ಟು

**ಯದಿ ವತ್ಸ್ಯತಿ ರಾಜಾನಂ ಶಿಲಾಭೂತಾ ಭವಿಷ್ಯತಿ ।**
**ಉರ್ವಶೀ ರಂಭಯಾ ಸಾರ್ಧಮೇವಮುಸ್ತ್ವಿತಿ ನಾರದಂ ॥ ೧೦ ॥**

**ಉಕ್ತ್ವಾ ಸಂಪೂಜ್ಯ ಚ ಮುನಿಂ ಪ್ರತಸ್ಥೇ ಪುನರೇವ ಚ ।**
**ನಾರದೋ ವ್ಯಗಮದ್ವಿಪ್ರಃ ಪುರಂ ವೈಶ್ರವಣಸ್ಯ ಚ ॥ ೧೧ ॥**

**ದದರ್ಶ ಚ ಪ್ರತಿಷ್ಠಾನಂ ಚೋರ್ವಶೀ ರಂಭಯಾ ಸಹ ।**
**ಪ್ರಾಕಾರೇಣಾರ್ಕವರ್ಣೇನ ಕಾಂಚನೇನ ವಿರಾಜಿತಂ ॥ ೧೨ ॥**

**ಚತುರ್ಭಿರ್ಗೋಪುರೈಶ್ಶುಭ್ರೈ ರಾಜತೈಶ್ಚ ವಿರಾಜಿತಂ ।**
**ಶೋಭನಂ ಚ ತಥಾ ರಮ್ಯಂ ವಿದ್ರುಮಸ್ಯ ಚ ತೋರಣೈಃ ॥ ೧೩ ॥**

**ಸುವಿಭಕ್ತಮಹಾರಣ್ಯಂ ಮಹಾರಾಜಪಥಂ ಶುಭಂ ।**
**ಪರಿಖಾಭಿರ್ವಿಚಿತ್ರಾಭಿಃ ಪದ್ಮಿನೀಭಿರಲಂಕೃತಂ ॥ ೧೪ ॥**

**ಖಮುಲ್ಲಿಖದ್ಭಿಃ ಪ್ರಾಸಾದೈಃ ಪಾಂಡುರೈರುಪಶೋಭಿತಂ ।**
**ಶೂರಾಢ್ಯಜನಭೂಯಿಷ್ಠಂ ದಿವ್ಯಂ ಪುರುಷಸಂಯುತಂ ॥ ೧೫ ॥**

---

ದೇವಲೋಕಕ್ಕೆ ಹೊರಟುಹೋಗು ಹಾಗೆ ನೀನು ಹೋಗದೆ ಅವಳಲ್ಲಿಯೇ ಇದ್ದರೆ ನೀನು ಕಲ್ಲಾಗಿಹೋಗುತ್ತೀಯೆ ಹೀಗೆಂದು ಹೇಳಲು ಊರ್ವಶೀ-ರಂಭೆಯರಿಬ್ಬರೂ ಮಾತನಾಡಿಕೊಂಡು ನಾರದನು ಹೇಳಿದಂತೆ ಆಗಲೆಂದು ಒಪ್ಪಿಕೊಂಡರು

೧೧-೨೨ ಇಷ್ಟು ಮಾತು ನಡೆದ ಬಳಿಕ ಅವರಿಬ್ಬರೂ ಪುನಃ ನಾರದನನ್ನು ಪೂಜಿಸಿ ಮುಂದಕ್ಕೆ ಹೊರಟರು ನಾರದನೂ ಕೂಡ ಅಲ್ಲೀದ ಹೊರಟು ಅಲಕಾವತೀ (ವೈಶ್ರವಣ) ಪುರವನ್ನು ತಲುಪಿದನು ಇತ್ತಲಾಗಿ ಊರ್ವಶೀ ರಂಭೆಯರಿಬ್ಬರೂ ಸಾಧ್ಯಮಾರ್ಗದಲ್ಲಿ ಹೊರಟವರಾಗಿ ಪ್ರತಿಷ್ಠಾನಪಟ್ಟಣದ ಸವಿಪಕ್ಕೆ ಬಂದರು

ಪ್ರತಿಷ್ಠಾನಪುರದ ವರ್ಣನೆ —ಆ ಊರಿನ ಕೋಟೆಯ ಪ್ರಾಕಾರವು ಸೂರ್ಯಮಂಡಲದಂತೆ ಹೊಳೆಯುತ್ತಿತ್ತು ಕೋಟೆಯ ಕಲ್ಲುಗಳೆಲ್ಲಾ ಚಿನ್ನದ ಕಲ್ಲುಗಳಾಗಿದ್ದುವು ಊರಿನ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಬೆಳ್ಳಿಯ ಗೋಪುರಗಳಿದ್ದುವು ಆ ನಾಲ್ಕು ಗೋಪುರದ ಬಾಗಿಲುಗಳಿಗೂ ಹವಳದ ತೋರಣವನ್ನು ಕಟ್ಟಿದ್ದರು

ವಣಿಗ್ಭಿರುಪಸಂಕೀರ್ಣಂ ನಾನಾಪಣ್ಯವಿಭೂಷಿತಂ ।
ಐರಾವತಕುಲೋತ್ಪನ್ನೈಶ್ಚಲತ್ಪರ್ವತಸನ್ನಿಭೈಃ　　॥ ೧೬ ॥

ಕುಂಜರೈರ್ಬಹುಸಾಹಸ್ರೈಸ್ಸಂಯುಕ್ತಂ ಸುಮನೋಹರೈಃ ।
ತುರಗೈರ್ವಹ್ನಿಜಾತೈಶ್ಚ ಪವನಸ್ಯ ಸಮೈರ್ಜವೇ　　॥ ೧೭ ॥

ಪಾನಮತ್ತೈರ್ನರೈರ್ಯುಕ್ತಮುದ್ಯಾನೇಷು ತತಸ್ತತಃ ।
ಶಂಖಭೇರೀ ಮೃದಂಗಾನಾಂ ಪಟಹಾನಾಂ ಚ ನಿಃಸ್ವನೈಃ　　॥ ೧೮ ॥

ವಿವಿಧಾನಾಂ ಚ ವಾದ್ಯಾನಾಂ ವಾದಿತ್ರಂ ಸರ್ವವೇಶ್ಮಗಂ ।
ಬ್ರಹ್ಮಘೋಷಂ ಮಹಾಘೋಷಂ ವೀಣಾವೇಣುನಿನಾದಿತಂ　　॥ ೧೯ ॥

ಹೃಷ್ಟಪುಷ್ಟಜನಾಕೀರ್ಣಂ ಸರ್ವಬಾಧಾವಿವರ್ಜಿತಂ ।
ಪದ್ಮಕಿಂಜಲ್ಕವರ್ಣಾಭಿರ್ಯುತಂ ಸ್ತ್ರೀಭಿಃ ಸಹಸ್ರಶಃ　　॥ ೨೦ ॥

ಶ್ಯಾಮಾಭಿಶ್ಚ ಮಹಾರಾಜ ಕಾಂಡಗೌರೀಭಿರೇವ ಚ ।
ನಾನಾವೇಷಧರೈರ್ಯುಕ್ತಂ ನಾನಾದೇಶೋದ್ಭವೈಸ್ತಥಾ　　॥ ೨೧ ॥

---

ರಾಜಮಾರ್ಗದ ಇಕ್ಕೆಲದಲ್ಲಿಯೂ ಕೃತಕೋದ್ಯಾನವನಗಳು ವಿರಾಜಿಸುತ್ತಲಿದ್ದುವು ಕೋಟೆಯ ಕಂದುಕಗಳು ವಿಚಿತ್ರವಾಗಿದ್ದುವು ಊರೊಳಗಿನ ಮನೆಗಳು ಶುಭ್ರವಾಗಿ ಪ್ರಕಾಶಿಸುತ್ತಿದ್ದುವು ಆ ಮನೆಗಳಲ್ಲಿ ದಿವ್ಯಪುರುಷರೂ ಶೂರರೂ ವಾಸಮಾಡುತ್ತಲಿದ್ದರು ಅಂಗಡೀಬೀದಿಯಲ್ಲಿ ಅನೇಕ ವಿಧವಾದ ಅಂಗಡಿಗಳಿದ್ದುವು ಆ ಅಂಗಡಿಗಳಲ್ಲಿ ವಿವಿಧಾಲಂಕಾರ-ಭೂಷಿತರಾದ ವರ್ತಕರು ಕುಳಿತು ವ್ಯಾಪಾರವನ್ನು ಮಾಡುತ್ತಲಿದ್ದರು ಬೆಟ್ಟಗಳೇ ಓಡಾಡುತ್ತಲಿವೆಯೋ ಎಂಬಂತೆ ಐರಾವತದ ಕುಲೋತ್ಪನ್ನಗಳಾದ ಆನೆಗಳು ಅನೇಕ ಸಾವಿರ ಸಂಖ್ಯೆಯಿಂದ ಅಲ್ಲಿ ರಾರಾಜಿಸುತ್ತಿದ್ದುವು ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ವಹ್ನಿಜಾತಿಯ ಕುದುರೆಗಳು ಅಸಂಖ್ಯಾಕವಾಗಿ ಅಶ್ವಾಲಯದಲ್ಲಿ ಕಾಣಬರುತ್ತಿದ್ದುವು ಯಾರ ಮನೆಯಮುಂದೆ ನೋಡಿದರೂ, ಶಂಖಭೇರಿ, ಮೃದಂಗ ಪಟಹಗಳೇ ವಿವಿಧವಾದ ವಾದ್ಯಧ್ವನಿಗಳು ಕೇಳಿಬರುತ್ತಲಿದ್ದುವು ಮತ್ತು ವೇದಘೋಷಗಳೂ, ಸಾಮಘೋಷಗಳೂ, ವೀಣಾವೇಣುನಿನಾದಸ್ವರಗಳೂ ಕೇಳಿಸುತ್ತಿದ್ದುವು. ಮತ್ತು ಊರಿನಲ್ಲೆಲ್ಲಿ ನೋಡಿದರೂ ಸಂತೋಷದಿಂದ ಪುಷ್ಟರಾದ ಜನರೂ, ಅರೋಗದೃಢಕಾಯರಾದ ಜನರ ಗುಂಪೂ ಕಾಣಿಸುತ್ತಿದ್ದಿತು

ನರೈರನೇಕರೂಪೈಶ್ಚ ಶಿಲ್ಪಜ್ಞೈಶ್ಚ ಹ್ಯನೇಕಶಃ ।
ಪುರಸ್ಯ ತಸ್ಯ ಮಧ್ಯೇ ಸಾ ದದರ್ಶ ನೃಪತೇರ್ಗೃಹಂ ॥ ೨೨ ॥

ಮಧ್ಯೇ ಹಿಮಾಚಲಸ್ಯೇವ ಕೈಲಾಸಂ ಪರ್ವತೋತ್ತಮಂ ।
ಶ್ರೀಮದ್ಭಿಃ ಸಂಯುತಂ ರಮ್ಯೈರ್ಗೃಹೈರ್ಮಧ್ಯೈಃ ಸಹಸ್ರಶಃ ॥ ೨೩ ॥

ಸುಧಾವದಾತೈರ್ವಿಪುಲೈಶ್ಚಂದ್ರರಶ್ಮಿಸಮಪ್ರಭೈಃ
ಕ್ವಚಿದ್ರಾತ್ನೈಃ ಕ್ವಚಿದ್ರೌಕ್ಮೈಃ ಕ್ವಚಿದ್ಭೂಪಾಲ ರಾಜತೈಃ ॥ ೨೪ ॥

ಮಣಿವಿದ್ರುಮಸೋಪಾನೈರ್ಮುಕ್ತಾಜಾಲವಿಭೂಷಿತೈಃ ।
ಕ್ವಚಿಚ್ಚ ಪುಷ್ಪದಾಮಾಢ್ಯೈರ್ವೈಜಯಂತೀಯುತೈಃ ಕ್ವಚಿತ್ ॥ ೨೫ ॥

ತಸ್ಯಾವಿದೂರೇ ವಿಪುಲಂ ವನಂ ಚೈತ್ರರಥೋಪಮಂ ।
ರಾಜ್ಞಃ ಕ್ರೀಡಾವನಂ ರಮ್ಯಂ ದದರ್ಶ ವಿಪುಲೇಕ್ಷಣಾ ॥ ೨೬ ॥

ಮತ್ತು ಸಹಸ್ರಾರು ಸುಂದರಿಯರು ದೃಗ್ಗೋಚರರಾಗುತಿದ್ದರು ನಾನಾದೇಶಗಳಿಂದ ಬಂದ ನಾನಾವೇಷಧಾರಿಗಳಾದ ಜನರ ಗುಂಪನ್ನು ನಾವು ಅಲ್ಲಿ ನೋಡಬಹುದಾಗಿತ್ತು ಅನೇಕ ವಿಧ ಮನುಷ್ಯರೂ, ಅನೇಕ ಮಂದಿ ಚಿತ್ರಗಾರರೂ, ಕಲಾಕುಶಲರೂ ಅಲ್ಲಿ ನಿಬಿಡರಾಗಿದ್ದರು ಇಂತಹ ಪಟ್ಟಣದ ಮಧ್ಯಭಾಗದಲ್ಲಿ ಕಾಣುತ್ತಿದ್ದ ಅರಮನೆಯನ್ನು ರಂಭೆ ಮತ್ತು ಊರ್ವಶಿಯರು ನೋಡಿದರು

೨೩-೩೧ ಹಿಮವತ್ಪರ್ವತದ ಮಧ್ಯದಲ್ಲರುವ ಕೈಲಾಸಪರ್ವದಂತೆ ಆ ಅರಮನೆಯು ಶೋಭಿಸುತ್ತಿತ್ತು ಅದರ ಪಕ್ಕಗಳಲ್ಲಿ ಸಹಸ್ರಾರು ಮಂದಿ ಶ್ರೀಮಂತರಾದ ಗೃಹಸ್ಥರ ಪ್ರಾಸಾದಗಳು ಶೋಭಿಸುತ್ತಲಿದ್ದುವು ಬೆಳ್ಳಗೆ ಸುಣ್ಣ ಬಳಿದಿರುವ ಆ ಮನೆಗಳನ್ನು ನೋಡಿದರೆ ಬೆಳದಿಂಗಳನ್ನೆರಚಿದಂತೆ ಕಾಣಿಸುತ್ತಿತ್ತು. ಕೆಲವು ಮನೆಗಳ ಮುಂದೆ ಮೆಟ್ಟಲುಗಳನ್ನು ರತ್ನದಿಂದ ಕಟ್ಟಿದ್ದರು ಮತ್ತೆ ಕೆಲವರು ಚಿನ್ನದಿಂದಲೇ ಮಾಡಿಸಿದ್ದರು ಕೆಲವರ ಮನೆಯ ಮೆಟ್ಟಲುಗಳು ಬೆಳ್ಳಿಯಿಂದ ಮಾಡಲ್ಪಟ್ಟಿದ್ದುವು. ಮತ್ತೆ ಹಲವರು ಮಣಿ (ರತ್ನ) ಮುತ್ತು ಹವಳಗಳಿಂದ ವ್ಯಾಪ್ತವಾದ ಮೆಟ್ಟಲುಗಳನ್ನು ಕಟ್ಟಿಸಿದ್ದರು ಕಿಟಿಕಿಗಳನ್ನೆಲ್ಲಾ ಮುತ್ತಿನ ಜಾಲರಿಗಳಿಂದಲಂಕರಿಸಿದ್ದರು. ಮತ್ತೆ ಕೆಲವರ ಮನೆಯ ಕಿಟಿಕಿಗಳಿಗೆ ಹೂವಿನ ಜಾಲರಿಗಳನ್ನು ಜೋತುಬಿಟ್ಟಿದ್ದರು

**ದ್ರುಮೈರ್ಬಹುವಿಧೈರ್ಯುಕ್ತಂ ಪುಷ್ಪಪ್ರೋಗಫಲೋಪಗೈಃ ।**
**ಪದ್ಮಿನೀಭಿರ್ವಿಚಿತ್ರಾಭಿಃ ಕ್ರೀಡಾಶೈಲೈರ್ಮನೋಹರೈಃ　　॥ ೨೭ ॥**

**ಪ್ರಾಸಾದೈಶ್ಚ ತಥಾ ರಮ್ಯೈ ರಮ್ಯೈರ್ಮಣಿಗಣೈಸ್ತಥಾ ।**
**ತತ್ತು ರಂಭಾ ವನಂ ದೃಷ್ಟ್ವಾ ಸಖೀ ವಚನಮಬ್ರವೀತ್　　॥ ೨೮ ॥**

**ರಾಜ್ಞಃ ಕ್ರೀಡಾವನೇ ರಮ್ಯೇ ಗಹನೇಽಸ್ಮಿನ್ಸುಲೋಚನೇ ।**
**ಮಾಯಾಚ್ಛನ್ನಾ ನಿವತ್ಸ್ಯಾವೋ ಯಾವದಸ್ತಮಯಂ ರವೇಃ　　॥ ೨೯ ॥**

**ತತೋ ಗತ್ವಾ ನರೇಂದ್ರಂ ತಂ ಚೋಕ್ತ್ವಾ ತವ ಚಿಕೀರ್ಷಿತಂ ।**
**ಅಹಂ ತ್ವಾಂ ತು ನಯಿಷ್ಯಾಮಿ ಸವಿಧೇ ತಸ್ಯ ಭೂಪತೇಃ ।**
**ಏವಮುಕ್ತ್ವಾ ಸಖೀವಾಕ್ಯಂ ಚೋದಯಾಮಾಸ ಚೋರ್ವಶೀ　　॥ ೩೦ ॥**

---

ಕೆಲವರು ಅವುಗಳನ್ನು ವೈಜಯಂತೀ ಹಾರಗಳಿಂದಲಂಕರಿಸಿದ್ದರು ಇಂತು ಶೋಭಿಸು ತ್ತಿದ್ದ ರಾಜಗೃಹದ ಸಮೀಪದಲ್ಲಿಯೇ ಅದಕ್ಕೆ ಸಂಬಂಧಿಸಿದಂತೆಯೇ ಇಂದ್ರೋದ್ಯಾನವನ ವಾದ ಚೈತ್ರರಥದಂತೆಯೇ ಒಂದು ಮನೋಹರವಾದ ರಾಜಕ್ರೀಡೋದ್ಯಾನವು ರಾರಾಜಿ ಸುತ್ತಿತ್ತು ಇಂತಹ ಉದ್ಯಾನವನವನ್ನು ರಂಭೆಯು ನೋಡಿದಳು ಆ ಉದ್ಯಾನ ದಲ್ಲಿ ನಾನಾವಿಧ ಪುಷ್ಪದ್ರುಮ (ಹೂವಿನ ಗಿಡ) ಗಳೂ, ನಾನಾ ಫಲವೃಕ್ಷ (ಹಣ್ಣಿನ ಮರ) ಗಳೂ, ಹೂಗಳಿಂದಲೂ, ಹಣ್ಣುಗಳಿಂದಲೂ ಮನೋಹರವಾಗಿ ಕಾಣಿಸುತ್ತಿ ದ್ದುವು ಆ ವನದಲ್ಲಿ ಅಲ್ಲಲ್ಲಿಯೇ ಸುಂದರವಾದ ಪುಷ್ಕರಿಣಿ (ಸರೋವರ) ಗಳಿದ್ದುವು ಮನೋಹರವಾದ ಕ್ರೀಡಾಪರ್ವತಗಳು ಅಡಿಗಡಿಗೆ ಆ ಉದ್ಯಾನದಲ್ಲಿ ತೋರುತ್ತಿದ್ದುವು ಅಲ್ಲಲ್ಲಿಯೇ ವಿಶ್ರಾಂತಿಗೋಸುಗವಾಗಿಯೇ ಕಟ್ಟಿದ್ದ ರತ್ನಗಳಿಂದ ವ್ಯಾಪ್ತವಾದ ಪ್ರಾಸಾದಗಳನ್ನು ನೋಡಬಹುದಾಗಿತ್ತು. ಅಂತಹ ಸುಂದರಬಂಧುರವಾದ ಕ್ರೀಡಾ ವನವನ್ನು ನೋಡಿ ರಂಭೆಯು ತನ್ನ ಸಖಿಯಾದ ಊರ್ವಶಿಯನ್ನು ಕುರಿತಿಂತೆಂದಳು ಎಲೌ ಊರ್ವಶಿಯೆ ! ಈ ಮಹಾರಾಜನ ಕ್ರೀಡೋದ್ಯಾನವು ಬಹು ವಿಸ್ತಾರ ವಾಗಿಯೂ ಗಹನ (ಗೋಪ್ಯ) ವಾಗಿಯೂ ಇದೆ ಈ ಸ್ಥಳದಲ್ಲಿ ನಾವಿಬ್ಬರೂ ಸೂರ್ಯಾಸ್ತಮಾನ ಪರ್ಯಂತವಾಗಿ ಯಾರ ಕಣ್ಣಿಗೂ ಕಾಣಿಸಿಕೊಳ್ಳದೆ ವಾಸ ಮಾಡೋಣ ರಾತ್ರಿಯಾದ ಮೇಲೆ ನಾನು ರಾಜನ ಬಳಿಗೆ ಹೋಗಿ ನಿನ್ನ ಸಂಗತಿ ಯನ್ನೆಲ್ಲಾ ತಿಳಿಸಿ ಅವನನ್ನು ಹೇಗಾದರೂ ಮಾಡಿ ನಿನ್ನ ಬಳಿಗೆ ಕರೆತರುವೆನೆಂದು ಹೇಳಲು ಆ ರಂಭೆಯ ಮಾತಿಗೆ ಊರ್ವಶಿಯು ಸಮ್ಮತಿಸಿದಳು ಈರೀತಿಯಾಗಿ ಆ

**ಕ್ರೀಡಾವನಂ ತೇ ಚ ತತೋವತೀರ್ಣೇ**
**ತದ್ದೇವರಾಮೇ ಸುಮನೋಭಿರಾಮಂ ।**
**ಕ್ರೀಡಾವನೇ ತತ್ರ ತಥೋರ್ವಶೀ ಸಾ**
**ಸೂರ್ಯಾಸ್ತಕಾಲಂ ಮನಸಾ ಸಮೈಚ್ಛತ್ ॥ ೩೧ ॥**

**ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಕ್ರೀಡಾವನಾವತಾರಣೋನಾಮೈಕ ತ್ರಿಂಶದುತ್ತರ ಶತತಮೋಧ್ಯಾಯಃ**

---

ಕ್ರೀಡಾವನದಲ್ಲಿ ಇಳಿದವರಾಗಿ ಅವರು ಸುಖವಾಗಿ ವಿಶ್ರಮಿಸಿಕೊಂಡರು. ಅದರಲ್ಲಿ ಊರ್ವಶಿಯಾದರೋ ಸೂರ್ಯನು ಎಷ್ಟು ಹೊತ್ತಿಗೆ ಅಸ್ತನಾಗುತ್ತಾನೋ ಎಂದು ಮನಸ್ಸಿನಲ್ಲಿಯೇ ಚಿಂತಿಸುತ್ತಿದ್ದಳು.

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಕ್ರೀಡಾವನಾವತರಣವೆಂಬ ಹೆಸರಿನ ಒಂದುನೂರಮೂವತ್ತೊಂದನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವಾತ್ರಿಂಶತ್ಯಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ಸೂರ್ಯಾಸ್ತಮಯಮಿಚ್ಛಂತೀ ಜ್ಞಾತ್ವಾ ರಂಭಾ ತಥೋರ್ವಶೀಂ ।**
**ವಿನೋದಾರ್ಥಂ ಹಿ ತಸ್ಯಾಶ್ಚ ದರ್ಶಯಾಮಾಸ ತದ್ವನಂ ॥ ೧ ॥**

**ಚಾರುಪ್ರಸೂನಂ ಪಶ್ಯೇಮಂ ಸುಭಗೇ ಚಂಪಕದ್ರುಮಂ ।**
**ತ್ವದ್ಗಾತ್ರವರ್ಣಸದೃಶೈಃ ಸಮಂತಾತ್ಕುಸುಮೈಶ್ಚಿತಂ ॥ ೨ ॥**

**ಇಮಂ ಚ ದಾಡಿಮಂ ಪಶ್ಯ ಪುಷ್ಪಿತಂ ವಾಮಲೋಚನೇ ।**
**ಯೋಽಯಂ ಬಿಭರ್ತಿ ಕುಸುಮೈಸ್ತ್ವದೀಯಾಮಧರಶ್ರಿಯಂ ॥ ೩ ॥**

---

**ಒಂದುನೂರ ಮೂವತ್ತೆರಡನೆಯ ಅಧ್ಯಾಯವು.**

೧ ಮಾರ್ಕಂಡೇಯ ಋಷಿಗಳು ಹೇಳುತ್ತಾರೆ —ಸೂರ್ಯಾಸ್ತಮಾನವನ್ನು ಬಯಸುತ್ತಿರುವ ಆ ಊರ್ವಶಿಯನ್ನು ನೋಡಿ ರಂಭೆಯು ಅವಳು ವಿನೋದವಾಗಿ ಕಾಲಕಳೆಯಲೆಂಬ ಉದ್ದೇಶದಿಂದ ಆ ರಾಜನ ಉದ್ಯಾನವನ್ನು ತೋರಿಸಿದಳು

೨-೨೦ ಎಲೌ ರಂಭೆಯೇ ! ಸೊಗಸಾದ ಹೂಗಳನ್ನು ಬಿಟ್ಟಿರುವ ಈ ಸಂಪಿಗೆಯ ಮರವನ್ನು ನೋಡು ಈ ಮರವು ನಿನ್ನ ದೇಹಕಾಂತಿಗೆ ಸಮನಾದ ಹೂಗಳಿಂದ ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿರುವುದು ಸಖಿ ! ಇತ್ತ ನೋಡು ಇಲ್ಲಿರುವ ದಾಳಿಂಬೆ ಗಿಡವಲ್ಲಿ ಬಿಟ್ಟಿರುವ ಹೂಗಳನ್ನು ನೋಡಿದರೆ ಈ ದಾಡಿಮೀಪುಷ್ಪವು ನಿನ್ನ ಅಧರ (ತುಟಿ) ದಂತೆ ಕಾಂತಿಯುಕ್ತವಾಗಿದೆಯೆಂದು ಕಾಣುತ್ತಲಿರುವುದು. ಮತ್ತಿತ್ತ

ಪಶ್ಯ ಕಾಮಾಶರಾಕಾರಂ ಸಹಕಾರಂ ಮನೋರಮಂ ।
ಯತ್ರ ಚಾತ್ಮಸಮುತ್ಪನ್ನಾ ರೂಢಾಸ್ತಸ್ಯ ಮಹಾತ್ಮನಃ ॥ ೪ ॥

ಶ್ರಿಯಂ ಕಪೋಲಯೋಸ್ತುಭ್ಯಮಾದದಾನೈರ್ಮನೋರಮೈಃ ।
ಪುಷ್ಪೈರುಪೇತಾ ಚಾರ್ವಂಗಿ ಮಧೂಕಂ ಪಶ್ಯ ಶೋಭನೇ ॥ ೫ ॥

ತ್ವತ್ಪಯೋಧರಸಂಕಾಶೈ ರಮ್ಯೈರುಪಚಿತಂ ಫಲೈಃ ।
ಪಶ್ಯ ತಾಲದ್ರುಮಂ ಸೌಮ್ಯೇ ಮನಸಃ ಪ್ರೀತಿವರ್ಧನಂ ॥ ೬ ॥

ಸ್ತಂಭೈಸ್ತ್ವದೂರುಸಂಕಾಶೈಃ ಕದಲೀಂ ಪಶ್ಯ ಶೋಭನೇ ।
ಸುವರ್ಣಾ ಚಾರುಸರ್ವಾಂಗೀ ನಿರ್ಮಿತಾ ವಿಶ್ವಕರ್ಮಣಾ ॥ ೭ ॥

ಪಶ್ಯಾವಿಮುಕ್ತಕಲತಾಂ ಕುಸುಮಾಢ್ಯಾಂ ಮನೋಹರಾಂ ।
ತ್ವತ್ಕೇಶಪಾಶಸಂಕಾಶೈರ್ಭ್ರಮರೈರುಪಶೋಭಿತಾಂ ॥ ೮ ॥

ಪಶ್ಯೇಮಂ ಕುಂದವಿಟಪಂ ತ್ವದ್ದಂತಸದೃಶೈಃ ಶುಭೈಃ ।
ಸಮಂತಾಚ್ಛೋಭಿತಂ ಪುಷ್ಪೈರ್ವಿಶಾಲಾಕ್ಷಿ ಮನೋಹರೈಃ ॥ ೯ ॥

ನೋಡು ಸಖಿ! ಈಗ ತಾನೇ ಹೂವು ಬಿಡುತ್ತಿರುವ ಈ ಸಿಹಿಮಾವಿನಮರದ ಮೇಲಿರುವ ಹೂಗೊಂಚಲುಗಳನ್ನು ನೋಡು ಇದು ಮನ್ಮಥನ ಬಾಣದ ಆಕಾರವಾಗಿ ಕಾಣುತ್ತಿರುವುದು ಆ ಮಹಾತ್ಮನ ಮನಸ್ಸಿನಲ್ಲಿ ರೂಢಮೂಲವಾಗಿ ನಿಂತಿರುವ ಆತ್ಮಸಮುತ್ಪನ್ನಶಕ್ತಿಯು ಈ ಹೂಗಳಲ್ಲಿ ಕಾಣುತ್ತಲಿರುವುದು ಎಲೆ ಸುಂದರಾಂಗಿಯೇ! ಹೂಗಳಿಂದ ತುಂಬಿರುವ ಈ ಹಿಪ್ಪೆಮರವನ್ನು ನೋಡಿದಿಯಾ? ನಿನ್ನ ಕಪೋಲಕಾಂತಿಯನ್ನು ಅನುಕರಿಸುತ್ತಿರುವ ಈ ಮನೋಹರ ಪುಷ್ಪವು ನಿನಗೇ ವಾರ ಕಲಿಸುವಂತಿದೆ. ಎಲೆ ಸೌಮ್ಯಸ್ವಭಾವದ ಊರ್ವಶಿಯೇ! ಎತ್ತರವಾದೀ ತಾಳೇಮರದ ಮೇಲೆ ಬಿಟ್ಟಿರುವ ಹಣ್ಣುಗಳನ್ನು ನೋಡಿದಿಯೋ? ಇದು ನಿನ್ನ ಘನಸ್ತನಗಳಂತೆ ಮನಸ್ಸಿಗೆ ಬಹಳ ಪ್ರೇಮವನ್ನುಂಟುಮಾಡುತ್ತಿರುವುದು ಎಲೌ ಮಂಗಳಾಂಗಿಯೇ! ಈ ಸುಂದರವಾದ ಬಾಳೇಗಿಡಗಳನ್ನು ನೋಡು ಇದು ನಿನ್ನ ತೊಡೆಗಳನ್ನು ಹೋಲುತ್ತಾ ವಿಶ್ವಕರ್ಮನಿಂದ ಚಿನ್ನದ ಬಣ್ಣದಂತೆ ಮಾಡಲ್ಪಟ್ಟಿರುವುದು ಈ ಮಲ್ಲೇಮರವನ್ನು ನೋಡು ಸುತ್ತಲೂ ಇದರಲ್ಲಿ ಬಿಟ್ಟಿರುವ ಹೂಗಳನ್ನು ನೋಡಿದರೆ ನಿನ್ನ ದಂತಗಳಂತೆ ಕಾಂತಿಯಿಂದ ಕೂಡಿ ಶುಭ್ರವಾಗಿರುತ್ತವೆ ಎಲೌ

ಪಶ್ಯ ಚೋತ್ಪಲಿನೀಮೇತಾಮುತ್ಪಲೈರುಪಶೋಭಿತಾಂ ।
ತ್ವನ್ನೇತ್ರಸದೃಶೈಃ ಫುಲ್ಲೈರ್ಮನೋಹೃದಯನಂದನೈಃ ॥ ೧೦ ॥

ನಲಿನೀ ಸುಭಗೇ ಪಶ್ಯ ಕಮಲೈಃ ಪುಷ್ಪಿತೈರ್ಯುತಾಂ ।
ತವ ನಿಃಶ್ವಾಸಗಂಧಾಢ್ಯೈಃ ಸೌವರ್ಣೈರ್ವಜ್ರಕೇಸರೈಃ ॥ ೧೧ ॥

ರಾಜಹಂಸಾನಿಮಾನ್ಪಶ್ಯ ನಲಿನೀತೀರಗೋಚರಾನ್ ।
ಗಮನಂ ಸುಮನೋಹಾರಿ ತ್ವದೀಯಾನಿವಶಿಕ್ಷಿತಾನ್ ॥ ೧೨ ॥

ತ್ವತ್ಕರಾಗ್ರವಿಧಾನ್ಸೌಮ್ಯೇ ಧಾರಯದ್ಭಿಶ್ಚ ಪಲ್ಲವಾನ್ ।
ಕ್ರೀಡಾಶೈಲಮಿಮಂ ಪಶ್ಯ ಯುಕ್ತಂ ಬಹುವಿಧೈರ್ದ್ರುಮೈಃ ॥ ೧೩ ॥

ಕ್ರೀಡಾಶೈಲೇ ಚೂತಗತಃ ಕೋಕಿಲಃ ಕಾಮವರ್ಧನಃ ।
ಕೂಜತ್ಯಯಂ ಮನೋಹಾರಿಸ್ವನೇನ ಸದೃಶೇನ ತೇ ॥ ೧೪ ॥

ಕ್ರೀಡಾಶೈಲೇ ನದೀಂ ಪಶ್ಯ ನಿಃಸೃತಾಂ ಶೀತಲೋದಕಾಂ ।
ತುಲ್ಯಂ ತೇ ಮನಸಾ ಸೌಮ್ಯೇ ವಹಂತೀಂ ನಿರ್ಮಲಂ ಜಲಂ ॥ ೧೫ ॥

---

ವಿಶಾಲಾಕ್ಷಿಯೇ! ಇಲ್ಲಿ ನೋಡು ಈ ತಾವರೇಗಿಡದಲ್ಲಿ ಬಿಟ್ಟಿರುವ ತಾವರೇ ಹೂಗಳನ್ನು ನೋಡಿದರೆ ಮನೋಹರವಾಗಿಯೂ ವಿಸ್ತಾರವಾಗಿಯೂ ಇರುವ ನಯನ ಮನೋಹರವಾದ ನಿನ್ನ ನೇತ್ರಗಳನ್ನು ಹೋಲುವಂತೆ ಇದೆ ಈಗ ತಾನೇ ಅರಳಿರುವ ಈ ಕಮಲಪುಷ್ಪಗಳನ್ನು ನೋಡು ಇದರಿಂದ ಹೊರಡು ತ್ತಿರುವ ಸುವಾಸನೆಯನ್ನು ನೋಡಿದರೆ ನಿನ್ನ ನಿಃಶ್ವಾಸ (ಉಸಿರುಬಿಡುವ) ಗಂಧ ವನ್ನು ಇದು ಹೋಲುವಂತಿದೆ ಈ ನಳಿನೀಪುಷ್ಪಗಳ ಪಕ್ಕದಲ್ಲಿ ವಿಹರಿಸುತ್ತಿರುವ ರಾಜಹಂಸ ಪಕ್ಷಿಗಳನ್ನು ನೋಡು ಮನೋಹರವಾಗಿ ಇವುಗಳು ಹೆಜ್ಜೆಯಿಡುತ್ತಿರು ವುದನ್ನು ನೋಡಿದರ ನಿನ್ನ ಕಾಲು ನಡಿಗೆಯಿಂದ ಇವು ಶಿಕ್ಷಿತ (ಪಾಠ ಕಲಿತ) ವಾದಂತೆ ಕಾಣುತ್ತಲಿವೆ ನಾನಾವಿಧ ವೃಕ್ಷಗಳನ್ನೊಳಗೊಂಡಿರುವ ಈ ಕ್ರೀಡಾ ಪರ್ವತವನ್ನು ನೋಡು ಈ ವೃಕ್ಷದಲ್ಲಿ ಬಿಟ್ಟಿರುವ ಚಿಗುರುಗಳನ್ನು ನೋಡಿದರೆ ನಿನ್ನ ಹಸ್ತಪಲ್ಲವದ ಮೃದುತ್ವವನ್ನು ಧರಿಸಿಕೊಂಡಂತೆ ಕಾಣುತ್ತಲಿವೆ ಕ್ರೀಡಾ ಪರ್ವತದಲ್ಲಿರುವ ಮಾವಿನಮರದ ಮೇಲೆ ಕುಳಿತು ಕಾಮವನ್ನು ವೃದ್ಧಿಗೊಳಿಸುವ ಸ್ವಭಾವವುಳ್ಳ ಕೋಕಿಲೆಯ ಧ್ವನಿಯನ್ನು ಕೇಳಿದರೆ ನಿನ್ನ ಕಂಠಸ್ವರದ ಸ್ಮರಣೆ

**ಬಹ್ವಾಶ್ಚರ್ಯಯುತಂ ಸೌಮ್ಯಂ ದರ್ಶನೀಯಂ ವನಂ ಬಹು ।**
**ಕಿಂ ನು ಪಶ್ಯ ವಿಶಾಲಾಕ್ಷಿ ಸೂರ್ಯೋಽಸ್ತಮುಪಗಚ್ಛತಿ ॥ ೧೬ ॥**
**ತ್ವಾಂ ತು ಕಾಮವಶಾಂ ಜ್ಞಾತ್ವಾ ಕೃಪಯೈವ ದಿವಾಕರಃ ।**
**ಸಂವೃತ್ತಾಂಶುಧರೋ ದೇವಸ್ತ್ವಸ್ತಮಾಯಾತಿ ಭಾಮಿನೀ ॥ ೧೭ ॥**
**ಕಠೋರಾಣ್ಯಪಿ ಪತ್ರಾಣಿ ಪಲ್ಲವಾನೀವ ಸುಂದರಿ ।**
**ಅಸ್ತತಾಪಾನುರಕ್ತಾನಿ ರಾಜಂತೇ ಶಾಖಿನಾಂ ಭೃಶಂ ॥ ೧೮ ॥**
**ಗಿರೀಣಾಂ ಶಿಖರಾನ್ರಕ್ತಾನ್ಕರೋತ್ಯೇವ ದಿವಾಕರಃ ।**
**ಜಗಾಮಾಸ್ತಂ ವಿಶಾಲಾಕ್ಷಿ ಕೃತಕರ್ಮಾ ದಿನಕ್ಷಯೇ ॥ ೧೯ ॥**
**ಸಂಧ್ಯಾಕಾಲೇನ ರಕ್ತೇನ ಪ್ರದೀಚೀಂ ಪಶ್ಯ ಶೋಭನೇ ।**
**ಆಲಿಂಗಮಾನಾಂ ಸಹಸಾ ಕಾಮಿನಾಮಿವ ಕಾಮಿನೀಂ ॥ ೨೦ ॥**

---

ಯುಂಬಾಗುತ್ತಲಿದೆ ಈ ಕ್ರೀಡಾಪರ್ವತದಿಂದ ಹುಟ್ಟಿ ಹರಿದುಹೋಗುತ್ತಲಿರುವ ನಿರ್ಮಲೋದಕವುಳ್ಳ ಈ ನದಿಯನ್ನು ನೋಡಿದರ ನಿನ್ನ ಮನಸ್ಸಿನಂತೆಯೇ ಈ ಪ್ರವಾಹಜಲವೂ ಬಹು ನಿರ್ಮಲವಾಗಿರುವಂತೆ ಕಾಣುತ್ತಲದ

ಬಹು ವಿಧವಾದ ಆಶ್ಚರ್ಯದಿಂದ ಕೂಡಿರುವ ಈ ದರ್ಶನೀಯವಾದ ಪುಷ್ಪಫಲಾರಾಮವು ಎಷ್ಟು ಸೊಗಸಾಗಿದೆ, ನೋಡಿದೆಯಾ ? ಊರ್ವಶಿ ! ಎಲೌ ಊರ್ವಶಿ! ಆಕಾಶವನ್ನು ನೋಡು ಸೂರ್ಯನು ಅಸ್ತನಾಗುತ್ತಲಿದ್ದಾನೆ ಈ ಅಸ್ತಮಾನ ಕಾಲವನ್ನು ನೋಡಿದರೆ, ನಿನ್ನ ಮೇಲಿನ ಕೃಪೆಯಿಂದಲೇ ಸೂರ್ಯನು ಕಾಮವಶಳಾದ ನಿನಗೆ ಸಹಾಯಮಾಡುವುದಕ್ಕಾಗಿಯೇ ತನ್ನ ಕ್ರೂರಕಿರಣಗಳನ್ನು ಉಪಶಾಂತ ಮಾಡಿ ಅಸ್ತಾಚಲವನ್ನು ಪ್ರವೇಶಿಸಿದಂತೆ ಕಾಣುತ್ತಲಿದೆ ಈ ಕಾಲದಲ್ಲಿ ಕಾಣುವ ಈ ವೃಕ್ಷಶಾಖೆಗಳ ಸೌಂದರ್ಯವನ್ನು ನೋಡು ಈ ಮರದ ಕೊಂಬೆಯಲ್ಲಿ ಬಿಟ್ಟಿರುವ ಎಲೆಗಳು ಬಹು ಕಠಿನವಾದುವುಗಳಾದಾಗ್ಯೂ ಸೂರ್ಯನು ಅಸ್ತನಾದನೆಂಬ ಅನುತಾಪದಿಂದ ಕರಗಿಕೊರಗಿ ಚಿಗುರುಗಳಂತೆ ಕೆಂಪಾಗಿ ಕಾಣುತ್ತಲಿವೆ

ಸೂರ್ಯಾಸ್ತಕಾಲದಲ್ಲಿ ಕೆಂಪಗೆ ಕಾಣುತ್ತಲಿರುವ ಬೆಟ್ಟದ ಶಿಖರಗಳನ್ನು ನೋಡು ತಾನು ಅಸ್ತನಾಗುವಾಗ ಎಲ್ಲ ಪದಾರ್ಥಗಳೂ ತನ್ನ ಬಣ್ಣದಂತೆ ಕೆಂಪಾಗಿಯೇ ಇರುವಂತೆ ಮಾಡುವ ಈ ಸೂರ್ಯನು ತನ್ನ ಕೆಲಸಗಳನ್ನೆಲ್ಲಾ (ಹಗಲು) ಮುಗಿಸಿಕೊಂಡು ಸಂಧ್ಯಾಕಾಲದಲ್ಲಿ ಅಸ್ತಪರ್ವತದಲ್ಲಿ ಮರೆಯಾದುದನ್ನು ನೋಡು ಊರ್ವಶಿ ! ಕೆಂಪಾಗಿರುವ ಈ ಸಂಧ್ಯಾಕಾಲದಿಂದ ಶೋಭಿಸುತ್ತಲಿರುವ ಪಶ್ಚಿಮ ದಿಗಂಗನೆಯನ್ನು ನೋಡು ಇದನ್ನು ನೋಡಿದರೆ ಕಾಮುಕಳಾದೋರ್ವ ಸ್ತ್ರೀಯು

**ಸಾಂಪ್ರತಂ ನಿಯೋಮೋಪೇತಾ ದ್ವಿಜಾ ದ್ವಿಜವರೋದ್ಭವೇ ।**
**ಸಂಧ್ಯಾಕಾಲಮುಪಾಸಂತೇ ಸತಾಂ ಮಾರ್ಗಮನುವ್ರತಾಃ ॥ ೨೧ ॥**

**ಅನುಯಾತಾ ರವಿಂ ಸಂಧ್ಯಾ ಗತಮಸ್ತಮಪಿ ಪ್ರಭುಂ ।**
**ಸಾಧ್ವೀವ ವನಿತಾ ಕಾಂತೇ ಕುಲಜಾತಾ ಮನಸ್ವಿನೀ ॥ ೨೨ ॥**

**ಯಾಸ್ಯಮಾನಂ ಸುನಾಸೋರು ತಮಸಾ ಪಶ್ಯ ಜಾತಲಂ ।**
**ಭೃಂಗೋದರತಮಾಲಾನಾಂ ತುಲ್ಯೇನ ವರವರ್ಣಿನಿ ॥ ೨೩ ॥**

**ವ್ಯಾಪ್ತಂ ಹಿ ತಮಸಾ ಸರ್ವಂ ನ ವಿರಾಜತಿ ಕಿಂಚನ ।**
**ಮಲಿನೇನಾಯತಾಪಾಂಗಿ ಜಗತ್ಸರ್ವಂ ಸಮೀಕ್ಷ್ಯತಂ ॥ ೨೪ ॥**

**ಅಸ್ಯಾಂ ಹಿ ಸಖಿ ವೇಲಾಯಾಂ ಮದನೇನ ವಶೀಕೃತಾಃ ।**
**ನೀಲಾಂಬರಧರಾಃ ಕಾಂತಾ ಯಾಂತಿ ಕಾಂತಾನಲಂಕೃತಾಃ ॥ ೨೫ ॥**

**ಪಶ್ಯೋದಿತಂ ಚ ಸುಭಗೇ ಸುಭಗಂ ಚಂದ್ರಮಂಡಲಂ ।**
**ಪಾನಮತ್ತಪುರಂಧ್ರೀಣಾಂ ವದನೇನ ಸಮುತ್ಪ್ರಭಂ ॥ ೨೬ ॥**

---

ತನ್ನಂತೆಯೇ ಕಾಮಾತುರಗಳಾದ ಮತ್ತೋರ್ವಕಾಮಿನಿಯನ್ನು, ಬಹುಜಾಗ್ರತೆಯಾಗಿ ಆಲಂಗಿಸಿಕೊಳ್ಳುತ್ತಿರುವಂತೆ ಕಾಣುತ್ತಿರುವುದಲ್ಲವೆ ?

೨೧-೩೫ ಎಲೌ ಊರ್ವಶಿಯೇ! ಕೇಳು ಈ ಸಂಧ್ಯಾಕಾಲದಲ್ಲಿ ದ್ವಿಜವರೋದ್ಭವ (ಚಂದ್ರೋದಯ) ಸಮಯದಲ್ಲಿ ದ್ವಿಜರು (ಬ್ರಾಹ್ಮಣರು) ಸಜ್ಜನಮಾರ್ಗವನ್ನನುಸರಿಸಿ ನಿಯಮದಿಂದ ಕೂಡಿದವರಾಗಿ ಸಂಧ್ಯಾವಂದನೆಯನ್ನು ಮಾಡುತ್ತಾರೆ ಸಂಧ್ಯಾದೇವಿಯು ತನ್ನ ಪ್ರಭುವು ಹೊರಟುಹೋದುದನ್ನು ನೋಡಿ ತಾನೂ ಸಹ ಅವನನ್ನನುಸರಿಸಿ ಹೋಗುತ್ತಿರುವುದನ್ನು ನೋಡಿದರೆ ಸತ್ಕುಲಪ್ರಸೂತಳಾದ ಸಚ್ಚರಿತ್ರಳಾದ ಹೆಂಗಸು ತನ್ನ ಗಂಡನ ಮಾರ್ಗವನ್ನನುಸರಿಸಿ ಹೋಗುತ್ತಾ ಇರುವಂತೆ ತೋರುತ್ತಲಿದೆ ಊರ್ವಶಿ! ನೋಡು ನೋಡು ಸಾಯಂಕಾಲವು ಕಳೆದು ಕತ್ತಲೆಯಾವರಿಸುತ್ತಿರುವುದನ್ನು ನೋಡಿದರ ಹೊಂಗೇಮರಕ್ಕೆ ಭ್ರಮರಗಳು ಮುತ್ತಿಕೊಂಡಿರುವಂತೆ ಕಾಣುತ್ತಲಿದೆ (ಹೊಂಗೇಮರವೂ ಕಪ್ಪು ದುಂಬಿಗಳೂ ಕಪ್ಪು) ಅಂದರೆ ಕತ್ತಲೆ ಮುತ್ತಿತೆಂದು ಭಾವ ಈರೀತಿ ಕತ್ತಲೆ ಕವಿದು ಯಾವ ಪದಾರ್ಥವೂ ಕಾಣಿಸದೆ ಇದೆ ಎಲೌ ಊರ್ವಶಿಯೇ! ಪ್ರಪಂಚವೆಲ್ಲವೂ ಈ ಕತ್ತಲೆಯಿಂದ ಮಲಿನವಾದಂತೆ ಕಾಣುತ್ತಲಿದೆ ಎಲೆ ಸಖಿ! ಈ ಸಮಯವನ್ನೆ ಕಾದಿದ್ದ ಮನ್ಮಥನ ಏಟಿಗೆ ಸಿಕ್ಕಿದ ವಿರಹಾತುರರಾದ ಕಾಂತೆಯರು ತಮ್ಮ ತಮ್ಮ ಕಾಂತರ ಸಮೀಪ

**ಕಿಂಚಿದಾಕ್ರಮ್ಯ ಗಗನಂ ಶ್ವೇತತಾಂ ತು ಗತಂ ಸಖಿ ।**
**ಪಶ್ಯ ಚಂದ್ರಮಸಂ ಸುಭ್ರು ನಯನಾನಂದಕಾರಕಂ ॥ ೨೭ ॥**

**ಜಗತೋಽಸ್ಯ ತಮೋ ಗತ್ವಾ ಶಶಾಂಕಃ ಸತ್ವಸನ್ನಿಭಃ ।**
**ವಿರಾಜತ್ಯಮಲಃ ಸೌಮ್ಯೇ ಗಗನೇ ಸಿತಸುಪ್ರಭೇ ॥ ೨೮ ॥**

**ಕಾಮಬಾಣಹತಾಯಾಸ್ತೇ ಸದೃಶಂ ಗಂಡಯೋಃ ಶ್ರಿಯಾ ।**
**ಬಿಭರ್ತ್ಯಭಯತಶ್ಚಂದ್ರೋ ಜ್ಯೋತ್ಸ್ನಾಜಾಲಂ ಸಮುತ್ಸೃಜನ್ ॥ ೨೯ ॥**

**ಚಂದ್ರರಾಜತಕುಂಭೇನ ದಿಶೇಯಂ ವರವರ್ಣಿನಿ ।**
**ಜ್ಯೋತ್ಸ್ನಾಚ್ಛಲೇನ ಕ್ಷ್ಮಾ ದೇವೀ ರಾಜತೀವ ವಿರಾಜತೇ ॥ ೩೦ ॥**

**ಚಂದ್ರಮಸ್ಯುದಿತೇ ಪಶ್ಯ ಫುಲ್ಲಾಂ ಕುಮುದಿನೀಂ ಶುಭೇ ।**
**ತ್ವದೀಯಹಾಸಸಂಕಾಶೈಃ ಕುಸುಮೈರುಪಶೋಭಿತಾಂ ॥ ೩೧ ॥**

---

ವನ್ನು ಅಲಂಕರಿಸುತ್ತಲಿರುವರು ಸಖಿ! ನೋಡಿದೆಯಾ? ಚಂದ್ರನು ಮೂಡುತ್ತಲಿರುವನು ನಯನಗಳಿಗೆ ಆನಂದವನ್ನು ಬೀರುತ್ತಲಿರುವನು ಪಾನಮಾಡಿ ಮದಿಸಿದ ಹೆಂಗಸರ ಮುಖದಂತೆ ಕಾಂತಿಯಿಂದಲಂಕೃತನಾಗಿದಾನೆ ಆಕಾಶಮಂಡಲದಲ್ಲಿ ಈ ಚಂದ್ರನು ಕ್ರಮಕ್ರಮವಾಗಿ ಪ್ರಸರಿಸುತ್ತಾ ತನ್ನ ಧೊರೆತನವನ್ನು ಪ್ರಕಟಿಸುವುದನ್ನು ನೋಡಿ ಲೋಕದ ಕತ್ತಲೆಯು ಓಡಿಹೋಗಿ ಅದೆಲ್ಲೋ ಅವಿತುಕೊಂಡಿತು ಆಕಾಶವೆಲ್ಲಾ ಬೆಳ್ಳಗಾಗಿ ಪ್ರಭೆಯಿಂದ ಪಬ್ಬಿರುವುದನ್ನು ನೋಡು ಕಾಮಬಾಣದಿಂದ ಹತಳಾದ ನಿನ್ನ ಕಪೋಲಗಳ ಕಾಂತಿಯಂತೆ ಎರಡು ಕಡೆಗಳಲ್ಲಿಯೂ ಚಂದ್ರನು ಬೆಳದಿಂಗಳನ್ನೆರಚಿರುವನು ಎಲೌ ವರವರ್ಣಿನಿಯೇ! ಈ ದಿಗಂಗನೆಯು ಚಂದ್ರನೆಂಬ ಬೆಳ್ಳಿಯ ಬಿಂದಿಗೆಯನ್ನು ಹಿಡಿದು ಹೊರಟಂತೆ ಕಾಣುತ್ತಿರುವ ಚಂದ್ರಮಂಡಲದ ವೈಖರಿಯನ್ನು ನೋಡು ಇದನ್ನು ನೋಡಿ ಭೂದೇವಿಯು ಬೆಳದಿಂಗಳನ್ನು ಹರದಿಂದ ಧರಿಸಿ ಪ್ರಕಾಶಿಸುವಂತೆ ಕಾಣುತ್ತಲಿದೆ ಚಂದ್ರೋದಯವಾದುದನ್ನು ನೋಡಿ ಅರಳುತ್ತಿರುವ ತಾವರೇಹೂವುಗಳನ್ನು ನೋಡು ಆ ಹೂವುಗಳು ನಿನ್ನ ಹುಸಿನಗುವಿನಂತೆ ತೋರುತ್ತಲಿವೆ ಮತ್ತೊಂದೆಡೆ ಅರಳುತ್ತಿರುವ ಕೆಂದಾವರ ಹೂವನ್ನು ನೋಡು ವಿರಹದಿಂದ ಬೆಳ್ಳಗಾದ ಚಕ್ರವಾಕ ಪಕ್ಷಿಯು ಇದನ್ನು ನೋಡಿ ದುಃಖಪಡುತ್ತಾ ಈ ಹೂವಿನೊಳಗೆ ಅಡಗಿಕೊಳ್ಳುತ್ತಲಿದೆಯೋ ಎಂಬಂತೆ ತೋರುತ್ತಲಿದೆ ಎಲೌ ಸುಂದರಿಯೇ! ಇಲ್ಲಿ ಕಾಣುವ ಚಂದ್ರಕಾಂತ ಶಿಲಾಗೃಹವನ್ನು

ವಿರಹೀ ಚಕ್ರವಾಕೋಯಂ ರಕ್ತಾಮುತ್ಪಲನೀಂ ಶುಭೇ ।
ಸಿತಾಮಿವ ಸುದುಃಖಾರ್ತೋ ವಿಶತ್ಯಾಯತಲೋಚನೇ ॥ ೩೨ ॥

ಚಂದ್ರಕಾಂತಗೃಹಾದಸ್ಮಾಚ್ಚಂದ್ರರಶ್ಮಿಸಮಪ್ರಭಾಃ ।
ಚಂದ್ರರಶ್ಮಿಪರಾಮೃಷ್ಟಾಃ ಪತಂತ್ಯುದಕಬಿಂದವಃ ॥ ೩೩ ॥

ಆಲಿಂಗಿತಾ ಚಂದ್ರಮಸಾ ಜಹೌ ರಾತ್ರಿಸ್ತಮಃಪಟಂ ।
ಕಾಮಿನೇವ ವಿಶಾಲಾಕ್ಷಿ ಕಾಮಿನೀ ವಸನಂ ಶುಭಾ ॥ ೩೪ ॥

ಚಂದ್ರೋದಯೇ ಚಂದ್ರಸಮಾನವಕ್ತ್ರೇ
ನರೇಂದ್ರಚಂದ್ರೇ ಪ್ರಮದಾವರೇಸ್ಮಿನ್ ।
ಪಶ್ಯ ತ್ವಮಾಶಂಸ ಚ ಜೀವಿತಾಶಾಂ
ತ್ವದ್ಭಾಗ್ಯನುನ್ನಂ ಸಹಸಾಪ್ರವಿಷ್ಟಂ ॥ ೩೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚಂದ್ರೋದಯವರ್ಣನೋನಾಮ
ದ್ವಾತ್ರಿಂಶದುತ್ತರಸತತಮೋಧ್ಯಾಯಃ

---

ನೋಡು ಈ ಮನೆಯಿಂದ ಚಂದ್ರರಶ್ಮಿಯಂತೆ ಪ್ರಕಾಶಿಸುವ ಜಲಬಿಂದುಗಳು ಬೆಳದಿಂಗಳಲ್ಲಿ ಜಾರಿ ಬರುತ್ತಿರುವ ಸೊಬಗನ್ನು ನೋಡು ರಾತ್ರಿಯೆಂಬ ಕಾಮಿನಿಯು ಚಂದ್ರನಿಂದಾಲಿಂಗಿತಳಾಗಿ ತಾನು ಹೊದ್ದಿದ್ದ ಕತ್ತಲೆಯೆಂಬ ಹೊದಿಕೆಯನ್ನು ದೂರ ಎಸೆದಿರುವಳು. ಇದನ್ನು ನೋಡಿದರೆ ಕಾಮುಕನಾದ ಪತಿಯಿಂದ ಆಲಂಗಿಸಲ್ಪಟ್ಟ ಕಾಮಿನಿಯು ತನ್ನ ಬಟ್ಟೆಯನ್ನು ಬಿಚ್ಚಿ ದೂರ ಬಿಸುಟು ಪೂರ್ಣ ಸುಖದಲ್ಲಿ ಭಾಗಿಯಾದಂತೆ ತೋರುತ್ತಲಿದ

ಎಲೆ ಸಖಿ! ಊರ್ವಶಿ! ಈ ನನ್ನ ವರ್ಣನೆಯಿಂದ ನೀನು ಸಂತೋಷಪಡುವಂತೆ ಈ ಚಂದ್ರೋದಯ ಕಾಲದಲ್ಲಿ ಚಂದ್ರನಂತೆ ಮುಖವುಳ್ಳ ನಿನ್ನನ್ನು ಆ ನರೇಂದ್ರಚಂದ್ರನಾದ ಪುರೂರವನು ಬಂದು ಆಲಂಗಿಸಿಕೊಳ್ಳುವನು ಆಗ ನೋಡು, ಆಗ ನಿನ್ನ ಜೀವಿತವನ್ನು ನೀನೇ ಪ್ರಶಂಸಮಾಡಿಕೊಳ್ಳುತ್ತೀಯೋ! ನಿನ್ನ ಭಾಗ್ಯಚಂದ್ರನು ಬಲು ಬೇಗ ನಿನ್ನನ್ನು ಹೊಂದುವಂತೆ, ಇದೋ ನೋಡು! ಆ ಪುರೂರವನೇ ಬರುತ್ತಿರುವನೆಂದು ಸಖಿಯಾದ ರಂಭೆಯು ಊರ್ವಶಿಗೆ ಹೇಳಿದಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಉಪವನದಲ್ಲಿ ಚಂದ್ರೋದಯ
ವರ್ಣನೆಯೆಂಬ ಹೆಸರಿನ ಒಂದು ನೂರ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು

ಶ್ರೀಃ

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ ॥

---

**॥ ಮಾರ್ಕಂಡೇಯ ಉವಾಚ॥**

**ಇತ್ಯುಕ್ತ್ವಾ ರಂಭಯಾ ವಾಕ್ಯಂ ದೃಷ್ಟ್ವಾ ರಾಜಾನಮಾಗತಂ ।**
**ಹೃಷ್ಟಾ ಸಸಾಧ್ವಸಾ ದೇವೀ ಬಭೂವಾಥ ತಥೋರ್ವಶೀ ॥ ೧ ॥**

**ಆಶ್ಚರ್ಯಮಭೂದ್ದೃಷ್ಟೇ ರಾಜ್ಞಿ ತಸ್ಯಾಃ ಶುಭಾನನೇ ।**
**ರೋಮಾಂಚಿತತನುತ್ವಂ ಚ ಸಪ್ರಸ್ವೇದಂ ಸಮಾಬಭೌ ॥ ೨ ॥**

**ತಾಮುವಾಚ ತತೋ ರಂಭಾ ಶೃಣೂರ್ವಶಿ ವಚೋ ಮಮ ।**
**ನೇಹಾಗಮೇಽಸ್ಯ ನೃಪತೇಃ ಕಾರ್ಯಮಲ್ಪಂ ಭವಿಷ್ಯತಿ ॥ ೩ ॥**

---

**ಒಂದು ನೂರ ಮೂವತ್ತಮೂರನೆಯ ಅಧ್ಯಾಯವು.**

೧-೨ ಮಾರ್ಕಂಡೇಯರು ಈ ಕಥೆಯನ್ನು ಇನ್ನೂ ವಿಸ್ತರಿಸಿ ಹೇಳುತ್ತಾರೆ, ಅದೆಂತೆಂದರೆ —ರಂಭೆಯು ಹೇಳಿದಂತೆ ಭೋಗಿಯು ಆ ಉಪವನಕ್ಕೆ ಬಂದೇಬಂದು ದನ್ನು ನೋಡಿ ಆ ಊರ್ವಶಿಯು ಬಹಳ ಭಯದಿಂದ ಕೂಡಿದವಳಾಗಿ ಆಶ್ಚರ್ಯದಿಂದ ಆ ಪುರೂರವನ ಮುಖವನ್ನು ನೋಡುತ್ತಾ ಮೈಯೆಲ್ಲಾ ರೋಮಾಂಚನದಿಂದ ಕೂಡಿರಲು ದೇಹಾದ್ಯಂತವೂ ಬೆವರಿನಿಂದ ನೆನೆದುಹೋದವಳಾದಳು

೩-೫ ಆಗ ಊರ್ವಶಿಯು ರಂಭೆಯನ್ನು ಕುರಿತು ಈ ಮಾತನ್ನು ಹೇಳಿದವಳಾದಳು ಎಲೌ ರಂಭೆಯೇ ! ಈಗ ರಾಜನು ಬಾರದೇಯಿದ್ದಿದ್ದರೆ ನಮ್ಮ ಕೆಲಸವು ಸ್ವಲ್ಪವೂ ಆಗುತ್ತಿರಲಿಲ್ಲ ಈ ರಾತ್ರಿಯಲ್ಲಿ ರಾಜನು ತನ್ನ ಸ್ನೇಹಿತನನ್ನು ಜೊತೆ

**ರಾಜಾ ಸಖಾಸಹಾಯೋಽಯಂ ಪ್ರವಿಷ್ಟೋಽ ನಿಶಿ ಕಾನನಂ ।**
**ಪ್ರಚ್ಛನ್ನೇ ಶೃಣುವಸ್ತಾವದಸ್ಯ ವಾಕ್ಯಾನಿ ಭೂಪತೇಃ ॥ ೪ ॥**

**ಏವಮುಕ್ತ್ವಾತ್ಯವಾಚಾಥ ರಂಭಾಂ ನಾರಾಯಣಾತ್ಮಜಾ ।**
**ಮಾಯಾಚ್ಛನ್ನಶರೀರೇ ತೇ ತತಶ್ಚಾಯಯತುರ್ನೃಪಂ ॥ ೫ ॥**

**ರಾಜಾನಂ ಚಾರುಸರ್ವಾಂಗಂ ಪಪ್ರಚ್ಛ ತು ತದಾ ಸಖಾ ।**
**ರಾಜ್ಞೋ ಬಹುಮತೋ ನಿತ್ಯಂ ಗುಣವಾಂಶ್ಚಾತಿಧಾರ್ಮಿಕಃ ॥ ೬ ॥**

**॥ ಸಖೋವಾಚ ॥**

**ಯತಃ ಪ್ರಭೃತಿ ರಾಜೇಂದ್ರ ತ್ರಿದಿವಾತ್ತ್ವಮಿಹಾಗತಃ ।**
**ತತಃ ಪ್ರಭೃತಿ ಚಾಸ್ವಸ್ಥೋಽ ಮಯಾ ದೃಷ್ಟೋಽಸಿ ಮಾನದ ॥ ೭ ॥**

**ತದಸ್ವಾಸ್ಥ್ಯಂ ಕಾಮಕೃತಂ ಜ್ಞಾತವಾನಸ್ಮಿ ತೇ ನೃಪ ।**
**ತನ್ಮಮಾಮಾಚಕ್ಷ್ವ ತೇ ಗುಹ್ಯಂ ನ ಚೇನ್ನರವರೋತ್ತಮ ॥ ೮ ॥**

---

ಮಾಡಿಕೊಂಡು ಈ ಉಪವನಕ್ಕೆ ಬಂದಿರುವನು ಈಗ ಈ ರಾಜನು ಏನೇನು ಮಾತುಗಳನ್ನಾಡುತ್ತಾನೆಯೋ ಅವುಗಳನ್ನು ಮರೆಯಾಗಿದ್ದು ಕೇಳೋಣವೆನ್ನಲು ರಂಭೆಯು ಅದಕ್ಕೆ ಅಂಗೀಕಾರಮಾಡಿದಳು ಆ ಕೂಡಲೆ ಆ ಗಂಧರ್ವನಾರಿಯರಿಬ್ಬರೂ ತಮ್ಮ ಶರೀರವನ್ನು ಮಾಯದಿಂದ ಯಾರಿಗೂ ಕಾಣದಂತೆ ಮರೆಮಾಡಿಕೊಂಡು, ಆ ರಾಜನು ಸಖನೊಡನಿದ್ದ ಸ್ಥಳಕ್ಕೆ ಬಂದರು

೬ ಮನೋಹರಾಂಗನಾದ ಪುರೂರವನನ್ನು ಕುರಿತು, ರಾಜನಿಗೆ ಬಹಳ ಇಷ್ಟನಾದ, ಗುಣಶಾಲಿಯಾದ, ಅತ್ಯಂತ ಧಾರ್ಮಿಕನಾದ, ಅವನ ಸಖನು ಒಂದು ಮಾತನ್ನು ಕೇಳಿದನು

೭-೮. ಎಲೈ ಮಹಾರಾಜನೆ ! ನೀನು ದೇವಲೋಕದಿಂದ ಬಂದಾರಭ್ಯದಿಂದಲೂ ಅಸ್ವಸ್ಥನಾಗಿರುವಂತೆ ನನ್ನ ಕಣ್ಣುಗಳಿಗೆ ಕಾಣುತಲಿದೆ. ಆ ಅಸ್ವಸ್ಥತೆಯು ಕಾಮವಿಕಾರದಿಂದುಂಟಾಗಿರುವುದೆಂದು ನನಗೆ ತೋರುತಲಿದೆ ಆ ವಿಚಾರವು ರಹಸ್ಯವಲ್ಲದೆ ಇದ್ದರೆ ನನ್ನೊಡನೆ ತಿಳಿಸು

॥ ಪುರೂರವಾ ಉವಾಚ ॥

ತವ ಗುಹ್ಯಂ ನ ಮೇ ಕಿಂಚಿತ್ಕದಾಚಿದಪಿ ವಿದ್ಯತೇ ।
ಅಸ್ವಾಸ್ಥ್ಯಕಾರಣಂ ಸೌಮ್ಯ ತವ ವಕ್ಷ್ಯಾಮ್ಯಥಾತ್ಮನಃ ॥ ೯ ॥

ನಾರಾಯಣಸುತಾ ಕಾಂತಾ ರೂಪೇಣಾಪ್ರತಿಮಾ ಶುಭಾ ।
ಉರ್ವಶೀನಾಮತಃ ಖ್ಯಾತಾ ಮಯಾ ದೃಷ್ಟಾ ವರಾಪ್ಸರಾಃ ॥ ೧೦ ॥

ಯತಃ ಪ್ರಭೃತಿ ಚಾರ್ವಂಗೀ ತತಃ ಪ್ರಭೃತಿ ಮೇ ಸಖೇ ।
ಕಾಮೇನಾಲೋಡ್ಯತೇ ಚಿತ್ತಂ ನ ಚ ಶಾಮ್ಯತಿ ಮೇ ತಥಾ ॥ ೧೧ ॥

ನ ಚೋಪಾಯಂ ಪ್ರಪಶ್ಯಾಮಿ ತಸ್ಯಾ ಲಾಭೇ ದ್ವಿಜೋತ್ತಮ ।
ದೇವತಾನಾಮಪಿ ಶುಭಾ ದುರ್ಲಭಾ ಸಾ ವರಾಂಗನಾ ॥ ೧೨ ॥

ಏವಂ ದುಃಖಪರೀತಸ್ಯ ಸಖೇ ಕಾಲೋ ಗತೋ ಮಮ ।
ಉಪಭುಕ್ತಾ ಮಯಾ ಸ್ವಪ್ನೇ ಸಾಽದ್ಯ ಚಾರ್ವಸಿತೇಕ್ಷಣಾ ॥ ೧೩ ॥

---

೯ ಪುರೂರವನು ಹೇಳುತ್ತಾನೆ —ಎಲೌ ಸೌಮ್ಯನಾದ ಮಿತ್ರನೇ ! ನಿನ್ನ ಸಂಗಡ ಹೇಳದೇಯಿದ್ದ ಗುಟ್ಟುವಿಚಾರವಾವುದೂ ಇಲ್ಲ ನನ್ನ ಅಸ್ವಸ್ಥತೆಯ ವಿಚಾರ ವನ್ನು ಈಗ ನಿನ್ನೊಡನೆ ಹೇಳುವೆನು, ಕೇಳು

೧೦-೧೧. ನಾರಾಯಣಋಷಿಯ ಮಗಳಾದ ಅಪ್ರತಿಮರೂಪಶಾಲಿನಿಯಾದ, ಮನೋಹರಳಾದ ಊರ್ವಶಿಯೆಂಬ ಹೆಸರಿನ ಶ್ರೇಷ್ಠಳಾದ ಅಪ್ಸರಸ್ತ್ರೀಯು, ಸ್ವರ್ಗ ಲೋಕದಲ್ಲಿ ನನ್ನಿಂದ ನೋಡಲ್ಪಟ್ಟಳು ಯಾವಾಗ ನಾನು ಅವಳನ್ನು ನೋಡಿದೆನೋ ಆಗಿನಿಂದಲೂ ನನ್ನ ಮನಸ್ಸೆಲ್ಲಾ ಕಲಕಿಹೋಗಿರುತ್ತದೆ ಏನಾದರೂ ಮನಶ್ಶಾಂತಿ ಯುಂಟಾಗುವುದೇ ಇಲ್ಲ

೧೨-೧೩ ಎಲೈ ಪ್ರಿಯಸ್ನೇಹಿತನಾದ ಬ್ರಾಹ್ಮಣನೇ ! ಅವಳನ್ನು ಹೊಂದುವ ವಿಷಯದಲ್ಲಿ ನಾನು ಯಾವ ಉಪಾಯವನ್ನೂ ಕಾಣೆನು ಆ ಶ್ರೇಷ್ಠಳಾದ ದೇವ ನಾರಿಯು ದೇವತೆಗಳಿಂದಲೂ ಸಹ ದುರ್ಲಭಳು ಇದೇರೀತಿ ನಾನು ಅವಳ ಸಂಬಂ ಧವಾದ ದುಃಖದಿಂದ ಕಾಲವನ್ನು ಕಳೆಯುತಲಿದೇನೆ ಎಲೈ ಸ್ನೇಹಿತನೇ ! ಒಂದುದಿನ ಆದ ಸ್ವಪ್ನದಲ್ಲಿ ನಾನು ಅವಳೊಡನೆ ಭೋಗಪಟ್ಟಂತೆ ಕಂಡೆನು. ಇದೇ ಚಂದ್ರಕಾಂತ

ಚಂದ್ರಕಾಂತಗೃಹೇ ಹ್ಯಸ್ಮಿನ್ಕಾಮಮಾರ್ಗಣಪೀಡಿತಾ ।
ಚಂದ್ರೋದಯೇ ಚಾರುಮುಖೀ ತ್ರೈಲೋಕ್ಯಸ್ಯೈಕಸುಂದರೀ ॥ ೧೪ ॥

ವಿನೋದನಾರ್ಥಂ ಹಿ ಸಖೇ ಮನಸೋಽತಿ ಮನೋಹರಂ ।
ಚಂದ್ರೋದಯೇ ತತಃ ಪ್ರಾಪ್ತಂ ಚಂದ್ರಕಾಂತಶಿಲಾಗೃಹಂ ॥ ೧೫ ॥

ತದೇಹಿ ತ್ವರಿತಂ ಸೌಮ್ಯ ಪ್ರವಿಶ್ಯ ರುಚಿರಂ ಗೃಹಂ ।
ವಿನೋದಯಾಮಿ ಹೃದಯಂ ಮನ್ಮಥೇತ ವಶೀಕೃತಂ ॥ ೧೬ ॥

॥ ಸಖೋವಾಚ ॥

ಯಥಾ ದೃಷ್ಟಂ ತ್ವಯಾ ಸ್ವಪ್ನೇ ತಥಾಽದ್ಯ ಭವಿತಾ ಧ್ರುವಂ ।
ಸಾಪಿ ಕಾಮಪರೀತಾಂಗೀ ತ್ವಾಮುಪೇಷ್ಯತಿ ಭಾಮಿನೀ ॥ ೧೭ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ವಿವೇಶಾಥ ಚಂದ್ರಕಾಂತಶಿಲಾಗೃಹಂ ।
ಆಸಾಂಚಕ್ರೇ ತದಾ ತಸ್ಮಿನ್ಮದನೇನ ವಶೀಕೃತಃ ॥ ೧೮ ॥

---

ಗೃಹದಲ್ಲಿ ಆ ಊರ್ವಶಿಯು ಕಾಮಬಾಣದಿಂದ ಪೀಡಿತಳಾಗಿ, ಒಂದು ದಿನ ರಾತ್ರಿ ಬೆಳದಿಂಗಳಲ್ಲಿ ಇಲ್ಲಿಗೆ ಬಂದಿದ್ದಂತೆಯೂ ನನ್ನ ಮನಸ್ಸಿಗೆ ವಿನೋದವಾಗುವಂತೆ ಆಕೆಯು ನನ್ನೊಡನೆ ಈ ಶಿಲಾಗೃಹದಲ್ಲಿಯೇ ಸಂತೋಷವಾಗಿದ್ದಂತೆಯೂ ಸ್ವಪ್ನದಲ್ಲಿ ಅನುಭವವಾಯಿತು ಆದ್ದರಿಂದೆಲೈ ಸ್ನೇಹಿತನೇ, ನಡಿ ಅದೇ ಚಂದ್ರಕಾಂತಗೃಹ ದೊಳಗೆ ಪ್ರವೇಶಿಸೋಣ ಕಾಮಾಧೀನನಾದ ನನ್ನ ಮನಸ್ಸನ್ನು ಅಲ್ಲಿ ನನ್ನ ಹೃದಯಕ್ಕೆ ತಂಪುಮಾಡಿ-ಸಂತೋಷಪಡಿಸುತ್ತೇನೆ

೧೭ ಸ್ನೇಹಿತನು ಹೇಳುತ್ತಾನೆ ---ಮಹಾರಾಜ ! ನಿನ್ನ ಸ್ವಪ್ನದಲ್ಲಿ ಯಾವ ರೀತಿ ಕಾಣಿಸಿತೋ ಅದು ಈಗ ಸ್ವಲ್ಪವೂ ಸಂದೇಹವಿಲ್ಲದೆ ನಿಜವಾಗಿ ಆಗಿಯೇ ಆಗು ತ್ತದೆ ಕಾಮಾರ್ತಳಾದ ಆ ಮಂಗಳಾಂಗಿಯೂ ಸಹ ಕೂಡಲೆ ಬಂದು ನಿನ್ನನ್ನು ಸಂತೋಷಪಡಿಸುತ್ತಾಳ

೧೮ ಮಾರ್ಕಂಡೇಯನು ಹೇಳುತ್ತಾನೆ,---ಕೇಳೈ ವಜ್ರರಾಜನೇ ! ಈರೀತಿ ಯಾಗಿ ಹೇಳಿ ಪುರೂರವನು ಮದನನ ಅಧೀನನಾಗಿ ಚಂದ್ರಕಾಂತಶಿಲಾಗೃಹವನ್ನು ಪ್ರವೇಶಿಸಿ ಅಲ್ಲಿ ಕುಳಿತುಕೊಂಡನು

**ಉರ್ವಶೀ ರಂಭಯಾ ಸಾರ್ಧಂ ತಚ್ಛ್ರುತ್ವಾ ಹರ್ಷಮಾಗತಾ ।**
**ಆತ್ಮಾನಂ ದರ್ಶಯಾಮಾಸ ರಂಭಾಽಪಿ ನೃಪತೇಸ್ತದಾ ॥ ೧೯ ॥**

**ಜಯೇತ್ಯುಕ್ತ್ವಾ ಮಹೀನಾಥಂ ರಂಭಾ ಕಾಮವಶಾತ್ತದಾ ।**
**ಬಭೂವ ಪುರತಸ್ತಸ್ಯ ಶೋಭಯಂತೀವ ತದ್ಗೃಹಂ ॥ ೨೦ ॥**

**ತಮುವಾಚ ತತೋ ರಾಜಾ ಸ್ವಾಗತಂ ತೇ ವರಾನನೇ ।**
**ಅಲಂಕುರುಷ್ವ ಚಾರ್ವಂಗಿ ರತ್ನಾಸನಮಿದಂ ಶುಭಂ ॥ ೨೧ ॥**

**ರತ್ನಾಸನೋಪವಿಷ್ಟಾಯಾಃ ತದಾಗಮನವಿಸ್ಮಿತಃ ।**
**ತದಾ ರಾಜೀವರಕ್ತಾಕ್ಷಸ್ತಾಮುವಾಚ ವರಾನನಾಂ ॥ ೨೨ ॥**

**ಶಕ್ರಸ್ಯ ನಗರಂ ರಂಭೇ ರಾಜತೇ ನಿತ್ಯಶಸ್ತ್ವಯಾ ।**
**ಪೌರ್ಣಮಾಸ್ಯಾ ಯಥಾ ರಾತ್ರಿಃ ಶಶಾಂಕೇನೇವ ಭಾಮಿನಿ ॥ ೨೩ ॥**

---

೧೯-೨೦ ಆ ಉಪವನದಲ್ಲಿ ಮರೆಯಾಗಿ ಇದನ್ನೆಲ್ಲಾ ಕೇಳುತ್ತಲಿದ್ದ ರಂಭೋರ್ವಶಿಯರು ಮಹಾರಾಜನು ಸಖನೊಡನೆ ಹೇಳಿಕೊಂಡ ಈ ಮಾತುಗಳನ್ನೆಲ್ಲಾ ಕೇಳಿ ಪರಮಸಂತೋಷಭರಿತರಾದರು ಆಗ ರಂಭೆಯು ಮಹಾರಾಜನಿಗೆ ಕಾಣಿಸಿಕೊಂಡು ಮಹಾರಾಜ ! ವಿಜಯಶಾಲಿಯಾಗು, ಎಂದೆನ್ನುತ್ತಾ ಆ ಮನೆಯನ್ನೆಲ್ಲಾ, ತನ್ನ ಸೌಂದರ್ಯದಿಂದ ಬೆಳಗಿಸುತ್ತಾ ಅವನ ಮುಂದ ಬಂದು ನಿಂತುಕೊಂಡಳು

೨೧-೨೨ ಆಗ ಆಕಸ್ಮಾತ್ತಾಗಿ ಬಂದು ಎದುರಿಗೆ ನಿಂತ ಆ ರಂಭೆಯನ್ನು ನೋಡಿ ಮಹಾರಾಜನು, ಎಲೌ ಮನೋಹರಾಂಗಿಯೇ ! ನಿನಗೆ ಸುಖಾಗಮನವೆ ? ಇಲ್ಲಿರುವ ರತ್ನಸಿಂಹಾಸನವನ್ನಲಂಕರಿಸೆಂದು ಹೇಳಿ ಆಕೆಯು ರತ್ನಾಸನದಲ್ಲಿ ಬಂದು ಕುಳಿತೊಡನೆಯೇ ಅವಳ ಆಗಮನದಿಂದ ಆಶ್ಚರ್ಯಪಡುತ್ತಾ ಪುರೂರವನು ಕಮಲ ದಂತೆ ಕೆಂಪಗಿರುಪ ಕಣ್ಣುಗಳುಳ್ಳವನಾಗಿ ಆ ರಂಭೆಯನ್ನು ಕುರಿತು ಈರೀತಿ ಹೇಳಿದನು

೨೩-೨೬ ಎಲೌ ರಂಭೆಯೇ ! ನೀನು ಪ್ರತಿದಿವಸವೂ ಅಮರಾವತೀಪಟ್ಟಣ ದಲ್ಲಿದ್ದುಕೊಂಡು ಪೂರ್ಣಿಮೆಯ ರಾತ್ರಿಕಾಲವು ಚಂದ್ರನಿಂದೆಂತು ಶೋಭಿಸುವುದೋ ಅದರಂತೆ ಸ್ವರ್ಗವನ್ನು ಬೆಳಗಿಸುತ್ತಿದ್ದೀಯೆ ನೀನು ಇಂದ್ರಸಭೆಗೆ ಅಲಂಕಾರ

ತ್ವಂ ಸಭಾಮಂಡನಂ ತಸ್ಯ ಸಚ್ಛಿಷ್ಯಾ ತ್ವಂ ಚ ತುಂಬುರೋಃ ।
ತ್ವಯಾಭಿಭೂತಾಸ್ಸಕಲಾಃ ಸ್ತ್ರಿಯಃ ಸುಪ್ತಾಃ ಸುಶೋಭನೇ ॥ ೨೪ ॥

ತ್ವಯಾಭಿಭೂತಾಃ ಸಕಲಾಃ ಸ್ತ್ರಿಯಃ ಸ್ವರ್ಗೇ ಸುಶೋಭನೇ ।
ತವ ನೇತ್ರಸಹಸ್ರೇಣ ಪಶ್ಯನ್ನಪಿ ತು ಪಾಕಹಾ ॥ ೨೫ ॥

ಸರ್ವತ್ರ ಚಾರುಸರ್ವಾಂಗಿ ನ ತೃಪ್ಯತಿ ಶುಭಾನನೇ ।
ತನ್ಮಮಾಚಕ್ಷ್ವ ಸುಭಗೇ ಇಹಾಗಮನಕಾರಣಂ ॥ ೨೬ ॥

॥ ರಂಭೋವಾಚ ॥

ಶೃಣುಷ್ವಾವಹಿತೋ ರಾಜನ್ಮಮಾಗಮನಕಾರಣಂ ।
ಶ್ರುತ್ವಾ ತಚ್ಚ ನರೇಂದ್ರೇಂದ್ರ ಕುರುಷ್ವ ವಚನಂ ಮಮ ॥ ೨೭ ॥

ನಾರಾಯಣಸುತಾ ದೇವೀ ತತ್ರ ತ್ರೈಲೋಕ್ಯಸುಂದರೀ ।
ಉರ್ವಶೀ ನಾಮ ಚಾರ್ವಂಗೀ ಭೂಮಿಪಾಲ ಸಖೀ ಮಮ ॥ ೨೮ ॥

---

ವಾಯಳು ಮತ್ತು ತುಂಬುರುವಿಗೆ ಅತ್ಯುತ್ತಮಳಾದ ಶಿಷ್ಯಳು ನಿನ್ನಿಂದ ಸಕಲ ಸ್ತ್ರೀಯರೂ ಸಹ ತಿರಸ್ಕೃತರಾಗಿ ನಿನ್ನೆದುರಿಗೆ ನಿಲ್ಲಲಾರದೆ ಮಲಗಿ ನಿದ್ದೆಹೋಗುತ ಲಿರುವರು ಮತ್ತು ಸ್ವರ್ಗದಲ್ಲಿರುವ ಸಕಲ ಅಪ್ಸರಸ್ತ್ರೀಯರೂ ನಿನ್ನಿಂದ ತಿರಸ್ಕೃತ ರಾಗಿರುವರು ದೇವೇಂದ್ರನು ತನ್ನ ಸಹಸ್ರನೇತ್ರಗಳಿಂದಲೂ ನಿನ್ನನ್ನು ನೋಡುತ ಲಿದ್ದಾಗ್ಯೂ ಇನ್ನೂ ತೃಪ್ತಿಪಡದೆ ಇದಾನೆ ಎಲೌ ರಂಭೆ ! ನೀನು ಇಲ್ಲಿಗೆ ಬಂದ ಕಾರಣವನ್ನು ದಯಮಾಡಿ ನನ್ನೊಡನೆ ಹೇಳು

೨೭ ರಂಭೆಯು ಹೇಳುತ್ತಾಳೆ —ಎಲೈ ಮಹಾರಾಜನೇ ! ಸಾವಧಾನ ದಿಂದ ನನ್ನ ಮಾತನ್ನು ಕೇಳು. ನಾನು ಬಂದ ಕಾರಣವನ್ನು ಕೇಳಿದೊಡನೆ ನನ್ನ ಮಾತನ್ನು ನಡೆಸು

೨೮-೩೭ ಬದರಿಕಾಶ್ರಮದಲ್ಲಿ ತಪೋನಿರತನಾಗಿರುವ ನಾರಾಯಣನೆಂಬ ಸಾಧ್ಯಋಷಿಯ ಮಗಳಾದ ಊರ್ವಶಿಯೆಂಬ ಸಖಿಯು ನನಗಿರುವಳು ಅವಳು ನಿನ್ನನ್ನು ಮಹೇಂದ್ರನ ಮನೆಯಲ್ಲೊಮ್ಮೆ ನೋಡಿ ಕಾಮಮೋಹಿತಳಾಗಿ ಆಗಿ ನಿಂದಲೂ ಅಸ್ವಸ್ಥಳಾಗಿದಾಳೆ ಯಾವಾಗಲೂ ಹಾಹಾಕಾರಪಡುತ್ತಾ ನೌಖ್ಯವಿಲ್ಲದೆ

ಸಾ ತ್ವಾಂ ದೃಷ್ಟ್ವಾ ಮಹೇಂದ್ರಸ್ಯ ಸದನೇ ಕಾಮಮೋಹಿತಾ ।
ನ ಶರ್ಮ ಲಭತೇ ಬಾಲಾ ಹಾಹೇತಿ ವದತೀ ಮುಹುಃ ॥ ೨೯ ॥

ಸಾ ತ್ವದರ್ಥಮನಂಗೇನ ಮಾರ್ಗಣೈರ್ಭೃಶಪೀಡಿತಾ ।
ಲಾವಣ್ಯಶೇಷಾ ಸಂವೃತ್ತಾ ದಿನೈಃ ಕತಿಪಯೈಃ ಶುಭಾ ॥ ೩೦ ॥

ಕ್ಷಾಮಕ್ಷಾಮಕಪೋಲಾ ಸಾ ತ್ವತ್ಸಮರ್ಪಿತಮಾನಸಾ ॥
ಮದನೇನಾಭಿತಪ್ತಾಂಗೀ ಮಾನಮುತ್ಸೃಜ್ಯ ಭಾಮಿನೀ ॥ ೩೧ ॥

ಪ್ರಸ್ಥಿತಾ ಸಾ ಮಯಾಸಾರ್ಧಂ ತವ ದರ್ಶನಲಾಲಸಾ ।
ಅಂತರಾ ನಾರದೇನೋಕ್ತಾ ಯತ್ರ ತ್ವಂ ಪ್ರಸ್ಥಿತಾ ಶುಭೇ ॥ ೩೨ ॥

ತತ್ರ ತ್ವಯಾ ತು ವಸ್ತವ್ಯಂ ಸಮಯೇನ ವರಾನನೇ ।
ಮೇಷದ್ವಯಂ ತು ಪುತ್ರತ್ವೇ ಯತ್ತ್ವಯಾ ಪರಿಕಲ್ಪಿತಂ ॥ ೩೩ ॥

ತತ್ತು ತೇ ಶಯನಾಭ್ಯಾಶೇ ಸ್ಥಾಪಯೇತ್ಸತತಂ ಯದಿ ।
ಸ ರಾಜಾ ಚಾರುಸರ್ವಾಂಗೀ ನಗ್ನೋ ನೇಕ್ಷ್ಯೇತ ಭಾಮಿನೀ ॥ ೩೪ ॥

---

ಇದಾಳೆ ಆವಳು ಕೆಲವು ದಿವಸಗಳಿಂದಲೂ ನಿನಗೋಸ್ಕರ ಮದನನ ಬಾಣಗಳಿಂದ ಪೀಡಿತಳಾಗಿ ಸೌಂದರ್ಯಮಾತ್ರವಿಶೇಷಳಾಗಿ ಕೃಶಳಾಗುತ್ತಿದಾಳೆ ನಿನ್ನಲ್ಲಿಯೇ ಕಟ್ಟಿ ಮನಸ್ಸುಳ್ಳ ಆ ಸುಕುಮಾರಿಯು ದಿನದಿನಕ್ಕೆ ಕೆನ್ನೆಗಳೆಲ್ಲಾ ಬತ್ತಿ ಮದನ ಬಾಣದಿಂದ ತಪ್ತಳಾಗಿ ಮಾನವನ್ನು ಬಿಟ್ಟುಬಿಟ್ಟು ನಿನ್ನನ್ನು ನೋಡಬೇಕೆಂಬ ಆಶೆಯಿಂದ ನನ್ನೊಡನೆ ಹೊರಟಳು ನಾವಿಬ್ಬರೂ ಬರುತ್ತಿರುವಾಗ ದಾರಿಯಲ್ಲಿ ನಾರದರು ಸಿಕ್ಕಿ ಎಲೌ ಊರ್ವಶಿಯೆ ! ನೀನೆಲ್ಲಿಗೆ ಹೊರಟಿರುವಿಯೋ ಆ ಸ್ಥಳದಲ್ಲಿ ಒಂದು ಸಮಯ (ಸಂಕೇತ) ವನ್ನನುಸರಿಸಿ ವಾಸಮಾಡಬೇಕೆಂಬುದಾಗಿ ಹೇಳಿ ಆ ಸಂಕೇತವನ್ನು ಹೀಗೆ ಹೇಳಿದನು —ನಿನ್ನಿಂದ ಎರಡು ಆಡುಗಳು ಪುತ್ರಭಾವದಿಂದ ಕಲ್ಪಿತವಾಗಿವೆಯಷ್ಟೆ ? ಆ ಎರಡು ಆಡುಗಳನ್ನೂ ನಿಮ್ಮ ಶಯನದ (ಹಾಸಿಗೆಯ) ಹತ್ತಿರ ಯಾವಾಗಲೂ ಕಟ್ಟಿಯೇ ಇರಬೇಕು, ಬಿಚ್ಚಕೂಡದು ಆ ರಾಜನು ಯಾವಾಗಲೂ ಬರೀಬೆತ್ತಲೆ (ನಗ್ನನಾಗಿ) ಇರಕೂಡದು, ನೀನು ಕಾಮಿಸದೆ ಇದ್ದ ಸಮಯದಲ್ಲಿ ನಿನ್ನೊಡನೆ ಸಂಭೋಗಮಾಡಕೂಡದು ನೀನು ಪ್ರತಿದಿನವೂ ತುಪ್ಪವನ್ನು ಮಾತ್ರ ಆಹಾರವಾಗಿ

ಮೈಥುನಂ ಚಾಪ್ಯಕಾಮಾಯಾ ನಾಸೌ ತೇ ಕರ್ತುಮರ್ಹತಿ ।
ಘೃತಾಹಾರಾ ತಥಾ ತತ್ರ ವಸ ತ್ವಂ ಸುಭಗೇ ಸದಾ ॥ ೩೫ ॥

ಏಕಸ್ಮಿನ್ನಪ್ಯತಿಕ್ರಾಂತೇ ಸಮಯೇ ಯದಿ ಪಾರ್ಥಿವಂ ।
ನ ತ್ಯಕ್ಷ್ಯಸಿ ತದಾ ಸೌಮ್ಯೇ ಶಿಲಾಭೂತಾ ಭವಿಷ್ಯಸಿ ॥ ೩೬ ॥

ಏತಾನಿ ಸಮಯಾನ್ಯುಕ್ತ್ವಾ ನಾರದೇನ ಸಖೀ ಮಮ ।
ತಾನಿ ತ್ವಂ ಪ್ರತಿಪದ್ಯಸ್ವ ಭಜಸ್ವ ಚ ಶುಭಾನನಾಂ ॥ ೩೭ ॥

॥ ಪುರೂರವಾ ಉವಾಚ ॥

ರಂಭೇ ತವಾದ್ಯ ವಾಕ್ಯೇನ ಅಮೃತೇನೇವ ಭಾಮಿನಿ ।
ಮೃತ್ಯೋರ್ವಶಮನುಪ್ರಾಪ್ತೋ ಜೀವಿತೋಽಸ್ಮಿ ಶುಭಾನನೇ ॥ ೩೮ ॥

ಮಮಾಪಿ ತತ್ಕೃತೇ ರಂಭೇ ಮದನಃ ಶರವೃಷ್ಟಿಭಿಃ ।
ದುನೋತಿ ಹೃದಯಂ ಸುಭ್ರೂರ್ದಿವಾರಾತ್ರಮತಂದ್ರಿತಃ ॥ ೩೯ ॥

ಸಾ ತ್ವಂ ಜೀವಯ ಮಾಂ ಶೀಘ್ರಂ ದರ್ಶಯಸ್ವ ವರಾಂಗನಾಂ ।
ಸ್ಥಾಸ್ಯಾಮಿ ಸಮಯೇ ತಸ್ಮಿನ್ಯಸ್ಮಿನ್ಮಾಂ ವಕ್ಷ್ಯಸೇ ಶುಭೇ ॥ ೪೦ ॥

---

ತೆಗೆದುಕೊಳ್ಳಬೇಕು ಈ ನಾಲ್ಕರಲ್ಲಿ ಯಾವುದೊಂದನ್ನು ತಪ್ಪಿದರೂ ನೀನು ಅವನನ್ನು ಬಿಟ್ಟು ಸ್ವರ್ಗಕ್ಕೆ ಹೊರಟುಹೋಗಬೇಕು ಹಾಗೆ ಮಾಡದೆ ಇರುವುದಾದರೆ ನೀನು ಕಲ್ಲಾಗಿಹೋಗುತ್ತೀಯೆ ಈರೀತಿ ಊರ್ವಶಿಯು ಸಮಯವನ್ನು ಕಾಪಾಡುತ್ತಾ ರಾಜನ ಬಳಿಯಲ್ಲಿ ಸುಖವಾಗಿರಬೇಕೆಂದು ಹೇಳಿ ಆ ದೇವಋಷಿಯು ಸ್ವರ್ಗಕ್ಕೆ ಪ್ರಯಾಣಮಾಡಿದನು

೩೮-೪೧ ಪುರೂರವನು ಹೇಳುತ್ತಾನೆ —ಎಲೌ ರಂಭೆಯೇ ! ನೀನು ಹೇಳಿದ ಅಮೃತಕ್ಕೆ ಸಮಾನವಾದ ವಾಕ್ಯದಿಂದ ಮೃತ್ಯುವಿನ ಬಾಯಿಗೆ ತುತ್ತಾಗುತ್ತಿದ್ದ ನಾನು ಬದುಕಿಕೊಂಡಂತಾಯಿತು ಎಲೌ ಮಂಗಳಾಂಗಿಯೇ ! ನಾನೂ ಸಹ ಈ ಊರ್ವಶಿಯಲ್ಲಿ ಮೋಹಿತನಾಗಿ ಅವಳಿಗೋಸ್ಕರ ಹಂಬಲಿಸುತ್ತಾ ಮನ್ಮಥನ ಬಾಣ ವೃಷ್ಟಿಗಳಿಗೆ ಸಿಕ್ಕಿ ನನ್ನ ಹೃದಯವೆಲ್ಲಾ ಕಲಕಿಹೋಗಿರುವುದು. ದಿವಾರಾತ್ರಿಯೂ ನಾನು ಅವಳನ್ನೇ ಸ್ಮರಿಸುತ್ತಾ ಇದೇನೆ ರಂಭೆಯೇ ! ಅವಳನ್ನು ನನಗೆ ತೋರಿಸಿ ನನ್ನ ಪ್ರಾಣವನ್ನುಳಿಸು ನೀನು ಯಾವ ಶಪಥ (ಸಮಯ) ವನ್ನು ಹೇಳಿದರೂ

**ಕೃತಂ ತಂ ಸಮಯಂ ವಿದ್ಧಿ ನಾರದೇನ ಯದೀರಿತಂ ।**
**ಅನಾಕ್ರಂದೇ ನಿಮಗ್ನಸ್ಯ ಮಮ ಕಾಮಮಹೋದಧೌ ॥ ೪೧ ॥**

**ಪ್ಲವೋ ಭವ ವಿಶಾಲಾಕ್ಷಿ ಪ್ರಾಣದಾ ಭವ ಸುಂದರೀ ।**
**॥ ಮಾರ್ಕಂಡೇಯ ಉವಾಚ ॥**
**ಏವಮುಕ್ತಾ ನರೇಂದ್ರೇಣ ರಂಭಾ ಚಾಂತರ್ದಧೇ ತದಾ ॥ ೪೨ ॥**

**ಉರ್ವಶೀಸಹಿತಾ ಚಾಥ ದರ್ಶಯಾಮಾಸ ಸಾ ನೃಪಂ ।**
**ಜಯೇತ್ಯುಕ್ತ್ವಾ ನರೇಂದ್ರಂತು ತದಾ ನಾರಾಯಣಾತ್ಮಜಾ ॥ ೪೩ ॥**

**ವ್ರೀಡಿತಾ ಪುರತಸ್ತಸ್ಥೌ ತಸ್ಯ ರಾಜ್ಞೋ ಮಹಾತ್ಮನಃ ।**
**ತಾಂ ದೃಷ್ಟ್ವಾ ಪ್ರೀತಿಮಾಪಾಥ ಸ ನರೇಂದ್ರೋ ಮಹಾದ್ಯುತಿಃ ॥ ೪೪ ॥**

**ಪುಲಕಾಂಚಿತಸರ್ವಾಂಗೋ ವರ್ಣಿತುಂ ಸಾ ನ ಶಕ್ಯತೇ ।**
**ಪಾಣಾವಾದಾಯ ತ್ರಪಿತಾಮುತ್ಸಂಗೇ ಚೋಪವೇಶಯತ್ ॥ ೪೫ ॥**

---

ಅದಕ್ಕೆಲ್ಲಾ ಒಪ್ಪಿಕೊಂಡು ನಾರದರ ಮಾತಿನಂತೆ ನಡೆಯಲಿಕ್ಕೂ ಸಿದ್ಧನಾಗಿದ್ದೇನೆ ಕಾಮನೆಂಬ ಮಹಾ ಆಳವಾದ ಸಮುದ್ರದಲ್ಲಿ ಮುಳುಗಿಹೋಗಿರುವ ನನಗೆ ನೀನು ತೆಪ್ಪದಂತೆ ಪರಿಣಮಿಸಿ ನನ್ನ ಪ್ರಾಣವನ್ನುಳಿಸೌ ಸುಂದರಿ !

೪೨-೪೪ ಮಾರ್ಕಂಡೇಯನು ಹೇಳುತ್ತಾನೆ —ಈರೀತಿ ಪುರೂರವನ ಬಾಯಲ್ಲಿ ಹೊರಟೊಡನೆಯೇ ಆ ರಂಭೆಯು ಅಂತರ್ಧಾನಳಾಗಿ ಪುನಃ ಒಂದು ಕ್ಷಣ ಮಾತ್ರದಲ್ಲಿ ಊರ್ವಶಿಯೊಡರೆ ರಾಜನಿಗೆ ಕಾಣಿಸಿಕೊಂಡು ಎದುರಿಗೆ ನಿಂತಳು ಆ ಕೂಡಲೆ ಊರ್ವಶಿಯು ಜಯಜಯಕಾರದೊಡನೆ ನಾಚಿಕೊಳ್ಳುತ್ತಾ ಆರಾಜನೆದುರಿಗೆ ನಿಂತಳು ಆಕೆಯನ್ನು ಕಂಡೊಡನೆಯೇ ಮಹಾ ಪ್ರಕಾಶಮಾನನಾದ ಪೂರೂರವ ಚಕ್ರವರ್ತಿಯು ಬಹಳ ಪ್ರೇಮವನ್ನು ಹೊಂದಿದನು

೪೫-೪೬. ಊರ್ವಶಿಯನ್ನು ನೋಡಿದೊಡನೆಯೇ ರಾಜನಿಗೆ ಮೈಯೆಲ್ಲಾ ರೋಮಾಂಚನವಾಗಲು ಆಗ ಅವನ ಸ್ಥಿತಿಯು ವರ್ಣಿಸಲು ಸಾಧ್ಯವಿಲ್ಲದಂತೆ ಇತ್ತು ಊರ್ವಶಿಯ ಕೈಯ್ಯನ್ನು ತನ್ನ ಕೈಯಿಂದ ಹಿಡಿದುಕೊಂಡು ತೊಡೆಯಮೇಲೆ ಕೂರಿಸಿ

**ರತ್ನಾಸನಂ ತಥಾ ಭೇಜೇ ರಂಭಾಽಪಿ ಸುಮನೋಹರಂ ।**
**ತತಶ್ಚೋವಾಚ ವಚನಂ ರಾಜಾ ಮುದಿತಮಾನಸಃ ॥ ೪೬ ॥**

**॥ ಪುರೂರವಾ ಉವಾಚ ॥**

**ಕಾಮದೇವಃ ಪ್ರಸನ್ನೋಽದ್ಯ ಮಮೋರ್ವಶಿ ವರಾನನೇ ।**
**ಜಾನಾಮ್ಯದ್ಯಾಧಿಕಂ ಸುಭ್ರೂಃ ಶಕ್ರಾದಾತ್ಮಾನಮಾತ್ಮನಾ ॥ ೪೭ ॥**

**ತ್ರೈಲೋಕ್ಯರಾಜ್ಯಲಾಭೇಽಪಿ ಕುತಃ ಸಾ ಮೇ ಶುಭೇ ರತಿಃ ।**
**ಆಜ್ಞಾಕಾರಿತ್ವಮಾಸಾದ್ಯ ಯಾ ತವಾದ್ಯ ಸುಲೋಚನೇ ॥ ೪೮ ॥**

**॥ ಮಾರ್ಕಂಡೇಯ ಉವಾಚ ॥**

**ಏವಂ ವದತಿ ಭೂಪಾಲೇ ಯಯೌ ರಂಭಾ ವರಾನನಾ ।**
**ಕ್ಷಣೇನ ಮೇಷಸಹಿತಾ ಪುನಃ ಪ್ರಾಪ್ತಾ ನೃಪಾಂತಿಕಂ ॥ ೪೯ ॥**

**ಮೇಷೌ ದತ್ವಾ ನರೇಂದ್ರಸ್ಯ ರಾಜಾನಂ ವಾಕ್ಯಮಬ್ರವೀತ್ ।**
**॥ ರಂಭೋವಾಚ ॥**
**ಯಾಸ್ಯಾಮಿ ಲಂಕಾಂ ರಾಜೇಂದ್ರ ತತ್ರ ಪ್ರಾಣೇಶ್ವರೋ ಮಮ ॥ ೫೦ ॥**

---

ಕೊಂಡನು ರಂಭೆಯೂ ಸಹ ಸುಂದರವಾದ ರತ್ನಾಸನದಲ್ಲಿ ಕುಳಿತುಕೊಂಡಳು ಆಗ ಪರಮಸಂತೋಷಭರಿತನಾದ ರಾಜನು ಈ ಮಾತನ್ನು ಹೇಳಿದನು

೪೭-೪೮ ಪುರೂರವನು ಹೇಳುತ್ತಾನೆ—ಸುಂದರಮುಖಿಯಾದ ಊರ್ವಶಿಯೇ! ಇಂದು ಕಾಮದೇವನು ನನಗೆ ಪ್ರಸನ್ನನಾದನು ಈಗ ನಾನು ಇಂದ್ರನಿಗಿಂತ ಹೆಚ್ಚಿನವನೆಂದು ತಿಳಿದುಕೊಂಡಿದ್ದೇನೆ ನಿನ್ನ ಆಜ್ಞಾಧಾರಕನಾದ ನಾನು ನಿನ್ನ ಸಂಬಂಧಲಾಭದಿಂದ ತ್ರೈಲೋಕ್ಯರಾಜ್ಯ ಲಾಭದಲ್ಲಿಯೂ ಸಹ ಆಸಕ್ತನಾಗಲಾರೆನು

೪೯ ಈರೀತಿ ಮಾತನಾಡುತ್ತಿರುವಷ್ಟರಲ್ಲಿಯೇ ರಂಭೆಯು ಪುನಃ ಅಂತರ್ಧಾನಳಾಗಿ ಮತ್ತೊಂದು ಕ್ಷಣದೊಳಗಾಗಿ ಎರಡು ಆಡುಗಳ ಸಹಿತವಾಗಿ ಮಹಾರಾಜನೆದುರಿಗೆ ಬಂದು ಮಹಾರಾಜನಿಗೆ ಆ ಎರಡು ಆಡುಗಳನ್ನೂ ಕೊಟ್ಟು ಥೊರೆಯೊಡನೆ ಈ ಮಾತನ್ನು ಹೇಳಿದಳು

೫೦-೫೧ ರಂಭೆಯು ಹೇಳುತ್ತಾಳೆ — ಮಹಾರಾಜ! ಇನ್ನು ನಾನು ಲಂಕಾಪಟ್ಟಣಕ್ಕೆ ಹೊರಡುತ್ತೇನೆ. ಅಲ್ಲಿ ನನ್ನ ಪ್ರಾಣಪ್ರಿಯನು ನನ್ನ ಆಗಮನವನ್ನು

ಮತ್ಪ್ರತೀಕ್ಷಃ ಸ್ಥಿತಃ ಶ್ರೀಮಾನ್ಧನದಸ್ಯಾತ್ಮಸಂಭವಃ ।
ನಲಕೂಬರನಾಮ್ನಾಽಸೌ ತ್ರೈಲೋಕ್ಯವಿದಿತಃ ಪ್ರಭೋ ॥ ೫೧ ॥

ಯಥಾ ಚೇಯಂ ಸಖೀ ಮಹ್ಯಂ ನೋತ್ಕಂಠಾಂ ಕುರುತೇ ಶುಭಾ ।
ಸಖೀಜನಸ್ಯ ಸ್ವರ್ಗ್ಯಸ್ಯ ತಥಾ ಕಾರ್ಯಂ ತ್ವಯಾನಘ ॥ ೫೨ ॥

॥ ಪುರೂರವಾ ಉವಾಚ ॥

ಯತಿಷ್ಯೇಽಹಂ ತಥಾ ಕರ್ತುಂ ನಿರ್ವೃತಾ ಭವ ಮಾನದೇ ।
ರತ್ನಾನ್ಯೇತಾನ್ಯುಪಾದಾಯ ನಿರ್ಗಚ್ಛಸ್ವ ಯಥಾಸುಖಂ ॥ ೫೩ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ತತೋ ರಂಭಾ ನೃಪತೇಃ ಪ್ರೀತಿಕಾರಣಾತ್ ।
ರತ್ನಾನ್ಯುಪಾದಾಯ ಯಯೌ ಖೇನ ಲಂಕಾಂ ಮಹಾಪುರೀಂ ॥ ೫೪ ॥

---

ನಿರೀಕ್ಷಿಸುತ್ತಾ ಇರುತ್ತಾನೆ ಆ ನನ್ನ ಗಂಡನ ಪರಿಚಯುವನ್ನು ನಿನಗೆ ತಿಳಿಸುವೆನು, ಕೇಳು ಕುಬೇರನ ಮಗ ತ್ರಿಲೋಕಪ್ರಸಿದ್ಧನಾದ ನಳಕೂಬರನೆಂಬುವನೇ ನನ್ನ ಪತಿಯು.

೫೨ ಎಲೈ ರಾಜೇಂದ್ರನೇ! ಮಹಾರಾಣಿಯರಿಗೆ ಆಪ್ತಸಖಿಯರೆಂಬುವರು ಸ್ವರ್ಗಸದೃಶರು ಈ ನನ್ನ ಸಖಿಯು ನನ್ನ ವಿರಹದಿಂದ ವ್ಯಸನಪಡದೆ ಇರುವಹಾಗೆ ನೀನು ಇವಳನ್ನು ಸುಖವಾಗಿಟ್ಟುಕೊಂಡಿರಬೇಕು

೫೩ ಪುರೂರವನು ಹೇಳುತ್ತಾನೆ —ಎಲೌ ರಂಭೆಯೇ! ನೀನು ಹೇಳಿದಂತೆ ನಡೆಯಲು ಪ್ರಯತ್ನಪಡುತ್ತೇನೆ ನೀನು ಸುಖವಾಗಿ ಇಲ್ಲಿಂದ ಪ್ರಯಾಣ ಮಾಡು ನಾನು ನಿನಗೆ ಪಾರಿತೋಷಕವಾಗಿ ಕೊಡುವ ಈ ರತ್ನಗಳನ್ನು ಸ್ವೀಕರಿಸಿ ಊರಿಗೆ ಹೋಗಿ ಬಾ

೫೪ ಮಾರ್ಕಂಡೇಯನು ಹೇಳುತ್ತಾನೆ —ಈರೀತಿ ಹೇಳಲ್ಪಟ್ಟ ರಂಭೆಯು ರಾಜನ ಪ್ರೀತಿಗೋಸ್ಕರ ಸಂತೋಷಪಟ್ಟು, ಆತನು ಕೊಟ್ಟ ರತ್ನಗಳನ್ನು ಸ್ವೀಕರಿಸಿ ಅಂತರಿಕ್ಷಮಾರ್ಗದಿಂದ ಹೊರಟು ಲಂಕಾಪಟ್ಟಣಕ್ಕೆ ಪ್ರಯಾಣಬೆಳೆಸಿದಳು

ಲಬ್ಧ್ವೋರ್ವಶೀಂ ನರೇಂದ್ರೋಽಪಿ ರೇಮೇ ಸ ಸಹಿತಸ್ತಯಾ ।
ಯಥಾ ಶಚ್ಯಾ ಸುರಾರಿಘ್ನೋ ಬಲವಾನ್ಪಾಕಶಾಸನಃ ॥ ೫೫ ॥

ಸಂನ್ಯಸ್ತಭಾರಃ ಸತು ಮಂತ್ರಿಮುಖ್ಯಂ
ರೇಮೇ ತಯಾ ಯಾದವಸಿಂಹಮುಖ್ಯ ।
ಲಕ್ಷ್ಮ್ಯಾ ಸಮೇತೋ ಭಗವಾನನಂತೋ
ಯಥಾ ಸ ದೇವೋ ಭುವನಸ್ಯ ಗೋಪ್ತಾ ॥ ೫೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಉರ್ವಶೀ ಪುರೂರವ ಸಮಾಗಮೋ ನಾಮ
ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

---

೫೫ ೫೬ ಪೂರೂರವಮಹಾರಾಜನು ಕೂಡ ಊರ್ವಶಿಯನ್ನು ಹೊಂದಿದವನಾಗಿ ದೇವಲೋಕದಲ್ಲಿ ದೇವೇಂದ್ರನು ಶಚೀದೇವಿಯಿಂದ ಹೇಗೆ ಸುಖಸಂತೋಷವನ್ನು ಪಡೆಯುತ್ತಿರುವನೋ ಅದೇಮೇರೆ ಆ ಊರ್ವಶಿಯೊಡನೆ ಕ್ರೀಡಿಸಿದನು ಆ ಪುರೂರವನು ಊರ್ವಶಿಯಲ್ಲಿ ಅತ್ಯಾಸಕ್ತನಾಗಿ ಲೋಕಸಂರಕ್ಷಕನಾದ ಭಗವಂತನು ಮಹಾಲಕ್ಷ್ಮಿಯೊಡನೆ ಹೇಗೆ ಭೋಗಭಾಗ್ಯಗಳನ್ನನುಭವಿಸುತ್ತಿರುವನೋ ಅದರಂತೆ ಆ ತನ್ನ ಪ್ರಾಣಕಾಂತೆಯೊಡನೆ ವಿವಿಧ ರತಿಕ್ರೀಡೆಯನ್ನನುಭವಿಸಿದನು ಈಕೆಯಲ್ಲಿ ಕ್ರೀಡಿಸುವಾಗ ಯಾವ ಇತರ ಚಿಂತೆಗಳನ್ನೂ ಮನಸ್ಸಿಗೆ ಹಚ್ಚಿಕೊಳ್ಳದಂತೆ ಆ ರಾಜನು ರಾಜ್ಯಭಾರವನ್ನೂ ಸಹ ಮಂತ್ರಿಗಳ ವಶಕ್ಕೆ ಕೊಟ್ಟು ಸ್ವೇಚ್ಛೆಯಾಗಿ ವಿಹರಿಸುತ್ತಿದ್ದನೆಂಬಲ್ಲಿಗೆ,

ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಊರ್ವಶೀ-ಪುರೂರವ ಸಮಾಗಮವೆಂಬ
- ಹೆಸರಿನ ಒಂದು ನೂರ ಮೂವತ್ತಮೂರನೆಯ ಅಧ್ಯಾಯವು
ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಪ್ರಾಸಾದೇಷು ವಿಚಿತ್ರೇಷು ತಥಾ ಮಣಿಗೃಹೇಷು ಚ ।
ಪುಷ್ಪವೇಶ್ಮಸು ರಮ್ಯೇಷು ತಥಾ ವಸ್ತ್ರಗೃಹೇಷು ಚ ॥ ೧ ॥

ರತ್ನವೇಶ್ಮಸು ಮುಖ್ಯೇಷು ತಥಾ ಚಿತ್ರಗೃಹೇಷು ಚ ।
ಪರ್ವತಾನಾಂ ಚ ದುರ್ಗೇಷು ನದೀನಾಂ ಪುಲಿನೇಷು ಚ ॥ ೨ ॥

ಪದ್ಮಿನೀಷು ಚ ಫುಲ್ಲಾಸು ತಥಾ ಚೋತ್ಪಲಿನೀಷು ಚ ।
ಶಯ್ಯಾಸು ಚ ಪರಾರ್ಧ್ಯಾಸು ಪುಷ್ಪಶಯ್ಯಾಸು ಚಾಪ್ಯಥ ॥ ೩ ॥

---

### ಒಂದು ನೂರ ಮೂವತ್ತನಾಲ್ಕನೆಯ ಅಧ್ಯಾಯವು.

೧-೫೫ ಮಾರ್ಕಂಡೇಯರು ಹೇಳುತ್ತಾರೆ —ಪುರೂರವ ಚಕ್ರವರ್ತಿಯು ಊರ್ವಶಿಯೊಡನೆ ಚಿತ್ರವಿಚಿತ್ರನಾಗಿ ಸಂಭೋಗಮಾಡಿದ ರೀತಿಯು ಈ ಅಧ್ಯಾಯ ದಲ್ಲಿ ಹೇಳಲ್ಪಟ್ಟಿದೆ

ವಿಚಿತ್ರವಾದ ಮಹಡೀಮನೆಗಳಲ್ಲಿಯೂ, ರತ್ನಗೃಹಗಳಲ್ಲಿಯೂ, ಪುಷ್ಪೋದ್ಯಾನ ಗಳಲ್ಲಿಯೂ, ಬಟ್ಟೆಯ ಗುಡಾರಗಳಲ್ಲಿಯೂ, ಮುಖ್ಯಮುಖ್ಯವಾದ ನವರತ್ನಪ್ರಾಸಾದ ಗಳಲ್ಲಿಯೂ, ವಿಚಿತ್ರವಿಚಿತ್ರವಾಗಿ ಅಲಂಕರಿಸಲ್ಪಟ್ಟ ಚಿಕ್ಕಮನೆಗಳಲ್ಲಿಯೂ, ಬೆಟ್ಟ ಗಳಲ್ಲಿರುವ ದುರ್ಗಗಳಲ್ಲಿಯೂ, ಹೊಳೆಯ ಮರಳುರಾಶಿಗಳಮೇಲೂ, ಅರಳಿದ ತಾವರೆ ಹೂಗಳು, ಅರಳಿದ ಕನ್ನೈದಿಲೆ ಹೂಗಳಿರುವ ಸ್ಥಳಗಳಲ್ಲಿಯೂ, ಪರಮಶ್ರೇಷ್ಠವಾದ

ರಮಯಾಮಾಸ ತಾಂ ದೇವೀಂ ತಥಾ ವಿರಚಿತೇಷು ಚ ।
ಗೃಹೇಷು ಬಹುರತ್ನೇಷು ಧೂಪೋದ್ಗಾರಿಷು ಪಾರ್ಥಿವ ॥ ೪ ॥

ರೇಮೇ ಸ ತು ತಯಾ ಸಾರ್ಧಂ ಮಾನಸೇಷು ಪುನಃಪುನಃ ।
ರಮಯಂಸ್ತಾಂ ವರಾರೋಹಾಂ ನ ತೃಪ್ಯತಿ ಸ ನಿತ್ಯಶಃ ॥ ೫ ॥

ನಿಶಾಸ್ವಪಿ ಚ ಸ ಚಂದ್ರಾಸು ಚಂದ್ರಕಾಂತತರಂ ಮುಖಂ ।
ಪಪೌ ತಸ್ಯಾ ಯಥಾಕಾಮಂ ನರೇಂದ್ರಃ ಸ ನರಾಧಿಪ ॥ ೬ ॥

ನಿಶಾಸು ನಷ್ಟಚಂದ್ರಾಸು ತನ್ಮುಖೋದ್ಯೋತಿತಪ್ರಭೇ ।
ದೇಶೇ ತಾಂ ರಮಯಾಮಾಸ ರಾಜಾ ರಾಜೀವಲೋಚನಃ ॥ ೭ ॥

ವರ್ಧಯಂತೀ ನರೇಂದ್ರಸ್ಯ ಸಾ ತು ಕಾಮಂ ದಿನೇದಿನೇ ।
ಅದೃಷ್ಟಪೂರ್ವೇಣ ಶುಭಾ ಭವತ್ಯಾಯತಲೋಚನಾ ॥ ೮ ॥

---

ಹೂವಿನ ಹಾಸಿಗೆಗಳಲ್ಲಿಯೂ, ಎತ್ತರವಾದ ಸುಪ್ಪತ್ತಿಗೆಗಳಮೇಲೂ, ತನ್ನ ಮನಸ್ಸಿಗೆ ಒಪ್ಪುವಂತೆ ರಚಿತವಾದ ಬಹುರತ್ನಗಳಿಂದಲಂಕೃತವಾದ ಧೂಪದ ಸುವಾಸನೆಗಳಿಂದೊಡಗೂಡಿದ ಮನೆಗಳಲ್ಲಿಯೂ ಸಹ ಆ ರಾಜನು ಊರ್ವಶಿಯೊಡನೆ ಕಲೆತು ಮತ್ತೆ ಮತ್ತೆ ರತಿಕ್ರೀಡೆಗಳನ್ನು ಮಾಡುತ್ತಿದ್ದನು ಎಷ್ಟುಬಾರಿ ಸಂಭೋಗಮಾಡಿದರೂ ಪ್ರತಿದಿನವೂ ತಪ್ಪದೆ ಕ್ಷಣೇಕ್ಷಣೇ ಅವಳೊಡನೆ ಸುರತಸುಖವನ್ನನುಭವಿಸುತ್ತಿದ್ದರೂ ಪುರೂರವನಿಗೆ ತೃಪ್ತಿಯಾಗುತ್ತಲೇ ಇರಲಿಲ್ಲ

೬ ಎಲೈ ವಜ್ರಮಹಾರಾಜನೇ ಕೇಳು ! ಆ ಮಹಾರಾಜನು ಚಂದ್ರನೊಡನೆ ಕೂಡಿದ ಒಳ್ಳೆಯ ಬೆಳದಿಂಗಳ ರಾತ್ರಿಗಳಲ್ಲಿ ಚಂದ್ರನಿಗಿಂತ ಸುಂದರವಾದ ಆ ಊರ್ವಶಿಯ ಮುಖವನ್ನು ಯಥೇಚ್ಛವಾಗಿ ಪಾನಮಾಡಿದನು (ಚುಂಬಿಸಿದನು )

೭-೮. ಬೆಳದಿಂಗಳಿಲ್ಲದೆ ಕತ್ತಲೆಯಾಗಿದ್ದ ರಾತ್ರಿಗಳಲ್ಲಿ ಆ ಊರ್ವಶಿಯ ಮುಖ ಚಂದ್ರನಿಂದುತ್ಪತ್ತಿಯಾದ ಬೆಳಕಿರುವ ಪ್ರದೇಶಗಳಲ್ಲಿಯೇ ಪುರೂರವನು ಊರ್ವಶಿಯನ್ನು ಸಂಭೋಗಮಾಡಿದನು. ಆ ಊರ್ವಶಿಯಾದರೋ ಆ ತನ್ನ ಪ್ರಿಯ ಕಾಂತನ ಕಾಮವನ್ನು ದಿನೇದಿನೇ ಉಜ್ವಲಗೊಳಿಸುತ್ತಾ ಹಿಂದೆಂದೂ ಕಾಣದ ಸುಖಗಳನ್ನು ಆ ಮಹಾರಾಜನಿಗೆ ಉಂಟುಮಾಡುತ್ತಿದ್ದಳು ಆ ಕಾಮಿನಿಯು ದೊರೆಗೆ

ರಾಜ್ಞೋ ದೃಢಂ ಸಾ ದಯಿತಾ ತಸ್ಯಾಶ್ಚ ದ್ವಿಗುಣೋ ನೃಪಃ ।
ತಯೋಃಸೌ ಪ್ರೀಯತೇ ರಾಜಾ ತೇನ ಸಾಪಿ ವರಾಂಗನಾ ॥ ೯ ॥

ವರಚಂದನದಿಗ್ಧಾಂಗೌ ನಾನಾಭರಣಭೂಷಿತೌ ।
ರೇಮಾತೇ ದಂಪತೀ ಹೃಷ್ಟೌ ನಾನಾರತ್ನಾವಭೂಷಿತೌ ॥ ೧೦ ॥

ಅಲಂಕರೋತಿ ರಾಜಾಸ ಸ್ವಯಮೇವ ಕದಾಚನ ।
ತಯಾಲಂಕ್ರಿಯಮಾಣಶ್ಚ ಪ್ರೀತಿಮಾಪ್ನೋತ್ಯನುತ್ತಮಾಂ ॥ ೧೧ ॥

ವರೇಷು ತೌ ವಿಚಿತ್ರೇಷು ರೇಮಾತೇ ಮುದಿತೌ ಭೃಶಂ ।
ಕೇಶಾನ್ಸಂಶೋಧಯಂತೌ ತೌ ಕುಸುಮೈಸ್ತು ಪರಸ್ಪರಂ ॥ ೧೨ ॥

ಉರ್ವಶ್ಯಭ್ಯುದಿತಂ ಪುಷ್ಪಂ ತಥಾ ಚ ಗ್ರಥಿತಂ ಪುನಃ ।
ಧಾರಯಾಮಾಸ ಶಿರಸಾ ಪ್ರೇಮ್ಣಾ ಪಾರ್ಥಿವಸತ್ತಮಃ ॥ ೧೩ ॥

ಪತ್ರಚ್ಛೇದೇನ ಯಾಂಶ್ಚಕ್ರೇತಿಲಕಾನ್ಸ ನರಾಧಿಪಃ ।
ತಾಂಶ್ಚ ಸಾ ಧಾರಯಾಮಾಸ ಲಲಾಟೇ ಚಾರುಹಾಸಿನೀ ॥ ೧೪ ॥

---

ದೃಢವಾದ ತನ್ನ ಪ್ರೇಮವನ್ನು ಸೂರೆಗೊಡುವಳು ಆ ರಾಜನು ಅದಕ್ಕಿಮ್ಮಡಿಯಾದ ಪ್ರೇಮವನ್ನು ಅವಳಿಗೆ ತೋರಿಸುವನು ಹೀಗೆ ಒಬ್ಬರಿಗೊಬ್ಬರು ಕಡಿಮೆ ಇಲ್ಲದೆ ಪ್ರೀತಿಯನ್ನು ಹೆಚ್ಚುಮಾಡಿಕೊಳ್ಳುತ್ತಿದ್ದರು

೧೦-೧೪ ಅವರಿಬ್ಬರೂ ಶ್ರೇಷ್ಠವಾದ ಪರಿಮಳಗಂಧವನ್ನು ಮೈಗೆಲ್ಲಾ ಲೇಪಿಸಿಕೊಂಡು ನಾನಾವಿಧವಾದ ಆಭರಣಗಳನ್ನು ಧರಿಸಿದವರಾಗಿ ಪರಮಸಂತೋಷದಿಂದ ಕ್ರೀಡಿಸುತ್ತಿದ್ದರು ಪುರೂರವನು ತಾನೇ ಊರ್ವಶಿಗೆ ಅಲಂಕಾರಮಾಡುವನು ಅದರಂತೆ ಊರ್ವಶಿಯು ರಾಜನನ್ನು ತಾನಾಗಿ ಅಲಂಕರಿಸಿದಾಗ ರಾಜನು ಬಹಳ ಸಂತೋಷವನ್ನು ಹೊಂದುತ್ತಿದ್ದನು. ಅವರಿಬ್ಬರೂ ಶ್ರೇಷ್ಠವಾಗಿಯೂ, ವಿಚಿತ್ರವಾಗಿಯೂ ಇರುವ ಸ್ಥಳಗಳಲ್ಲೆಲ್ಲಾ ವಿಹರಿಸುತ್ತಿದ್ದರು ಹೂಗಳನ್ನು ಒಬ್ಬರಿಗೊಬ್ಬರು ಮುಡಿಸುತ್ತಿದ್ದರು ವರ್ಶೂಶಿಯು ಆಗತಾನೇ ಅರಳಿದ ಹೂಗಳನ್ನು ಕೊಯ್ದು ಅದನ್ನು ಚೆನ್ನಾಗಿ ನಾರಿನಿಂದ ಕಟ್ಟಿಟ್ಟಿರುವುದನ್ನು ನೋಡಿ ಧೊರೆಯು ಅದನ್ನು ತಾನು ತೆಗೆದುಕೊಂಡು ಊರ್ವಶಿಯ ತಲೆಗೆ ಮುಡಿಸುತ್ತಲಿದ್ದನು. ಊರ್ವಶಿಯ ಹಣೆಗೆ ಪೂರೂರವನು ಪತ್ರದಳದಿಂದ ತಿಲಕವನ್ನು ತೆಗೆಯುತ್ತಿದ್ದನು ಅದನ್ನು ಊರ್ವಶಿಯು ಸಂತೋ

ಏವಂ ಸಂಕ್ರೀಡತೋ ರಾಜ್ಞಸ್ತಯಾ ಸಹ ಸುಮಧ್ಯಯಾ ।
ಬಭೂವುಸ್ತನಯಾಃ ಪಂಚ ನಾಮತಸ್ತಾನ್ನಿಬೋಧ ಮೇ　　॥ ೧೫ ॥

ಆಯುರ್ಜ್ಯೇಷ್ಠಸ್ತತೋ ಧೀಮಾಂಸ್ತತಶ್ಚಾನ್ಯಸ್ತ್ವನಾಮಯಃ ।
ಅಯುತಾಯುಶ್ಚತುರ್ಥೋಽಭೂಚ್ಛತಾಯುಶ್ಚೈವ ಪಂಚಮಃ　　॥ ೧೬ ॥

ಏವಂ ತಸ್ಯಾಃ ಪ್ರಸೂತಾ ವೈ ಯಾತಿ ಕಾಲೇ ಮನೋಹರೇ　　॥ ೧೭ ॥

ಗಂಧರ್ವಮುಖ್ಯಾಸ್ತು ತದಾ ಸಮೇತಾ
ತಯಾ ವಿಹೀನಾ ಭೃಶಮುತ್ಸುಕಾಸ್ತು ।
ತದಾಗಮಾಯಾಥ ಸುರೇಂದ್ರಲೋಕೇ
ಮಂತ್ರಂ ತದಾ ಚಕ್ರುರದೀನಸತ್ತ್ವಾಃ　　॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಉರ್ವಶೀಸಂಭೋಗವರ್ಣನೋನಾಮ
ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

---

ಷದಿಂದ ನಗುನಗುತ್ತಾ ಇಡಿಸಿಕೊಳ್ಳುತ್ತಿದ್ದಳು ಈರೀತಿ ಆಕೆಯೊಡನೆ ಕ್ರೀಡಿಸುತ್ತಿದ್ದ ಮಹಾರಾಜನಿಗೆ ಆಕೆಯ ಹೊಟ್ಟೆಯಲ್ಲಿ ಐದುಮಂದಿ ಗಂಡುಮಕ್ಕಳಾದರು ಆ ಐದು ಮಂದಿ ಮಕ್ಕಳ ಹೆಸರನ್ನು ಹೇಳುವೆನು ಕೇಳು ಹಿರಿಯವನೇ ಆಯುಸ್ಸು, ಎರಡ ನೆಯವನ ಹೆಸರು ಧೀಮಂತ, ಮೂರನೆಯವನು ಆರೋಗ್ಯ, ನಾಲ್ಕನೆಯವನು ಅಚ್ಯುತಾಯು (ಚಿರಂಜೀವಿ), ಐದನೆಯವನು ಶತಾಯುವೆಂಬುವನು ಈರೀತಿ ಅವಳ ಹೊಟ್ಟೆಯಲ್ಲ ಕಾಲಕ್ರಮವನ್ನನುಸರಿಸಿ ಮಕ್ಕಳಾದರು ಭೂಲೋಕದಲ್ಲಿ ಹೀಗೆ ನಡೆದಿರಲು ಅತ್ತಕಡೆ ದೇವಲೋಕದಲ್ಲಿದ್ದ ಮುಖ್ಯಮುಖ್ಯರಾದ ಗಂಧರ್ವರೆಲ್ಲಾ ಸಭೆಸೇರಿ ಬಹಳ ದಿನಗಳಿಂದ ಊರ್ವಶಿಯು ತಮ್ಮಜತೆಯನ್ನು ಬಿಟ್ಟುಹೋಗಿ ಇನ್ನೂ ಬರದೇ ಇದ್ದುದರಿಂದ ವ್ಯಸನಾಕ್ರಾಂತರಾಗಿ ಆ ಧೈರ್ಯಶಾಲಿಗಳೆಲ್ಲರೂ ಮಂತ್ರಾಲೋಚನೆ ಮಾಡಿದರೆಂಬಲ್ಲಿಗೆ,

ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂ
ಡೇಯ ವಜ್ರಸಂವಾದರೂಪವಾದ ಊರ್ವಶೀ ಸಂಭೋಗವರ್ಣನೆ ಯೆಂಬ
ಹೆಸರಿನ ಒಂದು ನೂರ ಮೂವತ್ತನಾಲ್ಕನೇ ಅಧ್ಯಾಯವು
ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚತ್ರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಉರ್ವಶ್ಯಾಗಮನೇ ಯತ್ನಂ ಚಕ್ರುಸ್ತೇ ಮಂತ್ರಮುತ್ತಮಂ ।**
**ಗಂಧರ್ವಸ್ತೂಗ್ರಸೇನಾಖ್ಯಸ್ತದಾ ಮಂತ್ರಮಭಾಷತ ॥ ೧ ॥**

॥ ಉಗ್ರಸೇನ ಉವಾಚ ॥

**ಸಮಯೇಽವಸ್ಥಿತಾ ತಸ್ಮಿನ್ನುರ್ವಶೀ ಚಾರುಭೂಷಣಾ ।**
**ವೃತ್ತಾಂತಸಮಯಂ ಸಾ ತು ರಾಜಾನಂ ತ್ಯಕ್ಷ್ಯತೇ ಚ ತಂ ॥ ೨ ॥**

### ಒಂದು ನೂರ ಮೂವತ್ತೈದನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಊರ್ವಶಿಯನ್ನು ದೇವಲೋಕಕ್ಕೆ ಹೇಗೆ ಬರಮಾಡಬೇಕೆಂಬ ವಿಚಾರದ ಚರ್ಚೆಗಾಗಿ ದೇವಲೋಕದಲ್ಲೊಂದು ಗಂಧರ್ವರ ಮಂತ್ರಾಲೋಚನಾಸಭೆಯು ನೆರೆಯಿತು. ಆ ಸಭೆಯಲ್ಲಿ ಉಗ್ರಸೇನನೆಂಬ ಗಂಧರ್ವನು ಹೀಗೆ ಭಾಷಣಮಾಡಿದನು.

೨-೨ ಉಗ್ರಸೇನನು ಹೇಳಿದನು -ಮನೋಹರಭೂಷಣಳಾದ ಊರ್ವಶಿಯು ಆ ರಾಜನಲ್ಲಿ ಒಂದು ಸಮಯ ನಿಬಂಧನೆಯನ್ನು ಮಾಡಿಕೊಂಡಿದಾಳೆ ಆ ನಿಬಂಧನೆಯು ಅತಿಕ್ರಾಂತವಾದರೆ ಆ ಸಮಯದಲ್ಲಿ ಅವಳು ಅವನನ್ನು ಬಿಟ್ಟು ಹೊರಟು ಹೋಗುತ್ತಾಳೆ ಆ ಸಮಯವನ್ನು ನಾನು ತಿಳಿದಿರುತ್ತೇನಾದ್ದರಿಂದ ಇನ್ನೊಬ್ಬರ

ತಮಹಂ ವೇದ್ಮಿ ಸಮಯಂ ತತ್ರ ಯಾಸ್ಯಾಮಿ ಚಾನಘ ।
ಯುಷ್ಮತ್ಕಾರ್ಯಂ ಕರಿಷ್ಯಾಮಿ ಸಸಹಾಯೋ ನ ಸಂಶಯಃ　　　॥ ೩ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ಯಯೌ ತತ್ರ ಯತ್ರಾಸೌ ನೃಪತಿಃ ಸ್ಥಿತಃ ।
ರಾತ್ರೌ ಜಹಾರ ಮೇಷಂ ಚ ಮಾಯಯಾ ಸ ನರಾಧಿಪ　　　॥ ೪ ॥

ಮೇಷಂ ಜ್ಞಾತ್ವಾ ಹೃತಂ ದೇವೀ ರಾಜಾನಮಿದಮಬ್ರವೀತ್ ।
ಮೇಷೋ ಹೃತೋ ಮಹೀಪಾಲ ಕೇನಾಪ್ಯದ್ಯ ಸುತೋ ಮಮ　　　॥ ೫ ॥

ದ್ವಿತೀಯಶ್ಚ ಹೃತೋ ರಾಜಂಸ್ತಮಾನಯ ಸುತಂ ಮಮ ।
ಏವಮುಕ್ತಸ್ತಯಾ ರಾಜಾ ನಗ್ನ ಏವಾಥ ಸಂಭ್ರಮಾತ್　　　॥ ೬ ॥

ಉತ್ಥಾಯಾನ್ವೇಷಣಂ ಚಕ್ರೇ ಮೇಷಯೋಃ ಪುರುಷರ್ಷಭ ।
ಅಥಾಪಶ್ಯತ ಸಾ ನಗ್ನಂ ರಾಜಾನಮಸಿತೇಕ್ಷಣಾ　　　॥ ೭ ॥

---

ಸಹಾಯವನ್ನು ಪಡೆದು ನಿಸ್ಸಂಶಯವಾಗಿ ನಿಮ್ಮ ಕಾರ್ಯವನ್ನು ಮಾಡಿಕೊಂಡು ಬರುತ್ತೇನೆ

೪ ಮಾರ್ಕಂಡೇಯರು ಹೇಳುತ್ತಾರೆ —ಕೇಳಯ್ಯ ವಜ್ರರಾಜ ! ಈರೀತಿ ಸಭೆಯಲ್ಲಿ ಮಾತನಾಡಿ ಆ ಉಗ್ರಸೇನನು ಆ ರಾಜನು (ಪುರೂರವನು) ಎಲ್ಲಿದ್ದನೋ ಅಲ್ಲಿಗೆ ಹೋಗಿ ರಾತ್ರಿಕಾಲದಲ್ಲಿ ಮಾಯೆಯಿಂದ ಶಯನ ಸಮೀಪದಲ್ಲಿ ಕಟ್ಟಿದ ಆಡನ್ನು ಅಪಹರಿಸಿಬಿಟ್ಟನು

೫-೬ ಊರ್ವಶೀದೇವಿಯು ಮೇಷವು ಇಲ್ಲದುದನ್ನು ನೋಡಿ ರಾಜನನ್ನು ಕುರಿತಿಂತೆಂದಳು —ಎಲೈ ರಾಜನೇ ! ನನ್ನ ಮಗನಾದ ಆಡು ಯಾರಿಂದಲೋ ಅಪಹೃತವಾಗಿದೆ ಎರಡನೇ ಆಡೂ ಸಹ ಚೋರಿಯಾಗಿದೆ ಆ ನನ್ನ ಮಕ್ಕಳನ್ನು ತಂದುಕೊಡೆನ್ನಲು ಈ ಮಾತನ್ನು ಕೇಳಿ ಪುರೂರವನು ಗಾಬರಿಯಿಂದ ಬರೀಬೆತ್ತಲೆಯಾಗಿಯೇ ಹಾಸಿಗೆಯನ್ನು ಬಿಟ್ಟು ಮೇಲಕ್ಕೆದ್ದುಬಿಟ್ಟನು

೭. ಈರೀತಿ ಬರೀಬೆತ್ತಲೆಯಿಂದ ಆಡುಗಳನ್ನು ಹುಡುಕಲಾರಂಭಿಸಿದ ಆ ನಗ್ನನಾದ ರಾಜನನ್ನು ಊರ್ವಶಿಯು ನೋಡಿಬಿಟ್ಟಳು

**ಸಂಸ್ಮೃತ್ಯ ನಾರದವಚಸ್ತ್ವಿರೋಭೂತಾ ಬಭೂವ ಸಾ ।**
**ಗಂಧರ್ವಾಣಾಂ ಯಯೌ ಸಾಪಿ ಸಮೀಪಂ ದುಃಖಿತಾ ತದಾ ॥ ೮ ॥**

**ಸ್ವರ್ಗಂ ಪ್ರಾಪ್ಯ ವಿಶಾಲಾಕ್ಷೀ ನಿತ್ಯಂ ನೃಪಪರಾಯಣಾ ।**
**ಕಾಮಸುನ್ನಶರೀರಾಪಿ ಕಾಲಂ ನಯತಿ ಸುಂದರೀ ॥ ೯ ॥**

**ಋಷಿಶಾಪಭಯಾದ್ಭೀತಾ ಮದನೇನ ವಶೀಕೃತಾ ।**
**ನಿತ್ಯಮಾಸ ವರಾರೋಹಾ ನಿಃಶ್ವಾಸಪರಯಾ ಸತೀ ॥ ೧೦ ॥**

**ಅಪ್ರಾಪ್ಯ ಮೇಷಯುಗಲಂ ವಿನಿವೃತ್ತೋ ನರಾಧಿಪಃ ।**
**ನಾಪಶ್ಯಚ್ಛಯನೇ ದೇವೀಂ ಸಸ್ಮಾರ ಸಮಯಂ ತದಾ ॥ ೧೧ ॥**

೮ ಈ ಸಂದರ್ಭದಲ್ಲಿ ಊರ್ವಶಿಯು ನಾರದರು ಹೇಳಿದ್ದ ಮಾತನ್ನು ಸ್ಮರಿಸಿ (ಇನ್ನೆಲ್ಲಿ ಕಲ್ಲಾಗುವೆನೋ ಎಂಬ ದಿಗಿಲಿನಿಂದ) ಆ ಕೂಡಲೇ ಅಂತರ್ಧಾನ (ಕಣ್ಣಿಗೆ ಕಾಣಿಸದ) ಳಾದಳು

೯-೧೦ ಸ್ವರ್ಗಕ್ಕೆ ಪ್ರಯಾಣಮಾಡಿದಳಾದಾಗ್ಯೂ ಆ ಊರ್ವಶಿಗೆ ಕಾಮನ ಬಾಧೆ ತಪ್ಪಲಿಲ್ಲ ಪ್ರತಿದಿನವೂ ಆ ರಾಜನಲ್ಲೇ ಆಸಕ್ತಳಾಗಿ ಅವನನ್ನೇ ಸ್ಮರಿಸುತ್ತಾ ಕಾಮಾಧೀನ ದೇಹಳಾಗಿ ಕಾಲವನ್ನು ಕಳೆಯುತಲಿದ್ದಳು ಪುನಃ ಅವನ ಬಳಿಗೆ ಹೋದರೆ ನಾರದರ ಶಾಪದಿಂದ ಕಲ್ಲಾಗಿಹೋಗುವೆನೆಂಬ ಭೀತಿಯಿಂಸ ಮದನನ ವಶಳಾಗಿ ನಿಟ್ಟುಸುರುಬಿಡುತ್ತಾ ಪ್ರತಿದಿನವೂ ಕೊರಗುತ್ತಲಿದ್ದಳು

೧೧-೧೩ ತಾನು ಬೆತ್ತಲೆ ಇರುವನೆಂಬುದನ್ನೇ ಅರಿಯದೆ ಪುರೂರವನು ಆ ಆಡುಗಳನ್ನೆಲ್ಲೆಲ್ಲಿಯೋ ಹುಡುಕಿ ಅವುಗಳು ದೊರೆಯದೇಹೋಗಲು ಹಿಂದಕ್ಕೆ ತಿರುಗಿ ಬಂದು ಶಯನಸ್ಥಳದಲ್ಲಿ ನೋಡಿದಾಗ ಊರ್ವಶಿಯು ಕಾಣಿಸಲಿಲ್ಲ ಆಗ ಆಕೆಯು ಹೇಳಿದ್ದ ಸಮಯವು (ಶಪಥ) ಸ್ಮರಣೆಗೆ ಬಂದಿತು ಆಗ ರಾಜನಿಗ ಆಡು ಹೊರಟು ಹೋದುದೂ, ತಾನು ಬೆತ್ತಲೆ ಇರುವುದೂ, ಸ್ಮರಣೆಗೆ ಬರಲು ತನ್ನನ್ನು ಬಿಟ್ಟು ಊರ್ವಶಿಯು ಹೋದಳೆಂಬುದು ಚೆನ್ನಾಗಿ ಗೊತ್ತಾಯಿತು

ಊರ್ವಶಿಯ ಜತೆಯಲ್ಲಿ ಎಷ್ಟೋ ದಿನಗಳು ಮನಸ್ವಿಯಾಗಿ ವರ್ತಿಸಿ ಮದನನ ಗರ್ವವನ್ನು ಮರ್ದನಮಾಡಿದ್ದನಾದರೂ ಆ ರಾಜನಿಗೆ ಕಾಮತೃಪ್ತಿಯೆಂಬುದು ಆಗದೆ ಇದ್ದುದರಿಂದ ಅವಳನ್ನು ಕುರಿತು ಪ್ರಲಾಪಮಾಡುತ್ತಾನೆಂಬ ಸಂಗತಿಯು ಮುಂದೆ ಬರೆಯಲ್ಪಡುವುದು.

**ವಿದಿತ್ವಾ ತ್ಯಕ್ತಮಾತ್ಮಾನಂ ಸ್ಮೃತ್ವಾ ಸಮಯಮಾತ್ಮನಃ ।**
**ಕಾಮಬಾಣಾರ್ದಿತೋ ರಾಜಾ ತಥಾಪಿ ವಿಜನೇ ವನೇ ॥ ೧೨ ॥**

**ತಾಂ ಮಾರ್ಗತಿ ವರಾರೋಹಾಮುನ್ಮತ್ತ ಇವ ಸರ್ವತಃ ।**
**ಏಕಾಕೀ ವಿಜನೇ ರಾಜಾ ಪ್ರಿಯಯಾ ರಹಿತಸ್ತದಾ ॥ ೧೩ ॥**

ಟಿಪ್ಪಣಿ — ವಾಚಕರು ಇಲ್ಲಿ ಮನನಮಾಡಬೇಕಾದ ಒಂದು ಮುಖ್ಯವಾದ ವಿವೇಕವಾರ್ಗವುಂಟು " ನ ಜಾತುಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವಭೂಯ ಏವಾಭಿವರ್ಧತೇ ॥" ಎಂದು ವಿವೇಕಿಗಳಾದ ಹಿರಿಯರು ಹೇಳಿರುವರು ಅಂದರೆ ಕಾಮವು ಕಾಮಸುಖೋಪಭೋಗ ಮಾಡೋಣದರಿಂದ ತೃಪ್ತಿಯಾಗುವುದೇ ಇಲ್ಲ ಇದು ಯಾವಾಗಲೂ ಅಸಂಭವ ಹೇಗೆಂದರೆ, ಅಗ್ನಿಗೆ ತುಪ್ಪವನ್ನು ಸುರಿದರೆ ಶಾಂತವಾಗುವುದೇನು ? ಸುರಿಯುತ್ತಾ ಸುರಿಯುತ್ತಾ ಬಂದಂತೆ ಅದರ ವೇಗವು ಹೆಚ್ಚುತ್ತ ಹೋಗುವುದೇ ಹೊರತು ಸ್ವಲ್ಪವೂ ಶಾಂತವಾಗುವುದಿಲ್ಲದೆಂದು ಸರ್ವರ ಅನುಭವದ ಮಾತಾಗಿದೆ ಇವರಂತೆ ಕಾಮಸುಖವೂ ಕೂಡ ಸಂಭೋಗದಿಂದ ಸುತರಾಂ ಶಾಂತವಾಗುವುದಿಲ್ಲವಾದ್ದರಿಂದ ಈ ಕಾಮವೆಂಬುವುದು ಮನುಷ್ಯನ ಮನಗೆಡಿಸುವ ಶತ್ರುವೆಂದು ವೇದಾಂತಿಗಳು ಹೇಳುವರು. ಆದ್ದರಿಂದ ಕಾಮಕ್ರೋಧಾದ್ಯರಿಷಡ್ವರ್ಗಗಳು ಮನುಷ್ಯನ ಸ್ನೇಹಿತನಂತೆ ನಟಿಸುತ್ತಿರುವ ಅಂತರಂಗ ಶತ್ರುಗಳೆಂದು ತಿಳಿಯಿರಿ ಎಂದು ವಿವೇಕ ಹೇಳಿರುವರು ಆಧ್ಯಾತ್ಮರಾಮಾಯಣದಲ್ಲಿ ರಾಮನು ಲಕ್ಷ್ಮಣನನ್ನು ಕುರಿತು ಈ ವಿಚಾರವಾಗಿ ಹೇಳಿರುವುದೇನೆಂದರೆ —

ತಸ್ಮಾದ್ಯತ್ನಸ್ಸದಾಕಾರ್ಯೋ ವಿದ್ಯಾಭ್ಯಾಸೇ ಮುಮುಕ್ಷುಭಿಃ ।
ಕಾಮಕ್ರೋಧಾದಯಸ್ತತ್ರ ಶತ್ರವಶ್ಶತ್ರುಸೂದನ ॥

ಸಂಸಾರಬಂಧದಿಂದ ಮುಕ್ತಿಹೊಂದಬೇಕಾದರೆ ಜ್ಞಾನಾಭ್ಯಾಸ (ವಿದ್ಯಾಭ್ಯಾಸ) ವನ್ನು ಚೆನ್ನಾಗಿ ಮಾಡಬೇಕು ಈ ಅಭ್ಯಾಸಕಾಲದಲ್ಲಿ ಕಾಮಕ್ರೋಧಾದಿಗಳು ಶತ್ರುಗಳಂತೆ ಬಂದು ವಿಘ್ನಮಾಡುತ್ತವೆ

ಇನ್ನು ಈ ಪುರಾಣದ ಸರಣಿಯನ್ನು ಮುಂದುವರಿಸೋಣ —ಊರ್ವಶಿಯು ಕಣ್ಣಿಗೆ ಕಾಣಿಸದೆ ಮರೆಯಾದುದನ್ನು ನೋಡಿ ಪುರೂರವನು ಯಾರೂ ಇಲ್ಲದ ವಿಜನಸ್ಥಳಗಳಲ್ಲಿ ಹುಚ್ಚನಂತೆ ಊರ್ವಶಿಯನ್ನು ಹುಡುಕುವುದಕ್ಕೆ ಹೊರಟನು ಆ ಪ್ರಿಯು ತನ್ನನ್ನು ಬಿಟ್ಟುಹೋದಳಲ್ಲಾ ಎಂದು ವ್ಯಸನಪಡುತ್ತಾ ಆ ಮಹಾಸತ್ವಶಾಲಿಯಾದ ಆ ಮಹಾರಾಜನು ಕೇವಲ ಅಶಕ್ತನಾದ ಕುತ್ಸಿತಮನುಷ್ಯನಂತೆ ದೀನನಾಗಿ

**ವಿಲಲಾಪ ಮಹಾಸತ್ವಃ ಕುಸತ್ವ ಇವ ಕಶ್ಚನ ।**

**॥ ಪುರೂರವಾ ಉವಾಚ ॥**

**ಕ್ವ ಗತಾಸಿ ವಿಶಾಲಾಕ್ಷಿ ವಿಹಾಯ ವಿಜನೇಽತ್ರ ಮಾಂ ॥ ೧೪ ॥**

**ಕಥಂ ಪ್ರವೇಕ್ಷ್ಯಾಮಿ ಪುರಂ ಪ್ರತಿಷ್ಠಾನಂ ವಿನಾ ತ್ವಯಾ ।**
**ಪ್ರಾಣಸ್ತ್ಯಕ್ತ್ವಾ ಗಮಿಷ್ಯಂತಿ ಶರೀರಂ ಮಮ ಸುಂದರಿಂ ॥ ೧೫ ॥**

**ಅನುಗಂತುಂ ಶರೀರೇಣ ನ ಶಕ್ನೋಮಿ ವರಾನನೇ ।**
**ತ್ವಂ ಹಿ ಮೇ ಚಪಲಾಪಾಂಗಿ ಪ್ರಾಣೇಭ್ಯೋಽಪಿ ಗರೀಯಸೀ ॥ ೧೬ ॥**

**ತ್ವಯಾ ತ್ಯಕ್ತೋ ಧ್ರುವಂ ಪ್ರಾಣಾಂಸ್ತ್ಯಕ್ಷ್ಯಾಮಿ ವರವರ್ಣಿನಿ ।**
**ಕ್ವಾಸಿ ಕ್ವಾಹಂ ಗಮಿಷ್ಯಾಮಿ ಕಿಂ ಕರೋಮಿ ವ್ರಜಾಮಿ ಕಾಂ ॥ ೧೭ ॥**

**ಶರಣಂ ಕಾಮತಪ್ತಸ್ಯ ಕೋ ಮೇ ಸಂದರ್ಶಯೇತ್ಪ್ರಿಯಾಂ ।**
**ಕಂ ಸ್ವಿತ್ಪೃಚ್ಛಾಮಿ ವಿಜನೇ ಕಸ್ಯ ಸಾ ವಿದಿತಾ ಭವೇತ್ ॥ ೧೭ ॥**

---

ಅಳುವುದಕ್ಕೆ ಪ್ರಾರಂಭಿಸಿದನು ಪ್ರಪಂಚ ಭೋಗವು ಎಳ್ಳಷ್ಟು ಕಡಿಮೆಯಾದರೂ ಅದು ಎಷ್ಟು ದುಃಖದಾಯಕವೆಂದು ಮದೋನ್ಮತ್ತರೂ ಅರ್ಥಪಿಶಾಚಿಗಳೂ ಸ್ಮರಿಸಲಿ.

೧೪-೩೨ ಪುರೂರವನು ದುಃಖಪಡುತ್ತಾ ಹೇಳಿಕೊಳ್ಳುತ್ತಾನೆ —ಎಲೌ ವಿಶಾಲನಯನೆಯಾದ ಊರ್ವಶಿಯೇ ! ಯಾರೂ ಇಲ್ಲದ ಇದ್ದ ಈ ವಿಜನಸ್ಥಳದಲ್ಲಿ ನನ್ನನ್ನು ಬಿಟ್ಟು ನೀನೆಲ್ಲಿಗೆ ಹೊರಟುಹೋದೆ ? ನಿನ್ನನ್ನು ಬಿಟ್ಟು ನಾನೊಬ್ಬನೇ ಪ್ರತಿಷ್ಠಾನನಗರಿಯನ್ನೆಂತು ಪ್ರವೇಶಿಸಲಿ ? ನನ್ನ ದೇಹವನ್ನು ಬಿಟ್ಟು ಪ್ರಾಣಗಳು ಹೊರಕ್ಕೆ ಹೊರಟುಹೋಗುತ್ತಲಿವೆಯಲ್ಲಾ ? ಆ ಪ್ರಾಣಗಳನ್ನು ಈ ಶರೀರದಿಂದ ಹೇಗೆ ಅನುಸರಿಸಿ ನಾನು ತೆರಳಲಿ ? ಎಲೌ ಚಂಚಲನಯನೆಯೆ ! ನೀನು ನನ್ನ ಪ್ರಾಣಗಳಿಗಿಂತ ಹೆಚ್ಚಾಗಿದ್ದೆಯಲ್ಲಾ ? ನೀನು ನನ್ನನ್ನು ಬಿಟ್ಟು ಹೊರಟುಹೋದ ಮೇಲೆ ಇನ್ನು ಈ ಪ್ರಾಣಗಳನ್ನು ಇಟ್ಟುಕೊಂಡಿರುವುದಿಲ್ಲ ಊರ್ವಶೀ ! ಊರ್ವಶೀ ! ನೀನು ಎಲ್ಲಿದ್ದೀಯೇ ? ಇನ್ನು ಈಗ ನಾನೆಲ್ಲಿಗೆ ಹೋಗಲಿ ? ಈಗೇನು ಮಾಡಲಿ ? ಯಾರನ್ನು ಹೊಂದಲಿ ? ಕಾಮಾಗ್ನಿಯಿಂದ ಬೆಂದುಹೋಗುತ್ತಿರುವ ನನಗೆ ನನ್ನ ಪ್ರಿಯೆಯನ್ನು ತೋರಿಸಿ ಸಂರಕ್ಷಿಸುವವರಾರು ? ಈವಿಚಾರವನ್ನು ಯಾರೂ ಇಲ್ಲದಿರುವ ಈ ವಿಜನಪ್ರದೇಶದಲ್ಲಿ ಯಾರನ್ನು ಕೇಳಲಿ ? ಈ ವಿಷಯವು ಯಾರಿಗೆ ತಾನೇ

**ಕ್ಷೇಮೋ ವಾ ಮಮ ಕಸ್ಯ ಸ್ಯಾದ್ಯೋ ಮೇ ಸಂದರ್ಶಯೇತ್ಪ್ರಿಯಾಂ ।**
**ಪ್ರಿಯಾವಿರಹಿತಸ್ಯೈಷ ನಿಶಾಶೇಷೋ ಗತೋ ಮಮ ॥ ೧೯ ॥**

**ಅಂತರ್ಧಾನಂ ಗತಾಸ್ತಾರಾ ಯಥಾ ದೇವೀ ಮಮೋರ್ವಶೀ ।**
**ದೇವ್ಯೋಽರುಣಕರಸ್ಪರ್ಶಾಚ್ಛೋಭಾಂ ತ್ಯಜತಿ ಚಂದ್ರಮಾಃ ॥ ೨೦ ॥**

**ನಿಶಾಕ್ಷಯೇ ಕ್ಷಾಮವಪುರ್ಯಥಾಹಂ ತದ್ವಿನಾಕೃತಃ ।**
**ಏಷಾ ಹ್ಯಾವರ್ತತೇ ಪೂರ್ವಾ ಸಂಧ್ಯಾ ಸ್ನಾತ್ವಾ ದ್ವಿಜಾತಯಃ ॥ ೨೧ ॥**

**ನೂನಂ ನಿಯಮಸಂಯುಕ್ತಾಸ್ತಿಷ್ಠಂತಿ ವಿಜಿತೇಂದ್ರಿಯಾಃ ।**
**ಅಯಂ ಹ್ಯುದಯಮಾಯಾತಿ ಸವಿತಾ ರಕ್ತಮಂಡಲಃ ॥ ೨೨ ॥**

**ಸರ್ವಸತ್ತ್ವಮಸೌ ದೇವಃ ಸರ್ವೇಷಾಂ ಪಾಪನಾಶನಃ ।**
**ಉದಿತಶ್ಚಾಪ್ಯಯಂ ಸೂರ್ಯೋ ವಿಭಾತಿ ವಿಮಲೇಂಬರೇ ॥ ೨೩ ॥**

---

ಗೊತ್ತಿದ್ದೀತು ? ನನಗೆ ಈಗ ಕ್ಷೇಮವಾಗುವವರಿಯೆಂತು ? ನನಗೆ ಈಗ ನನ್ನ ಪ್ರಿಯೆಯನ್ನು ತೋರಿಸುವವರಾರು ? ನನ್ನ ಪ್ರಿಯೆಯಿಂದ ವಿರಹಿತನಾದ ನನಗೆ ಈ ರಾತ್ರಿಶೇಷವೂ ಕಳೆದುಹೋಯಿತು ನನ್ನ ಪ್ರಿಯೆಯಾದ ಊರ್ವಶಿಯು ಅಂತರ್ಧಾನವಾದಂತೆ ಆಕಾಶದಲ್ಲಿದ್ದ ನಕ್ಷತ್ರಗಳೂ ಅಂತರ್ಧಾನವಾದುವು ಅರುಣನ ಕರಸ್ಪರ್ಶದಿಂದ ಚಂದ್ರನು ತನ್ನ ಕಾಂತಿಯನ್ನು ಕಳೆದುಕೊಳ್ಳುತ್ತಿರುವನು (ಅರುಣೋದಯವಾಯಿತೆಂದು ತಾತ್ಪರ್ಯ) ನಾನೂ ಆ ಚಂದ್ರನಂತೆ ಕೃಶವಾದ ದೇಹವುಳ್ಳವನಾಗಿ ನನ್ನ ಪ್ರಿಯೆಯಿಂದ ಬಿಡಲ್ಪಟ್ಟವನಾಗಿರುವೆನು ಓಹೋ ! ಈಗ ತಾನೇ ಮೂಡಲು ಸಂಧ್ಯೆಯಿಂದಲಂಕೃತವಾಯಿತು (ಬೆಳಗಾಯಿತೆಂದು ಭಾವವು) ಬ್ರಾಹ್ಮಣರು ಸ್ನಾನ ಮಾಡಿ ಶುಚಿರ್ಭೂತರಾಗಿ ಜಿತೇಂದ್ರಿಯರಾಗಿ (ಚಿತ್ತೈಕಾಗ್ರ್ಯದಿಂದ) ಸಂಧ್ಯಾವಂದನೆಯನ್ನು ಮಾಡಲಾರಂಭಿಸಿರುವರು ಓಹೋ ! ಸೂರ್ಯನು ಉದಯಪರ್ವತವನ್ನೇರಿದನು ಸೂರ್ಯನು ಈಗ ಕೆಂಪಾಗಿ ಕಾಣುತ್ತಲಿದ್ದಾನೆ ಈ ಸೂರ್ಯನು ಸಕಲ ಸತ್ವ-ಸ್ವರೂಪನು ಸಕಲರ ಪಾಪಗಳನ್ನೂ ಪರಿಹರಿಸತಕ್ಕವನು ಸೂರ್ಯನು ಈಗ ಚೆನ್ನಾಗಿಯೂ ಉದಯ ಹೊಂದಿ ನಿರ್ಮಲವಾದ ಆಕಾಶದಲ್ಲಿ ಪ್ರಕಾಶಿಸುತ್ತಲಿರುವನು ಆಗಸದಲ್ಲಿ ಸೂರ್ಯೋದಯವಾದುದನ್ನು ನೋಡಿದರೆ ನಿರ್ಮಲವಾದ ನೀರುಳ್ಳ ಸರೋವರದಲ್ಲಿ ಒಂದೇ ಒಂದು ಮಹಾಪದ್ಮಪುಷ್ಪವು ಅರಳಿದಂತೆ ಕಾಣುತ್ತಲಿದೆ ನನ್ನ ಕಾಮವನ್ನಭಿವೃದ್ಧಿಗೊಳಿಸುವ ಈ ದಿನಕರ, ಸೂರ್ಯನು ತೀಕ್ಷ್ಣವಾದ

**ಏಕಂ ಫುಲ್ಲಂ ಮಹಾಪದ್ಮಂ ಸರಸೀವಾಮಲೇ ಯಥಾ ।**
**ಉದಿತಂ ಭಾಸ್ಕರಂ ಜ್ಞಾತ್ವಾ ನಲಿನೀ ಪದ್ಮಲೋಚನಾ ॥ ೨೪ ॥**

**ಉನ್ಮೀಲ್ಯಾಲೋಕತೇ ಸರ್ವಂ ವಿನಾ ತೇನ ನಿಮೀಲಿತಾ ।**
**ತೀಕ್ಷ್ಣಾರ್ಕಃ ಸಂಪ್ರವೃತ್ತೋಽಯಂ ದಿವಸಃ ಕಾಮವರ್ಧನಃ ॥ ೨೫ ॥**

**ನೈದಾಘೋ ಮಾಂ ವಿಶೇಷೇಣ ಸಂತಾಪಯತಿ ತಾಂ ವಿನಾ ।**
**ಕಂ ಪೃಚ್ಛಾಮಿ ವರಾರೋಹಾಂ ಸಂತಪ್ತಕನಕಪ್ರಭಾಂ ॥ ೨೬ ॥**

**ದೃಷ್ಟಾ ಮಯೇತಿ ಸಾ ದೇವೀ ಕೋ ಮಾಂ ವಕ್ಷ್ಯತಿ ಕಾನನೇ ।**
**ಕರೀಂದ್ರಸ್ತ್ವಯಮಭ್ಯೇತಿ ತತ್ಕುಚಾಭೌ ಸಮುದ್ವಹನ್ ॥ ೨೭ ॥**

**ಕುಂಭೌ ಕರೋರೌ ಸುಮುಖಂ ಪೃಚ್ಛಾಮ್ಯೇನಂ ಮತಂಗಜಂ ।**
**ತ್ವದ್ದಂತಯುಗಲಪ್ರಖ್ಯಂ ಯದೂರುಯುಗಲಂ ಹ್ಯಭೂತ್ ॥ ೨೮ ॥**

---

ಕಿರಣಗಳಿಂದ ನನ್ನನ್ನು ಪೀಡಿಸುತ್ತಿರುವನು ಆ ಊರ್ವಶಿಯು ಹತ್ತಿರದಲ್ಲಿಲ್ಲದೆ ಇರುವುದರಿಂದ ಸುಡುತ್ತಿರುವ ಈ ಬಿಸಿಲು ನನ್ನನ್ನು ಇನ್ನೂ ಚೆನ್ನಾಗಿ ಸುಡುತ್ತಲಿರುವುದು ಪುಟಕ್ಕೆ ಹಾಕಿದ ಚಿನ್ನದಂತಿದ್ದ ಆ ನನ್ನ ಪ್ರಿಯಪ್ರೇಯಸಿಯಾದೂರ್ವಶಿಯು ಎಲ್ಲಿ ಹೋದಳೆಂದು ಯಾರನ್ನು ಕೇಳಲಿ? ಈ ಕಾಡಿನಲ್ಲಿ ನನಗೆ ನಿನ್ನ ಪ್ರಿಯೆಯನ್ನು ನೋಡಿದೆನೆಂದು ಯಾರು ಹೇಳುವವರಿದ್ದಾರೆ? ಇತ್ಲೊಂದು ಮದ್ದಾನೆಯು ಬರುತ್ತಲಿದೆ? ಅದನ್ನು ನೋಡಿದರೆ ಊರ್ವಶಿಯ ಕುಚಗಳಂತೆ ಕಠಿನವಾದ ಕುಂಭಸ್ಥಳವನ್ನು ಹೊಂದಿದೆ ಇಂತಹ ಸುಂದರ ಕುಂಭಸ್ಥಳದಿಂದ ವಿರಾಜಿಸುತ್ತಿರುವ ಈ ಆನೆಯನ್ನು ಕೇಳಿ ನೋಡುತ್ತೇನೆ ಹೀಗೆಂದು ಹೇಳಿಕೊಳ್ಳುತ್ತಾ ಆ ಪುರೂರವನು, ಎಲೈ ಆನೆಯೇ! ನಿನ್ನ ಸೊಂಡಲಿನಂತೆ ತೊಡೆಗಳನ್ನು ಹೊಂದಿದ್ದಳಲ್ಲಾ? ಅಂತಹ ಆ ನಾರಾಯಣನ ತೊಡೆಗಳಲ್ಲಿ ಹುಟ್ಟಿದ ಊರ್ವಶಿಯು ಎಲ್ಲಿಯೋ ಹೋಗಿದ್ದಾಳೆ ಆ ಊರ್ವಶಿಯು ಹೋದ ಜಾಗವನ್ನು ನೀನೇದರೂ ನೋಡಿದೆಯಾ? ಹೇಳಯ್ಯಾ, ಗಜರಾಜ! ಎಂದು ಕೇಳಲು, ಆ ಆನೆಯು ಮಾತನಾಡದೆ ಮುಂದೆ ಹೋಗುತ್ತಿದ್ದುದನ್ನು ನೋಡಿ, ಓಹೋ! ಈ ಆನೆಯು ಇಲ್ಲಿ ಬರುತ್ತಿರುವ ಮಹಾತ್ಮನಾದ ಸಿಂಹರಾಜನನ್ನು ನೋಡಿ ಹೆದರಿಕೊಂಡು ನನಗೆ ಉತ್ತರವನ್ನೇ ಹೇಳದೆ ಓಡಿಹೋಯಿತು ಒಳ್ಳೆಯದು, ಆನೆಯು ಹೋದರೆ ಹೋಗಲಿ ಈ ಸಿಂಹವನ್ನೇ ಕೇಳಿನೋಡುತ್ತೇನೆಂದು ಹೇಳಿಕೊಂಡು, ಎಲೈ ಸಿಂಹರಾಜನೇ! ನಿನ್ನಂತೆ ಮಧ್ಯ

ಗತಾಂ ತಾಂ ಯದಿ ಜಾನೀಷೇ ಕಥಯಸ್ವ ಮಮೋರ್ವಶೀಂ ।
ಏಷ ಹಸ್ತೀ ಗತಸ್ತ್ರಾಸಾತ್ಸಿಂಹಸ್ಯಾಸ್ಯ ಮಹಾತ್ಮನಃ　　॥ ೨೯ ॥

ಅದತ್ವೈವೋತ್ತರಂ ಮಹ್ಯಂ ಸಿಂಹಂ ಪೃಚ್ಛಾಮ್ಯಹಂ ವನೇ ।
ಮಧ್ಯಸ್ತ್ವದುಪಮಸ್ತಸ್ಯಾಃ ಕ್ವ ಸಾ ಸಂಪ್ರತಿ ಕೇಸರಿನ್　　॥ ೩೦ ॥

ಉರ್ವಶೀ ದಯಿತಾ ಮಹ್ಯಂ ಯದಿ ಜಾನಾಸಿ ಕಥ್ಯತಾಂ ।
ಅದತ್ತ್ವೈವೋತ್ತರಂ ಸಿಂಹಃ ಕಥಮೇಷ ಗತೋ ಮಮ　　॥ ೩೧ ॥

ದೃಷ್ಟ್ವಾ ಕಥಯ ಹೇ ಬಿಂಬ ದೇವೀಂ ಬಿಂಬಫಲಾಧರಾಂ ।
ಅನೇನಾಪಿ ನ ಚಾಖ್ಯಾತಾ ಪೃಷ್ಟೇನ ಸುದತೀ ಮಮ　　॥ ೩೨ ॥

ಮಯೂರ ಯದಿ ಜಾನೀಷೇ ಬಾಲಾಂ ಬಾಲಮೃಗೇಕ್ಷಣಾಂ ।
ಉರ್ವಶೀಂ ಕಥಯಸ್ವಾದ್ಯ ಕ್ವ ಪ್ರಿಯಾ ಮಮ ವರ್ತತೇ　　॥ ೩೩ ॥

ಅಂತಃಶರೀರಂ ಕಾಮಾಗ್ನಿರ್ಬಹಿರ್ದಹತಿ ಭಾಸ್ಕರಃ ।
ತಾಪಾರ್ತಾ ನಿಃಶ್ವಸಂತ್ಯೇತೇ ಸಿಂಹಾ ಗಿರಿಗುಹಾಗತಾಃ　　॥ ೩೪ ॥

---

ಪ್ರದೇಶವನ್ನುಳ್ಳ ಆ ನನ್ನ ಪ್ರಿಯೆಯಾದ ಊರ್ವಶಿಯು ಈಗೆಲ್ಲಿದ್ದಾಳೆ? ನಿನಗೇನಾದರೂ ಗೊತ್ತಿದ್ದರೆ ಹೇಳುವಿಯಾ? ಎಂದು ಸಿಂಹವನ್ನು ಕೇಳಲು, ಆ ಸಿಂಹವು ಯಾವ ಉತ್ತರವನ್ನೂ ಕೊಡದೆ ಹೊರಟುಹೋಯಿತು, ನೋಡಿದೆಯಾ! ಈ ಸಿಂಹವೂ ನನ್ನನ್ನು ಲಕ್ಷಿಸದೆ ಉತ್ತರಕೊಡದ ಹೊರಟುಹೋಯಿತಲ್ಲಾ? ಹೋದರೆ ಹೋಗಲಿ ಇಲ್ಲೊಂದು ತೊಂಡೇಮರವು ಕಾಣುತ್ತಿದ ಇವನ್ನಾದರೂ ಕೇಳಿ ನೋಡುತ್ತೇನೆ ಎಲೈ ತೊಂಡೇಮರವೇ! ನಿನ್ನ (ತೊಂಡೆ) ಹಣ್ಣಿನಂತೆ ಕೆಂಪಾದ ತುಟಿಯುಳ್ಳ ಊರ್ವಶಿಯನ್ನು ನೀನೇನಾದರೂ ಕಂಡಿದ್ದಯಾ? ಕಂಡಿದ್ದರೆ ಹೇಳೆಂದು ಕೇಳಿದನು ಆ ಮರವೂ ಬಾಯಿಬಿಡದೆ ಇದ್ದುದನ್ನು ನೋಡಿ, ಪುರೂರವನು ಎಲ ಎಲಾ! ಇದೇನು? ನಾನು ಕೇಳಿದರೂ ಕೂಡ ಈ ಮರವೂ ಕೂಡ ನನಗೆ ಏನೂ ಉತ್ತರಕೊಡದೆ ನನ್ನ ಪ್ರಿಯೆಯ ವೃತ್ತಾಂತವನ್ನು ಸಹ ನನಗೆ ತಿಳಿಸದ ಹೋಯಿತಲ್ಲಾ?

೩೩-೪೦ ಎಲೆ ನವಿಲೇ! ಎಳೆ ಜಿಂಕೆಯ ಕಣ್ಣಿನಂತೆ ಕಣ್ಣುಳ್ಳ ನನ್ನ ಪ್ರಿಯೆಯಾದ ಊರ್ವಶಿಯೆಲ್ಲಿರುವಳು? ನೀನು ಬಲ್ಲೆಯಾ? ತಿಳಿದಿದ್ದರೆ ಮರೆಮಾಚದೆ

**ನಿರಸ್ತಜಿಹ್ವಾಃ ಸ್ರಸ್ತಾಂಗಾ ವಿವೃತ್ತಾಸ್ಯಾ ಮುಹುರ್ಮುಹುಃ ।**
**ಯೂಥಾನಿ ಮಹಿಷೀಣಾಂ ಚ ಶೇರತೇ ನಲಿನೀಜಲೇ ॥ ೩೫ ॥**

**ಸೂರ್ಯೋದ್ಧೃತಜಲಾಸ್ತ್ವನ್ಯೇ ಪಂಕಶೇಷಾಸು ಶೇರತೇ ।**
**ಗಗನಂ ಚಾತಕಶ್ಚಾಯಂ ತೃಷ್ಣಾರ್ತೋ ಲೋಕತೇ ಮುಹುಃ ॥ ೩೬ ॥**

**ಸ ಭೃಶಂ ತೋಯಪಾನಾರ್ಥೀ ಉರ್ವಶ್ಯರ್ಥೀ ಯಥಾತ್ವಹಂ ।**
**ಯಾಂತ್ಯೇತೇ ಪದ್ಮಿನೀಖಂಡಾತ್ಕುಂಜರಾಸ್ತಾಸುರೂಷಿತಾಃ ॥ ೩೭ ॥**

**ಸುಹಸ್ತಮುಕ್ತೈಶ್ಚ ಜಲೈಃ ಸಿಂಚತ್ಯಾತ್ಮಾನಮಾತ್ಮನಾ ।**
**ಮಹಾದ್ರುಮಾಣಾಂ ಸ್ಕಂಧೇಷು ವಿಷಣ್ಣಾಶ್ಚಾಪರೇ ಗಜಾಃ ॥ ೩೮ ॥**

**ತಾಪಂ ನಯಂತಿ ಮಧ್ಯಾಹ್ನೇ ಮುಂಚತಃ ಶೀಕರಂ ಮುಹುಃ ।**
**ಶಾಖಾಪರ್ಣಾಂತರಾಣ್ಯೇತೇ ವಿಹಗಾಸ್ತಾಪತಾಪಿತಾಃ ॥ ೩೯ ॥**

---

ನನಗೆ ತಿಳಿಸು ಒಳಗಿನ ಮನಸ್ಸನ್ನು ಕಾಮಾಗ್ನಿಯು ಸುಡುತ್ತಿದೆ ಹೊರಗಿನ ಸ್ಥೂಲದೇಹವನ್ನು ಕಠೋರ ಕಿರಣನಾದ ಸೂರ್ಯನು ಸುಡುತ್ತಲಿದ್ದಾನೆ ಗಿರಿಯ ಗುಹೆಯೊಳಗಿರುವ ಸಿಂಹಗಳು ಬಿಸಲಿನಿಂದ ಬಳಲುತ್ತಾ ನಿಟ್ಟುಸಿರನ್ನು ಬಿಡುತ್ತಲಿವೆ ಬಿಸಿಲಿನ ಬೇಗೆಯಿಂದ ಬತ್ತಿಹೋಗಿ ಕೆಳಗೆ ಕೆಸರು ಮಾತ್ರ ನಿಂತಿರುವ ಕುಂಟೆಗಳಲ್ಲಿ ಮೆಲಕುಹಾಕದ ಮಲಗಿರುದ ಎಮ್ಮೆಗಳ ಗುಂಪುಗಳು ಮುಖವನ್ನಗಲವಾಗಿ ಮಾಡಿ ಕೊಂಡು ಪದೇ ಪದೇ ಮೇಲೆ ನೋಡುತ್ತಲಿವೆ ಬಾಯಾರಿಕೆಯಿಂದ ಬಳಲಿ ಬೆಂಡಾದ ಚಾತಕಪಕ್ಷಿಯು ಆಕಾಶವನ್ನು ಪದೇ ಪದೇ ಮಳೆಯಾದೀತೇನೋ ಎಂದು ನೋಡುತ್ತಲಿದೆ ನಾನು ಊರ್ವಶಿಯ ಮಾರ್ಗವನ್ನು ನೋಡುತ್ತಲಿರುವಂತೆ ಚಾತ ಕವೂ ಸಹ ಮಳೆಯ ಹನಿಗಾಗಿ ಬಾಯಾರಿಕೆಯಿಂದ ಆಕಾಶದ ಕಡೆಗೆ ನೋಡುತ್ತ ಲಿದೆ ಇಲ್ಲಿರುವ ಕಾಡಾನೆಗಳು ತಾಪದಿಂದ ಬಳಲಿದವುಗಳಾಗಿ ತಾವರೇದಂಟನ್ನು ಹುಡುಕಿಕೊಂಡು ಅಲೆಯುತ್ತಲಿವೆ ಮತ್ತು ಕೋಮಲವಾದ ತಮ್ಮ ಕರ (ಸೊಂಡಿಲು) ಗಳಿಂದ ನೀರನ್ನು ತುಂಬಿಕೊಂಡು ತಮ್ಮ ಮೈಮೇಲೆ ಎರಚಿಕೊಳ್ಳುತ್ತ ಲಿವೆ. ಇನ್ನು ಕೆಲವು ಆನೆಗಳು ಮಹತ್ತಾದ (ಬಹಳ ದೊಡ್ಡ) ಮರಗಳ ಕೊಂಬೆ ಗಳಲ್ಲಿ ವಿಷಾದಪಡುತ್ತಾ, ಈ ಮಧ್ಯಾಹ್ನ ಕಾಲದಲ್ಲಿ ಬಾರಿಬಾರಿಗೂ ನೀರಿನ ಕಣ ಗಳನ್ನು ನೋಡುತ್ತಾ ತಮ್ಮ ತಾಪಗಳನ್ನು ಕಳೆದುಕೊಳ್ಳುತ್ತಲಿವೆ ಈ ಮಧ್ಯಾಹ್ನ ಕಾಲದಲ್ಲಿ ಬಿಸಿಲಿನ ಝಳವನ್ನು ತಾಳಲಾರದೆ ತಾಪದಿಂದ ತಪ್ತಗಳಾದ ಹಕ್ಕಿಗಳು

ವಿಶಂತಿ ಚೈವ ತ್ರಾಣಾರ್ಥಂ ಮಧ್ಯಾಹ್ನಸಮಯೇ ಭೃಶಂ ।
ದ್ರುಮಶಾಖಾಗತಾ ಹ್ಯೇತೇ ವಿಹಗಾನಾಂ ಚ ಬಾಲಕಾಃ ॥ ೪೦ ॥

ರಕ್ತಾಂತಚಕ್ರಾಃ ಸುಭೃಶಂ ವಿಶಂತೀಹ ಮುರ್ಹುಮುರ್ಹುಃ ।
ತ್ಯಕ್ತಾಹಾರಕ್ರಿಯಾಶ್ಚೈತೇ ಮೃಗಯೂಥಾ ಮಹಾವನೇ ॥ ೪೧ ॥

ದ್ರುಮಚ್ಛಾಯಾಸು ತಿಷ್ಠಂತಿ ರೋಮಂಥಂ ಕುರ್ವತೋ ಮುಹುಃ ।
ಅನ್ವೇಷಮಾಣೋ ದಯಿತಾಂ ಶ್ರಾಂತೋಽಸ್ಮಿ ವಿಜಯೇ ಭೃಶಂ ॥ ೪೨ ॥

ಛಾಯಾಯಾಂ ವಿಶ್ರಮಿಷ್ಯಾಮಿ ಶಿರೀಷಸ್ಯಾಸ್ಯ ಸಾಂಪ್ರತಂ ।
ತದ್ಗಾತ್ರಸುಕುಮಾರಾಣಿ ಪುಷ್ಪಾಣ್ಯಸ್ಯ ವನಸ್ಪತೇಃ ॥ ೪೩ ॥

ಶಿರೀಷವೃಕ್ಷೋ ರಮ್ಯೋಽಯಂ ಮನೋಹೃದಯನಂದನಃ ।
ಕಿಂತು ಮಾಂ ಪೀಡಯತ್ಯೇಷ ಶಿರೀಷಸ್ತದ್ವಿನಾಕೃತಂ ॥ ೪೪ ॥

ಸೂರ್ಯಶ್ಚಾಸ್ತಮುಪಾಯಾತಿ ಕ್ವ ಗಮಿಷ್ಯಾಮಿ ಶರ್ವರೀಂ ।
ಅಸ್ತಂ ಯಾತಃ ಸಹಸ್ರಾಂಶುರ್ನಿಶಾ ಪ್ರಾಪ್ತಾ ಸುದಾರುಣಾ ॥ ೪೫ ॥

ಮರಗಳ ಕೊಂಬೆಗಳಲ್ಲಿ ಬಿಟ್ಟಿರುವ ಹಸುರಾದ ಎಲೆಗಳ ಮರಗಳಲ್ಲಿ ತಮ್ಮ ಪ್ರಾಣಗಳನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ಮರೆಮಾಡಿಕೊಂಡು ಕುಳಿತಿವೆ ಮತ್ತು ಹಕ್ಕಿಗಳ ಮರಿಗಳೂ ಹಾಗೆಯೇ ಮರದೆಲೆಗಳಲ್ಲಡಗಿ ಕುಳಿತಿವೆ

೪೧-೫೫ ಕೆಂಪಗಿರುವ ಚಕ್ರವಾಕ ಪಕ್ಷಿಗಳು ಪದೇ ಪದೇ ಹೋಗಿ ಬರುತ್ತಿರುವಂತೆ ಕಾಣುತ್ತಲಿದೆ ಈ ಮಹಾರಣ್ಯದಲ್ಲಿರುವ ಜಿಂಕೆಗಳ ಗುಂಪುಗಳು ಆಹಾರ ತಿನ್ನುವುದನ್ನು ಬಿಟ್ಟು ಪುನಃ ಪುನಃ ಮೆಲುಕುಹಾಕುತ್ತಾ ಮರಗಳ ನೆರಳುಗಳಲ್ಲಿ ಮಲಗಿರುತ್ತವೆ ಈ ಸಮಯದಲ್ಲಿ ನನ್ನ ಪ್ರೇಯಸಿಯನ್ನು ಹುಡುಕುತ್ತಾ ಈ ವಿಜನವಾದ ವನದಲ್ಲಿ ವಿಶ್ರಮಿಸಿಕೊಳ್ಳುತ್ತೇನೆ ಈ ಮರದಲ್ಲಿ ಬಿಟ್ಟಿರುವ ಮೃದುವಾದ ಹೂಗಳು ಊರ್ವಶಿಯ ಅವಯವದಂತೆ ಮೃದುವಾಗಿವೆ ಈ ಬಾಗೇಮರವು ಮನೋಹರವಾಗಿರುವುದರಿಂದ ಮನಸ್ಸಿಗೂ ಹೃದಯಕ್ಕೂ ಸಂತೋಷವನ್ನುಂಟುಮಾಡುತ್ತಲಿರುವುದು. ಆದರೆ ಈಗ ಮಾತ್ರ ಈ ಶಿರೀಷಕುಸುಮವು ನನ್ನ ದಯಿತೆಯು ನನ್ನ ಬಳಿಯಲ್ಲಿಲ್ಲದೆ ಇರುವುದರಿಂದ ನನ್ನನ್ನು ಪೀಡಿಸುತ್ತದೆ ಓಹೋ ! ನೋಡುತ್ತಿ

ರಾತ್ರಿಮೇನಾಂ ವಿವತ್ಸ್ಯಾಮಿ ನ್ಯಗ್ರೋಧೇಽಸ್ಮಿನ್ಮಹಾದ್ರುಮೇ ।
ಉರ್ವಶ್ಯಾ ಋದ್ಧಿಚರಿತೇ ವರವೇಶ್ಮನಿ ಪಾರ್ಥಿವಃ ॥ ೪೬ ॥

ಸ ಕ್ರೀಡತಿ ತಯಾ ಸಾರ್ಧಂ ಸರ್ವಕಾಮೈಃ ಸುಪೂಜಿತಃ ।
ನೂನಂ ಮಾಂ ಸ ಜನೋ ವೇತ್ತಿ ಪ್ರತಿಷ್ಠಾನಪುರೇ ತು ಮೇ ॥ ೪೭ ॥

ಏತಾಮವಸ್ಥಾಂ ಕಶ್ಚಿನ್ಮೇ ನ ವಿಜಾನಾತಿ ಸಾಂಪ್ರತಂ ।
ಪೌರೋ ಚಾರಪದಃ ಕಶ್ಚಿಜ್ಜನೋ ಮೇ ದಯಿತಃ ಸದಾ ॥ ೪೮ ॥

ನಿದ್ರೇ ಭಜಸ್ವ ಮನ್ನೇತ್ರೇ ಧ್ರುವಂ ಸ್ವಪ್ನೇ ವರಾನನಾಂ ।
ತಾಂ ತು ಪ್ರಾಪ್ಸ್ಯಾಮ್ಯಹಂ ಸೌಮ್ಯಾಂ ಮನಸಃ ಪ್ರೀತಿವರ್ಧನಾಂ ॥ ೪೯ ॥

ಕಥಮಭ್ಯುದಿತಶ್ಚಂದ್ರಃ ಪೀಡಾಂ ಜನಯತೇ ಮಮ ।
ತದ್ವಕ್ತ್ರವಿಜಿತಃ ಪೂರ್ವಂ ವಿಕರೋತ್ಯಧುನಾ ಮಯಿ ॥ ೫೦ ॥

ತುದ ಚಂದ್ರ ಯಥಾ ಕಾಮಂ ಮಮ ದೇಹಂ ವಿನಾಕೃತಂ ।
ತ್ವಯಾ ತು ನಾಥಂ ಸಂಪ್ರಾಪ್ಯ ಸಾಪತ್ನ್ಯಂ ಮಮ ದರ್ಶಯ ॥ ೫೧ ॥

---

ದ್ದಂತೆ ಬಿಸಿಲು ತಂಪು ಸೂರ್ಯನು ಮುಳುಗುತ್ತಲಿದ್ದಾನೆ ಈಗ ನಾನು ಎಲ್ಲಿ ಹೋಗಿ ಈ ರಾತ್ರಿಯನ್ನು ಕಳೆಯಲಿ? ಸೂರ್ಯನು ಮುಳುಗಿಯೇ ಹೋದನು ಭಯಂಕರವಾದ ರಾತ್ರಿಯು ಪ್ರಾಪ್ತವಾಯಿತು ಈ ರಾತ್ರಿಯ ಕಾಲವನ್ನು ಈ ದೊಡ್ಡದಾದ ಆಲದಮರದ ಕೆಳಗೆ ಕಳೆಯುತ್ತೇನೆ

ಈಗ ಪ್ರತಿಷ್ಠಾನಪುರದ ಜನಗಳು ಯಾರೂ ಸಹ ಈ ನನ್ನ ಅವಸ್ಥೆಯನ್ನು ಖಂಡಿತವಾಗಿ ಅರಿಯರು ಅವರು ತಿಳಿದುಕೊಂಡಿರುವುದೇನೆಂದರೆ—ಊರ್ವಶಿ ಯಿಂದ ಯಥೇಚ್ಛವಾಗಿ ಅಂದವಾಗಿ ಅಲಂಕೃತವಾದ ಶ್ರೇಷ್ಠವಾದ ಉದ್ಯಾನವನ ಗೃಹದಲ್ಲಿ ಮಹಾರಾಜನು ಸಕಲ ಇಷ್ಟಾರ್ಥಗಳನ್ನೂ ಅನುಭವಿಸುತ್ತಾ ಸಂತೋಷ ವಾಗಿ ಅವಳಿಂದ ಪೂಜಿತನಾಗಿ ಕ್ರೀಡಿಸುತ್ತಿದ್ದಾನೆ ಈಗ ನನ್ನ ಪುರದಲ್ಲಿರುವ ಯಾವ ಪ್ರಜೆಯೂ ನನಗೆ ಇಷ್ಟನಾದವನಾಗಿಲ್ಲ ಓ, ಓ! ನನ್ನ ಕಣ್ಣುಗಳೇ! ನಿದ್ರೆ ಯನ್ನಾದರೂ ಮಾಡಿರಿ! ನಿದ್ದೆಬಂದಾಗಲಾದರೂ ಕನಸಿನಲ್ಲಿ ಆ ನನ್ನ ಊರ್ವಶಿಯು ಕಾಣಿಸಿಯಾಳೋ, ಏನೋ? ಆಗಲಾದರೂ ನನ್ನ ಮನಸ್ಸಿನ ಪ್ರೀತಿಯನ್ನಭಿವೃದ್ಧಿ ಗೊಳಿಸುವ ಆ ಸೌಮ್ಯಳಾದ ಊರ್ವಶಿಯನ್ನು ಹೊಂದುತ್ತೇನೆ ಈಗ ತಾನೇ

**ಹಾ ಹತೋಽಸ್ಮಿ ವಿನಷ್ಟೋಽಸ್ಮಿ ಉರ್ವಶ್ಯಾ ರಹಿತೋ ವನೇ ।**
**ಚಂದ್ರ ಪೌತ್ರೇ ಕುರು ದಯಾಂ ದರ್ಶಯಸ್ವ ಮಮ ಪ್ರಿಯಾಂ ॥ ೫೨ ॥**

**ಶಶಾಂಕ ದೇವ ಶೀತಾಂಶೋ ನೃಣಾಂ ದೃಷ್ಟಿಮನೋಹರ ।**
**ಆಕ್ರಂದಾಮಿ ತವಾದ್ಯಾಹಂ ದರ್ಶಯಸ್ವ ಪ್ರಿಯಾಂ ಮಮ ॥ ೫೩ ॥**

**ಅತೃಪ್ತದರ್ಶನಸ್ಯೈವ ಸಾ ಗತಾ ಸುಂದರೀ ಮಮ ।**
**ಅಂತರ್ಧಾನಂ ವಿಶಾಲಾಕ್ಷೀ ತಾಂ ದರ್ಶಯ ಮಮೋರ್ವಶೀಂ ॥ ೫೪ ॥**

**ಕದಾಽಧರರಸಂ ತಸ್ಯಾಃ ಪಾಸ್ಯಾಮ್ಯಮೃತಸನ್ನಿಭಂ ।**
**ಕದಾ ದ್ರಷ್ಟಾಸ್ಮಿ ತಾಂ ಭೂಯಃ ಕಮಲೋದರಸನ್ನಿಭಂ ॥ ೫೫ ॥**

**ಮೃಣಾಲಬಾಹುಯುಗಲಾಂ ಪದ್ಮವಕ್ತ್ರಾಂ ಕದಾಪ್ರಿಯಾಂ ।**
**ನೀಲೋತ್ಪಲಾಕ್ಷೀಮಾಲಿಂಗ್ಯ ತಾಪಂ ತ್ಯಕ್ಷ್ಯಾಮ್ಯನಂಗಜಂ ॥ ೫೬ ॥**

ಚಂದ್ರನು ಉದಯಿಸಿರುವನು ಈ ಚಂದ್ರನು ನನ್ನನ್ನು ಬಹು ಹಿಂಸಿಸುತ್ತಲಿದ್ದಾನೆ ಈ ಚಂದ್ರನು ಪೂರ್ವದಲ್ಲಿ ನನ್ನ ಪ್ರಿಯೆಯಾದ ಊರ್ವಶಿಯ ವದನಚಂದ್ರನಿಂದ ಜಯಿಸಲ್ಪಟ್ಟವನಾಗಿರುವುದರಿಂದ, ಆ ಹಗೆಯಿಂದ ನನಗೆ ಈಗ ವಿರೋಧವಾಗಿ ಪರಿಣಮಿಸಿದಾನೆ ಎಲೋ, ಚಂದ್ರ! ಹಿಂಸಿಸು! ನನ್ನ ಊರ್ವಶಿಯು ನನ್ನ ಹತ್ತಿರದಲ್ಲಿಲ್ಲದೆ ಇರುವಾಗ ನಿನ್ನ ಇಷ್ಟ ಬಂದಂತೆ ನನ್ನನ್ನು ಹಿಂಸೆಮಾಡು, ಅಯ್ಯಯ್ಯೋ! ಸತ್ತೆನು! ಸತ್ತೆನು! ಊರ್ವಶಿಯಿಲ್ಲದ ಈ ವನದಲ್ಲಿ ನಾನು ನಾಶವಾಗಿ ಹೋಗುತ್ತಲಿದೇನೆ ಚಂದ್ರ! ಚಂದ್ರ! ನಾನು ನಿನ್ನ ಮೊಮ್ಮಗನಯ್ಯ! ಮೊಮ್ಮಗನ ಮೇಲಿನ ಪ್ರೀತಿಯಿಂದಲಾದರೂ ನನ್ನ ಪ್ರಿಯೆಯನ್ನು ತೋರಿಸಲಾರೆಯಾ? ಓ! ದೇವ! ಶಶಾಂಕ! ಶೀತಾಂಶುವೆ! ನರರ ನಯನ ಮನೋಹರನೇ! ನಾನು ಇಷ್ಟು ಅಳುತ್ತಿರುವಾಗ ನೀನು ಸುಮ್ಮನಿರಬಹುದ? ನನ್ನ ದಯಿತೆಯನ್ನು ತೋರಿಸು ಅವಳ ಮುಖವನ್ನು ನೋಡಿ ಇನ್ನೂ ನಾನು ತೃಪ್ತಿಹೊಂದದೇ ಇರುವಷ್ಟರೊಳಗಾಗಿಯೇ ಆ ಆ ಸುಂದರಿಯು ನನ್ನನ್ನು ಬಿಟ್ಟು ಹೊರಟುಹೋದಳಲ್ಲಾ! ಇಂತು ಅಂತರ್ಧಾನಳಾದ ಆ ವಿಶಾಲಾಕ್ಷಿಯಾದ ಊರ್ವಶಿಯನ್ನೀಗ ನನಗೆ ತೋರಿಸು ಆ ಕೆಂಪುಬಾಯ ಸುಂದರಿಯ ಅಧರಾಮೃತವನ್ನು ನಾನಿನ್ನಾವಾಗ ಪಾನಮಾಡಲೀ? ಕಮಲದಳದಂತೆ ವಿರಾಜಿಸುವ ಆ ಕಮಲನಯನೆಯನ್ನು ನಾನು ಪುನಃ ಇನ್ನಾಗವಾಗ ನೋಡಲಿ?

೫೬-೬೦ ತಾವರೆ ಎಸಳಿನಂತೆ ಬಾಹುಯುಗ್ಮಗಳುಳ್ಳ ಪದ್ಮನಯನೆಯಾದ, ನೀಲೋತ್ಪಲದಳದಂತೆ ನೇತ್ರಗಳುಳ್ಳ ನನ್ನ ದಯಿತೆಯನ್ನಾಲಂಗಿಸಿ ಈ ಮದನಸಿಂ

**ಅನಂಗಶರಸುನ್ನಸ್ಯ ಬಾಲೇ ಭವ ಗತಿರ್ಮಮ ।**
**ದದಸ್ವ ದರ್ಶನಂ ಸುಭ್ರೂಃ ಕಾ ಮಮಾನ್ಯಾ ಗತಿರ್ಭವೇತ್ ॥ ೫೭ ॥**

**ಕಾಮಮೋಹಗೃಹೀತಸ್ಯ ತ್ವಮೇವಾಭೂರ್ಗತಿರ್ಮಮ ।**
**ಭೂಯಸ್ತ್ವಮೇವ ಸುಭಗೇ ಗತಿರ್ಭವ ಮಮಾನಘೇ ॥ ೫೮ ॥**

**ಏಷಾ ವಿಗಲಿತಾ ರಾತ್ರಿರ್ಮಮ ವರ್ಷಶತೋಪಮಾ ।**
**ಅನ್ವೇಷ್ಟುಂ ಕ್ವ ಗಮಿಷ್ಯಾಮಿ ನಿರ್ಘೃಣಾಂ ತಾಂ ಮಮೋಪರಿ ॥ ೫೯ ॥**

**ಯಸ್ಯಾಃ ಕೋಪಂ ನ ಜಾನಾಮಿ ಸ್ವಪ್ನೇಽಪಿ ವರವರ್ಣಿನೀ ।**
**ದೈವೇನೋಪಹತಸ್ಯಾದ್ಯ ತ್ಯಕ್ತ್ವಾ ಸಾ ಸುಭಗಾ ಗತಾ ॥ ೬೦ ॥**

**॥ ಮಾರ್ಕಂಡೇಯ ಉವಾಚ ॥**

**ಏವಂ ಸ ವಿಲಪನ್ರಾಜಾ ತ್ಯಕ್ತ್ವಾಹಾರಃ ಪರಿಭ್ರಮನ್ ।**
**ಆಸಸಾದ ಕುರುಕ್ಷೇತ್ರಂ ದ್ವಾದಶಾಹೇನ ಪಾರ್ಥಿವ ॥ ೬೧ ॥**

---

ದುಂಟಾದ ತಾಪವನ್ನು ಯಾವಾಗ ಪರಿಹರಿಸಿಕೊಳ್ಳಲಿ? ಎಲೌ, ಸುಕುಮಾರಿಯೆ! ಮನ್ಮಥಬಾಣಗಳಿಂದ ಹೊಡೆಯಲ್ಪಟ್ಟಿರುವ ನನಗೆ ನೀನೇ ಗತಿ ನಿನ್ನ ದರ್ಶನವನ್ನು ಕೊಡು. ಈಗ ನನಗೆ ನಿನ್ನನ್ನು ಬಿಟ್ಟು ಮತ್ತಾರೂ ಗತಿಯಿಲ್ಲ ಕಾಮವೆಂಬ ಮೋಹ (ಅಜ್ಞಾನ) ದಿಂದ ಹಿಡಿಯಲ್ಪಟ್ಟ ನನಗೆ ನೀನೇ ಗತಿ. ಎಲೌ ಸುಂದರಿ! ಮತ್ತೂ ಮತ್ತೂ ಹೇಳುತ್ತೇನೆ ನೀನೇ ನನಗೆ ಗತಿ! ನೀನೇ ನನಗೆ ಗತಿ! ಓಹೋ! ಈ ರಾತ್ರಿಯು ಕಳೆಯಿತು, ಈ ರಾತ್ರಿಯು ನನಗೆ ನೂರು ವರ್ಷವಂತೆ ಪರಿಣಮಿಸಿತು. ಈಗ ಊರ್ವಶಿಯನ್ನು ಹುಡುಕುವುದಕ್ಕಾಗಿ ಇನ್ನೆಲ್ಲಿಗೆ ಹೊರಡಲಿ? ನನ್ನ ಮೇಲೆ ಆಕೆಯು ನಿರ್ದಯಳಾಗಿರುವಳು ಸ್ವಪ್ನದಲ್ಲೂ ಸಹ ಅವಳು ಕೋಪಮಾಡಿಕೊಂಡುದನ್ನು ನಾನು ನೋಡಲೇ ಇಲ್ಲ ಈಗ ಮಾತ್ರ ಅದೃಷ್ಟಹೀನನಾದ ನನ್ನನ್ನು ಆ ಸೌಭಾಗ್ಯವತಿಯು ಬಿಟ್ಟು ಹೋದಳು

೬೧-೬೩ ಈ ರೀತಿಯಾಗಿ ಪುರೂರವನು ಪ್ರಲಾಪಮಾಡುತ್ತಾ ಆಹಾರವನ್ನು ಸಹಾ ತ್ಯಾಗಮಾಡಿ ತನ್ನ ನಗರವನ್ನು ಪ್ರವೇಶಿಸದೆ ಹನ್ನೆರಡು ದಿವಸ ದಾರಿಯನ್ನು ನಡೆದು ಕುರುಕ್ಷೇತ್ರಕ್ಕೆ ಹೋಗಿ ತಲಪಿದನು ಆ ಕುರುಕ್ಷೇತ್ರದಲ್ಲೊಂದಾನೊಂದು ಸರೋವರದಲ್ಲಿ ಕುಳಿತುಕೊಂಡು ಆಹಾರವಿಲ್ಲದೆ ಹಸಿವು ಬಾಯಾರಿಕೆಗಳಿಂದ ಕೂಡಿ

**ಪುಷ್ಕರಿಣ್ಯಾಸ್ತಟೆಪ್ಲಕ್ಷೇ ಪುಷ್ಕರೈರುಪಶೋಭಿತೇ ।**
**ನಿಷಸಾದ ತದಾ ಶ್ರಾಂತಃ ಕ್ಷುತ್ಪಿಪಾಸಾಸಮನ್ವಿತಃ ।**
**ವಿಲಲಾಪ ಸ ತತ್ರಾಪಿ ಮದನೇನ ವಶೀಕೃತಃ ॥ ೬೨ ॥**

**ಕದಾನು ತಚ್ಚಂದ್ರಮಸೋನುಕಾಂತಿ**
**ಮುಖಂ ಸ್ಮಿತಂ ಚಾರುವಿಲೋಚನಾಯಾಃ ।**
**ಉನ್ನಾಮ್ಯ ಪಾಸ್ಯಾಮ್ಯಧರಂತೃಷಾರ್ತೋ**
**ವಾರೀವ ಪಾಂಥಃ ಪಥಿ ಕೃಚ್ಛ್ರಲಭ್ಯಂ ॥ ೬೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಪುರೂರವಃಪ್ರಲಾಪವರ್ಣನೋನಾಮ**
**ಪಂಚತ್ರಿಂಶದುತ್ತರಶತತಮೋಧ್ಯಾಯಃ**

---

ದವನಾಗಿ ಬಹು ಬಳಲಿಕೆಯಿಂದ ಅಲ್ಲಿಯೇ ವಿಶ್ರಾಂತಿಯನ್ನು ಪಡೆಯುತ್ತಾ ಪುನಃ ಅಲ್ಲಿಯೂ ಕೂಡ ಮನ್ಮಥನ ವಶನಾಗಿ ಊರ್ವಶಿಯನ್ನು ಜ್ಞಾಪಿಸಿಕೊಂಡು ಅಳುವುದಕ್ಕೆ ಆರಂಭಮಾಡಿದನು ಅಯ್ಯೋ! ನಾನು ಆ ಚಂದ್ರಮುಖಿಯ ಮನೋಹರವಾದ ಮುಖವನ್ನು ಮೇಲಕ್ಕೆತ್ತಿ ಮನದಣಿಯುವಂತೆ, ಬಿಸಿಲಿನಲ್ಲಿ ದಾರಿ ನಡೆದು ಬಳಲಿದ ಮಾರ್ಗಸ್ಥರು ಎಲ್ಲಿಯಾದರೂ ನೀರು ಸಿಕ್ಕಿದರೆ ಗಟಗಟನೆ ಹೇಗೆ ಹೀರುವರೋ ಅದರಂತೆ ಅದೆಂದು ಆಕೆಯ ಮುಖವನ್ನು ಚುಂಬಿಸುವೆನೋ ಎಂದು ವ್ಯಥೆಪಟ್ಟನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪುರೂರವನ ಪ್ರಲಾಪವರ್ಣಯೆಂಬ
ಹೆಸರಿನ ನೂರಮೂವತ್ತೈದನೆಯ ಅಧ್ಯಾಯವು
ಮುಗಿದುದು



ಶ್ರೀ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಟ್ತ್ರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಉರ್ವಶ್ಯಪಿ ವರಾರೋಹಾ ಮದನೇನಾಭಿಪೀಡಿತಾ ।
ಜಗಾದ ನಾರದಸ್ಯಾಥ ಸ್ವಾಮವಸ್ಥಾಂ ನೃಪಂ ವಿನಾ ॥ ೧ ॥

ತತಸ್ತಾಂ ನಾರದಃ ಪ್ರಾಹ ಸುಭಗೇ ಗಚ್ಛ ಪಾರ್ಥಿವಂ ।
ತಸ್ಯಾಪ್ಯವಸ್ಥಾ ಮಹತೀ ತ್ವದ್ವಿಹೀನಸ್ಯ ಸುಂದರೀ ॥ ೨ ॥

ಏಕಾಂ ರಾತ್ರಿಂ ನರೇಂದ್ರೇಣ ಸಹೋಷ್ಯ ವರವರ್ಣಿನೀ ।
ಸ್ವರ್ಗಲೋಕಮುಪಾಗಚ್ಛ ಶ್ರೇಯಃ ಪ್ರಾಪ್ಸ್ಯಸಿ ವೈ ತತಃ ॥ ೩ ॥

---

### ಒಂದು ನೂರ ಮೂವತ್ತಾರನೆಯ ಅಧ್ಯಾಯವು.

೧ ದೇವಲೋಕಕ್ಕೆ ಪ್ರವೇಶಿಸಿದ ಊರ್ವಶಿಯೂ ಸಹ ಮದನನ ಬಾಣಗಳಿಂದ ಪೀಡಿತಳಾಗಿ ತನ್ನ ಗಂಡನನ್ನು ತೊರೆದು ಬಂದ ಮೇಲೆ ತಾನು ಪಡುತ್ತಿರುವ ವಿರಹಾವಸ್ಥೆಯ ವಿಷಯವನ್ನು ನಾರದಋಷಿಗೆ ತಿಳಿಸಿದಳು

೨-೩ —ಆ ಮಾತನ್ನು ಕೇಳಿ ನಾರದನು ಊರ್ವಶಿಗೆ ಹೀಗೆ ಹೇಳಿದನು—ಎಲೆ ಊರ್ವಶಿಯೇ ! ನಿನಗಿಂತಲೂ ಪುರೂರವನ ಅವಸ್ಥೆಯನ್ನೂ, ನೀನು ಬಂದ ಮೇಲೆ ಹೇಗಿರುವನೆಂಬ ವಿಚಾರವನ್ನೂ ಹೇಳುವುದಕ್ಕೇ ಸಾಧ್ಯವಿಲ್ಲ ನಿನಗಿಂತ ಅವನ ಕೊರತೆಯೇ ಬಹಳ ಹೆಚ್ಚಾಗಿದೆಯಾದ್ದರಿಂದ ನೀನು ಪುನಃ ಅವನ ಬಳಿಗೆ ಹೋಗಿ ಒಂದೇ ಒಂದು ರಾತ್ರಿ ಅವನೊಡನೆ ನೇರಿದ್ದು ಪುನಃ ಸ್ವರ್ಗಕ್ಕೆ ಹೊರಟು ಬಾ ಆಗ ನೀನು ಶ್ರೇಯಸ್ಸನ್ನು ಹೊಂದುತ್ತೀಯೆ

**ನಾರದೇನೈವಮುಕ್ತಾ ಸಾ ಸಖೀಭಿರ್ಬಹುಭಿರ್ವೃತಾ ।**
**ಪುಷ್ಕರಿಣ್ಯಾಸ್ತರುಪ್ಲಕ್ಷೇ ಯಯೌ ಸ್ನಾತುಂ ವರಾನನಾ ॥ ೪ ॥**

**ಏತಸ್ಮಿನ್ನೇವ ಕಾಲೇ ತು ನಿದ್ರಯೋಪಹೃತೋ ನೃಪಃ ।**
**ಅಪ್ಸರೋಭಿರವಜ್ಞಾತಸ್ತತ್ರ ಸುಷ್ವಾಪ ಪಾರ್ಥಿವ ॥ ೫ ॥**

**ಅದ್ಯ ಯಾಸ್ಯಾಮಿ ರಾಜಾನಮಿತಿ ಹೃಷ್ಟಾ ತದೋರ್ವಶೀ ।**
**ಕ್ರೀಡಂತ್ಯತ್ರ ಜಲೇ ತಸ್ಮಿನ್ಸಖೀಗಣವೃತಾ ತದಾ ॥ ೬ ॥**

**ತ್ಯಕ್ತನಿದ್ರೋ ನರೇಂದ್ರೋಽಪಿ ವಿಲಲಾಪ ಚಿರಂ ಪುನಃ ।**
**ಶುಶ್ರಾವ ವಿಲಪಂತಂ ಸಾ ಸಖೀಭಿಃ ಸಹಿತಾ ನೃಪಂ ॥ ೭ ॥**

**ದರ್ಶಯಾಮಾಸ ಚಾತ್ಮಾನಂ ಪಾರ್ಥಿವಸ್ಯ ಶುಭಾ ತತಃ ।**
**ಉವಾಚ ಚ ವರಾರೋಹಾ ನಾರದೋಕ್ತಮಶೇಷತಃ ॥ ೮ ॥**

೪　ನಾರದರಿಂದ ಹೇಳಲ್ಪಟ್ಟೊಡನೆಯೇ ಊರ್ವಶಿಯು ಬಹಳ ಮಂದಿ ಸಖಿಯರನ್ನೊಡಗೊಂಡು ಕುರುಕ್ಷೇತ್ರದ ಪುಷ್ಕರಿಣೀ ತೀರದಲ್ಲಿದ್ದ ಆ ಮರದ ಬಳಿಯಲ್ಲಿ ಸ್ನಾನಮಾಡುವುದಕ್ಕಾಗಿ ತಾನೂ ಬಂದಳು

೫　ಎಲೈ ನರೇಂದ್ರನೇ, ಕೇಳು　ಇದೇ ಸಮಯದಲ್ಲಿ ಪುರೂರವನು ನಿದ್ರೆಯಿಂದ ಬಾಧಿತನಾಗಿ ಅಲ್ಲಿಯೇ ಮಲಗಿಕೊಂಡನು　ಈ ವೃತ್ತಾಂತವನ್ನು ಊರ್ವಶಿಯ ಸಖಿಯರಾದ ಅಪ್ಸರಸ್ತ್ರೀಯರು ತಿಳಿದುಕೊಂಡರು

೬　ಈ ವೃತ್ತಾಂತವು ಊರ್ವಶಿಗೆ ತಿಳಿಯಿತು　ಈಗಲೇ ಹೋಗಿ ಆ ಮಹಾರಾಜನನ್ನು ಹೊಂದುತ್ತೇನೆಂದುಕೊಂಡು ತನ್ನ ಸಖಿಯರನ್ನು ಕುರಿತು ನೀವು ಇಲ್ಲೇ ಇದ್ದುಕೊಂಡು ಜಲದಲ್ಲಿ ಆಟವಾಡುತ್ತಲಿರಿ ಎಂದು ತಿಳಿಸಿದಳು

೭-೮　ನಿದ್ದೆಬಂದಿದ್ದ ಆ ರಾಜನಿಗೆ ನಿದ್ರಾಸುಖವು ಸಹ ಸರಿಯಾಗಿ ದೊರೆಯಲಿಲ್ಲ　ಕೂಡಲೆ ನಿದ್ರೆಯಿಂದೆಚ್ಚೆತ್ತವನಾಗಿ ವ್ಯಥೆಪಡುತ್ತಾ ಕುಳಿತುಕೊಂಡಿರುವಲ್ಲಿ ಸಖಿಯರು ಮಾತನಾಡುತ್ತ ಆಟವಾಡುತ್ತಲಿರುವುದರ ಧ್ವನಿಯು ಕೇಳಿಸಿತು　ಅಷ್ಟರಲ್ಲಿ ಊರ್ವಶಿಯು ಅವನ ಸಮೀಪಕ್ಕೆ ತಾನೇ ಬಂದವಳಾಗಿ ತನ್ನನ್ನು ರಾಜನಿಗೆ ಕಾಣಿಸಿಕೊಂಡಳು ಮತ್ತು ನಾರದನು ಹೇಳಿದ ಸಕಲ ವೃತ್ತಾಂತವನ್ನು ಆ ರಾಜನೊಡನೆ ಹೇಳಿದಳು

**ತತ್ರೈವೋವಾಸ ತಾಂ ರಾತ್ರಿಂ ಸಹ ತೇನವರಾನನಾ ।**
**ರಾತ್ರಿಕ್ಷಯೇ ವಿಸಂಜ್ಞಂ ಸಾ ರಾಜಾನಂ ವಾಕ್ಯಮಬ್ರವೀತ್ ॥ ೯ ॥**

**॥ ಉರ್ವಶ್ಯುವಾಚ ॥**

**ಆರಾಧಯಸ್ವ ಗಂಧರ್ವಾನ್ಮೋಹಂ ತ್ಯಕ್ತ್ವಾ ನರೇಶ್ವರ ।**
**ತೇಷಾಂ ಪ್ರಾರ್ಥಯ ಮಾಂ ಸೌಮ್ಯ ತತಃ ಪ್ರಾಪ್ಸ್ಯಸಿ ಮಾ ಚಿರಂ ೧೦ ॥**

**॥ ಮಾರ್ಕಂಡೇಯ ಉವಾಚ ॥**

**ಏವಮುಕ್ತ್ವಾ ಯಯೌ ಸ್ವರ್ಗಂ ರಾಜಾ ತತ್ರೈವ ಪಾರ್ಥಿವ ।**
**ತಪಃ ಸ ವಿಪುಲಂ ಚಕ್ರೇ ತದ್ಗತೇನೈವ ಚೇತಸಾ ॥ ೧೧ ॥**

**ಅಥ ಸಂವತ್ಸರೇ ಪೂರ್ಣೇ ಸೂರ್ಯಸ್ಯೋದಯನಂ ಪ್ರತಿ ।**
**ನಾರದಂ ಪುರತಃ ಕೃತ್ವಾಗಂಧರ್ವಾ ದರ್ಶನಂ ದದುಃ ॥ ೧೨ ॥**

— ಮತ್ತು ಆ ಊರ್ವಶಿಯು ರಾತ್ರಿಯೆಲ್ಲಾ ಆ ಪುರೂರವನ ಜತೆಯಲ್ಲಿ ಮಲಗಿದ್ದು ರಾತ್ರಿ ಕಳೆದು ಬೆಳಗಾಗುತ್ತಿರುವ ಸಮಯದಲ್ಲಿ ಎಚ್ಚರಗೊಂಡಿದ್ದ ಪುರೂರವನನ್ನು ಕುರಿತಿಂತೆಂದಳು

೧೦ ಊರ್ವಶಿಯು ಹೇಳುತ್ತಾಳ —ಎಲೈ ಮಹಾರಾಜನೇ ! ನನ್ನ ಮೇಲೆ ನೀನು ವಿಶೇಷವಾಗಿ ಮೋಹಗೊಂಡಿರುತ್ತೀ ಈಗ ನೀನು ಆ ಮೋಹವನ್ನು ತ್ಯಾಗ ಮಾಡಿ ಗಂಧರ್ವಗಣವನ್ನು ಆರಾಧನೆಮಾಡು ಆಗ ಅವರು ನಿನ್ನ ಪ್ರಾರ್ಥನೆಗೆ ಮೆಚ್ಚಿ ನನ್ನನ್ನು ಬಹು ಜಾಗ್ರತೆಯಾಗಿ ನಿನ್ನ ವಶಕ್ಕೊಪ್ಪಿಸುವರು ಆಗ ನನ್ನನ್ನು ಶಾಶ್ವತವಾಗಿ ಹೊಂದಿರಬಹುದು

೧೧ ಮಾರ್ಕಂಡೇಯನು ಹೇಳುತ್ತಾನೆ —೧೧ ಎಲೈ ವಜ್ರಮಹಾರಾಜನೇ ! ಕೇಳು ಈರೀತಿ ಹೇಳಿದ ಊರ್ವಶಿಯ ಮಾತನ್ನು ಕೇಳಿ ಆ ಮಹಾರಾಜನು ಊರ್ವಶಿಯಲ್ಲಿಯೇ ನೆಟ್ಟಮನಸ್ಸಿನಿಂದ ಗಂಧರ್ವರನ್ನು ಕುರಿತು ಬಹು ಕಾಲ ತಪಸ್ಸುಮಾಡಿದನು ಪುರೂರವನಿಗೆ ಈ ಮಾತನ್ನು ಹೇಳಿ ಆ ಊರ್ವಶಿಯು ಕೂಡಲೆ ಸ್ವರ್ಗಕ್ಕೆ ಪ್ರಯಾಣ ಬೆಳೆಸಿದಳು

೧೨ ಈರೀತಿ ಒಂದು ವರ್ಷಕಾಲ ತಪಸ್ಸುಮಾಡಿದ ಬಳಿಕ ಒಂದು ದಿನ ಸೂರ್ಯೋದಯ ಸಮಯದಲ್ಲಿ ಗಂಧರ್ವರೆಲ್ಲರೂ ನಾರದನನ್ನು ಮುಂದೆ ಬಿಟ್ಟು ಕೊಂಡು ಪುರೂರವನಿಗೆ ದರ್ಶನವನ್ನು ದಯಪಾಲಿಸಿದರು

॥ ಗಂಧರ್ವಾ ಊಚುಃ ॥

**ವರಂ ವರಯ ರಾಜೇಂದ್ರ ಯದಿಚ್ಛಸಿ ಮಹಾಭುಜ ।**
**ವಯಂ ಹಿ ತವ ದಾಸ್ಯಾಮಃ ಸರ್ವ ಏವಾಮರಪ್ರಭಾಃ ॥ ೧೩ ॥**

॥ ಪುರೂರವಾ ಉವಾಚ ॥

**ಭವಂತಶ್ಚೇತ್ಪ್ರಸನ್ನಾ ಮೇ ಯದಿ ಮೇ ರೋಚತೇ ವರಂ ।**
**ಉರ್ವಶೀ ಸೇಹ ಚಾರ್ವಂಗೀ ಭವದ್ಭಿರ್ಮಮದೀಯತಾಂ ॥ ೧೪ ॥**

॥ ಗಂಧರ್ವಾ ಊಚುಃ ॥

**ಸ್ಥಾಲಿಂ ಪೂರ್ಣಾಮಿಮಾಂರಾಜನ್ಗೃಹಾಣಾಗ್ನೇರ್ಮಹಾಭುಜ ।**
**ಅಸ್ಮಾದಗ್ನಿಂ ತ್ರಿಧಾ ಕೃತ್ವಾಯಜಸ್ವ ವಿಗತಜ್ವರಃ ॥ ೧೫ ॥**

**ವೇದೋಕ್ತೇನ ವಿಧಾನೇನ ಗಂಧರ್ವತ್ವಮವಾಪ್ಸ್ಯಸಿ ।**
**ತ್ರೇತಾಗ್ನಿಪೂರ್ವಸ್ಯ ವಿಧೇರಸ್ಮಿನ್ಮನ್ವಂತರೇ ಭವಾನ್ ॥ ೧೬ ॥**

---

೧೩ ಗಂಧರ್ವರು ಹೇಳುತ್ತಾರೆ ಎಲೈ ಪುರೂರವ ಮಹಾರಾಜನೇ ! ನೀನೇನು ವರವನ್ನು ಕೇಳಬೇಕೆಂದಿರುವಿಯೋ ಅದನ್ನು ಕೇಳಿಕೋ ದೇವತಾತೇಜಸ್ಸುಳ್ಳ ನಾವೆಲ್ಲರೂ ಸೇರಿ ನಿನಗೆ ವರವನ್ನು ಕೊಡುತ್ತೇವೆ

೧೪ ಎಲೈ ಗಂಧರ್ವಶ್ರೇಷ್ಠರಿರಾ ! ನನ್ನ ವಿಷಯದಲ್ಲಿ ನೀವು ಪ್ರಸನ್ನರಾಗಿ ನನಗೆ ಬೇಕಾದ ವರವನ್ನು ಕೊಡಲು ಸಿದ್ಧರಾಗಿದ್ದ ಪಕ್ಷದಲ್ಲಿ, ಸುಂದರಾಂಗಿಯಾದ ಆ ನಿಮ್ಮ ಊರ್ವಶಿಯನ್ನು ನನಗೆ ದಯಪಾಲಿಸಿರಿ

೧೫-೧೬ ಎಲೈ ಪುರೂರವಚಕ್ರವರ್ತಿಯೇ ! ಈಗ ನಿನಗೆ ನಾವು ಕೊಡುವ ಅಗ್ನಿಸ್ಥಾಲಿಯನ್ನು ತೆಗೆದುಕೋ! ಇದರಲ್ಲಿರುವ ಅಗ್ನಿಯನ್ನು ಮೂರು ಭಾಗ ಮಾಡಿ, ಯಾವ ದುಃಖವನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಯಜ್ಞವನ್ನು ಮಾಡು ವೇದದಲ್ಲಿ ಹೇಳಿರುವ ವಿಧಿಯನ್ನನುಸರಿಸಿ ನೀನು ಯಾಗಮಾಡಿದೊಡನೆ ಆ ಯಜ್ಞಫಲವಾಗಿ ನಿನಗೆ ಗಂಧರ್ವತ್ವವು ಪ್ರಾಪ್ತವಾಗುವುದು ಎಲೈ ಪುರೂರವಚಕ್ರವರ್ತಿಯೇ ! ಇನ್ನೂ ಕೇಳು ತ್ರೇತಾಗ್ನಿಪೂರ್ವಕವಾದ ವಿಧಿಯನ್ನನುಸರಿಸಿ ಯಜ್ಞಮಾಡುವುದಕ್ಕೆ ಈ ಮನ್ವಂತರದಲ್ಲಿ ನೀನೇ ಪ್ರಥಮ ಮಾರ್ಗದರ್ಶಿಯಾದ್ದರಿಂದಲೂ, ಇದಕ್ಕೆ ಗುರುವು (ಆಚಾರ್ಯನು) ಯಜ್ಞರಕ್ಷಕನಾದ ಮಹಾವಿಷ್ಣುವಾಗಿರುವುದರಿಂದಲೂ, ಯಜ್ಞ

**ಭವಿತಾ ದರ್ಶಿತಾ ಲೋಕೇ ಗುರುಶ್ಚ ಜಗತೀಪತಿಃ ।**
**ಗಂಧರ್ವತ್ವಮವಾಪ್ಯಾಥ ರಾಜನ್ಪ್ರಾಪ್ಸ್ಯಸ್ಯಥೋರ್ವಶೀಂ ॥ ೧೭ ॥**

**ಮನ್ವಂತರಮಿಮಂ ಸರ್ವಂ ರಂತ್ವಾ ಚ ತ್ವಂ ತಯಾ ಸಹ ।**
**ಮನ್ವಂತರೇ ಗತೇ ರಾಜನ್ನುರ್ವಶ್ಯಾ ಸಹಿತೋ ಭವಾನ್ ॥ ೧೮ ॥**

**ಪ್ರವೇಕ್ಷ್ಯತಿ ನಿಶಾನಾಥಂ ಸೋಮಂಶೀತಾಂಶುಮುಜ್ಜ್ವಲಂ ।**
**ಆಧಾರಂ ಸರ್ವಲೋಕಸ್ಯ ಪಿತೄಣಾಂ ಸ್ಥಾನಮುತ್ತಮಂ ॥ ೧೯ ॥**

**॥ ಮಾರ್ಕಂಡೇಯ ಉವಾಚ ॥**

**ಅಗ್ನಿಸ್ಥಾಲೀಂ ನೃಪೇ ದತ್ವಾ ಗಂಧರ್ವಾಸ್ತ್ರಿದಿವಂ ಯಯುಃ ।**
**ಅಥಾಜಗಾಮ ತಂ ದೇಶಂ ಬಾಲಮಾದಾಯಚೋರ್ವಶೀ ॥ ೨೦ ॥**

---

ಸಮಾಪ್ತಿಯಾದೊಡನೆ ನೀನು ಗಂಧರ್ವರ ಗುಂಪಿಗೆ ಸೇರಿ ನಿನ್ನ ಪ್ರೇಯಸಿಯಾದ ಊರ್ವಶಿಯನ್ನು ನಿಸ್ಸಂದೇಹನಾಗಿ ಹೊಂದುತ್ತೀಯೆ!

ಟಿಪ್ಪಣಿ —ಅಗ್ನಿತ್ರಯವೆಂದರೆ ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯವೆಂದು ಮೂರು ವಿಧ ಆಹಿತಾಗ್ನಿಗಳ ಮನೆಯಲ್ಲಿ ಇಂದಿಗೂ ಅಗ್ನಿಹೋತ್ರದ ಮನೆಯೆಂದು ಒಂದು ಔಪಾಸನಗೃಹವಿರುವುದು ಅಲ್ಲಿ ನಾವು ತ್ರೇತಾಗ್ನಿಗಳನ್ನು ಹೋಗಿ ನೋಡ ಬಹುದು ಯಜ್ಞಶಾಲೆಯಲ್ಲಿಯೂ ಯಜ್ಞಯಜಮಾನನು ಈ ತ್ರೇತಾಗ್ನಿಗಳನ್ನು ಮಹಾವೇದಿಕೆಗಳಲ್ಲಿ ಪ್ರತಿಷ್ಠಿಸಿ ಯಜ್ಞಮಾಡುವ ಕ್ರಮವು ಈಗಲೂ ಇದೆ

೧೮-೧೯ ಈರೀತಿ ನೀನು ಊರ್ವಶಿಯನ್ನು ಪಡೆದು ಅವಳೊಡನೆ ಈ ಮನ್ವಂತರವು ಪೂರ್ತಿಯಾಗುವವರೆಗೂ ಸುಖವನ್ನು ಪಡೆಯುತ್ತೀಯೆ ಈ ಮನ್ವಂತರವು ಕಳೆದಹೋದ ಬಳಿಕ ನೀನು ಹಿಮಕರಣನಾದ ಉಜ್ವಲನಾದ ಚಂದ್ರನನ್ನು (ಚಂದ್ರ ಮಂಡಲವನ್ನು) ಊರ್ವಶೀ ಸಹಿತನಾಗಿಯೇ ಪ್ರವೇಶಮಾಡುತ್ತೀಯೆ ಮತ್ತು ಸರ್ವ ಲೋಕಕ್ಕೂ ಆಧಾರವಾದ ಪಿತೃಗಳ ಸ್ಥಾನ (ಲೋಕ) ವನ್ನು ಹೊಂದುತ್ತೀಯೆ

೨೦ ಮಾರ್ಕಂಡೇಯನು ಹೇಳುತ್ತಾನೆ —ಗಂಧರ್ವರು ಅಗ್ನಿಸ್ಥಾಲಿಯನ್ನು ಪುರೂರವಚಕ್ರವರ್ತಿಗೆ ಅನುಗ್ರಹಿಸಿ ಕೊಟ್ಟಬಳಿಕ ತಾವೆಲ್ಲರೂ ಸ್ವರ್ಗಕ್ಕೆ ಪ್ರಯಾಣ ಮಾಡಿದರು ಆ ಬಳಿಕ ಊರ್ವಶಿಯು ಒಂದು ಗಂಡುಮಗುವನ್ನು ಜತೆಯಲ್ಲಿ ಕರೆದು ಕೊಂಡು ಪುರೂರವನು ಕುಳಿತಿದ್ದ ಸ್ಥಳಕ್ಕೆ ಬಂದಳು

॥ ಉರ್ವಶ್ಯುವಾಚ ॥

**ತಸ್ಮಿನ್ಸಮಾಗಮೇ ಸೌಮ್ಯ ಜಾತೋಽಯಂ ತದಯಂ ಪ್ರಭೋ ।**
**ತಮಾದಾಯ ಪ್ರತಿಷ್ಠಾನಂ ವಜ್ರ ಪಾರ್ಥಿವ ಮಾ ಚಿರಂ ॥ ೨೧ ॥**

**ಕೃತಂ ನಾಮಾಸ್ಯ ಗಂಧರ್ವೈರ್ವಿಶ್ವಾಯುರಿತಿ ಭೂಮಿಪಂ ।**

॥ ಮಾರ್ಕಂಡೇಯ ಉವಾಚ ॥

**ಏವಂ ದತ್ವಾ ನೃಪೇ ಬಾಲಂ ಸಾ ಪ್ರಯಾತಾ ತ್ರಿವಿಷ್ಟಪ ॥ ೨೨ ॥**

**ಏಕಾಕೀ ಚಿಂತಯಾಮಾಸ ಬುಧಪುತ್ರೋಽಪ್ಯನಂತರಂ ।**
**ಕಿಂನು ಬಾಲಮುಪಾದಾಯ ಗಮಿಷ್ಯಾಮಿ ಪುರಂ ಸ್ವಕಂ ॥ ೨೪ ॥**

**ಅಥಾದಾಯ ಗಮಿಷ್ಯಾಮಿ ಸ್ಥಾಲೀಮೇತಾಂ ವಿಭಾವಸೋಃ ।**
**ರತ್ವಾದೇಭ್ಯೋ ಭಯಂ ಘೋರಂ ಬಾಲಸ್ಯೇಹ ಭವಿಷ್ಯತಿ ॥ ೨೪ ॥**

**ಮಯಾ ವಿಹೀನಸ್ಯ ಭಯಂ ನಾಸ್ತಿ ಕಿಂಚಿದ್ವಿಭಾವಸೋಃ ।**
**ಏವಂ ಸ ನಿಶ್ಚಯಂ ಕೃತ್ವಾ ಬಾಲಮಾದಾಯ ಸತ್ವರಃ ॥ ೨೫ ॥**

೨೧ ಊರ್ವಶಿಯು ಹೇಳುತ್ತಾಳೆ.—ಎಲೆ ಪ್ರಭೋ! ಕುರುಕ್ಷೇತ್ರದ ಸರೋವರದ ತೀರದಲ್ಲಿ ನಾವಿಬ್ಬರೂ ಒಂದು ದಿನ ರಾತ್ರಿ ಮಲಗಿದ್ದೆವಷ್ಟೆ? ಆಗ ನಮ್ಮಿಬ್ಬರ ಸಮಾಗಮಕಾಲದಲ್ಲಿನ ಫಲವಾಗಿ ಈ ಮಗುವು ಹುಟ್ಟಿತು ಈ ಮಗು ವನ್ನು ಕರೆದುಕೊಂಡು ಪ್ರತಿಷ್ಠಾನಪುರಕ್ಕೆ ಜಾಗ್ರತೆಯಾಗಿ ಹೋಗು ಎಲೈ ಧೊರೆಯೆ ಈ ಮಗುವಿಗೆ ಗಂಧರ್ವರು ವಿಶ್ವಾಯುವೆಂದು ಹೆಸರಿಟ್ಟಿರುವರು

೨೨-೨೬ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರಭೂಪಾಲಕನೇ! ಕೇಳು ಈರೀತಿಯಾಗಿ ಊರ್ವಶಿಯು ಆ ಬಾಲಕನನ್ನು ಪುರೂರವನ ವಶಕ್ಕೆ ಕೊಟ್ಟು, ತಾನು ಸ್ವರ್ಗಕ್ಕೆ ಹೊರಟುಹೋದಳು ಆಗ ಬುಧಪುತ್ರನಾದ ಪುರೂರವನು ಒಬ್ಬನೇ ಕುಳಿತು ಈರೀತಿ ಚಿಂತನೆಮಾಡಿದನು ಈಗ ನಾನೇನು ಮಾಡಲಿ? ಮೊದಲು ಈ ಬಾಲಕನನ್ನು ಕರೆದುಕೊಂಡು ಊರಿಗೆ ಬಿಟ್ಟುಬಂದು ಆ ಬಳಿಕ ಈ ಅಗ್ನಿಸ್ಥಾಲಿಯನ್ನು ಊರಿಗೆ ತೆಗೆದುಕೊಂಡು ಹೋಗಬೇಕು ಹಾಗಲ್ಲದೆ ಮಗುವನ್ನು ಬಿಟ್ಟು ಮೊದಲು ಈ ಅಗ್ನಿಸ್ಥಾಲಿಯನ್ನು ತೆಗೆದುಕೊಂಡು ಹೋಗುವುದಾದರೆ ನಾಯಿ ನರಿಗಳಿಂದ ಈ ಮಗುವಿಗೆ ಭಯಂಕರ ವಿಪತ್ತುಂಟಾಗುತ್ತದೆ ನಾನಿಲ್ಲದೆ ಇದ್ದರೂ ಅಗ್ನಿಗೆ ಯಾರ ಭಯವೂ ಇಲ್ಲವಾದ್ದರಿಂದ, ಮೊದಲೇ ಮಗುವನ್ನು ಕರೆದುಕೊಂಡು ಹೋಗುವುದು

**ಜಗಾಮ ಸ್ವಪುರಂ ಹೃಷ್ಟಃ ಸಸೈನ್ಯಶ್ಚಾಗಮತ್ಪುನಃ ।**
**ಸ್ಥಾಲೀಂ ದದರ್ಶ ಹೀನಾಂ ತು ದೃಷ್ಟ್ವಾ ಮೋಹಮುಪಾಗತಃ ॥ ೨೬ ॥**

**ತ್ರಿದಿವಾದೇತ್ಯ ಗಂಧರ್ವಾ ಮೂಢಂ ಪಾರ್ಥಿವಸತ್ತಮಂ ।**
**ಉತ್ಥಾಪಯಿತ್ವಾ ವಚನಮೂಚುಸ್ತದ್ಧಿತಕಾಂಕ್ಷಿಣಃ ॥ ೨೭ ॥**

**ರಾಜನ್ನಸ್ಮಿಂಚಮೀಗರ್ಭೇ ಪ್ರವಿಷ್ಟಃ ಸ ಹುತಾಶನಃ ।**
**ಅಸ್ಮಾತ್ತ್ವಮರಣಿಂ ಕೃತ್ವಾ ಜನಯಸ್ವ ಹುತಾಶನಂ ॥ ೮ ॥**

**ತ್ರಿಧಾ ಕೃತ್ವಾ ತು ತಂ ವೀರ ಯಜಸ್ವ ವಿಧಿವತ್ತದಾ ।**
**ತಮಿಷ್ಟ್ವಾ ಪ್ರಾಪ್ಸ್ಯಸೇ ವೀರ ಗಂಧರ್ವತ್ವಮಸಂಶಯಂ ॥ ೨೯ ॥**

**ತ್ರೇತಾಗ್ನಿಂ ತೇ ನರೇಂದ್ರೇಹ ಹೋಷ್ಯಂತಿ ಸತತಂ ದ್ವಿಜಾಃ ।**
**ಸಪ್ತವರ್ಷಾಣಿ ತೇಷ್ಯೇವಂ ಯಾಸ್ಯತ್ಯಸ್ಮತ್ಸಲೋಕತಾಂ ॥ ೩೦ ॥**

ಸರಿಯೆಂದು ನಿಶ್ಚಯಿಸಿ, ಆ ಮಗುವನ್ನು ವೇಗ ತೆಗೆದುಕೊಂಡು ಊರಿಗೆ ಹೋಗಿ ಅರಮನೆಯಲ್ಲಿ ಬಿಟ್ಟು ಪುನಃ ಸೈನ್ಯ ಸಮೇತನಾಗಿ ಅಗ್ನಿಯಿದ್ದಲ್ಲಿಗೆ ಬಂದು ನೋಡಿದನು ಆದರೆ ಆಗ ಅಗ್ನಿಸ್ಥಾಲಿಯು ಅಲ್ಲಿರಲಿಲ್ಲ ಆ ವಿಚಿತ್ರವನ್ನು ನೋಡಿ ರಾಜನು ದಿಕ್ಕೇ ತೋರದ ಮೋಹ (ಮೂರ್ಛೆ) ಗೊಂಡನು

೨೭ ಈರೀತಿ ಮೂರ್ಛೆಗೊಂಡ ಪುರೂರವನನ್ನು ನೋಡಿ, ಬಾಲಕನ ಮೇಲಿನ ಮೋಹದಿಂದ ಅಗ್ನಿಯನ್ನು ಬಿಟ್ಟುಹೋದ। ಅವನ ಬುದ್ಧಿಗೆ ಪಶ್ಚಾತ್ತಾಪಪಟ್ಟವರಾಗಿ ಗಂಧರ್ವರೆಲ್ಲರೂ ಆ ಸ್ಥಳಕ್ಕೆ ಬಂದು ಮೂರ್ಛೆಗೊಂಡ ರಾಜನನ್ನೆಚ್ಚರಗೊಳಿಸಿ, ಅವನ ಹಿತವನ್ನು ಚಿಂತಿಸಿದವರಾಗಿ ಈ ರೀತಿ ಹೇಳಿದರು

೨೮-೩೦ ಎಲೈ ರಾಜನೇ ! ನೀನು ಹೊರಟುಹೋದ ಬಳಿಕ ಪಾಲಕರಿಲ್ಲದ ಈ ಅಗ್ನಿಯು ಇಲ್ಲಿಯೇ ಸಮೀಪದಲ್ಲಿ ಕಾಣುವ ಬನ್ನೀಮರದ ಗರ್ಭವನ್ನು ಪ್ರವೇಶಿಸಿರುವನು ಈ ಬನ್ನೀಮರವನ್ನು ಕಡೆದು ಅಗ್ನಿಯನ್ನು ಉತ್ಪತ್ತಿಮಾಡು ಬಳಿಕ ಜಾತವಾದ ಅಗ್ನಿ (ಜಾತವೇದಸ) ಯನ್ನು ತೆಗೆದುಕೊಂಡು ಮೂರು ಭಾಗಮಾಡಿ ವಿಧಿವಿಹಿತವಾಗಿ ಯಾಗಮಾಡು ಆರೀತಿ ಯಜ್ಞವನ್ನು ಮಾಡಿದರೆ ನೀನು ಗಂಧರ್ವತ್ವವನ್ನು ಸಂದೇಹವಿಲ್ಲದೆ ಹೊಂದುತ್ತೀಯೆ ಬ್ರಾಹ್ಮಣರು ಇನ್ನು ಮುಂದೆ ಈರೀತಿ ನಿನ್ನಿಂದ ಉತ್ಪನ್ನವಾದ ತ್ರೇತಾಗ್ನಿಗಳಲ್ಲಿಯೂ ಹೋಮಮಾಡುತ್ತಾರೆ ಈರೀತಿ

ತ್ರಯೋಗ್ನಯಶ್ಚಾಪಸದಂ ತವರಾಜನ್ಪ್ರಕೀರ್ತಿತಾಃ
ಅಗ್ನಿರಾಹವನೀಯಸ್ತು ವಾಸುದೇವೋ ನರಾಧಿಪ ॥ ೩೧ ॥

ದಕ್ಷಿಣಾಗ್ನಿಸ್ತಥಾ ಜ್ಞೇಯೋ ನಿತ್ಯಂ ಸಂಕರ್ಷಣೋ ಬುಧೈಃ ।
ತಥಾ ಚ ಗಾರ್ಹಪತ್ಯೋಽಗ್ನಿಃ ಪ್ರದ್ಯುಮ್ನಃ ಪರಿಪಠ್ಯತೇ ॥ ೩೨ ॥

ತಥೈವೋಪಸದೋ ರಾಜನ್ನನಿರುದ್ಧಃ ಪ್ರಕೀರ್ತಿತಃ ।
ತಸ್ಮಾದೇವ ವರೋ ವಿಷ್ಣುಶ್ಚತುರಾತ್ಮಾ ನರಾಧಿಪ ॥ ೩೩ ॥

ಫಲಾಭಿಸಂಧಾನಹುತೋ ಗಂಧರ್ವತ್ವಂ ಪ್ರಯಚ್ಛತಿ ।
ಕಾಮಂ ವಿನಾಗ್ನಿಹೋತ್ರೇಣ ಹುತೋ ರಾಜಜನಾರ್ದನಃ ॥ ೩೪ ॥

ಪ್ರಯಚ್ಛತಿ ಪರಂ ಸ್ಥಾನಮಮೃತಂ ಶಾಶ್ವತಂ ಧ್ರುವಂ ।
ಅಗ್ನಿಹೋತ್ರಾದೃತೇ ರಾಜನ್ಗಂಧರ್ವತ್ವಂ ನ ವಿದ್ಯತೇ ॥ ೩೫ ॥

---

ಏಳು ಏಳು ವರ್ಷಗಳ ಕಾಲ (ಸಪ್ತಪಾಕ ಯಜ್ಞಗಳನ್ನು) ಆಚರಿಸಿದ ಬ್ರಾಹ್ಮಣರೆಲ್ಲರೂ ನಮ್ಮೊಡನೆ ಸಾಲೋಕ್ಯವನ್ನು (ಗಂಧರ್ವಲೋಕವನ್ನು) ಹೊಂದುತ್ತಾರೆ,

೩೧-೩೩ ಎಲೈ ರಾಜನೇ ! ಈರೀತಿ ನಿನ್ನಿಂದ ಔಪಾಸನಾರ್ಥವಾಗಿ ಉತ್ಪತ್ತಿಯಾದ ಈ ಅಗ್ನಿತ್ರಯಗಳೂ ತ್ರೇತಾಗ್ನಿಗಳೆಂದು ಪ್ರಸಿದ್ಧವಾಗುತ್ತವೆ ಮೊದಲನೆಯ ಅಗ್ನಿಯೇ ವಾಸುದೇವಸ್ವರೂಪದಿಂದಿದ್ದು ಆಹವನೀಯವೆಂದು ಹೇಳಿಸಿಕೊಳ್ಳುತ್ತದೆ. ಎರಡನೆಯದು ಸಂಕರ್ಷಣಸ್ವರೂಪದಿಂದಿದ್ದು ದಕ್ಷಿಣಾಗ್ನಿಯೆಂದು ಪ್ರಸಿದ್ಧಿಯಾಗುವುದು ಮೂರನೆಯದೇ ಪ್ರದ್ಯುಮ್ನಸ್ವರೂಪವಾದ ಗಾರ್ಹ್ಯಪತ್ಯಾಗ್ನಿಯೆಂದು ಹೇಳಲ್ಪಡುತ್ತದೆ ಹಾಗೆಯೇ ನಿತ್ಯವೂ ಔಪಾಸನಮಾಡತಕ್ಕ ಅಗ್ನಿಯು ಅನಿರುದ್ಧನಾಮದಿಂದ ಕೀರ್ತಿತವಾಗುತ್ತದೆ ಆದ್ದರಿಂದಲೇ ಪುರುಷೋತ್ತಮನಾದ ಮಹಾವಿಷ್ಣುವು ಚತುರಾತ್ಮಾ ಎಂಬ ಹೆಸರಿನಿಂದ ಪೂಜಿತನಾಗಿದ್ದಾನೆ (ವಿಷ್ಣು ಸಹಸ್ರನಾಮದಲ್ಲಿ ಚತುರಾತ್ಮಾ ಎಂಬ ನಾಮವು ಪ್ರಸಿದ್ಧಿಯಾಗಿ ಬರುವುದನ್ನು ವಿಷ್ಣುಭಕ್ತರಲ್ಲರೂ ತಿಳಿದಿರುವರು

೩೪-೩೫ ಯಾವ ಬ್ರಾಹ್ಮಣನು ಫಲವನ್ನಪೇಕ್ಷಿಸಿ ಯಜ್ಞಮಾಡುತ್ತಾನೆಯೋ ಅಂತಹ ಬ್ರಾಹ್ಮಣನು ಗಂಧರ್ವಲೋಕದಲ್ಲಿ ಗಂಧರ್ವನಾಗುತ್ತಾನೆ ಹಾಗಲ್ಲದೆ ಯಾವ ಆಶೆಯನ್ನೂ ಇಟ್ಟುಕೊಳ್ಳದೆ ಈಶ್ವರಪ್ರೀತಿಯಾಗಿ ಯಾವನು ಕ್ರತುಗಳನ್ನು ಮಾಡುತ್ತಾನೆಯೋ ಆ ಮಹಾತ್ಮನು ಪುನರಾವೃತ್ತಿರಹಿತವಾದ ಶಾಶ್ವತವಾದ ಧ್ರುವಲೋಕವನ್ನು ಹೊಂದಿ ಅಮೃತತ್ವವನ್ನು (ದೇವತ್ವವನ್ನು) ಹೊಂದುತ್ತಾನೆ. ಎಲೈ

ಸುಹುತೇನಾಗ್ನಿಹೋತ್ರೇಣ ಪ್ರಾಪ್ಯತೇ ಸಂಶಯಂ ವಿನಾ ।
ಏವಮುಕ್ತ್ವಾ ಯಯುಃ ಸರ್ವೇ ಗಂಧರ್ವಾಸ್ತ್ರಿದಿವಂ ತತಃ ॥ ೩೬ ॥

ರಾಜಾಪ್ಯರಣಿಮಾದಾಯ ಶಮೀಗರ್ಭಾದ್ಗೃಹಂ ಯಯೌ ।
ತತಃ ಪ್ರಭೃತಿ ರಾಂಜೇಂದ್ರ ಶಮೀಗರ್ಭಾದ್ಧುತಾಶನಂ ।
ಜನಯಂತಿ ದ್ವಿಜಶ್ರೇಷ್ಠಾಸ್ತತ್ರ ಸನ್ನಿಹಿತಸ್ತ್ವಸೌ ॥ ೩೭ ॥

ಏಕೋಗ್ನಿರಾಸೀತ್‌ನೃಪವರ್ಯ ಪೂರ್ವಂ
ವೈವಸ್ವತಸ್ಯಾಸ್ಯ ತಥಾಂತರೇಸ್ಮಿನ್ ।
ತ್ರಿಧಾಕೃತಸ್ತೇನ ಮಹಾನುಭಾವ
ಸಮಂತ್ರವಿಪ್ರೈಃ ಕ್ರತುಶಾಸ್ತ್ರವಿಜ್ಞೈಃ ॥ ೩೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ತ್ರೇತಾಗ್ನ್ಯುತ್ಪತ್ತಿರ್ನಾಮ ಷಟ್ತ್ರಿಂಶದುತ್ತರ
ಶತತಮೋಧ್ಯಾಯಃ

ರಾಜನೇ ! ಕೇಳು ಯಾರು ಅಗ್ನಿಹೋತ್ರವನ್ನು ಮಾಡುವುದಿಲ್ಲವೋ ಅಂತಹವರಿಗೆ ಗಂಧರ್ವಲೋಕ ಪ್ರಾಪ್ತಿಯಾಗುವುದಿಲ್ಲ ಒಳ್ಳೇ ಚಿತ್ತಶುದ್ಧದಿಂದ ಯಜ್ಞಮಾಡುವವರು ಸಂದೇಹವೇ ಇಲ್ಲದ ಗಂಧರ್ವರಾಗುವರು ಹೀಗೆ ಹೇಳಿ ಆ ಗಂಧರ್ವರು ಸ್ವರ್ಗಲೋಕಕ್ಕೆ ತೆರಳಿದರು ಪುರೂರವರಾಜನೂ ನಹ ಅವರ ಮಾತಿನಂತೆ ಶಮೀಗರ್ಭದಿಂದ ಅರಣಿಯನ್ನು ಸಂಗ್ರಹಿಸಿದವನಾಗಿ ಮನೆಗೆ ಹೋದನು ಅಲ್ಲಿಂದೀಚೆಗೆ ಶಮೀಗರ್ಭದಿಂದಲೇ ಬ್ರಾಹ್ಮಣರು ಅಗ್ನಿಯನ್ನು ಕಡೆದು ತೆಗೆಯುತ್ತಾರೆ ಈಗಲೂ ಯಜ್ಞೇಶ್ವರನು ಬನ್ನಿಮರದಲ್ಲೇ ವಾಸವಾಗಿದಾನೆಯೆಂದರಿಬೇಕು ಎಲೈ ವಜ್ರರಾಜನೇ ! ಕೇಳು ಪೂರ್ವದಲ್ಲಿ ಅಗ್ನಿಯು ಒಂದೇ ಆಗಿತ್ತು ಈ ವೈವಸ್ವತ ಮನ್ವಂತರದಲ್ಲಿ ನಾನು ಮೇಲೆ ಹೇಳಿದಂತೆ ತ್ರೇತಾಗ್ನಿಗಳುಂಟಾದುವು ಈರೀತಿ ಕ್ರತುಶಾಸ್ತ್ರವನ್ನು ತಿಳಿದ ಬ್ರಾಹ್ಮಣರು ಹೇಳುತ್ತಿರುವರೆಂದು ಮಾರ್ಕಂಡೇಯರು ಹೇಳಿದರೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ತ್ರೇತಾಗ್ನಿಗಳ ಉತ್ಪತ್ತಿಯೆಂಬ ಹೆಸರಿನ
ಒಂದು ನೂರ ಮೂವತ್ತಾರನೆಯ ಅಧ್ಯಾಯವು
ಮುಗಿದುದು

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ತತಃ ಸ ಸ್ವಪುರಂ ಪ್ರಾಪ್ಯ ಚಾಗ್ನ್ಯುಪಾಸನತತ್ಪರಃ ।
ಈಜೇ ಬಹುವಿಧೈರ್ಯಜ್ಞೈಃ ಪ್ರಜಾ ಧರ್ಮೇಣ ಪಾಲಯನ್ ॥ ೧ ॥

ಅಶ್ವಮೇಧಶತೈರಿಷ್ಟ್ವಾ ವಾಜಪೇಯೈಃ ಸಹಸ್ರಶಃ ।
ಅಗ್ನಿಷ್ಟೋಮೈಶ್ಚಾತಿರಾತ್ರೈರ್ದ್ವಾದಶಾಹೈಃ ಪುನಃಪುನಃ ॥ ೨ ॥

ಸಪ್ತದ್ವೀಪಸಮುದ್ರಾಯಾಂ ಪೃಥಿವ್ಯಾಮೇಕರಾಡ್ ಬಭೌ ।
ಅಮಾನುಷೈರ್ವೃತಃ ಸರ್ವೈಃ ಸ ವಿಜಿಗ್ಯೇ ಮಹೀತಲಂ ॥ ೩ ॥

### ನೂರ ಮೂವತ್ತೇಳನೇ ಅಧ್ಯಾಯವು.

೧ ಅನಂತರದಲ್ಲಿ ಪುರೂರವ ಮಹಾರಾಜನು ತನ್ನ ಪಟ್ಟಣಕ್ಕೆ ಪ್ರಯಾಣವಂ ಬೆಳಸಿ ಔಪಾಸನವನ್ನಾರಂಭಿಸಿದನು ಮತ್ತು ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಾ ನಾನಾವಿಧವಾದ ಯಜ್ಞೋಪಕರಣಗಳಂ ಕೂಡಿಸಿ ಬಹುವಿಧವಾದ ವೇದೋಕ್ತ ಕ್ರತುಗಳನ್ನೆಲ್ಲಾ ಮಾಡಿದನು

೨-೬ ಪುರೂರವ ಚಕ್ರವರ್ತಿಯು ನೂರು ಅಶ್ವಮೇಧಯಾಗಗಳಂ ಮಾಡಿದನು ಒಂದುಸಾವಿರ ವಾಜಪೇಯ ಕ್ರತುಗಳನ್ನು ಮಾಡಿದನು ಅಗ್ನಿಷ್ಟೋಮ-ಅತಿರಾತ್ರ ದ್ವಾದಶಾಹಸ್ಸೆಂಬ ಕ್ರತುಗಳನ್ನೂ ಸಹ ಸಹಸ್ರಾರುಸಾರಿ ಪುನಃಪುನಃ ಮಾಡಿದವನಾಗಿ ಸಪ್ತಸಮುದ್ರ ಪರಿವೃತವಾದ, ಸಪ್ತದ್ವೀಪ ಪರಿವೃತವಾದ ಈ ಭೂಲೋಕಕ್ಕೆಲ್ಲಾ

ದುರ್ಭಿಕ್ಷಂ ಮರಣಂ ವ್ಯಾಧಿರ್ನಾಭವತ್ತಸ್ಯ ಜಿತ್ಕ್ವಚಿತ್ ।
ಸರ್ವೋ ಧರ್ಮಪರೋ ಲೋಕಃ ಸರ್ವ ಏವ ಸುಖೀ ಜನಃ ॥ ೪ ॥

ಸರ್ವೇ ಚೈವ ಸಮೃದ್ಧಾರ್ಥಾಸ್ತಸ್ಮಿನ್ ಜನಪದೇಶ್ವರೇ ।
ನಾಸೀತ್ಪಶುವಧಾಹಾರ್ಣಾಂ ವಧಸ್ತಸ್ಮಿನ್ವೃಥಾ ತದಾ ॥ ೫ ॥

ಸರ್ವಭೂತಾನಿ ರಾಜಾನಂ ಭಾವೇನೋಪಗತಾನಿ ತಂ ।
ಸರ್ವಸ್ಯ ಚ ಜನಸ್ಯಾಸೀತ್ಸ ರಾಜಾ ಪಿತೃಸನ್ನಿಭಃ ॥ ೬ ॥

ದೃಷ್ಟ್ವಾ ತಂ ಭೂಪತಿಂ ಸ್ವಪ್ನೇ ಪ್ರಸೀದಂತಿ ಜನಾಸ್ತದಾ ।
ಯದಾ ನಿರ್ಯಾತ್ಯಸೌ ರಾಜಾ ಚತುರಂಗಬಲಾನ್ವಿತಃ ॥ ೭ ॥

ಗೃಹಚರ್ಯಾರತಾ ನಾರ್ಯಸ್ತದಾ ಪಶ್ಯಂತಿ ತಂ ಸದಾ ।
ಪುಷ್ಪೈಶ್ಚಂದನಧೂಪೈಶ್ಚ ತಥೈವ ವಿಕಿರಂತಿ ತಂ ॥ ೮ ॥

---

ತಾನೇ ಚಕ್ರವರ್ತಿಯೆನಿಸಿಕೊಂಡನು ಈತನ ಬಲವು ಅಮಾನುಷವಾದುದು (ಮನುಷ್ಯಜನ್ಮಕ್ಕೆ ಮೀರಿದುದು ) ಇಂತಹ ಅತಿಶಯ ಶೌರ್ಯದಿಂದ ಭೂತಲವನ್ನೆಲ್ಲಾ ಜಯಿಸಿದನು ಈ ಮಹಾರಾಜನ ರಾಜ್ಯಭಾರ ಸಮಯದಲ್ಲಿ ಕ್ಷಾಮವಾಗಲೀ,ಅಕಾಲ ಮರಣವಾಗಲೀ, ರೋಗಾದ್ಯುಪದ್ರವಗಳಾಗಲೀ, ಯಾರಿಗೂ ಯಾವಾಗಲೂ ಸಂಭವಿಸ ಲಿಲ್ಲ ಸಕಲ ಲೋಕವೂ ಧರ್ಮಮಾರ್ಗದಲ್ಲಿಯೇ ನಿರತವಾಗಿತ್ತು ಸಕಲ ಜನರೂ ಸುಖವಾಗಿದ್ದರು ಎಲ್ಲರೂ ಹಣಗಾರರಾಗಿದ್ದರೇ ಹೊರತು ಬಡವರ ಹೆಸರೇ ಇರಲಿಲ್ಲ ಆ ಮಹಾರಾಜನ ರಾಜ್ಯದಲ್ಲಿ ವ್ಯರ್ಥವಾಗಿ ಯಾವ ಪ್ರಾಣಿಯೂ ವಧೆಯಾಗುತ್ತಿರಲಿಲ್ಲ ವಧಾರ್ಹರಾದ ಜನರಾಗಲೀ, ಪ್ರಾಣಿಗಳಾಗಲೀ ಇರಲೇಇಲ್ಲ ಸಕಲ ಪ್ರಾಣಿಗಳೂ ರಾಜನನ್ನು ಹೊಗಳುತ್ತಾ ಅವನ ಭಾವನೆಯಲ್ಲೇ ನಿರತವಾಗಿದ್ದುವು ಸಕಲ ಜನರಿಗೂ ತಂದೆಯ ಸಮನಾಗಿದ್ದ ಆ ರಾಜನು ಸಕಲ ಜನರನ್ನೂ ತಾಯಿಯು ಮಕ್ಕಳನ್ನು ಕಾಪಾಡುವಂತೆ ರಾಪಾಡುತ್ತಿದ್ದನು

೭-೧೨ ಆ ಮಹಾರಾಜನನ್ನು ಸ್ವಪ್ನದಲ್ಲಿ ನೋಡಿ ಜನರು ಸಂತೆಕೇಷಪಡುತ್ತಿದ್ದರು ಯಾವ ಸಮಯದಲ್ಲಿ ಮಹಾರಾಜನು ಚತುರಂಗಬಲಸಹಿತನಾಗಿ ಹೊರಗೆ ಮೆರವಣಿಗೆಯಿಂದ ಹೊರಡುವನೋ ಆಗ ಮನೆಗೆಲಸ ಮಾಡುತ್ತಿದ್ದ ಹೆಂಗಸರೂ ಇದ್ದ ಕೆಲಸವನ್ನು ಹಾಗೆಹಾಗೆಯೇ ಬಿಟ್ಟು ಆ ರಾಜನನ್ನು ನೋಡಲು ಬರುತ್ತಿದ್ದರು. ಮತ್ತು ಮಹಾರಾಜನನ್ನು ನೋಡಿದೊಡನೆಯೇ ಹೂಗಳನ್ನಾತನಮೇಲೆ ಎರಚುವರು.

**ಊರ್ವಶೀ ಕೃತಪುಣ್ಯಾ ಸಾ ದೇವೀ ನಾರಾಯಣಾತ್ಮಜಾ ।**
**ಯಯಾ ಕ್ರೀಡಿತಮಸ್ಯಾಂಕೇ ವದಂತ್ಯೇವಂ ಚ ಯೋಷಿತಃ ॥ ೯ ॥**

**ಅಯಮಾಯಾತ್ಯಸೌ ರಾಜಾ ಯದಾ ಶೃಣ್ವಂತಿ ಯೋಷಿತಃ ।**
**ಗೃಹಕಾರ್ಯಾಣ್ಯಪಿ ತ್ಯಕ್ತ್ವಾ ತದಾ ಯಾಂತಿ ಗವಾಕ್ಷಕಾತ್ ॥ ೧೦ ॥**

**ಅಭ್ರಾಣಿ ಶರದಾನೀವ ಬಹುಚಂದ್ರಾಣಿ ಯೋಷಿತಾಂ ।**
**ಮುಖೇ ರಾಜಂತಿ ವೇಶ್ಮಾನಿ ನಿರ್ಯಾತೇ ಪೃಥಿವೀಶ್ವರೇ ॥ ೧೧ ॥**

**ಯಾ ನ ಪಶ್ಯಂತಿ ತಂ ಯಾಂತಂ ಸಾ ತಂ ಜ್ಞಾತ್ವಾ ತಿರೋಹಿತಂ ।**
**ಮುಷಿತಂ ಚೈವ ಸ್ವಾತ್ಮಾನಂ ವೇತ್ತಿ ನಿಂದಂತಿ ಸಾ ಭೃಶಂ ॥ ೧೨ ॥**

---

ಧೂಪದ ಹುಡಿಯನ್ನೆರಚುವರು ಪನ್ನೀರು, ಗಂಧ ಮುಂತಾದವುಗಳನ್ನು ಪನ್ನೀರ ದಾನಿ ಮುಂತಾದ ಸಾಧನಗಳಲ್ಲಿ ತುಂಬಿ ತುಂತುರುತುಂತುರಾಗಿ ವರ್ಷಿಸುವರು ಮತ್ತು ಆ ಹೆಂಗಸರು ರಾಜನನ್ನು ನೋಡಿ ಹೀಗೆ ಹೇಳಿಕೊಳ್ಳುತ್ತಿದ್ದರು —ಅದೇನೆಂದರೆ, ನಾರಾಯಣಮಹರ್ಷಿಯ ಮಗಳಾದ ಊರ್ವಶಿಯು ಎಂತಹ ಪುಣ್ಯಶಾಲಿನಿಯೋ ? ಈ ಮಹಾರಾಜನ ತೊಡೆಯಮೇಲೆ ಕುಳ್ಳಿರಬೇಕಾದರೆಆಕೆಯ ಪುಣ್ಯರಾಶಿಯೆಷ್ಟಿರುವುದೋ ಹೀಗೆಯೇ ಹೆಂಗಸರೆಲ್ಲರೂ ಹೇಳಿಕೊಳ್ಳುತ್ತಿದ್ದರು ಮಹಾರಾಜರ ಸವಾರಿ ಬರುತ್ತಿದೆ ! ಮಹಾರಾಜರು ಬರುತ್ತಿದಾರೆ '' ಎಂಬೀ ಮಾತು ಯಾವಾಗಕಿವಿಗಳಿಗೆ ಕೇಳಿಬರು ವುದೋ ಆ ಕ್ಷಣವೇ ಮನೆಯಲ್ಲಿದ್ದ ಹೆಂಗಸರೆಲ್ಲರೂ ತಮ್ಮತಮ್ಮ ಕೆಲಸಗಳನ್ನು ಒತ್ತ ಟ್ಟಿಗಿಟ್ಟು ಓಡಿಬಂದು ಕಿಟಕಿಯಬಳಿ ನಿಂತುಕೊಂಡುಬಿಡುತ್ತಿದ್ದರು ಇವನ್ನು ನೋಡಿ ದರೆ ಶರದೃತುವಿನಲ್ಲಿ ಆಕಾಶದಲ್ಲಿ ಬಹುಜನ ಚಂದ್ರರು ಉದಯಿಸಿದರೋ ಎಂಬಂತೆ ನಾರೀಮುಖಗಳೆಂಬ ಚಂದ್ರರು ಮನೆಯ ಕಿಟಿಕಿಗಳೆಂಬ ಶರದಾಕಾಶದಲ್ಲಿ ಮೂಡುತ್ತಿದ್ದರು ಮಹಾರಾಜರ ಸವಾರಿಯು ಹೊರಗೆ ಹೊರಟಾಗ ಯಾವ ಹೆಂಗ ಸಾದರೂ ಸ್ವಲ್ಪತಡವಾಗಿ ಹೋಗಿ, ಸವಾರಿಯು ಸ್ವಲ್ಪ ಮುಂದಕ್ಕೇನಾದರೂ ಹೊರಟು ಹೋಗಿದ್ದರೆ ರಾಜದರ್ಶನವು ಲಭ್ಯಹಾಗದಿದ್ದುದಕ್ಕಾಗಿ ತನ್ನಮೇಲೆ ತಾನೇ ಕೋಪಿಸಿ ಕೊಂಡು ನಿಂದಿಸಿಕೊಳ್ಳುತ್ತಿದ್ದಳು

ಟಿಪ್ಪಣಿ —ಈಗಲೂ ಲೋಕಾರೂಢಿಯಾಗಿ ತಮಗೇನಾದರೂ ಆಗಬೇಕಾಗಿದ್ದ ಪ್ರಯೋಜನವು ತಮ್ಮ ಆಲಸ್ಯದಿಂದ ತಪ್ಪಿಹೋದರೆ ಜನರು ಹೀಗೆ ಹೇಳಿಕೊಳ್ಳು ವುದುಂಟು ? ಅಯ್ಯೋ ! ನನಗೇನು ಬಂತು ಕೇಡು ? ಸ್ವಲ್ಪ ಮುಂಚೆ ಹೊರಡಬಾರ

**ಯಾ ಚ ಪಶ್ಯತಿ ತಂ ಯಾಂತಂ ಕಂದರ್ಪಸದೃಶಂ ನೃಪಂ ।**
**ತದ್ಗತೇನ ಹೃದಾ ಸಾಪಿ ಶೂನ್ಯಾ ತಿಷ್ಠತಿ ವೇಶ್ಮನಿ ॥ ೧೩**

**ಯದಾ ಯಜತಿ ಯಜ್ಞೈಶ್ಚ ತದಾ ಶೂನ್ಯಾ ವಸುಂಧರಾ ।**
**ಸರ್ವಾ ಭವತಿ ರಾಜಾನಂ ತದಾ ಗಚ್ಛತಿ ವೈ ಜನಃ ॥ ೧೪ ॥**

**ಯಶ್ಚ ಯಾತಿ ಜನಸ್ತಸ್ಯ ಯಜ್ಞೇ ರಾಜ್ಞೋ ಮಹಾತ್ಮನಃ ।**
**ಕಿಮಿಚ್ಛಕೈಸ್ತದಾ ರಾಜ್ಞಾ ಸರ್ವಃ ಸಂಪೂಜ್ಯತೇ ತದಾ ॥ ೧೫ ॥**

**ಸಭಾಸಂಸ್ಥಸ್ಯ ವೈ ರಾಜ್ಞಃ ಪ್ರತೀಹಾರೋ ದಿನೇ ದಿನೇ ।**
**ಉದ್ಘೋಷಯತಿ ಕಾರ್ಯಾರ್ಥೀ ತಸ್ಯ ರಾಜ್ಯೇ ಕಥಂಚನ ॥ ೧೬ ॥**

---

ದಾಗಿತ್ತೆ ? ನನಗೇನು ಅಜ್ಞಾನ ಕವಿದುಕೊಂಡಿತು ? ಛೇ ! ಛೇ ! ನನ್ನ ಬಾಳನ್ನು ಸುಡಬೇಕು ಇಂತಹ ಚಿನ್ನದಂತಹ ಸಮಯವನ್ನು ವ್ಯರ್ಥವಾಗಿ ಕಳೆದುಕೊಂಡೆ ನಲ್ಲಾ ! ನನಗೆ ಇಂಥಾ ಅಜ್ಞಾನ ಕವಿಯಬಹುದೆ ? ಇತ್ಯಾದಿ ಇತ್ಯಾದಿ

೧೩ ಮನ್ಮಥನಂತೆ ಮನನೋಹರಸೌಂದರ್ಯವುಳ್ಳ ಮಹಾರಾಜನನ್ನು ಯಾವ ಲಲನೆಯು ಲಾಲಸೆಯಿಂದವಲೋಕಿಸುವಳೋ ಆಕೆಯು ಅವನಲ್ಲೇ ನೆಟ್ಟ ಮನಸ್ಸುಳ್ಳವಳಾಗಿ ಏನೇನೋ ಮನಸ್ಸಿನಲ್ಲಿ ಮಾಡಿಕೊಳ್ಳುತ್ತಾ ಮನೆಯಲ್ಲಿ ಮಂಕು ಹಿಡಿದು (ಶೂನ್ಯಳಾಗಿ) ಕುಳಿತುಕೊಂಡುಬಿಡುತ್ತಿದ್ದಳು (ಇದಕ್ಕೆ ಭಾವಾಲಂಕಾರ ವೆಂದು ಹೆಸರು ಮನಸ್ಸಿನಲ್ಲಿರುವುದನ್ನು ಮನಸ್ಸೇ ಅರಿತುಕೊಳ್ಳುವುದೇ ಭಾವ ಇದು ಕಣ್ಣಿಗೆ ಕಾಣಿಸುವುದಿಲ್ಲ )

೧೪ ಯಾವಾಗ ರಾಜನು ಯಜ್ಞಮಾಡುವುದಕ್ಕಾರಂಭಿಸುತ್ತಲಿದ್ದನೋ ಆಗ ಹೊರಗಣಜನರೆಲ್ಲಾ ಬಂದು(ಭೂಮಿಯು)ಬರಿದಾಗುತ್ತಿತ್ತು ಆಗಪರಸ್ಥಳದಜನರೆಲ್ಲರೂ ಯಜ್ಞಸಂದರ್ಶನಕ್ಕಾಗಿಯೂ ರಾಜದರ್ಶನಕ್ಕಾಗಿಯೂ ರಾಜಧಾನಿಗೆ ಬಂದುಬಿಡುತ್ತಿದ್ದುದರಿಂದ ಊರುಗಳಿಗೆ ಊರುಗಳೇ ಬರಿದಾಗುವುದು ಸ್ವಭಾವವಾಗಿಯೇ ಇದೆ

೧೫ ಮಹಾರಾಜನು ಯಜ್ಞಮಾಡುವ ಸಮಯದಲ್ಲಿ ಯಾರು ಯಜ್ಞದರ್ಶನಕ್ಕೆ ಬರುತ್ತಾರೆಯೋ ಅವರು ಏನೇನನ್ನು ಅಪೇಕ್ಷಿಸುತ್ತಾರೆಯೋ ಅದನ್ನೆಲ್ಲಾ ಮಹಾರಾಜನು ಅವರಿಗೆ ಪೂಜಿಸಿ ನಮಸ್ಕರಿಸಿ ಕೊಟ್ಟುಬಿಡುತ್ತಿದ್ದನು.

೧೬ ಮಹಾರಾಜನು ಒಡ್ಡೋಲಗದಲ್ಲಿ ಕುಳಿತಿದ್ದಾಗ ದ್ವಾರಪಾಲಕನು ಹೊರಗೆ ಯಾರಾದರೂ ಕಾರ್ಯಾರ್ಥಿಗಳು ಬಂದರೆ ಅದನ್ನು ಗಟ್ಟಿಯಾಗಿ ಕೂಗಿ ರಾಜನಿಗೆ ಬಿನ್ನವಿಸುತ್ತಿದ್ದನು ಆತನ ರಾಜ್ಯದಲ್ಲಿ ಕೆಲಸವಿಲ್ಲದ ಜನರೇ ಇರಲಿಲ್ಲ

ಇತ್ಯೇವಂ ಶಾಸ್ವತೋ ರಾಜ್ಯಂ ಗತಃ ಕಾಲೋ ಮಹೀಪತೇಃ ।
ಸ ಕದಾಚಿದ್ದ್ವಿಜಾನಾಹ ದರ್ಶಯಧ್ವಂ ಮಮೋರ್ವಶೀಂ　　॥ ೧೭ ॥

ದ್ರಕ್ಷ್ಯಸೇ ತಾಂ ಸ್ವಯಂ ರಾಜನ್ನ ವಯಂ ದರ್ಶಯಾಮ್ಯಹಂ ।
ತತಸ್ತೇಷಾಂ ಧನೇ ಲೋಭಂ ಚಕ್ರೇ ಕಾಮನಿಪೀಡಿತಃ　　॥ ೧೮ ॥

ಹ್ರಿಯಮಾಣೇ ಧನೇ ವಿಪ್ರೈಃ ಶಪ್ತಃ ಪಂಚತ್ವಮಾಗತಃ ।
ಜೀವಿತಶ್ಚಾಪರೈರ್ವಿಪ್ರೈರ್ಗತರೋಷೈರ್ಮಹೀಪತಿಃ　　॥ ೧೯ ॥

ಆತ್ಮಾನಂ ಗರ್ಹಯಿತ್ವಾಸೌ ಲಬ್ಧಸಂಜ್ಞೋ ಮಹೀಪತಿಃ ।
ಆಯುಂ ರಾಜ್ಯೇಭಿಷಿಚ್ಯೈವ ಪ್ರತಿಷ್ಠಾನಪುರೇ ಸ್ವಕೇ　　॥ ೨೦ ॥

ಸಾಗ್ನಿಹೋತ್ರಸ್ತತೋ ರಾಜಾ ಯಯೌ ನಾರಾಯಣಾಶ್ರಮಂ ।
ತಸ್ಯಾಶ್ರಮೇ ತಪಶ್ಚಕ್ರೇ ರಾಜಾ ಸಂವತ್ಸರತ್ರಯಂ　　॥ ೨೧ ॥

---

೧೭-೧೯　ಈರೀತಿ ಪುರೂರವನು ರಾಜ್ಯಭಾರ ಮಾಡುತ್ತಿರುವಲ್ಲಿ ಬಹಳಕಾಲಗಳು ಸುಖವಾಗಿ ಕಳೆದುಹೋದುವು ಹೀಗಿರುವಲ್ಲೊಂದುದಿನ ಆ ರಾಜನು ಬ್ರಾಹ್ಮಣರನ್ನು ಕರದು ನನಗೆ ಊರ್ವಶಿಯನ್ನು ತೋರಿಸಿರಿ ಎಂಬುದಾಗಿ ಕೇಳಿದನು ಅದಕ್ಕುತ್ತರವಾಗಿ ಅವರು, ನೀನೇ ಅವಳನ್ನು ನೀನಾಗಿಯೇ ನೋಡುತ್ತೀಯೆ ಈಗ ನಾವು ತೋರಿಸಲಾರವೆಂದರು ಅನಂತರ ಆ ರಾಜನು ದುರ್ಬುದ್ಧಿಯಿಂದ ಆ ಬ್ರಾಹ್ಮಣರ ಹಣವನ್ನೆಲ್ಲಾ ದ್ರವ್ಯಕಾಮನಾಗಿ ಕೊಂಡುಬಿಟ್ಟನು ಹೊರಗಿನ ಪ್ರಾಣಗಳಂತಿಪ್ಪ ಹಣವು ಹೋಮದಕ್ಕಾಗಿ ಆ ಬ್ರಾಹ್ಮಣರು ವ್ಯಥೆಪಡುತ್ತಾ ಆ ರಾಜನಮೇಲೆ ಕುಪಿತರಾಗಿ ನೀನು ನಾಯಿ ! ಎಂದು ಶಪಿಸಿದರು ಆ ಕೂಡಲೆ ಆ ರಾಜನು ಸತ್ತುಹೋದನು ಈ ಗುಂಪಿಗೆ ಸೇರದ ಇದ್ದ ಮತ್ತೆ ಕೆಲವರು ಬ್ರಾಹ್ಮಣರು ತಮ್ಮ ಮಹಾತ್ಮೆಯಿಂದ ರಾಜನನ್ನು ಪುನಃ ಬದುಕಿಸಿದರು

೨೦-೨೧　ಯಾವಾಗ ಒಂದುಬಾರಿ ಸತ್ತು ಮತ್ತೆ ಬದುಕಿಕೊಂಡನೋ ಆಗಲೀಗ ರಾಜನಿಗೆ ಪಶ್ಚಾತ್ತಾಪವಾಗಿ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾ ರಾಜ್ಯಭಾರದಲ್ಲಿ ವಿರಕ್ತಿಹೊಂದಿ ತನ್ನ ಮಗನಾದ ಆಯುವಿಗೆ ಪಟ್ಟವನ್ನು ಕಟ್ಟಿ ಪ್ರತಿಷ್ಠಾನನಗರದ ಆಡಳಿತವನ್ನವನಿಗೊಪ್ಪಿಸಿ ತಾನು ಅಗ್ನಿಹೋತ್ರಸಹಿತನಾಗಿ ಬದರಿಕಾ (ನಾರಾಯಣ) ಶ್ರಮಕ್ಕೆ ಹೊರಟುಹೋಗಿ ಆ ಬದರೀನಾರಾಯಣಕ್ಷೇತ್ರದಲ್ಲಿ ನಿಶ್ಚಲಚಿತ್ತನಾಗಿ ಕುಳಿತು ಮೂರುವರ್ಷಕಾಲ ತಪಸ್ಸನ್ನು ಮಾಡಿದನು

ತತೋ ನಾರಾಯಣಃ ಪ್ರಾಹ ತಂ ನೃಪಂ ತಪಸಿ ಸ್ಥಿತಂ ।
ಅದ್ಯ ಪ್ರಾಪ್ಸ್ಯಸಿ ತಾಂ ರಾಜನ್ಯತ್ಕೃತೇ ಪರಿತಪ್ಯಸೇ ॥ ೨೨ ॥

ಸಶರೀರೋದ್ಯ ಗಂತಾಸಿ ತ್ರಿದಿವಂ ರಾಜಸತ್ತಮ ।
ಏವಂ ದ್ವಿಜೇಂದ್ರೇ ವದತಿ ವಿಮಾನಂ ಪ್ರತ್ಯದೃಶ್ಯತ ॥ ೨೩ ॥

ಉರ್ವಶ್ಯಧಿಷ್ಠಿತಂ ರಮ್ಯಂ ಗಂಧರ್ವೈಶ್ಚ ಸಹಸ್ರಶಃ ।
ಯಸ್ಮಿನ್ಯುಕ್ತಂ ತುರಂಗಾಣಾಂ ಸಹಸ್ರಂ ಚಂದ್ರವರ್ಚಸಾಂ ॥ ೨೪ ॥

ವಿಮಾನಾದವರುಹ್ಯಾಥ ಗಂಧರ್ವಾಪ್ಸರಸಾಂ ಗಣಾಃ ।
ಉರ್ವಶೀ ಚ ವವಂದ್ಯೈನಮೃಷಿಂ ಜ್ವಲನತೇಜಸಂ ॥ ೨೫ ॥

ಅನುಜ್ಞಾತೋಥ ಋಷಿಣಾ ತದಾ ರಾಜಾ ಪುರೂರವಾಃ ।
ಕೃತ್ವಾಗ್ನಿಹೋತ್ರಮಾತ್ಮಸ್ಥಂ ವಿಮಾನಂ ತಂ ಸಮಾಸ್ಥಿತಃ ॥ ೨೬ ॥

೨೨-೨೩ ಈರೀತಿ ಮೂರುವರ್ಷಕಾಲ ಕಳದಮೇಲೆ ಆ ಭಗವಾನ್ ನಾರಾಯಣನು ತನಸ್ಸಿನಲ್ಲಿ ನಿರತನಾಗಿದ್ದ ಆ ಪುರೂರವನನ್ನು ಕುರಿತು ಹೀಗೆ ಹೇಳಿದನು ಎಲೈ ರಾಜನೇ ? ಯಾವ ಊರ್ವಶಿಗೋಸ್ಕರ ನೀನು ಉಗ್ರತಪಸ್ಸನ್ನು ಮಾಡಿರುವೆಯೋ ಆ ಊರ್ವಶಿಯನ್ನು ನೀನು ಈಗಲೇ ಪಡೆದು ಸಶರೀರನಾಗಿ ಅವಳೊಡನೆ ಸ್ವರ್ಗವನ್ನು ಹೊಂದುತ್ತೀಯೆ ಹೀಗೆಂದು ಆ ಮಹರ್ಷಿಯು ಹೇಳುತ್ತಿರುವಷ್ಟರಲ್ಲಿಯೇ ಆಕಾಶದಲ್ಲೊಂದು ವಿಮಾನವು ಕಾಣಿಸಿತು

೨೪-೨೬ ನೋಡುನೋಡುತಲಿದ್ದ ಹಾಗೆಯೇ ಆ ವಿಮಾನವು ಪುರೂರವನಿದ್ದ ಸ್ಥಳಕ್ಕೆ ಬಂದಿತು ಅದರೊಳಗೆ ಸಾವಿರಾರುಮಂದಿ ಗಂಧರ್ವರ ಗುಂಪಿನೊಡನೆ ಊರ್ವಶಿಯು ಕುಳಿತಿದ್ದಳು ಸೂರ್ಯನಂತೆ ಪ್ರಕಾಶಮಾನವಾದ ಒಂದುಸಾವಿರ ಕುದುರೆಗಳನ್ನು ಆ ವಿಮಾನಕ್ಕೆ ಕಟ್ಟಿದ್ದರು ಆ ವಿಮಾನದಲ್ಲಿ ಕುಳಿತಿದ್ದ ಊರ್ವಶಿಯು ಕೆಳಗಿಳಿದು ಬಂದು ತನ್ನ ತಂದೆಯ (ನಾರಾಯಣಋಷಿಯ) ಚರಣಗಳಿಗೆರಗಿದಳು ಆಗ ಪುರೂರವರಾಜನು ನಾರಾಯಣಸ್ವಾಮಿಯ ಅಪ್ಪಣೆಯನ್ನು ಪಡೆದವನಾಗಿ ತನ್ನ ಬಳಿಯಿದ್ದ ಅಗ್ನಿಹೋತ್ರದ ಸ್ಥಾಲಿಯನ್ನು ಮೊದಲು ವಿಮಾನದ ಮೇಲಿಟ್ಟು ಭಗವಾನ್ ನಾರಾಯಣನಿಗೆ ಪ್ರದಕ್ಷಿಣನಮಸ್ಕಾರವನ್ನು ಮಾಡಿ ತಾನೂ ಸಹ ಊರ್ವಶಿಯೊಡನೆ ವಿಮಾನವನ್ನು ಹತ್ತಿದನು ಬಳಿಕ ಆ ವಿಮಾನವು ಸಶರೀರನಾದ ಪುರೂರವನನ್ನು

ಋಷಿಂ ಪ್ರದಕ್ಷಿಣೀಕೃತ್ಯ ತ್ರಿದಿವಂ ಸ ನೃಪೋ ಗತಃ ।
ಸಶರೀರೋ ನೃಪಃ ಸ್ವರ್ಗಂ ತದಾ ಪ್ರಾಪ್ಯ ಸುದುರ್ಲಭಂ     ॥ ೨೭ ॥

ಶಕ್ರೇಣಾಭ್ಯರ್ಚಿತಃ ಕಾಲೇ ವಿಜಹಾರ ಯಥಾಸುಖಂ ।
ದೇವೋದ್ಯಾನೇಷುಸರ್ವೇಷು ಉರ್ವಶ್ಯಾ ಸಹಿತಸ್ತದಾ     ॥ ೨೮ ॥

ನಾಸೌ ವಿಯುಜ್ಯತೇ ಸಾಕ್ಷಾತ್ಕದಾಚಿದಪಿ ಪಾರ್ಥಿವಃ ।
ಅಮಾವಾಸ್ಯಾಮಮಾವಾಸ್ಯಾಂ ನಿಯತಂ ಚಂದ್ರಭಾಸ್ಕರೌ     ॥ ೨೯ ॥

ದ್ರಷ್ಟುಂ ಯಾತೌ ಮಹೀಪಾಲಮೇಕರಾಶಿಗತೌ ಸದಾ ।
ಉರ್ವಶ್ಯಾ ಸಹಿತಂ ಪೌತ್ರಂ ಯದಾ ಪಶ್ಯತಿ ಚಂದ್ರಮಾಃ     ॥ ೩೦ ।

ತದಾ ಸುಧಾರಸಂ ದೇವಃ ಸ್ನೇಹಾತ್ಸ್ರವತಿ ಮಾನದ ।
ಸುಧಾಮೃತರಸಂ ತಂ ಚ ಪಿಬಂತಿ ಪಿತರಸ್ಸದಾ     ॥ ೩೧ ॥

ಸ್ವರ್ಗಲೋಕಕ್ಕೆ ಕರೆದುಕೊಂಡುಹೋಯಿತು ಇತರರಿಂದ ಹೊಂದಲಸಾಧ್ಯವಾದ ಇಂತಹ ಪದವಿಯನ್ನು ಹೊಂದಿದ ಆ ಪುರೂರವನು ಇಂದ್ರನಿಂದಲೂ ಸಹ ಸಂಪೂಜಿತನಾಗಿ ಊರ್ವಶಿಯೊಡನೆ ಆ ದೇವಲೋಕದಲ್ಲಿರುವ ಸಮಸ್ತ ದೇವೋದ್ಯಾನವನಗಳಲ್ಲಿಯೂ ಸಹ ಊರ್ವಶಿಯೊಡನೆ ಸೇರಿದವನಾಗಿ ಯಥೇಚ್ಛವಾಗಿ ವಿಹಾರಮಾಡಿದನು

೨೯-೩೧ ಆ ಪುರೂರವನು ಯಾವಾಗಲೂ ಊರ್ವಶಿಯನ್ನು ಬಿಟ್ಟಿರುವುದಿಲ್ಲ ಇವರಿಗೆ ವಿಯೋಗವೆಂಬುದೇ ಇಲ್ಲ ಚಂದ್ರಸೂರ್ಯರಿಬ್ಬರೂ ಪ್ರತಿಯೊಂದು ಅಮಾವಾಸ್ಯಾ ದಿವಗಳಲ್ಲೂ ಒಂದೇ ರಾಶಿಯಲ್ಲಿರುವುದರಿಂದ ಇಬ್ಬರೂ ಕೂಡಿ ಊರ್ವಶಿ ಸಹಿತನಾದ ಪುರೂರವನನ್ನು ನೋಡುವುದಕ್ಕೋಸ್ಕರ ಬರುತ್ತಿರುತ್ತಾರೆ. ಚಂದ್ರನು ತನ್ನ ಮೊಮ್ಮಗನಾದ ಪುರೂರವನ ಮುಖವನ್ನು ನೋಡಿದಾಗಲ್ಲೆಲ್ಲಾ ಬಹುಪ್ರೇಮದಿಂದ ಅಮೃತರಸವನ್ನು ಸುರಿಸುತ್ತಾನೆ ಆರೀತಿ ಸುರಿಯುವ ಸುಧಾಮೃತರಸವನ್ನು ಪಿತೃದೇವತೆಗಳು ಆನಂದದಿಂದ ಪಾನಮಾಡುತ್ತಾರೆ ಎಲೈ ವಜ್ರರಾಜನೇ ಕೇಳು ಆ ಸಮಯವು ಮನುಷ್ಯರಿಗೆ ಶ್ರಾದ್ಧಕಾಲವೆಂದು ಹೇಳಲ್ಪಡುತ್ತದೆ ಆ ದಿನ (ಅಮಾವಾಸ್ಯಾ) ಮಾಡುವ ಶ್ರಾದ್ಧವು ಸುಧಾರಸದಿಂದ ಮಿಶ್ರವಾಗುವುದರಿಂದ ಆದಿನ ಪಿತೃಗಳು ಶ್ರಾದ್ದದತ್ತ ತರ್ಪಣವಂ ಸ್ವೀಕರಿಸಿ ಅಮೃತೋಪಮವಾದ ಆ ಜಲ (ತಿಲ) ತರ್ಪಣದಿಂದ ಆನಂದಿಸುತ್ತಾರೆ ಆದ್ದರಿಂದ ಪ್ರತಿಯೊಂದು ಅಮಾವಾಸ್ಯೆಯಲ್ಲೂ

ಶ್ರಾದ್ಧಕಾಲಸ್ತದಾಪ್ಯುಕ್ತೋ ನೃಣಾಂ ನೃಪವರೋತ್ತಮ ।
ತದಾ ಶ್ರಾದ್ಧಂ ಹಿ ಯದ್ದತ್ತಂ ಸುಧಾರಸವಿಮಿಶ್ರಿತಂ || ೩೨ ||

ತದಶ್ನಂತಿ ಮಹೀಪಾಲ ಪಿತರೋಽಮೃತಸನ್ನಿಭಂ ।
ಅಮಾವಾಸ್ಯಾಮಮಾಪಾಸ್ಯಾಂ ತದಾ ಶ್ರಾದ್ಧಂ ಪ್ರಯತ್ನತಃ || ೩೩ ||

ಕುರುಷ್ವ ಭೂಮಿಪಶ್ರೇಷ್ಠ ಸರ್ವಾನ್ಕಾಮಾನವಾಪ್ಸ್ಯಸಿ ।
ಯೇಽಪಿ ಶ್ರಾದ್ಧಂ ಕರಿಷ್ಯಂತಿ ತದಾ ಚಾನ್ಯೇ ನರಾಧಿಪ || ೩೪ ||

ತೇಷಾಮಾಯುರ್ಯಶಃ ಸೌಖ್ಯಂ ದಾಸ್ಯಂತಿ ಪ್ರಪಿತಾಮಹಾಃ ।
ದೇವಕಾರ್ಯಾದಪಿ ಶ್ರೇಷ್ಠಂ ಪಿತೃಕಾರ್ಯಂ ಪ್ರಚಕ್ಷತೇ || ೩೫ ||

ಪಿತರೋ ನಾಮ ರಾಜೇಂದ್ರ ದೇವಾನಾಮಪಿ ದೇವತಾಃ ।
ರಾಜ್ಯಕಾಮಃ ಸ್ವರ್ಗಕಾಮಃ ಪುಷ್ಟಿಕಾಮಸ್ತಥೈವ ಚ || ೩೬ ||

ಪಿತೄನ್ಸಂತರ್ಪಯೇಚ್ಛ್ರಾದ್ಧೇ ಚಂದ್ರಸೂರ್ಯಸಮಾಗಮೇ ।
ವಸಂತಿ ಸತತಂ ರಾಜನ್ಪಿತರಶ್ಚಂದ್ರಮಂಡಲೇ || ೩೭ ||

ಪ್ರಯತ್ನಪೂರ್ವಕವಾಗಿ ಪಿತೃಗಳಿಗೆ ಶ್ರಾದ್ಧವನ್ನು ಮಾಡಬೇಕು (ತಿಲತರ್ಪಣ ಮಾಡಿದರೂ ಮಾಡಬಹುದು) ಎಲೈ ವಜ್ರಮಹಾರಾಜನೇ ! ನೀನೂ ಕೂಡ ಪ್ರತಿಯೊಂದು ಅಮಾವಾಸ್ಯಾತಿಥಿಯಲ್ಲೂ ಪ್ರಯತ್ನಪೂರ್ವಕವಾಗಿ ಪಿತೃಶ್ರಾದ್ಧವನ್ನು ಮಾಡು ನೀನು ನಿನ್ನ ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತೀಯೆ. ಯಾರೇ ಆಗಲಿ ಮನುಷ್ಯಮಾತ್ರರಾದವರು ಶ್ರಾದ್ಧಕರ್ಮವನ್ನು ಶ್ರದ್ಧೆಯಿಂದಾಚರಿಸುವರೋ ಅಂತಹವರಿಗೆ ಅವರ ಪ್ರಪಿತಾಮಹರು (ಮುತ್ತಜ್ಜ) ಆಯುಸ್ಸನ್ನೂ ಯಶಸ್ಸನ್ನೂ ಸೌಖ್ಯವನ್ನೂ ಅನುಗ್ರಹಿಸುತ್ತಾರೆ ಈ ಪಿತೃಕಾರ್ಯವು ದೇವತಾಕಾರ್ಯಕ್ಕಿಂತಲೂ ಬಹಳ ಶ್ರೇಷ್ಠವೆಂದು ಹೇಳಲ್ಪಡುತ್ತದ

೩೬-೩೭ ಎಲೈ ರಾಜನೇ ! ಕೇಳು ಪಿತೃಗಳೆಂಬುವರು ದೇವತೆಗಳಿಗಿಂತಲೂ ಹೆಚ್ಚಾದ ದೇವತೆಗಳು ಚಂದ್ರಸೂರ್ಯಸಮಾಗಮಕಾಲವಾದ ಅಮಾವಾಸ್ಯೆಯಲ್ಲಿ ಅದಾವ ಮನುಷ್ಯನು ಶ್ರಾದ್ಧಮಾಡಿ ಪಿತೃಗಳನ್ನು ತೃಪ್ತಿಪಡಿಸುತ್ತಾನೆಯೋ ಆ ಮನುಷ್ಯನು ರಾಜ್ಯವನ್ನೂ, ಸ್ವರ್ಗವನ್ನೂ ಪುಷ್ಟಿಯನ್ನೂ ಅವನವನ ಕೋರಿಕೆಯಂತೆ ಹೊಂದುತ್ತಾನೆ ಎಲೈ ರಾಜನೇ ! ಯಾವಾಗಲೂ ಪಿತೃಗಳು ಚಂದ್ರಮಂಡಲ ದಲ್ಲಿಯೇ ವಾಸಮಾಡುತ್ತಿರುತ್ತಾರೆ

ತೇಷಾಂ ಮಾಸಮಹೋರಾತ್ರಂ ವಿಭಾಗಂ ತತ್ರ ಮೇ ಶೃಣು ।
ಕೃಷ್ಣಪಕ್ಷಾಷ್ಟಮೀ ಮಧ್ಯೇ ತೇಷಾಮುದಯತೇ ರವಿಃ　　　　॥ ೩೮ ॥

ಶುಕ್ಲಾಷ್ಟಮ್ಯಾಂ ತಥೈವಾಸ್ತಂ ತೇಷಾಂ ಯಾತಿ ದಿವಾಕರಃ ।
ಅಮಾವಾಸ್ಯಾ ತದಾ ತೇಷಾಂ ಮಧ್ಯಾಹ್ನಂ ಜಾಯತೇ ನೃಪ　　　　॥ ೩೯ ॥

ಏತಾವದುಕ್ತಂ ನೃಪವರ್ಯ ತಸ್ಯ
ಧರ್ಮಾತ್ಮಜಸ್ಯಾಪ್ರತಿಮಸ್ಯ ವೃತ್ತಂ ।
ಧನ್ಯಂ ಯಶಸ್ಯಂ ರಿಪುನಾಶನಂ ಚ
ಸೌಭಾಗ್ಯದಂ ಪಾಪಹರಂ ಸುಖಂ ಚ　　　　॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಪುರೂರವಸಃ ಸ್ವರ್ಗಪ್ರಾಪ್ತಿರ್ನಾಮ
ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

---

೩೮-೪೦ ಈ ಪಿತೃಗಳಿಗೆ, ಅಹೋರಾತ್ರಿಗಳು ಸೇರಿ ಒಂದು ತಿಂಗಳಾದರ (೩೦ ದಿವಸಕ್ಕೆ) ಒಂದು ದಿವಸವೆಂದು ಹೆಸರು ಅವರ ಮಾರ್ಗವನ್ನು ಹೇಳುವೆನು ಕೇಳು ಅವರ ಪ್ರಾತಃಕಾಲವು ಕೃಷ್ಣಪಕ್ಷದ ಅಷ್ಟಮಿಯ ಮಧ್ಯಲ್ಲಾಗುವುದು ಆಗ ಅವರಿಗೆ ಸೂರ್ಯೋದಯಕಾಲ ಅವರ ಸಾಯಂಕಾಲವು ಶುಕ್ಲಪಕ್ಷದ ಅಷ್ಟಮಿಯು ದಿವಸವಾಗುತ್ತದ ಆಗ ಸೂರ್ಯಾಸ್ತಮಯಕಾಲ ಅಮಾವಾಸ್ಯ ಬಂದರೆ ಪಿತೃಗಳಿಗೆ ಮಧ್ಯಾಹ್ನಕಾಲವಲ್ಲಿ ಶ್ರಾದ್ಧಮಾಡಬೇಕು ಎಲೈ ವಜ್ರಮಹಾರಾಜನೇ ! ಇಲ್ಲಿಯವರೆಗೆ ಆ ಧರ್ಮಾತ್ಮನಾದ ಪುರೂರವಮಹಾರಾಜನ ಅಪ್ರತಿಮವಾದ ಚರಿತ್ರೆಯನ್ನು ನಿನಗೆ ಹೇಳಿದೆನು ಈ ಚರಿತ್ರಶ್ರವಣದಿಂದ ಜನರು ಧನ್ಯರಾಗುವವರಲ್ಲದೆ ಯಶಸ್ವಿಗಳಾಗಿ ಶತ್ರುರಹಿತರಾಗಿ ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ಅಷ್ಟೈಶ್ವರ್ಯಸಂಪನ್ನರಾಗುತ್ತಾರೆಂದು ಮಾರ್ಕಂಡೇಯರು ಹೇಳಿದರೆಂಬಲ್ಲಿಗೆ,

ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪುರೂರವಸ್ಸಿನ ಸ್ವರ್ಗಪ್ರಯಾಣವೆಂಬ
ಹೆಸರಿನ ಒಂದು ನೂರ ಮೂವತ್ತೇಳನೆಯ ಅಧ್ಯಾಯವು
ಮುಗಿದುದು

---

